ಶಿವಾನುಭವ ಗ್ರಂಥಮಾಲಾ ಸಂ.

ಅರವತ್ತುಮೂರು

# ಶಿವಶರಣರ

## ಚರಿತ್ರೆಗಳು

ಭಾಗ. ೨.

ಶಿವಾನುಭವ ಗ್ರಂಥಮಾಲಾ ನಂ. ೬೫

ಅರುವತ್ತುಮೂರು

# ಶಿವಶರಣರ ಚರಿತ್ರೆಗಳು.

ಭಾಗ ೨.

---*---

ಸಂಪಾದಕರು.

**ರಾ॥ ಬ॥ ಫ. ಗು. ಹಳಕಟ್ಟಿ,**

ಬಿ. ಎ. ಎಲ್. ಎಲ್. ಬಿ ವಿಜಾಪುರ.

---

ಇದನ್ನು ವಿಜಾಪುರದಲ್ಲಿ
ರಾ|| ಬ|| ಫ. ಗು. ಹಳಕಟ್ಟಿ ಇವರು ತಮ್ಮ
"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"ನಲ್ಲಿ ಮುದ್ರಿಸಿದರು.
ಮತ್ತು ಅವರು ವಿಜಾಪುರದಲ್ಲಿ
ವಾರ್ಡ ನಂ|| ೨, ಮನೆ ನಂ|| ೧೩೬೮ ನೇ ಮನೆಯಲ್ಲಿ
ಪ್ರಕಟಿಸಿದರು.

# ಅನುಕ್ರಮಣಿಕೆ.



# ಪ್ರಸ್ತಾವನೆ.

‘ಶಿವಶರಣರ ಚರಿತ್ರೆಗಳು ೨ನೇ ಭಾಗ’ ಈ ಗ್ರಂಥವನ್ನು ನಾವು ಈಗ ಪ್ರಕಟಿಸಿರುತ್ತೇವೆ. ಇದರಲ್ಲಿ ಒಟ್ಟು ೬೩ ಜನ ಶಿವಶರಣರ ಚರಿತ್ರೆಗಳು ಬಂದಿದ್ದು, ಇವರಲ್ಲಿ ೩೪ ಜನರು ವಚನಕಾರರಿದ್ದಾರೆ. ಈ ೬೩ ಜನ ಶಿವಶರಣರಲ್ಲಿ ೧೫ ಜನರು ಸ್ತ್ರೀಯರಿದ್ದಾರೆ. ಮತ್ತು ಈ ಸ್ತ್ರೀಯರಲ್ಲಿ ೭ ಜನರು ವಚನಕಾರರಿದ್ದಾರೆ. ೧ನೇ ಭಾಗದಲ್ಲಿ ೫೧ ಜನ ಶಿವಶರಣ ಶರಣೆಯರ ಚರಿತ್ರೆಗಳು ಬಂದಿವೆ. ಹೀಗೆ ಈ ಎರಡೂ ಗ್ರಂಥಗಳಲ್ಲಿ ಒಟ್ಟು ೧೧೪ ಜನ ಶಿವಶರಣರ ಚರಿತ್ರೆಗಳು ಪ್ರಸಿದ್ಧವಾಗಿರುತ್ತವೆ. ಇವರಲ್ಲದೆ ಇನ್ನೂ ಅನೇಕ ಶಿವಶರಣರ ಮಹತ್ವದ ಚರಿತ್ರೆಗಳು ಇದ್ದು ಅವುಗಳನ್ನೆಲ್ಲ ನಾವು ಕ್ರಮೇಣ ಪ್ರಕಟಿಸುತ್ತ ಹೋಗುವೆವು.

ಈ ಚರಿತ್ರೆಗಳನ್ನು ವಾಚಕರು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದಲ್ಲಿ ಅವು ಹೊಸತರದವೂ ಒಂದು ವಿಶಿಷ್ಟ ಸ್ವರೂಪುಳ್ಳವೂ ಇರುತ್ತವೆಂಬುದು ಅವರಿಗೆ ಗೋಚರವಾಗದೆ ಇರದು. ಈ ಮಹಾನುಭಾವರ ಚರಿತ್ರೆಗಳಿಂದ ನಾವು ಶಿವಾನುಭವದ ತತ್ವಗಳ ನಿಜಸ್ವರೂಪವನ್ನು ಬಹು ಚನ್ನಾಗಿ ಅರಿತುಕೊಳ್ಳಬಹುದಾಗಿದೆ. ತಮಿಳು ದೇಶದಲ್ಲಿ ೬೩ ಜನ ಪುರಾತನರು ಬಹಳ ಪ್ರಸಿದ್ಧಿಯನ್ನು ಹೊಂದಿದ್ದಾರೆ. ಮಹಾರಾಷ್ಟ್ರದಲ್ಲಿ ಅನೇಕ ಸಂತರೂ ಕರ್ನಾಟಕ ದೇಶದಲ್ಲಿ ವೈಷ್ಣವ ದಾಸರೂ ಉತ್ತರ ದೇಶದಲ್ಲಿ ಅನೇಕ ಸಾಧುಸತ್ಪುರುಷರೂ ಆಗಿಹೋಗಿದ್ದಾರೆ. ಆದರೆ ಅವರ ಚರಿತ್ರೆಗಳಿಗೂ ಶಿವಶರಣರ ಈ ವೃತ್ತಾಂತಗಳಿಗೂ ಮಹದಂತರವಿರುತ್ತದೆಂಬುದು ವಾಚಕರಿಗೆ ಕೂಡಲೆ ಕಂಡುಬರದೆ ಇರಲಾರದು. ಈ ಚರಿತ್ರೆಗಳಲ್ಲಿ ಸಾಮಾಜಿಕ, ಜಾತಿವಿಷಯಕ, ಅಧ್ಯಾತ್ಮಿಕ, ವ್ಯವಹಾರಿಕ ಮೊದಲಾದ ವಿಷಯಗಳ ಬಗ್ಗೆ ಮಹತ್ವದ ತತ್ವಗಳು ಅಡಕವಾಗಿರುತ್ತವೆ. ಈ ವಿಷಯಗಳನ್ನು ಕುರಿತು ನಾವು ಈ ಪೀಠಿಕೆಯಲ್ಲಿ ವಿಹಂಗಮ ದೃಷ್ಟಿಯಿಂದ ವಿವೇಚನೆ ಮಾಡಲೆಣಿಸಿದ್ದೇವೆ. ಈ ಚರಿತ್ರೆಗಳ ಮೇಲಿಂದ ಶಿವಶರಣರು ಹಿಂದೂ ದೇಶದ ಸಂಸ್ಕೃತಿಯ

ಇತಿಹಾಸದಲ್ಲಿ, ಅದರಲ್ಲಿ ವಿಶೇಷವಾಗಿ ಕರ್ನಾಟಕ ಸಂಸ್ಕೃತಿಯನ್ನು ಮುಂದುವರಿಸುವ ಕಾರ್ಯದಲ್ಲಿ, ಮಹತ್ವದ ಸ್ಥಾನವನ್ನು ಹೊಂದಿದ್ದಾರೆಂಬುದು ವಾಚಕರಿಗೆ ಗೊತ್ತಾಗದೆ ಇರದು.

## ಶಿವಶರಣರು ಕಾಲ್ಪನಿಕ ಪುರುಷರಲ್ಲ, ಅವರು ಐತಿಹಾಸಿಕ ಪುರುಷರು.

ಈ ಶಿವಶರಣರು ಕಾಲ್ಪನಿಕ ಪುರುಷರಲ್ಲೆಂಬುದು ಈ ಗ್ರಂಥದಲ್ಲಿಯ ಚರಿತ್ರೆಗಳಿಂದ ವಾಚಕರಿಗೆ ಕಂಡುಬರದೆ ಇರಲಾರದು. ಅವರು ಯಾವ ದೇಶದಲ್ಲಿ ಮತ್ತು ಯಾವ ಸ್ಥಾನಗಳಲ್ಲಿ ಇದ್ದರೆಂಬುದನ್ನು ನಾವು ಕಂಡು ಹಿಡಿಯಲು ಈ ಗ್ರಂಥದಲ್ಲಿ ಪ್ರಯತ್ನಿಸಿದ್ದೇವೆ. ಅವರ ಕುರುಹುಗಳು ಅವರು ಇದ್ದ ಗ್ರಾಮಗಳಲ್ಲಿ ಈಗಲೂ ಕಂಡುಬರುತ್ತವೆ. ಅವುಗಳಲ್ಲಿ ಅವರ ಹೆಸರಿನ ದೇವಾಲಯಗಳಿರುತ್ತವೆ. ಅಲ್ಲಿ ಅವರ ಜಾತ್ರೆಗಳಾಗುತ್ತವೆ. ಅವರ ಸ್ಥಾನಿಕ ಐತಿಹ್ಯಗಳೂ ಅಲ್ಲಿ ಉಂಟು. ಅವರ ದೇವಾಲಯಗಳಿಗೆ ಹಿಂದಿನ ರಾಜರೂ ಸಾಮಂತರೂ ಉಂಬಳಿಗಳನ್ನು ಹಾಕಿಕೊಟ್ಟಿದ್ದಾರೆ. ಅವುಗಳನ್ನು ಉಲ್ಲೇಖಿಸುವ ಶಿಲಾಶಾಸನಗಳು ಆಯಾ ಗ್ರಾಮಗಳಲ್ಲಿ ಅಥವಾ ದೇವಾಲಯಗಳಲ್ಲಿ ಈಗಲೂ ಉಪಲಬ್ಧವಿರುತ್ತವೆ. ಅವರ ಉಲ್ಲೇಖಗಳಿರುವ ಸ್ವತಂತ್ರ ಗ್ರಂಥಗಳೂ ಇರುತ್ತವೆ. ಅಲ್ಲದೆ ಅವರಲ್ಲಿ ಅನೇಕರು ವಚನಕಾರರೂ ಸ್ವತಂತ್ರ ಗ್ರಂಥಗಳನ್ನು ಬರೆದವರೂ ಇದ್ದಾರೆ. ಇವುಗಳ ಮೇಲಿಂದ ಅವರು ನಿಜವಾಗಿ ಆಗಿಹೋದ ಮಹಾಪುರುಷರೆಂದು ನಾವು ಭಾವಿಸಬೇಕಾಗುತ್ತದೆ.

ಆದರೆ ಕರ್ನಾಟಕಸ್ಥರ ದುರ್ದೈವದಿಂದ ಅವರ ಚರಿತ್ರೆಗಳು ಈಗ ಮಾಜಿಹೋಗಿವೆ. ಅವರು ಮಾಡಿದ ಮಹತ್ಕಾರ್ಯಗಳ ಅರಿವು ಸಹ ಹೊರಟುಹೋಗಿರುತ್ತದೆ. ಅವರು ಕೇವಲ ಪೊವಾಡ ಪುರುಷರಾಗಿ ಜನರ ಸ್ಮೃತಿಯಲ್ಲಿ ಮಾತ್ರ ಉಳಿದಿದ್ದಾರೆ. ಆ ಪೊವಾಡಗಳಾದರೂ ಕೂಡ ವಿದ್ರೂಪ ಸ್ವರೂಪನ್ನು ಹೊಂದಿರುತ್ತವೆ. ಇದರಿಂದ ಅವರ ಚರಿತ್ರೆಗಳನ್ನು ಬರೆಯುವದು ಬಹು ಕಠಿಣವಾಗಿರುತ್ತದೆ. ಈ ಸ್ಥಿತಿಯುಂಟಾಗುವದು ವೀರಶೈವರ ದುರ್ದೈವವಾಗಿದೆ. ಆದರೂ ನಾವು ಈ ಶಿವಶರಣರ ಈಗಲೂ ಉಪಲಬ್ಧವಿರುವ ಜೀವನಾಂಶಗಳನ್ನು ಒತ್ತಟ್ಟಿಗೆ

ಸಂಗ್ರಹಿಸಿ ಅವರ ಚರಿತ್ರೆಗಳನ್ನು ಈಗ ಸಂಶೋಧಿಸಬೇಕಾಗಿರುತ್ತದೆ. ಈ ಬಗೆಯ ಪ್ರಯತ್ನವು ಈ ಚರಿತ್ರೆಗಳನ್ನು ಬರೆಯುವಲ್ಲಿ ಮಾಡಲ್ಪಟ್ಟಿ ರುತ್ತದೆ.

ಈ ಚರಿತ್ರೆಗಳಲ್ಲಿ ಆ ಮಹಾನುಭಾವರು ಯಾವ ಯಾವ ಆಚರಣೆ ಯುಳ್ಳವರಾಗಿದ್ದರು, ಅವುಗಳನ್ನು ಆಚರಿಸುವಲ್ಲಿ ಅವರಿಗೆ ಯಾವ ಯಾವ ತೊಂದರೆಗಳು ಬಂದವು, ಅವರ ಆಚರಣೆಗಳ ಸಿಜಾಂಶಗಳೇನು, ಇವೇ ಮೊದಲಾದವುಗಳನ್ನು ನಾವು ವಿವೇಚಿಸಲು ಪ್ರಯತ್ನಿಸಿದ್ದೇವೆ. ಈ ಬಗೆಯ ವಿವೇಚನೆಯು ಇದೇ ಮೊದಲಿನದಾಗಿದೆಂದು ನಾವು ಹೇಳ ಬಹುದು.

## ದೇವರ ಸ್ವರೂಪ.

ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆಂದು ವೀರಶೈವ ಧರ್ಮವು ಹೇಳುತ್ತಿದೆ. ಅವನು ಎಲ್ಲೆಲ್ಲಿಯೂ ಇರುತ್ತಾನೆಂದು ವಚನಕಾರರು ತಮ್ಮ ವಚನಗಳಲ್ಲಿ ಆಗಾಗ್ಗೆ ವಿವರಿಸುತ್ತಾರೆ. ಆದರೆ ಅವನು ಪ್ರಕ ಟವಾಗಿ ವಸ್ತುಗಳಲ್ಲಿರದೆ ಅವುಗಳಲ್ಲಿ ಅವನು ಗೌಪ್ಯವಾಗಿ ಅಂದರೆ ಹೇಗೆ ಹಾಲಿನಲ್ಲಿ ತುಪ್ಪವು, ಕಾಷ್ಠದಲ್ಲಿ ಅಗ್ನಿಯು, ಹೂವಿನಲ್ಲಿ ಮಕರಂದವು ಇರುತ್ತವೆಯೋ ಹಾಗೆ ಅವುಗಳಲ್ಲಿ ಇರುತ್ತಾನೆಂದು ಅವರು ಅನೇಕ ಉದಾಹರಣೆಗಳನ್ನು ಕೊಟ್ಟು ಉದಹರಿಸಿ ಹೇಳುತ್ತಾರೆ. ಆದರೂ ಅವನು ಧರ್ಮಿಷ್ಠರಲ್ಲಿ ಮತ್ತು ಎಲ್ಲಿ ನೀತಿ ನಡೆಗಳೂ ಭಕ್ತಿ ವಿಶ್ವಾಸ ಗಳೂ ಇರುತ್ತವೆಯೋ ಅಲ್ಲಿ, ಅವನು ಹೆಚ್ಚು ಪ್ರಕಟತರವಾಗಿ ವಾಸಿಸು ತ್ತಾನೆಂತಲೂ ಅವರು ಹೇಳುತ್ತಾರೆ. ಹಾಗೆಯೇ ಅವನ ಭಕ್ತರು ಭಾವಿ ಸಿದಲ್ಲಿಯೂ ಅವನು ಕಾಣಿಸಿಕೊಳ್ಳುತ್ತಾನೆಂತಲೂ ಅವರು ನಂಬು ತ್ತಾರೆ. ಇದು ಶಿವಾನುಭವ ಶಾಸ್ತ್ರದ ಮಹತ್ವದ ತತ್ವವಾಗಿದೆ. ಇದ ಲ್ಲದೆ ಪರಮಾತ್ಮನು ಒಬ್ಬನೇ ಇದ್ದಾನೆ, ಮತ್ತು ಅವನಿಗೆ ಇದಿರೆಂಬು ದಿಲ್ಲ, ಎಂತಲೂ ಅದು ಹೇಳುತ್ತಿದೆ. ಆದ್ದರಿಂದ ರುದ್ರ, ವಿಷ್ಣು, ಬ್ರಹ್ಮ, ಇಂದ್ರಾದಿಗಳೂ ೩೩ ಕೋಟಿ ದೇವತೆಗಳೂ ಅವನಿಗೆ ಅಧೀನರಾಗಿ ವ್ಯವಹರಿಸುತ್ತಾರೆ. ಈ ತತ್ವಗಳನ್ನು ಸಮರ್ಥಿಸುವ ಶರಣರ ಚರಿತ್ರೆ ಗಳು ಈ ಗ್ರಂಥದಲ್ಲಿ ಅನೇಕವಾಗಿದ್ದು ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಇಲ್ಲಿ ದಿಗ್ದರ್ಶನಮಾಡುತ್ತೇವೆ.

ಗೊಲ್ಲಾಳನು ಒಬ್ಬ ಕುರುಬರ ಹುಡುಗನು. ಅವನಿಗೆ ಒಬ್ಬ ಸ್ವಪ್ನ ಜಂಗಮನು ಒಂದು ಕುರಿಯ ಹಿಕ್ಕೆಯನ್ನು ತಂದು ತೋರಿಸಿ ಇದನ್ನು ಶ್ರೀಶೈಲ ಪರ್ವತದಿಂದ ನಾನು ತಂದಿದ್ದೇನೆ, ಇದನ್ನು ನೀನು ನಿತ್ಯ ಪೂಜಿಸು ಎಂದು ಹೇಳಿ ಹೋಗಲು ಗೊಲ್ಲಾಳನು ಅದನ್ನು ನಂಬಿ ಪೂಜಿಸಹತ್ತಿದನು. ಅದಕ್ಕೆ ಪರಮಾತ್ಮನು ಮೆಚ್ಚಿ ಆ ಲಿಂಗದಲ್ಲಿಯೇ ಮುಂದೆ ಪ್ರಕಟವಾದನು. ಸೊಡ್ಡಳ ಬಾಚರಸನೆಂಬ ಶರಣನು ಸೌರಾಷ್ಟ್ರ ಸೋಮನಾಥನ ಭಕ್ತನು. ಅವನು ಆ ದೇವಾಲಯಕ್ಕೆ ಹೋಗಲು ಬಿಜ್ಜಳನಿಂದ ರಜೆಯನ್ನು ಬೇಡಲಾಗಿ, ಬಿಜ್ಜಳನು ಅದನ್ನು ಕೊಡದೆ, ಬೇಕಾದರೆ ನೀನು ಇಲ್ಲಿಯೇ ನಿನ್ನ ಸೋಮನಾಥನನ್ನು ಬರಮಾಡಿ ಕೊಂಡು ಪೂಜಿಸು, ಎಂದು ಕಠೋರವಾಗಿ ನುಡಿದನು. ಆಗ ಬಾಚ ರಸನು ಸೋಮನಾಥನನ್ನು ನೆನೆಯುತ್ತಿರಲು ಸೋಮನಾಥನು ಅವ ನಿದ್ದ ಸ್ಥಾನದಲ್ಲಿಯೇ ಪ್ರಕಟವಾದನು. ಕೋಳೂರು ಕೊಡಗೂಸೆಂಬ ಚಿಕ್ಕ ಬಾಲಿಕೆಯು ದೇವಾಲಯಕ್ಕೆ ಹೋಗಿ ದೇವರಿಗೆ ತಾನು ತಂದಿದ್ದ ಹಾಲನ್ನು ಲಿಂಗದೆದುರಿಗೆ ಇಟ್ಟು ಆ ಲಿಂಗವು ಅದನ್ನು ಪ್ರತ್ಯಕ್ಷವಾಗಿ ಕುಡಿಯಬೇಕೆಂದು ಇಚ್ಛಿಸಿದಳು. ಅದು ಕುಡಿಯದೆ ಹೋಗಲು ಅವಳು ತನ್ನ ಪ್ರಾಣವನ್ನು ಅರ್ಪಿಸಲು ಸಿದ್ಧಳಾದಳು. ಅಷ್ಟರಲ್ಲಿಯೇ ಪರಮಾ ತ್ಮನು ಅವಳ ಭಕ್ತಿಗೆ ಮೆಚ್ಚಿ ಅಲ್ಲಿಯೇ ಪ್ರಕಟವಾದನು.

ಈ ಚರಿತ್ರೆಗಳು ಪರಮಾತ್ಮನು ಸರ್ವ ವ್ಯಾಪಿಯಾಗಿದ್ದಾನೆ, ಭಕ್ತರು ಭಾವಿಸಿದಲ್ಲಿ ಅವನು ಪ್ರಕಟವಾಗುತ್ತಾನೆಂಬ ಶಿವಾನುಭವದ ಸಿದ್ಧಾಂ ತವನ್ನು ವ್ಯಕ್ತಮಾಡುತ್ತವೆ.

ಬಸವೇಶ್ವರನ ಕಾಲದಲ್ಲಿ ಜೈನರು ಕರ್ನಾಟಕದಲ್ಲಿ ಬಹು ಸಂಖ್ಯಾ ಕರಾಗಿದ್ದರು. ಅವರು ಈ ತೆರದ ಪರಮಾತ್ಮನ ಅಸ್ತಿತ್ವವನ್ನು ಅಲ್ಲಗ ಳೆಯುತ್ತಿದ್ದರೆಂದು ತೋರುತ್ತದೆ. ಇದರಿಂದ ವೀರಶೈವರಿಗೂ ಅವ ರಿಗೂ ಆಗಿಂದಾಗ್ಗೆ ಪರಸ್ಪರ ವಾಗ್ವಾದಗಳಾಗುತ್ತಿದ್ದವು. ಕೆಲವು ಸಮಯಗಳಲ್ಲಿ ಅವರಲ್ಲಿ ಹೊಡೆದಾಟಗಳೂ ಸಂಭವಿಸಿರುತ್ತವೆ. ಆದರೆ ಶಿವಶರಣರು ತಮ್ಮ ಸಿದ್ಧಾಂತವನ್ನು ಶಾಸ್ತ್ರಗಳ ದ್ವಾರಾ ಮತ್ತು ತಮ್ಮ ಪವಾಡಗಳ ದ್ವಾರಾ ಸಿದ್ಧಪಡಿಸಿದ್ದಾರೆ.

ಪುಲಿಗೆರೆಯ ಸೋಮಯ್ಯನು ಜೈನನು. ಆದರೆ ಅವನು ಶಿವನ ಭಕ್ತನಾಗಿ ಶಿವಪೂಜೆ ಇಲ್ಲದೆ ಊಟ ಮಾಡೆನೆಂಬ ವ್ರತವನ್ನು ತೊಟ್ಟ

ಷ್ಟನು. ಅವನಿಗೆ ಒಂದು ದಿನ ಕಣ್ಣು ಬೇನೆ ಬಂದು ಕಣ್ಣು ಕಾಣದ ಹಾಗಾಗಲು ಅವನಿಗೆ ಶಿವಾಲಯಕ್ಕೆ ಹೋಗುವದು ಆಗದ್ದರಿಂದ ಅವನು ಉಪವಾಸವಿರಹತ್ತಿದನು. ಆದ್ದರಿಂದ ಅವನ ಬಂಧುಗಳು ಅವನನ್ನು ಒಂದು ಜಿನಾಲಯಕ್ಕೆ ಕರೆದುಕೊಂಡು ಹೋಗಿ ಅಲ್ಲಿದ್ದ ಜಿನ ಮೂರ್ತಿಯನ್ನು ತೋರಿಸಿ ಇದು ಲಿಂಗವೆಂದು ಹೇಳಲು ಸೋಮಯ್ಯನು ಅದನ್ನು ಹಾಗೆಯೇ ಭಾವಿಸಿ ಪೂಜಿಸಲು ಅದರಲ್ಲಿ ನಿಜವಾದ ಲಿಂಗವೇ ಉತ್ಪನ್ನವಾಯಿತು. ಇದು ಅವನ ಭಾವನೆಯ ಪರಿಣಾಮವು. ಕೆಲವೂರು ಬ್ರಹ್ಮಯ್ಯನಿಗೂ ಜೈನರಿಗೂ ಮನಸ್ತಾಪಗಳುಂಟಾದವು. ಆಗ ಜೈನರು ಅವನಿಗೆ—ನಿನ್ನ ಅರಮನೆಯ ಮುಂದೆಯೇ ಲಿಂಗವು ಬರುವಂತೆ ಮಾಡು ಎಂದು ಆಹ್ವಾನಿಸಲು, ಬ್ರಹ್ಮಯ್ಯನು ಹಾಗೆಯೇ ಭಾವಿಸಲು ಅಲ್ಲಿ ಲಿಂಗವು ಉತ್ಪನ್ನವಾಯಿತು. ಆದಯ್ಯನು ಸೌರಾಷ್ಟ್ರ ಸೋಮನಾಥನ ಕೇವಲ ಭಕ್ತನು. ಅವನಿಗೂ ಜೈನರಿಗೂ ಕಲಹಗಳೇಳಲು ಅವನು ಇಚ್ಛಿಸಿದಂತೆ ಪುಲಿಗೆರಿಯಲ್ಲಿದ್ದ ಸುರ ಹೊನ್ನೆ ಬಸದಿಯಲ್ಲಿ ಶಿವಲಿಂಗವು ಉತ್ಪನ್ನವಾಯಿತು. ಪರಳಿ ದೇವಸ್ಥಾನವು ಮೊದಲು ಜಿನಾಲಯವು. ಆದರೆ ವೈಜವ್ವೆಯ ಮೂಲಕ ಅಲ್ಲಿ ಶಿವಲಿಂಗವು ಉದ್ಭವಿಸಿತು. ಮತ್ತು ವೈಜವ್ವೆಯು ಆ ಲಿಂಗದಲ್ಲಿಯೇ ಬೆರೆತುಹೋದಳು. ಅಂದಿನಿಂದ ಆ ಲಿಂಗಕ್ಕೆ ವೈಜನಾಥ ಲಿಂಗವೆಂಬ ಹೆಸರಾಯಿತು.

ಈ ಸಂಗತಿಗಳಿಂದ ಜಗತ್ತು ಲಿಂಗಮಯವಾಗಿದೆ, ಆದರೆ ಆ ಲಿಂಗವು ತಾನಾಗಿಯೇ ಪ್ರಕಟವಾಗದೆ ಭಕ್ತರು ಎಲ್ಲಿ ಭಾವಿಸುತ್ತಾರೋ ಅಲ್ಲಿಯೇ ಆ ಲಿಂಗವು ದೃಗ್ಗೋಚರವಾಗುತ್ತದೆ. ಈ ಪ್ರಕಾರ ವೀರಶೈವ ಧರ್ಮದ ತತ್ವವಿದ್ದು ಇದನ್ನು ಈ ಚರಿತ್ರೆಗಳು ಸಮರ್ಥಿಸುತ್ತವೆ.

ಕರ್ನಾಟಕದಲ್ಲಿ ೧೧ನೇ ೧೨ನೇ ಶತಮಾನಗಳಲ್ಲಿ ಅನೇಕ ಕಡೆಗೆ ವೈಷ್ಣವ ಧರ್ಮವೂ ಕೂಡ ಜೈನ ಧರ್ಮದಂತೆಯೇ ಪ್ರಬಲವಾಗಿತ್ತು. ವೈಷ್ಣವರು ವಿಷ್ಣುವೇ ದೇವರು, ವಿಷ್ಣುವನ್ನು ಶಿವನು ಭಜಿಸುತ್ತಾನೆಂದು ಪ್ರತಿಪಾದಿಸುವವರಾಗಿದ್ದರು. ಆದರೆ ವೀರಶೈವರು ಶಿವನೇ ದೈವವು, ಅವನು ಜಗತ್ತಿನಲ್ಲಿ ತುಂಬಿಕೊಂಡಿರುತ್ತಾನೆಂದು ಪ್ರತಿಪಾದಿಸುವವರಾಗಿದ್ದರು. ಆದ್ದರಿಂದ ಅವರು ರುದ್ರ ಮೊದಲ್ಗೊಂಡು ತ್ರಿಮೂರ್ತಿಗಳೂ ಇತರ ದೇವತೆಗಳೂ ಶಿವನ ಅಂಕಿತರೆಂದು ಭಾವಿಸುತ್ತಿದ್ದರು. ಆದ್ದರಿಂದ

ಈ ಉಭಯಂತರಲ್ಲಿ ವ್ಯಾಜ್ಯಗಳೇಳುತ್ತಿದ್ದವು. ಆಗ ಶಿವಶರಣರು ಧರ್ಮ ಗ್ರಂಥಗಳ ಆಧಾರಗಳಿಂದ ಮತ್ತು ಪವಾಡಗಳಿಂದ ಶಿವನೊಬ್ಬನೇ ಇದ್ದಾನೆ, ಶಿವನೇ ಸರ್ವೋತ್ತಮನೆಂಬುದನ್ನು ಸಿದ್ಧಪಡಿಸಿದ್ದಾರೆ.

ಕಾಶಿಯಲ್ಲಿದ್ದ ಶಿವಲೆಂಕಮಂಚಣ್ಣನೆಂಬ ಶಿವಶರಣನು ಅಲ್ಲಿದ್ದ ಬಿಂದುಮಾಧವ ಮೂರ್ತಿಯು ವಿಶ್ವೇಶ್ವರನನ್ನು ನಮಸ್ಕರಿಸುವಂತೆ ಮಾಡಿದನು. ಅಲಂಪುರದಲ್ಲಿದ್ದ ಬಾಲ ಬ್ರಹ್ಮೇಶ್ವರ ದೇವಸ್ಥಾನದಲ್ಲಿ ಶಿವ ಲಿಂಗವಿದ್ದು ಅದನ್ನು ಅಲ್ಲಿದ್ದ ವೈಷ್ಣವರು ನದಿಯಲ್ಲಿ ಒಗೆದುಹಾಕಲು ವರದಾನಿ ಗುಡ್ಡವ್ವನು ಸೈನ್ಯವನ್ನು ಕೂಡಿಸಿ ಆ ಗ್ರಾಮಕ್ಕೆ ಹೋಗಿ ಅಲ್ಲಿದ್ದ ಪರವಾದಿಗಳನ್ನು ಸೋಲಿಸಿ ಆ ದೇವಸ್ಥಾನದಲ್ಲಿ ಆ ಬ್ರಹ್ಮೇಶ್ವರ ಲಿಂಗವನ್ನು ಸ್ಥಾಪಿಸಿದಳು.

ಬ್ರಾಹ್ಮಣರು ಅಗ್ನಿಯೇ ದೇವತೆ ಎಂದು ಪ್ರತಿಪಾದಿಸುತ್ತಾರೆ. ಆದರೆ ವೀರಶೈವರು ಹಾಗೆ ಭಾವಿಸುವದಿಲ್ಲ. ಆಂಧ್ರ ದೇಶದಲ್ಲಿ ಪ್ರಸಿದ್ಧಿಗೆ ಬಂದ ಶ್ರೀಪತಿ ಪಂಡಿತನು ಬೆಜವಾಡದಲ್ಲಿದ್ದು ಅವನು ಆ ಪಟ್ಟಣದಲ್ಲಿದ್ದ ಬ್ರಾಹ್ಮಣರ ಗೃಹಗಳೊಳಗೆ ಇದ್ದ ಅಗ್ನಿಯನ್ನು ಒಂದು ಅರಿವೆಯ ಮೊಟ್ಟೆಯಲ್ಲಿ ಕಟ್ಟಿ ಅದನ್ನು ಬನ್ನಿಯ ಮರದ ಕೊಂಬೆಗೆ ತೂಗಹಾಕಿದನು. ಆದರೆ ಆ ಅಗ್ನಿಯು ಮೊಟ್ಟೆಯನ್ನು ಸುಡದೆ ಏಳು ದಿನಗಳವರೆಗೆ ಹಾಗೆಯೇ ಉರಿಯುತ್ತಿತ್ತು

ಈ ಎಲ್ಲ ಚರಿತ್ರೆಗಳಲ್ಲಿ, ಶಿವನು ಎಲ್ಲೆಲ್ಲಿಯೂ ಪಸರಿಸಿದ್ದಾನೆ, ಅವನ ಮೂಲಕವೇ ಜಗತ್ತಿನ ವ್ಯಾಪಾರಗಳು ನಡೆಯುತ್ತವೆ, ಅವನು ಪ್ರಕಟವಾಗದೆ ಗೂಢ ಸ್ವರೂಪದಲ್ಲಿ ಇರುತ್ತಾನೆ, ಆದರೆ ಭಕ್ತರು ಭಾವಿಸಿದಲ್ಲಿ ಅವನು ರೂಪುಗೊಳ್ಳುತ್ತಾನೆ, ಈ ಶಿವಾನುಭವದ ತತ್ವಗಳು ಅಡಕವಾಗಿರುತ್ತವೆ.

## ಲಿಂಗವನ್ನು ತನ್ನಲ್ಲಿಯೇ ಕಾಣುವದು.

ಶಿವಶರಣರ ಜೀವಿತದ ಧ್ಯೇಯವು ಲಿಂಗದೊಡನೆ ಸಮರಸವಾಗುವದೇ ಇರುತ್ತದೆ. ಈ ಲಿಂಗವು ತಮ್ಮಲ್ಲಿಯೇ ಇದ್ದು ಅದನ್ನು ಅವರು ಪ್ರಕಟಗೊಳಿಸತಕ್ಕದ್ದು. ಅದು ಅವರ ಸದಾಚಾರದಿಂದ ಬಾಹ್ಯದಲ್ಲಿ ಪ್ರಕಟವಾಗಬೇಕು. ಮಂತ್ರ ಧ್ಯಾನದಿಂದ ಅದು ಅವರ ಪ್ರಾಣದಲ್ಲಿ ಪ್ರಕಟವಾಗಬೇಕು. ಶಿವಯೋಗವೆಂದರೆ ಅದನ್ನು ಹೀಗೆ ಪ್ರಕಟ ಮಾಡುವದೇ

ಇರುತ್ತದೆ ಈ ಯೋಗದಿಂದ ಅವರು ಪರಶಿವನಲ್ಲಿ ಬೆರೆಯಬೇಕು. ಈ ವಿಷಯವಾಗಿ ಅನೇಕ ಚರಿತ್ರೆಗಳು ಈ ಗ್ರಂಥದಲ್ಲಿವೆ.

ಅನುಮಿಷನು ಮೊದಲು ಹಠಯೋಗಿಯಾಗಿ ಸಿದ್ಧಿಗಳನ್ನು ಪಡೆದವನಾಗಿದ್ದನು. ಆದರೆ ಅವನು ನಂದಿಕೇಶ್ವರನಿಂದ ಲಿಂಗಧಾರಿಯಾದ ಬಳಿಕ ಅವನು ಲಿಂಗದಲ್ಲಿ ಏಕಾಗ್ರಚಿತ್ತವುಳ್ಳವನಾದ್ದರಿಂದ ಅವನಿಗೆ ಲಿಂಗವೂ ಪ್ರಾಣವೂ ಒಂದೇಯಾದವು. ಈ ಪ್ರಕಾರ ಆಚರಿಸುತ್ತ ಅವನು ಲಿಂಗದಲ್ಲಿಯೇ ಬೆರೆದು ಹೋದನು. ಅಜಗಣ್ಣನೆಂಬ ಇನ್ನೊಬ್ಬ ಶರಣನಿಗೆ ಮಂತ್ರ ಮತ್ತು ಲಿಂಗ ಇವು ಏಕರೂಪವಾಗಿದ್ದವು. ಆದ್ದರಿಂದ ಮಂತ್ರವು ಪ್ರಕಟವಾದ ಕೂಡಲೆ ಆದರೊಡನೆ ಅವನ ಅಂತರ್ಲಿಂಗವು ಹೊರಗೆ ಇಷ್ಟಲಿಂಗವಾಗಿ ಪ್ರಕಟವಾಯಿತು. ಆದರೆ ಮಂತ್ರವು ಆಕಾಶದಲ್ಲಿ ಬೆರೆಯಲು ಅದರೊಡನೆ ಅವನ ಪ್ರಾಣವೂ ಹೊರಟು ಹೋಗಿ ಬಿಟ್ಟಿತು. ಆಗ ಅವನ ನಿರ್ಜೀವ ಶರೀರವು ಮಾತ್ರ ಹೊರಗೆ ಉಳಿಯಿತು. ಮಾದರ ಚನ್ನಯ್ಯನು ಚೋಳ ರಾಜನಲ್ಲಿ ಕಟ್ಟಿಗೆ ಕಾಯಕವನ್ನು ಕೈಕೊಂಡು ಅರಣ್ಯಕ್ಕೆ ಹೋಗುತ್ತಿದ್ದನು. ಅಲ್ಲಿ ಆವುದೋ ಒಂದು ಏಕಾಂತ ಸ್ಥಳವನ್ನು ಆಯ್ದು ಲಿಂಗ ಧ್ಯಾನದಲ್ಲಿರುತ್ತಿದ್ದನು. ಹೀಗೆಯೇ ಅವನು ಯಾವಾಗಲೂ ಆಚರಿಸುತ್ತಿದ್ದದರಿಂದ ಅವನಿಗೆ ಲಿಂಗವೂ ಪ್ರಾಣವೂ ಒಂದೇಯಾಗಿ ಪರಿಣಮಿಸಿದವು. ಆಗ ಅಂಗ ಭೋಗವೇ ಅವನಿಗೆ ಲಿಂಗ ಭೋಗವಾಯಿತು. ಆದ್ದರಿಂದ ಪರಮಾತ್ಮನು ಅವನೊಡನೆ ಭುಂಜಿಸುತ್ತಿದ್ದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಆದರೆ ಚೋಳರಾಜನು ತಾನು ಸಮರ್ಪಿಸಿದ ಊಟವನ್ನು ಪರಮಾತ್ಮನು ಭುಂಜಿಸಲೇ ಬೇಕೆಂದು ಎಷ್ಟು ಬಯಸಿದರೂ ಅದು ಅವನಿಗೆ ಸಾಧ್ಯವಾಗಲಿಲ್ಲ. ಗಟ್ಟಿವಾಳಯ್ಯನು ಕಾಯವೆರಸಿ ಕೈಲಾಸಕ್ಕೆ ಹೋಗಲು ಇಚ್ಛಿಸಬಾರದೆಂದು ಕಲ್ಯಾಣಪಟ್ಟಣದಲ್ಲಿ ಜನರಿಗೆ ಬೋಧಿಸುತ್ತ ಇದ್ದನು. ಅಂದರೆ ತನ್ನಲ್ಲಿಯೇ ಲಿಂಗವಿದ್ದು ಅದರಲ್ಲಿಯೇ ಅವರು ಬೆರೆಯಬೇಕೆಂದು ಅವನ ಅಭಿಪ್ರಾಯವಾಗಿತ್ತು. ಇದಕ್ಕನುಸಾರವಾಗಿಯೇ ಅವನು ಲಿಂಗದಲ್ಲಿ ಆಚರಿಸುತ್ತಿದ್ದನು. ಅವನು ಒಂದು ದಿವಸ ಕಲ್ಯಾಣ ಪಟ್ಟಣದ ಬೀದಿಯಲ್ಲಿ ಸತ್ತು ಬಿದ್ದನು. ಇದನ್ನು ಬಸವೇಶ್ವರನು ಕೇಳಿ ಅವನ ಸಮಾಧಿಯನ್ನು ಮಾಡಬೇಕೆಂದು ಕೆಲವು ಶರಣರೊಡನೆ ಅಲ್ಲಿಗೆ ಬಂದು

ಅವನ ಶರೀರವನ್ನು ಹಿಡಿದೆತ್ತಲು, ಅದು ಅವರ ಹಸ್ತಗಳಲ್ಲಿಯೇ ಬಯಲಾಯಿತು. ಇದು ನಿರ್ವಾಣ ಸಮಾಧಿ ಎಂದೆನಿಸಿಕೊಳ್ಳುತ್ತದೆ.

ಇವೇ ಮೊದಲಾದ ಚರಿತ್ರೆಗಳು ಲಿಂಗಾಂಗಿಗಳಾದ ವೀರಶೈವರ ಅಂಗ ಲಿಂಗ ಸಾಮರಸ್ಯದ ಸ್ವರೂಪವನ್ನು ಚನ್ನಾಗಿ ವಿವರಿಸುತ್ತವೆ.

## ಪ್ರಮಥ ಸೃಷ್ಟಿಯು ಮತ್ತು ಗಣಾಧೀಶ್ವರರು.

ಲಿಂಗಾಂಗಿಯ ಈ ಮಾರ್ಗವು ಬಾಹ್ಯದಲ್ಲಿ ಹಗುರಾಗಿ ತೋರಿದರೂ ಅದು ಬಹು ಕಠಿಣವಾದುದು. ಇದನ್ನು ವಚನಕಾರರೂ ಶಿವ ಶರಣರೂ ತಿಳಿದಿದ್ದಾರೆ. ಯಾಕಂದರೆ ಮನುಷ್ಯನ ಮನಸ್ಸು ಇಷ್ಟು ಸ್ಥಿರತರವಾದದ್ದಾಗಿರುವದಿಲ್ಲ. ಆದ್ದರಿಂದ ಅವನು ಆಗಿಂದಾಗ್ಗೆ ಎಡಹುತ್ತಾನೆ, ತಪ್ಪುತ್ತಾನೆ. ಇದನ್ನು ಬಸವೇಶ್ವರನು ಕಂಡವನಾಗಿ ಅವನು ಆಗಿಂದಾಗ್ಗೆ ತನ್ನ ಸಲುವಾಗಿ ಪರಮಾತ್ಮನ ಕ್ಷಮೆಯನ್ನು ಯಾಚಿಸುತ್ತಾನೆ ಮತ್ತು ತನಗೆ ಯೋಗ್ಯವಾದ ಹಾದಿಯನ್ನು ತೋರಿಸಲು ಅವನಿಗೆ ಯಾವಾಗಲೂ ಬೇಡಿಕೊಳ್ಳುತ್ತಾನೆ. ಹಿಂದಿನ ಶಿವಶರಣರು ಈ ಸಂಗತಿಯನ್ನು ಅರಿತವರಾಗಿ ಅವರು ತಮಗೊದಗಿದ ಅನುಭವಗಳನ್ನೂ ಸಂಶಯಗಳನ್ನೂ ಪರಸ್ಪರರಲ್ಲಿ ಹೇಳಿಕೊಳ್ಳುವದಕ್ಕೋಸ್ಕರ ಶಿವಾನುಭವಮಂಟಪವನ್ನು ರಚಿಸಿಕೊಂಡರು. ಪರಮಾತ್ಮನಾದರೂ ಈ ಮಾರ್ಗವು ಕಠಿಣವಾದುದೆಂದು ತಿಳಿದವನಾಗಿ ಪ್ರಮಥ ಸೃಷ್ಟಿಯನ್ನು ರಚಿಸಿದ್ದಾನೆ. ವಚನಕಾರರು ಈ ಸೃಷ್ಟಿಯು ಇರುವವನ್ನು ತಮ್ಮ ವಚನಗಳಲ್ಲಿ ಒಪ್ಪಿಕೊಂಡಿದ್ದಾರೆ. ಈ ಸೃಷ್ಟಿಯಲ್ಲಿ ಗಣಾಧೀಶ್ವರರಿದ್ದು ಅವರು ಕಾಲಕಾಲಕ್ಕೆ ಪೃಥ್ವಿಯಲ್ಲಿ ಅವತರಿಸಿ ಲೋಕದ ಜನರಿಗೆ ಸನ್ಮಾರ್ಗವನ್ನು ತೋರಿಸುತ್ತಾರೆ. ಇದೇ ಅವರು ಮಾಡುವ ಮುಖ್ಯ ಕಾರ್ಯವು. ಪ್ರಮಥ ಸೃಷ್ಟಿಯ ಅಧಿದೇವತೆಯು ಪಂಚಮುಖ ಶಿವನು. ಈ ಶಿವನು ಭಕ್ತರನ್ನು ಅನೇಕ ಮಾರ್ಗಗಳಿಂದ ಆಗಿಂದಾಗ್ಗೆ ಎಚ್ಚರಿಸುತ್ತಾನೆ. ಅವನು ಅವರ ಕನಸಿನಲ್ಲಿ ಬರುತ್ತಾನೆ. ಅವರು ಧೈರ್ಯಗುಂದಿದ್ದರೆ ಅವರಿಗೆ ಧೈರ್ಯ ಹೇಳುತ್ತಾನೆ. ಈ ಕಾರ್ಯವನ್ನು ಅವನು ಸ್ವಂತವಾಗಲಿ ಇಲ್ಲವೆ ತನ್ನ ಗಣಾಧೀಶ್ವರರ ಮುಖಾಂತರವಾಗಲಿ ಯಾವಾಗಲೂ ಮಾಡುತ್ತಾನೆ. ಈ ಗಣಾಧೀಶ್ವರರು ಬಸವೇಶ್ವರನ

ಕಾಲದಲ್ಲಿ ಹೇಗೆ ಅಸಂಖ್ಯಾತವಾಗಿ ಉದ್ಭವಿಸಿದರೋ ಹಾಗೆಯೇ ಕಾಲ ಕಾಲಕ್ಕೆ ಉದ್ಭವಿಸಿ ಲೋಕವನ್ನು ಉದ್ಧಾರ ಮಾಡುತ್ತಾರೆ. ಶಿವಶರಣರ ಚರಿತ್ರೆಗಳಿಂದ ಈ ಸಂಗತಿಗಳು ತಿಳಿದುಬರುತ್ತವೆ.

## ಶಿವಶರಣರ ಭಕ್ತಿ.

ವೀರಶೈವನ ಧ್ಯೇಯವು ಹಿಂದೆ ಹೇಳಿದ ಪ್ರಕಾರ ಸಾಮರಸ್ಯವನ್ನು ಹೊಂದುವದಿರುವದರಿಂದ ಅತ್ತಕಡೆಗೆ ಯಾವ ಶಕ್ತಿಯು ಅವನನ್ನು ಒಯ್ಯುತ್ತದೆಯೋ ಅದೇ ಭಕ್ತಿ ಎಂದೆನಿಸಿಕೊಳ್ಳುತ್ತದೆ. ಶಿವಶರಣರು ನಾನಾವಿಧವಾಗಿ ತಮ್ಮ .ಭಕ್ತಿಯನ್ನು ತೋರಿಸಿದ್ದಾರೆ. ಈ ವಿಷಯವಾಗಿ ಈ ಗ್ರಂಥದಲ್ಲಿ ಅನೇಕ ಉದಾಹರಣೆಗಳು ಬಂದಿವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಇಲ್ಲಿ ಉದಹರಿಸುತ್ತೇವೆ.

ಹಾವಿನಹಾಳ ಕಲ್ಲಯ್ಯನು ಕಲ್ಲಿನಾಥನ ವಿಷಯವಾಗಿ ಅತ್ಯಂತಭಕ್ತಿ ಭಾವವುಳ್ಳವನಾಗಿ ಆಚರಿಸುತ್ತಿರಲು ಅವನ ತಂದೆಯು ಅವನಿಗೆ ದೇವರ ಧ್ಯಾನವನ್ನು ಬಿಟ್ಟು ಕೆಲವೊಂದು ಆಭರಣವನ್ನು ಮಾಡಲು ಒತ್ತಾಯ ಪಡಿಸಿದನು ಆದರೆ ಅವನು ಅದಕ್ಕೆ ಒಪ್ಪದೆ ಹೋಗಲು ಅವನ ತಂದೆಯು ಅವನನ್ನು ಒಳಿತಾಗಿ ದಂಡಿಸಿದ್ದಕ್ಕಾಗಿ ಕಲ್ಲಯ್ಯನು ತನ್ನ ಪ್ರಾಣವನ್ನು ಕೊಡಲು ಸಿದ್ಧನಾದನು. ಆದಯ್ಯನು ಸೌರಾಷ್ಟ್ರ ಸೋಮನಾಥನನ್ನು ಪುಲಿಗೆರೆಗೆ ತರಲು ಹೊರಟು ಅನೇಕ ರೀತಿಯಿಂದ ಕಷ್ಟಪಡುತ್ತಿರಲು ಸೋಮನಾಥನು ಅದನ್ನು ನೋಡಿ ತಾನೇ ಸುರಹೊನ್ನೆ ಬಸದಿಯಲ್ಲಿ ಬಂದು ನೆಲಿಸಿದನು.ನಾವದಿಗೆಯ ಗುಡ್ಡವ್ವನು ಆದಯ್ಯನಂತೆಯೇ ಸೌರಾಷ್ಟ್ರಸೋಮೇಶ್ವರನನ್ನು ನಾವದಿಗೆಗೆ ತರಲುಹೊರಟಾಗ ಅವಳಿಗಾದ ಕಷ್ಟಗಳನ್ನು ನೋಡಿ ಸೋಮನಾಥನು ಮೆಚ್ಚಿ ಅವಳು ಇಚ್ಛಿಸಿದಲ್ಲಿಯೇ ಪ್ರಕಟವಾದನು. ಬೊಂತಾದೇವಿಯು ಕಾಶ್ಮೀರದ ರಾಜಕುಮಾರಿಯು. ಅವಳು ಈ ಉಚ್ಚ ಸ್ಥಾನವನ್ನು ತ್ಯಜಿಸಿ ಬಸವಾದಿಪ್ರಮಥರ ಸನ್ನಿಧಿಯಲ್ಲಿರಬೇಕೆಂದು ಬಯಸಿ ಕಲ್ಯಾಣಕ್ಕೆ ಬರುವವಳಾದಳು. ಇದು ಆಕೆಯ ಭಕ್ತಿಯ ಪರಿಣಾಮವು.

ಹೀಗೆ ಅನೇಕ ಶಿವಶರಣರು ಪರಮಾತ್ಮನಿಗೋಸ್ಕರ ತಮ್ಮ ಭಕ್ತಿಯನ್ನೂ ನಿಷ್ಠೆಯನ್ನೂ ತೋರಿಸಿ ಹೆಸರುವಾಸಿಗಳಾಗಿದ್ದಾರೆ.

## ಭಕ್ತಿಯ ಸ್ವರೂಪ.

ಭಕ್ತಿಯು ಕೆಲವು ವಿಧವಾಗಿರುತ್ತದೆ. ತಾನು ದುರ್ಬಲನು, ಪರಮಾತ್ಮನು ಶಕ್ತಿವಂತನು ಎಂದು ಭಾವಿಸಿ ಅವನ ರಕ್ಷಣೆಯನ್ನು ಬೇಡುವದು ಒಂದು ತೆರದ ಭಕ್ತಿಯಾಗಿರುತ್ತದೆ. ಈ ತೆರದ ಭಕ್ತಿಯನ್ನು ಬಹು ಜನ ಭಕ್ತರು ಸಾಮಾನ್ಯವಾಗಿ ತೋರಿಸುವದುಂಟು. ಈ ತರದ ಕಥೆಗಳು ಈ ಗ್ರಂಥದಲ್ಲಿ ಅನೇಕ ಇರುತ್ತವೆ.

ಸತಿಪತಿಗಳಲ್ಲಿ ಒಂದು ತರದ ಪ್ರೇಮವಿರುತ್ತಿದೆ. ಅಂಥ ಪ್ರೇಮವನ್ನು ಭಕ್ತನು ಪರಮಾತ್ಮನಿಗೋಸ್ಕರ ತೋರಿಸುವದೂ ಉಂಟು. ಇದು ಬೇರೊಂದು ವಿಧದ ಭಕ್ತಿಯು. ಮಹಾದೇವಿಯಕ್ಕನು ಇಂಥ ಪ್ರೇಮವನ್ನು ಶ್ರೀಶೈಲ ಮಲ್ಲಿಕಾರ್ಜುನನಲ್ಲಿ ತೋರಿಸಿದ್ದಾಳೆ. ಗಜೇಶಮಸಣಯ್ಯನು ಪುರುಷನು. ಆದರೆ ತಾನು ಸ್ತ್ರೀಯೆಂದು ಭಾವಿಸಿಕೊಂಡು ತನ್ನ ಇಷ್ಟದೇವತೆಯಾದ ಗಜೇಶ್ವರಲಿಂಗಕ್ಕೆ ಸತಿಪತಿಗಳಲ್ಲಿರತಕ್ಕ ಪ್ರೇಮವನ್ನು ಅವನು ತೋರಿಸಿದ್ದಾನೆ. ಇದು ಕೂಡ ಒಂದು ವಿಧದ ಸಮರಸ ಭಕ್ತಿಯಾಗಿರುತ್ತದೆ.

ಅಮ್ಮವ್ವೆಯು ಒಬ್ಬ ಮುಗ್ಧ ಭಕ್ತಳು. ಅವಳು ಒಂದು ದಿವಸ ಶಿವನಿಗೆ ತಾಯಿತಂದೆಗಳಿಲ್ಲ, ಅವನಿಗಾರೂ ಇಲ್ಲ, ಎಂಬುದನ್ನು ಕೇಳಿದವಳಾಗಿ ಅವಳು ಅವನಿಗಾಗಿ ಚಿಂತಿಸುತ್ತ ಅವಳು ಅವನನ್ನು ಹುಡುಕುತ್ತ ಅರಣ್ಯದಲ್ಲಿ ಸಂಚರಿಸಹತ್ತಿದಳು. ಅವಳ ಕಷ್ಟವನ್ನು ನೋಡಿ ಶಿವನು ಕೂಸಿನ ರೂಪಾಗಿ ಗಿಡಕ್ಕೆ ತೂಗಹಾಕಿದ ತೊಟ್ಟಿಲಲ್ಲಿ ತೂಗಾಡುತ್ತಿರುವದನ್ನು ಅವಳು ಕಂಡಳು. ಆಗ ಅವಳು ಶಿವನು ತನ್ನ ಮಗುವೆಂದು ಭಾವಿಸಿ ಪ್ರೀತಿಯಿಂದ ಜೋಕೆಮಾಡಿದಳು. ಇದೂ ಒಂದು ವಿಧದ ಪ್ರೇಮಮಯವಾದ ಭಕ್ತಿಯು.

ವೈದುನರಾಮಯ್ಯನು ಚನ್ನಮಲ್ಲಿಕಾರ್ಜುನನು ತನ್ನ ಭಾವನೆಂದು ಭಾವಿಸಿ ಅವನನ್ನು ಶ್ರೀಶೈಲಪರ್ವತದಲ್ಲಿ ಹುಡುಕುತ್ತ ಹೊರಟನು. ಆಗ ಅವನು ಬಹಳ ಕಷ್ಟಪಟ್ಟನು. ಶಿವನು ಅದನ್ನು ನೋಡಿ ಪ್ರೀತನಾದನು. ಇದೂ ಒಂದುತರದ ಭಕ್ತಿಯು.

ಇವರೆಲ್ಲರ ಭಕ್ತಿಯು ಶ್ರೇಷ್ಠತರವಾದುದು. ಹೀಗೆ ಶಿವಶರಣರು ಪರಮಾತ್ಮನಿಗೋಸ್ಕರ ಅನೇಕ ರೀತಿಯಿಂದ ತಮ್ಮ ಭಕ್ತಿಯನ್ನು ತೋರಿಸಿ ಲಿಂಗದೊಳಗಾಗಿದ್ದಾರೆ.

## ಲಿಂಗಧ್ಯಾನ.

ಭಕ್ತನ ಭಕ್ತಿಯು ಅವನ ಚಿತ್ತದ ಏಕಾಗ್ರತೆಯ ಮೇಲೆ ಬಹಳ ಅವಲಂಬಿಸಿರುತ್ತದೆ. ಪ್ರೇಮ ಅಥವಾ ಉತ್ಕಟ ಪ್ರೀತಿಯು ಇರದೆ ಹೋದರೆ ಅವನಲ್ಲಿ ಇಂಥ ಏಕಾಗ್ರತೆಯು ಉಂಟಾಗಲಾರದು. ಸುತ್ತಲಿನ ಯಾವ ಸನ್ನಿವೇಶಗಳು ಭಕ್ತನ ಮನಸ್ಸನ್ನು ಆಕರ್ಷಿಸುತ್ತವೆಯೋ ಆ ಸನ್ನಿವೇಶಗಳಲ್ಲಿಯೇ ಭಕ್ತನು ಇದ್ದುಕೊಂಡು ಲಿಂಗಧ್ಯಾನವನ್ನು ಮಾಡುತ್ತಾನೆ. ಆದ್ದರಿಂದ ಭಕ್ತರು ತಮ್ಮ ತಮ್ಮ ಮನಸ್ಸಿನ ಒಲವುಗಳಂತೆ ದೇವಾಲಯ, ಅರಣ್ಯ, ಸರೋವರ, ನದೀತೀರ ಇಂಥಲ್ಲಿ ಒಂದು ಏಕಾಂತ ಸ್ಥಳವನ್ನು ಆಯ್ದು, ಅಲ್ಲಿ ಅವರು ತಮ್ಮ ಇಷ್ಟಲಿಂಗದ ಮೂಲಕ ತಮ್ಮ ಧ್ಯಾನದಲ್ಲಿರುತ್ತಾರೆ.

ಮಾದರ ಚನ್ನಯ್ಯನು ಅರಣ್ಯ ಮಧ್ಯದಲ್ಲಿದ್ದುಕೊಂಡು ಇಷ್ಟಲಿಂಗವನ್ನು ನಿರೀಕ್ಷಿಸುತ್ತ ಪರಮಾತ್ಮನ ಧ್ಯಾನದಲ್ಲಿರುತ್ತಿದ್ದನು. ಅನುಮಿಷನು ಬಳ್ಳಿಗಾವಿಯ ಸಮೀಪದಲ್ಲಿ ಒಂದು ನಿರ್ಜನ ಪ್ರದೇಶವನ್ನು ತನ್ನ ಲಿಂಗಧ್ಯಾನಕ್ಕೋಸ್ಕರ ಆಯ್ದುಕೊಂಡಿರುತ್ತಿದ್ದನು. ವರದಾನಿ ಗುಡ್ಡಮ್ಮೆಯು ಇವನಂತೆಯೇ ಒಂದು ಋಕ್ಷವಾದ ಕಾಡುಪ್ರದೇಶವನ್ನು ಆರಿಸಿಕೊಂಡಳು. ಬಸವೇಶ್ವರನು ನದೀಪ್ರದೇಶದಲ್ಲಿದ್ದ ಒಂದು ದೇವಾಲಯವನ್ನು ಆರಿಸಿಕೊಂಡನು. ನಿಜಲಿಂಗಚಿಕ್ಕಯ್ಯನು ಕೆಲವೊಂದು ತೋಟವನ್ನೂ ಗಜೇಶಮಸಣಯ್ಯನೂ ಕೇತಿರಾಜನೂ ನದೀಪ್ರದೇಶಗಳನ್ನೂ ಆಯ್ದು ಲಿಂಗಾನುಸಂಧಾನದಲ್ಲಿರುತ್ತಿದ್ದರು.

ಹೀಗೆ ಶಿವಶರಣರು ಲಿಂಗಧ್ಯಾನದಲ್ಲಿದ್ದುಕೊಂಡು ಲಿಂಗಾನುಭವವನ್ನು ಹೊಂದಿರುತ್ತಾರೆ. ಈ ಕಾರ್ಯಕ್ಕೋಸ್ಕರ ಅವರಿಗೆ ಇಂಥ ಸ್ಥಳವೇ ಬೇಕೆಂಬ ಕಟ್ಟುಗಳು ಇರುವದಿಲ್ಲ. ಯಾವ ಸ್ಥಳವು ಪ್ರಾಪಂಚಿಕ ವ್ಯವಹಾರದೊಳಗಿಂದ ಅವರ ಚಿತ್ತವನ್ನು ಮೇಲಕ್ಕೆ ಎತ್ತಿ ಉಚ್ಚ ವಾತಾವರಣದಲ್ಲಿ ಅವರನ್ನು ಒಯ್ದುಬಿಡುತ್ತದೋ ಅಲ್ಲಿಯೇ ಅವರು ಇರು

ತ್ತಾರೆ. ಅವರು ಇಂಥಲ್ಲಿ ಇದ್ದುಕೊಂಡು ತಮ್ಮ ಧ್ಯಾನದಿಂದ ಪ್ರಾಣದಲ್ಲಿ ಲಿಂಗವನ್ನು ನಿಕ್ಷೇಪಿಸಿ ಪ್ರಾಣಲಿಂಗಿಗಳಾಗಿ ಅಖಂಡಪರಿಪೂರ್ಣ ಪರಂಜ್ಯೋತಿ ಸ್ವರೂಪನಾಗಿರುವ ಪರಮಾತ್ಮನಲ್ಲಿ ಬೆರೆಯುತ್ತಾರೆ.

## ವ್ರತಗಳು.

ಕೇವಲ ಇಂಥ ಲಿಂಗಧ್ಯಾನದಿಂದ ಅಂಗಲಿಂಗ ಸಾಮರಸ್ಯವು ಘಟಿಸದೆಂದು ಶಿವಶರಣರ ವಾಕ್ಯಗಳಿವೆ. ಕೇವಲ ನೆನಹಿನಿಂದ ಕಾರ್ಯ ಸಾಧಿಸಲಾರದು. ಈ ನೆನಹಿನ ಗೂಡ ಕ್ರಿಯೆಯೂ ಬೇಕು. ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ, ಎಂದು ವಚನಕಾರರು ನುಡಿದಿದ್ದಾರೆ. ಆದ್ದರಿಂದ ಕೆಲವೊಂದು ಕ್ರಿಯೆಯನ್ನು ಭಕ್ತನು ಕೈಕೊಳ್ಳಲೇಬೇಕು. ಯಾವ ಕ್ರಿಯೆಯನ್ನು ಕೈಕೊಳ್ಳಬೇಕೆಂಬುದನ್ನು ನಿರ್ಧರಿಸುವಲ್ಲಿ ಭಕ್ತನು ಸ್ವತಂತ್ರನಿದ್ದಾನೆ. ಯಾವ ಕ್ರಿಯೆಯು ಅವನಿಗೆ ಪ್ರಿಯಕರವಾದುದೋ ಅದನ್ನು ಅವನು ಆಯ್ದು ಅದನ್ನು ಅವನು ನಿಷ್ಠೆಯಿಂದ ಜರಿಗಿಸುತ್ತ ಹೋಗುತ್ತಾನೆ. ಒಬ್ಬನು ಸ್ವಾಭಾವಿಕವಾಗಿ ಭಕ್ತಸ್ಥಲದವನಿದ್ದು ಅವನಿಗೆ ಪರಮಾತ್ಮನ ಭಜನೆ ಅಥವಾ ಪೂಜಾದಿಕಾರ್ಯಗಳು ಹೆಚ್ಚಿಗೆ ರುಚಿಸಬಹುದು. ಮತ್ತೊಬ್ಬನು ಪ್ರಾಣಲಿಂಗಿಸ್ಥಲದವನಾಗಿದ್ದು ಅವನಿಗೆ ಯೋಗದ ಆಚರಣೆಗಳು ರುಚಿಸಬಹುದು. ಇನ್ನೊಬ್ಬನು ಶರಣಸ್ಥಲದವನಿದ್ದು ಅವನಿಗೆ ಜ್ಞಾನಮಾರ್ಗವು ರುಚಿಸಬಹುದು. ಆದರೆ ಯಾವ ಕಾರ್ಯ ಕೈಕೊಂಡರೂ ಭಕ್ತನು ಅದರ ವಿಷಯವಾಗಿ ನಿಷ್ಠಾಭಕ್ತಿಯುಳ್ಳವನಾಗಿ ಅದನ್ನು ಆಚರಿಸುತ್ತ ಹೋದಲ್ಲಿ ಅದು ಅವನಿಗೆ ಒಂದು ವ್ರತವಾಗಿ ಪರಿಣಮಿಸುತ್ತದೆ. ಹೀಗೆ ಭಕ್ತನು ಕೆಲವೊಂದು ವ್ರತವನ್ನು ಕೈಕೊಂಡು ಅದನ್ನು ಪಾಲಿಸುತ್ತ ಹೋದರೆ ಅವನಲ್ಲಿ ಷಟ್‌ಸ್ಥಲಗಳು ತಾವಾಗಿಯೇ ಸಮಾವೇಶವಾಗಿ ಅದರ ಮೂಲಕ ಅವನು ಸಾಮರಸ್ಯ ಸ್ಥಿತಿಯನ್ನು ಹೊಂದುತ್ತಾನೆ.

ಗೊಗ್ಗವ್ವೆಯು ಧೂಪವನ್ನು ಅರ್ಪಿಸುವ ಕಾಯಕವನ್ನು ಕೈಕೊಂಡಿದ್ದಳು. ಈ ಕಾಯಕವನ್ನು ಮಾಡುತ್ತಲೇ ಅವಳು ಲಿಂಗವನ್ನು ಹೊಂದಿದಳು. ಕೈಲಾಸಕ್ಕೆ ಹೋಗಲು ಹಾತೊರೆಯುತ್ತಿದ್ದ ಚಾರಮರಾಯನು ಅವಳನ್ನು ಕಾಣಲು ಅವಳು ತನ್ನ ಧೂಪದ ಹೊಗೆಯಲ್ಲಿಯೇ ಕೈಲಾಸದ ದ್ವಾರಕ್ಕೆ ಹೋಗುವ ದಾರಿಯನ್ನು ಅವನಿಗೆ ತೋರಿಸಿದಳು.

ಮುಸುಡಿಯ ಚೌಡಯ್ಯನು ಜನರನ್ನು ಕಂಡಾಗ 'ಶರಣು ಶರಣಾರ್ಥಿ' ಎಂದೆನ್ನುತ್ತ ಅವರ ಕೂಡ ಕಿಂಕರಭಾವದಿಂದ ವರ್ತಿಸುವನು. ಇದರಿಂದ ಅವನಲ್ಲಿ ಒಂದು ಅಗಾಧವಾದ ಶಕ್ತಿಯು ಉಂಟಾಯಿತು. ವರದಾನಿಗುಡ್ಡವ್ವೆಯು ಕಲ್ಯಾಣದಲ್ಲಿ ಇದ್ದಾಗ್ಗೆ ಜನರ ಕಷ್ಟಗಳನ್ನು ನಿವಾರಣೆ ಮಾಡುವದರಲ್ಲಿ ಕಾಲಕಳೆಯುತ್ತಿದ್ದಳು. ಇದರಿಂದ ಅವಳಲ್ಲಿ ಧೈರ್ಯ ಸಾಹಸಾದಿ ಗುಣಗಳು ನೆಲೆಗೊಂಡು ಜನರನ್ನು ಉದ್ಧಾರ ಮಾಡುವ ಸಾಮರ್ಥ್ಯವು ಅವಳಲ್ಲಿ ಉಂಟಾಯಿತು. ವೈದ್ಯ ಸಂಗಣ್ಣನು ಜನರಿಗೆ ಔಷಧ ಕೊಟ್ಟು ರೋಗನಿವಾರಣೆ ಮಾಡುವ ಕಾಯಕವನು ಕೈಕೊಂಡಿದ್ದನು. ಆದರೆ ಅವನು ತನ್ನ ಕಾಯಕದೊಡನೆ ತ್ರಿಲಿಂಗ ಷಡ್ಲಿಂಗಗಳ ಅರಿವನ್ನು ರೋಗಿಗಳಿಗೆ ಉಂಟುಮಾಡಿಕೊಡುತ್ತ ಅವರ ಬಹಿರಂಗದ ಮತ್ತು ಅಂತರಂಗದ ರೋಗಗಳನ್ನು ನಿವಾರಣೆ ಮಾಡುವನು. ಬಿಬ್ಬಿಬಾಚಯ್ಯನು ಭಕ್ತರ ಮನೆಗಳಿಗೆ ಹೋಗಿ ಅವರು ಕೊಟ್ಟ ಅರ್ಪಿತವನ್ನು ಸಂಗ್ರಹಿಸಿ ದಾಸೋಹ ಕಾರ್ಯಗಳನ್ನು ನಡಿಸುವನು. ಅಗ್ಗವಣಿಯ ಹೊನ್ನಯ್ಯನು ಬಸವೇಶ್ವರನ ದಾಸೋಹಕ್ಕೆ ದಿನಾಲು ನದಿಯುದಕವನ್ನು ತಂದುಕೊಡುವನು. ಇದರಿಂದ ಅವನಲ್ಲಿ ಒಂದು ಅಗಾಧವಾದ ಶಕ್ತಿಯು ಉಂಟಾಯಿತು.

ಹೀಗೆ ಶಿವಶರಣರು ಕೇವಲ ಧ್ಯಾನಪರಾಯಣರಾಗಿರದೆ ಆ ಧ್ಯಾನದೊಡನೆ ಕೆಲವೊಂದು ವ್ರತವನ್ನು ಕೈಕೊಂಡು ತಮ್ಮ ಮತ್ತು ಜಗತ್ತಿನ ಉದ್ಧಾರವನ್ನು ಮಾಡಿದ್ದಾರೆ.

## ಶಿವಶರಣರು ಕರ್ಮಠರಲ್ಲ.

ಶಿವಶರಣರು ಕೆಲವೊಂದು ಕ್ರಿಯೆಯನ್ನು ಕೈಕೊಂಡು ವ್ರತಸ್ಥರಾಗಿ ನಡೆದರೂ ಅವರು ಕರ್ಮಠತನವನ್ನು ಹೀಯಾಳಿಸುತ್ತಾರೆ. ಯಾರಾದರೂ ಲಿಂಗಪೂಜೆಯ ಉದ್ದೇಶವನ್ನು ತಿಳಿದುಕೊಳ್ಳದೆ ಸಂಭ್ರಮದಿಂದ ಲಿಂಗಾರ್ಚನೆಯನ್ನು ತಾಸುಗಟ್ಟಲೆ ಮಾಡುತ್ತ ಕುಳಿತರೆ ಅಂಥವರನ್ನು ಅವರು ಹೀಯಾಳಿಸುತ್ತಾರೆ. 'ಬಂಡಿತುಂಬ ಪತ್ರಿಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆವ' ಜನರಿಗೆ ಪರಮಾತ್ಮನು 'ಬರಿಯ ಉದಕದಲ್ಲಿ ನೆನೆವನೇ?' ಎಂದು ಇಂಥವರನ್ನು ಅವರು ಮೂದಲಿಸಿ ನುಡಿದಿದ್ದಾರೆ.

ಓಲೆಯ ಶಾಂತಯ್ಯನು ಒಬ್ಬ ಶಿವಶರಣನು. ಒಂದು ದಿವಸ ಅಗ್ಗವಣಿಯ ಹೊನ್ನಯ್ಯನು ಬಸವೇಶ್ವರನಿಗಾಗಿ ನದಿಯಲ್ಲಿ ನೀರು ತುಂಬುತ್ತಿರಲು ಓಲೆಯ ಶಾಂತಯ್ಯನು ತನ್ನ ಪಾವರಕ್ಷೆಗಳನ್ನು ಬೇರೆ ತೆಗೆದಿಡದೆ ನೀರು ತುಂಬಿಕೊಂಡು ಲಿಂಗಕ್ಕೆ ಮಜ್ಜನವನ್ನೆರೆಯುವ ದನ್ನು ನೋಡಿ ಅವನಿಗೆ ತಿರಸ್ಕಾರದಿಂದ ಒತ್ತಿ ನುಡಿಯಲು ಆಕ್ಷಣವೇ ಉದಕವನ್ನು ತರುವ ಅವನ ಕಾವಡಿಯು ಮೊದಲು ಅವನ ಹೆಗಲಿನ ಮೇಲೆ ಕೆಲವಂತರದ ಮೇಲೆ ಇರುತ್ತಿದ್ದುದು ಅದು ಜಗ್ಗನೆ ಅವನ ಬೆನ್ನ ಮೇಲೆ ಬಂದು ಕುಳಿತಿತು. ಹೀಗೆ ಅವನ ಸತ್ವವು ಹೊರಟುಹೋಯಿತು. ಕೇವಲ ಕರ್ಮಠತನವನ್ನು ಹಳಿಯುವದೇ ಈ ಚರಿತ್ರೆಗಳ ಉದ್ದೇಶವಾಗಿದೆ.

ಅನೇಕರು ತಿಳಿದಿರುವಂತೆ ಶಿವಶರಣರು ವೇದಶಾಸ್ತ್ರವನ್ನು ತಿರಸ್ಕರಿಸುವದಿಲ್ಲ. ಅವುಗಳಲ್ಲಿಯ ಉಕ್ತಿಗಳನ್ನು ಅವರು ತಮ್ಮ ವಚನಗಳಲ್ಲಿ ಯಾವಾಗಲೂ ಉದಹರಿಸುತ್ತಾರೆ. ಆದರೆ ವೇದಪಾಠಕರಂತೆ ಅವರು ಅವುಗಳನ್ನು ಗುಪ್ತವಾಗಿ ಇಡದೆ ಅವುಗಳಲ್ಲಿಯ ತತ್ವಗಳನ್ನು ಯಾವ ಜಾತಿಯವರಿದ್ದರೂ ಅವರಿಗೆ ಅವರು ಬೋಧಿಸುತ್ತಾರೆ. ಅವರು ವೇದಗಳನ್ನು ಬರೀ ಕಂಠಪಾಠ ಮಾಡುವವರನ್ನು ಹೀಯಾಳಿಸಿದ್ದಾರೆ. ಅವರು ಕತ್ತೆಯಂತೆ ಭಾರ ಹೊರುವವರೆಂದು ಅಂದಿದ್ದಾರೆ.

ಹಾವಿನಹಾಳ ಕಲ್ಲಯ್ಯನ ಕೂಡ ಬ್ರಾಹ್ಮಣರು ಈ ವಿಷಯವಾಗಿ ವಾದಿಸಿದ್ದರಿಂದ ಅವನು ನಾಯಿಂದ ವೇದವನ್ನು ಓದಿಸಿದನು. ಜಂಬೂರಲ್ಲಿ ಮಹಾಕಾಳಯ್ಯನೆಂಬ ಶಿವಶರಣನಿದ್ದ. ಅಲ್ಲಿಯ ಬ್ರಾಹ್ಮಣರು ಅವನಿಗೆ ವೇದಗಳನ್ನು ಓದುವಾತನೇ ಕುಲದಲ್ಲಿ ಅಧಿಕನು ಎಂದು ವಾದ ಮಾಡಲು ಮಹಾಕಾಳಯ್ಯನು ಹೊಲೆಗೇರಿಯಿಂದ ಒಂದು ಶ್ವಾನನನ್ನು ತರಿಸಿ ಅದರ ಮೂಲಕ ಶ್ರುತಿಯ ಭಾಗಗಳನ್ನು ಓದಿಸಿದನು. ಹೀಗೆ ಶಿವಶರಣರು ಕೇವಲ ಕರ್ಮಠತನವನ್ನು ಹಳಿದಿದ್ದಾರೆ.

## ಶಿವಶರಣರು ಗುಪ್ತ ಭಕ್ತಿಯುಳ್ಳವರು.

ಶಿವಶರಣರು ಅಟ್ಟಹಾಸದ ಪೂಜೆಯನ್ನು ತಿರಸ್ಕರಿಸುತ್ತಾರೆ. ಅವರು ಏಕಾಂತದಲ್ಲಿದ್ದುಕೊಂಡು ಲಿಂಗ ಧ್ಯಾನದಲ್ಲಿರುವದನ್ನು ಯಾವಾಗಲೂ ಪ್ರೀತಿಸುತ್ತಾರೆ. ಬಹುಶಃ ಪ್ರತಿಯೊಬ್ಬ ಶಿವಶರಣನ ನಡೆಯು ಈ ಪ್ರಕಾರ ಇರುತ್ತದೆ. ಶಿವಶರಣರು ಊರಲ್ಲಿದ್ದರೂ ಅವರು ಶಿವಾನುಭಾವಿಗಳು

ಎಂಬುದು ಸಹ ಯಾರಿಗೂ ತಿಳಿಯದಂತೆ ಅವರು ವರ್ತಿಸಿರುವದು ಕಂಡು ಬರುತ್ತದೆ.

ಮೋಳಿಗೆಯ ಮಾರಯ್ಯನು ಮಹಾದೇವ ರಾಜನೆಂಬ ಹೆಸರಿನ ರಾಜನು. ಆದರೆ ಅವನು ತನ್ನ ಹೆಸರನ್ನು ಬದಲು ಮಾಡಿಕೊಂಡು ಕಲ್ಯಾಣ ಪಟ್ಟಣದಲ್ಲಿ ಗುಪ್ತವಾಗಿ ವಾಸಮಾಡುತ್ತಿದ್ದನು. ಬೊಂತಾ ದೇವಿಯು ರಾಜಗುವರಿಯು. ಆದರೆ ಅವಳು ನಿಜದೇವಿ ಎಂಬ ತನ್ನ ಮೊದಲಿನ ಹೆಸರನ್ನು ಬದಲುಮಾಡಿ ಬೊಂತಾ ದೇವಿ ಎಂದು ಬೇರೆ ಹೆಸರನ್ನಿಟ್ಟುಕೊಂಡು ಕಲ್ಯಾಣ ಪಟ್ಟಣದಲ್ಲಿ ಗುಪ್ತವಾಗಿ ವಾಸಮಾಡು ತ್ತಿದ್ದಳು. ಮಾದರ ಚನ್ನಯ್ಯನಾದರೂ ಹಾಗೆಯೇ ವರ್ತಿಸಿದ್ದಾನೆ. ಪರಮಾತ್ಮನು ಆಟ್ಟಹಾಸದಿಂದ ಪೂಜೆ ಮಾಡುತ್ತಿದ್ದ ಚೋಳ ರಾಜ ನಿಗೆ ಒಲಿಯದೆ ಈ ಚನ್ನನಿಗೆ ಒಲಿದನು. ಮೊದಲು ವಿಷ್ಣು ಭಕ್ತ ನಾಗಿದ್ದ ಗುಪ್ತ ಮಂಚಣ್ಣನ ವರ್ತನೆಯು ಈ ವಿಷಯದಲ್ಲಿ ಹೃದಯ ಸ್ಪರ್ಶಿಯಾಗಿರುತ್ತದೆ. ಬಾಹ್ಯದಲ್ಲಿ ವೈಷ್ಣವನಂತೆ ಅವನ ಆಚರಣೆ ಇತ್ತು. ಆದರೆ ಒಳಗೊಳಗೆ ಶಿವಾನುಭವಿಯಾಗಿ ಲಿಂಗಾನುಸಂಧಾನದಲ್ಲಿ ಮಗ್ನ ನಾಗಿರುತ್ತಿದ್ದನು. ಅವನ ಲಿಂಗಭಕ್ತಿಯು ಜನರಲ್ಲಿ ಪ್ರಕಟವಾಗಲು ಅವನ ಪ್ರಾಣವು ಹಾಗೆಯೇ ಹೊರಟು ಹೋಯಿತು.

## ಶಿವಶರಣರು ಉಂಡು ಉಪವಾಸಿಗಳು ಬಳಸಿ ಬ್ರಹ್ಮಚಾರಿಗಳು.

ಗುಪ್ತ ಭಕ್ತಿಯ ಮೂಲಕ ಶಿವಶರಣರು ವ್ಯವಹಾರದಲ್ಲಿ ಇದ್ದೂ ಇಲ್ಲದಂತೆ ಇರುತ್ತಾರೆ. ಅವರ ಭಾವವು ಯಾವಾಗಲೂ ಉಚ್ಚ ವಸ್ತು ವಿನ ಕಡೆಗೆ ಹರಿದಾಡುತ್ತಿರುತ್ತದೆ. ಇದು ಇತರರಿಗೆ ಕಾಣುವದಿಲ್ಲ. ಅವರು ಊಟಮಾಡುತ್ತಿರಬಹುದು. ಆದರೂ ಅವರು ಉಂಡು ಉಪ ವಾಸಿಗಳೆಂದೆನಿಸಿಕೊಳ್ಳುತ್ತಾರೆ. ಅವರು ಲಗ್ನವಾಗಿರಬಹುದು, ಮತ್ತು ಇತರರಂತೆ ಪ್ರಪಂಚವನ್ನು ಮಾಡುತ್ತಿರಬಹುದು. ಆದರೂ ಅವರು ಬಳಸಿ ಬ್ರಹ್ಮಚಾರಿಗಳೆಂದು ಹೇಳಲ್ಪಡುತ್ತಾರೆ. ಈ ಪ್ರಕಾರ ಶಿವ ಶರಣರ ನಡೆ ಇರುತ್ತದೆ.

## ಶಿವಶರಣರು ನೃತ್ಯ, ವಾದ್ಯ ಮತ್ತು ಗಾಯನಪ್ರಿಯರು.

ಮನಸ್ಸನ್ನು ಶುದ್ಧಗೊಳಿಸುವಲ್ಲಿ ಅಥವಾ ಭಕ್ತಿ ಭಾವವನ್ನು ಹೆಚ್ಚಿಸು ವಲ್ಲಿ, ಗಾಯನ, ನೃತ್ಯ, ವಾದ್ಯ ಇವುಗಳ ಮಹತ್ವವನ್ನು ಶಿವಶರಣರು

ಅರಿತಿದ್ದಾರೆ. ಬಸವೇಶ್ವರನು ತನ್ನ ಅನೇಕ ವಚನಗಳಲ್ಲಿ ಗಾಯನದ ಮಹತ್ವವನ್ನು ಬಹಳ ಹೊಗಳಿದ್ದಾನೆ. ವಚನಗಳು 'ಗೀತವಾತೆ'ಂದು ಕೆಲವು ವಚನಕಾರರು ಅವುಗಳನ್ನು ವರ್ಣಿಸಿದ್ದಾರೆ.

ಭದ್ರಗಾಯಕನು ದಿನಾಲು ಶಿವಾಲಯಕ್ಕೆ ಹೋಗಿ ಪರಮಾತ್ಮನನ್ನು ಭಜಿಸಿ ಬರುವನು. ಅವನು ತನ್ನ ಪದಗಳಲ್ಲಿ ಶಿವಶರಣರ ಮಹಿಮೆಗಳನ್ನೂ ಲಿಂಗಭಕ್ತಿಯ ಮಹತ್ವವನ್ನೂ ಯಾವಾಗಲೂ ಹಾಡುವನು. ಚಾರಮನು ಹಾಗೆಯೇ ನೃತ್ಯ, ಗಾಯನ, ವಾದ್ಯಗಳಲ್ಲಿ ಬಹುಪ್ರವೀಣನು ಈ ಸಂಗತಿಯನ್ನು ನಂಬೆಣ್ಣನು ಶಿವನಿಗೆ ಅರಿಕೆಮಾಡಲು ಅವನಿಗೆ ಕೈಲಾಸದಲ್ಲಿ ಪ್ರವೇಶವು ದೊರೆಯಿತು. ಕಂಕರೀ ಕಕ್ಕಯ್ಯನು ದಿನಾಲು ಭಕ್ತರ ಮನೆಗೆ ಹೋಗಿ ಕಂಕರಿಯನ್ನು ನುಡಿಸುತ್ತ ದೇವರ ಭಜನೆಯನ್ನು ಮಾಡುವನು. ಗಟ್ಟಿವಾಳಯ್ಯನು ಕಲ್ಯಾಣ ಪಟ್ಟಣದಲ್ಲಿ ನರ್ತನ ಮಾಡುವ ಕಾಯಕವನ್ನು ಮಾಡಿಕೊಂಡಿರುತ್ತಿದ್ದನು. ಇದರಿಂದ ಅವನು ತನ್ನ ಭಕ್ತಿಭಾವವನ್ನು ಬೆಳೆಸುತ್ತ ಶ್ರೇಷ್ಠ ತರಗತಿಯ ಶಿವಶರಣನಾದನು. ಕಲಕೇತ ಬ್ರಹ್ಮಯ್ಯನು ತನ್ನ ಜಾತಿಯ ಉದ್ಯೋಗಕ್ಕೆ ಅನುಗುಣವಾಗಿ ವೇಷವನ್ನು ಧಾರಣಮಾಡಿ, ನಡೆಯುವಾಗ ಕುಣಿಯುತ್ತ, ಬೆತ್ತವನ್ನು ತಿರುಹುತ್ತ, ನಡೆಯುವನು. ಆಗ ಅವನು ಶಿವಭಕ್ತರ ಮಹತ್ವವನ್ನು ಹೊಗಳುತ್ತ ಪರವಾದಿಗಳ ತತ್ವಗಳನ್ನು ಖಂಡಿಸುತ್ತ ಭೃಂಗಿಯ ನಾಂಟ್ಯದಂತೆ ಕುಣಿಯುತ್ತ ಮುಂದೆ ಸಾಗುವನು. ಇದರಿಂದ ಅವನು ಅಗಾಧವಾದ ಅಂತಃಶಕ್ತಿಯನ್ನು ಹೊಂದಲು ಸಮರ್ಥನಾದನು. ಕೇಶಿರಾಜನು ಕವಿಯಾಗಿ ತನ್ನ ಕವಿತ್ವದಿಂದ ಪರಮಾತ್ಮನನ್ನು ಭಜಿಸುವವನಾದನು. ಹೀಗೆ ಶಿವಶರಣರು ಗಾಯನಪ್ರಿಯರಾಗಿ ಆಚರಿಸುತ್ತ ಉನ್ನತ ಸ್ಥಾನವನ್ನು ಪೊಂದಿದ್ದಾರೆ.

## ಕಾಯಕ

ಶಿವಾನುಭವ ಶಾಸ್ತ್ರದಲ್ಲಿ 'ಕಾಯಕ' ಈ ಶಬ್ದಕ್ಕೆ ಒಂದು ವಿಶಿಷ್ಟಾರ್ಥವಿರುತ್ತದೆ. ಕಾಯಕವೆಂದರೆ ಕೇವಲ ಉಪಜೀವನದ ಹೋರೆಯಲ್ಲ. ಈಚೆಗೆ ಬಹುಜನರು ಕಾಯಕವೆಂದರೆ ಉಪಜೀವನಕ್ಕೋಸ್ಕರ ಕೈಕೊಂಡ ಒಂದು ಉದ್ಯೋಗ ಎಂದು ಭಾವಿಸಿದ್ದಾರೆ. ಆದರೆ ಶಿವಶರಣರಿಗೆ ಇದು ಆಧ್ಯಾತ್ಮಿಕ ಉನ್ನತಿಯ ಮುಖ್ಯ ಮಾರ್ಗವಾಗಿದೆ.

ನಿತ್ಯದ ಜೀವನವು ಅಥವಾ ಕಾಯಕವು ಸ್ವಾಸ್ಥಿತಿಗೆ ಸಹಾಯಕಾರಿಯಾಗುವಂತೆ ಅದನ್ನು ಶಿವಶರಣರು ಜರಿಗಿಸುತ್ತಾರೆ. ಅವರು ನಿಂತಲ್ಲಿ, ನೋಡುವಲ್ಲಿ, ಮಾಡುವಲ್ಲಿ, ಭಾವಿಸುವಲ್ಲಿ, ಅವರ ಭಾವವುಳ್ಳವರಾಗಬೇಕು. ಆಗ ಈ ಕ್ರಿಯೆಗಳು ಅವರಿಗೆ ಲಿಂಗಪೂಜಾ ಸಾಧನಗಳಾಗಿ ಪರಿಣಮಿಸುತ್ತದೆ. ಈ ತತ್ವಗಳಂತೆ ಶಿವಶರಣರು ತಮ್ಮ ಕಾಯಕಗಳನ್ನು ಜರಿಗಿಸುತ್ತಾರೆ.

ನಿತ್ಯದ ಉಪಜೀವನದ ಉದ್ಯೋಗಗಳನ್ನು ಮಾಡುವ ಈ ಪದ್ಧತಿಯು ಯಾವ ಒಂದೂ ಧರ್ಮದಲ್ಲಿಯೂ ಇದ್ದುದು ಕಂಡುಬರುವದಿಲ್ಲ. ಹಿಂದುಸ್ತಾನದಲ್ಲಿಯ ಸಾಧು ಸತ್ಪುರುಷರೂ ಧರ್ಮೋದ್ಧಾರಕರೂ ಬಹುತರವಾಗಿ ಎಲ್ಲರೂ ಉಪಜೀವನದ ಉದ್ಯೋಗಗಳನ್ನು ಹೇಯಭಾವದಿಂದ ಕಾಣುತ್ತಾರೆ. ಅವರಲ್ಲಿ ಹಲವರು, ಅವು ಶೂದ್ರರು ಮಾಡುವ ಕಾರ್ಯಗಳೆಂದು ಭಾವಿಸಿರುತ್ತಾರೆ. ಬೌದ್ಧರು ಆರಂಭದಲ್ಲಿ ನೈತಿಕ ವರ್ತನೆಗೆ ಮಹತ್ವ ಕೊಟ್ಟಿದ್ದರೂ ಮುಂದೆ ಬರಬರುತ್ತ ಅವರು ಪ್ರಪಂಚವನ್ನು ಬಿಟ್ಟುಕೊಟ್ಟು ಅರಣ್ಯವಾಸಿಗಳಾಗಿ ಭಿಕ್ಷುಗಳೂ ಸನ್ಯಾಸಿಗಳೂ ಆದರು. ಜೈನರು ಸಂಸಾರವು ನಿಃಸಾರವೆಂದು ಬೌದ್ಧರ ಮಾರ್ಗವನ್ನೇ ಅನುಸರಿಸಿದರು. ಬ್ರಾಹ್ಮಣರಲ್ಲಿ ಬಹು ಜನರು ಯೋಗಾಭ್ಯಾಸಕ್ಕೆ ಹೆಚ್ಚು ಮನಸ್ಸು ಹಾಕಿದವರಾಗಿ ಜಟಾಧಾರಿಗಳಾಗಿ ಪರ್ವತ ಪ್ರದೇಶಗಳನ್ನು ಸೇರುತ್ತ ಬಂದರು. ಇಲ್ಲವೆ ಕರ್ಮಮಾರ್ಗವನ್ನು ಅನುಸರಿಸುತ್ತ ಪೂಜೋಪಚಾರಾದಿಗಳಲ್ಲಿ ಬಹಳ ಕಾಲ ಕಳೆಯ ಹತ್ತಿದರು. ಇಲ್ಲವೆ ಜ್ಞಾನಮಾರ್ಗಿಗಳಾಗಿ ಕೇವಲ ತಾತ್ವಿಕ ವಿವೇಚನೆಯಲ್ಲಿ ತೊಡಗಿದರು. ಅಥವಾ ಕಾಯಕಗಳು ಶೂದ್ರರ ಹೊರೆಗಳೆಂದು ಅವುಗಳನ್ನು ತಿರಸ್ಕರಿದರು. ಚೈತನ್ಯ ಪಂಥಿಗಳೂ, ಮಹಾರಾಷ್ಟ್ರ ಮತ್ತು ಕರ್ನಾಟಕದಲ್ಲಿಯ ದಾಸಪಂಥಿಗಳೂ ಕೇವಲ ಪರಮಾತ್ಮನ ಭಜನೆಯಲ್ಲಿದ್ದುಕೊಂಡು ಭಾವನಾಪರವಶರಾಗಿ ಕಾಲಕಳೆಯ ಹತ್ತಿದರು ಇದರಿಂದ ಹಿಂದುಸ್ತಾನವು ಕ್ರಿಯಾಶೂನ್ಯ ದೇಶವಾಯಿತು. ಇದಕ್ಕೆ ಅಪವಾದವಾಗಿ ಕೆಲಮಟ್ಟಿಗೆ ಉಳಿದವರು ಭಗವದ್ಗೀತಾತತ್ವಸಮರ್ಥಕರು ಮಾತ್ರ ಎಂದು ಹೇಳಬಹುದು. ಆದರೆ ಹಿಂದುಸ್ತಾನದಲ್ಲಿ ಉಪಜೀವನದ ಉದ್ಯೋಗಗಳಿಗೆ ಪಾರಮಾರ್ಥಿಕ ಸ್ವರೂಪವನ್ನು ಕೊಟ್ಟವರು ಕರ್ನಾಟಕದ ಶಿವಶರಣರೊಬ್ಬರೇ ಇದ್ದಾರೆ. ಕೆಲವೊಂದು ಉದ್ಯೋಗವನ್ನು ಮಾಡದೆ ಯಾವನೂ ಶಿವಶರ

ಣನಾಗಲಾರನೆಂದು ಅವರ ದೃಢವಾದ ಅಭಿಪ್ರಾಯವಿದೆ. ಆದ್ದರಿಂದ ಗುರುವು ಯಾವನಾದರೊಬ್ಬನಿಗೆ ಲಿಂಗಧಾರಣೆಯನ್ನು ಮಾಡಿದ ಕೂಡಲೆ ಅವನು ಅವನಿಗೆ ಕೆಲವೊಂದು ಕಾಯಕವನ್ನು ಕೊಟ್ಟೇ ತೀರುವನು. ಇದರಿಂದ ವೀರಶೈವ ಸಮಾಜವು ಹೇಗೆ ಪಾರಮಾರ್ಥಕ್ಕೆ ಒಲಿದ ಸಮಾಜವಾಗಿದೆಯೋ, ಅಷ್ಟೇ ಅದು ಔದ್ಯೋಗಿಕ ಸಮಾಜವೂ ಆಗಿರುತ್ತದೆ.

ಶಿವಶರಣರು ಈ ತತ್ವವನ್ನು ಅನುಸರಿಸಿದ್ದರಿಂದ ವೀರಶೈವ ಸಮಾಜವು ಭಿಕ್ಷುಕ ವೃತ್ತಿಗೆ ಉತ್ತೇಜನ ಕೊಡಲಿಲ್ಲ. ಅವರಲ್ಲಿ ಭಿಕ್ಷುಕ ವೃತ್ತಿಯು ಹಿಂದಿನಿಂದ ಬಂದುದು. ಜೈನ, ಬೌದ್ಧ, ಬ್ರಾಹ್ಮಣರಲ್ಲಿದ್ದ ಧಾರ್ಮಿಕ ವರ್ಗಗಳು ಭಿಕ್ಷೆಯನ್ನು ಅವಲಂಬಿಸುವವರಾದ್ದರಿಂದ ಅವರು ರಾಜರು, ಮಾಂಡಲಿಕರು, ಸಿರಿವಂತರು, ಜಮೀನುದಾರರು, ಇಂಥವರನ್ನು ಆಶ್ರಯಿಸುವವರಾದರು. ಆದರೆ ಶಿವಶರಣರು ಸ್ವತಂತ್ರ ವೃತ್ತಿಯವರು. ಇವರು ಯಾರಿಗೂ ಆಳಾಗಿ ವರ್ತಿಸಿರುವದಿಲ್ಲ. ಆದ್ದರಿಂದ ಅವರು ತಮ್ಮ ಧರ್ಮ ತತ್ವಗಳನ್ನು ನಿರ್ಭಯದಿಂದ ಸಮಾಜದಲ್ಲಿ ಪ್ರಸಾರಮಾಡಿದ್ದಾರೆ. ಅವರು ಬಡವರಿದ್ದರೂ, ಯಾವ ಉದ್ಯೋಗವನ್ನು ಮಾಡುತ್ತಿದ್ದರೂ, ತಮ್ಮ ಶಿವಾನುಭವದ ಆಚರಣೆಗಳ ರೀತಿಯನ್ನು ದೃಢನಿಶ್ಚಯದಿಂದ ಸರ್ವ ಜನರಲ್ಲಿ ಸಾರುವವರಾದರು. ಆದ್ದರಿಂದ ಅವರು ನುಡಿದ ವಚನಗಳಲ್ಲಿ ಸತ್ಯ, ಸ್ಪಷ್ಟತೆ, ಇವುಗಳು ಕಂಡು ಬರುತ್ತವೆ.

ಕಾಯಕವನ್ನು ಮಾಡುವಲ್ಲಿ ಅವರು ಕೆಲವು ಉಚ್ಚ ತತ್ವಗಳನ್ನು ಅವಲಂಬಿಸುತ್ತಾರೆ. ದಿನಾಲು ತಮ್ಮ ಪ್ರಪಂಚಕ್ಕೆ ಬೇಕಾಗುವಷ್ಟು ಮಾತ್ರವೇ ಗಳಿಸಬೇಕು. ಹೆಚ್ಚಿಗೆ ಗಳಿಸಬಾರದು. ಗಳಿಸಿದರೆ ಗುರುಲಿಂಗ ಜಂಗಮದ ದಾಸೋಹಕ್ಕೆ ಹೀಗೆ ಹೆಚ್ಚಿಗೆ ಉಳಿದದ್ದನ್ನು ಅರ್ಪಿಸತಕ್ಕದ್ದು. ಮರುದಿನ ಪುನಃ ಕಾಯಕಕ್ಕೆ ಹೋಗಬೇಕು. ಕಾಯಕಕ್ಕೆ ಬೇಕಾಗುವಷ್ಟು ಶ್ರಮವನ್ನು ಅವರು ದಿನಾಲು ಮಾಡಲೇ ತೀರಬೇಕು. ಎಂದೂ ಸೋಮಾರಿಗಳಾಗಬಾರದು. ಮಾಡತಕ್ಕ ಶ್ರಮವನ್ನು ಹಗುರು ಮಾಡಿಕೊಳ್ಳುವ ಹವ್ಯಾಸಕ್ಕೆ ಬೀಳಬಾರದು. ಇತರರು ತನ್ನ ಉಪಜೀವನಕ್ಕೆ ದಾನಕೊಟ್ಟರೆ ಅದನ್ನು ಸ್ವೀಕರಿಸಬಾರದು. ದುಡಿಕೆಯಿಂದ ದೊರೆತ ಕಾಳುಕಡಿಯನ್ನು ಎಷ್ಟುಮಾತ್ರವೂ ಚೆಲ್ಲಬಾರದು. ಆಹಾರವನ್ನು ಹೆಚ್ಚಾಗಿ ನೀಡಿಸಿ

ಕೊಂಡು ಅದನ್ನು ಪಾತ್ರೆಯಲ್ಲಿ ಬಿಟ್ಟು ಹಾಳು ಮಾಡಬಾರದು. ಕೈ ತೊಳೆದುಕೊಂಡ ನೀರನ್ನು ಸಹ ಕುಡಿದುಬಿಡಬೇಕು. ಇವು ಶಿವಶರಣರ ಆಚರಣೆಗಳಾಗಿವೆ. ಇವು ನಿಜವಾಗಿ ಉದಾತ್ತ ತತ್ವಗಳು-ಒಂದು ವೇಳೆ ಹಿಂದೀ ಸಮಾಜವು ಹೀಗೆ ನಡೆದಲ್ಲಿ ಅದಕ್ಕೆ ಎಂದೂ ಕೊರತೆಯು ಬೀಳಲಿಕ್ಕಿಲ್ಲ.

ಈ ತತ್ವಗಳು ಆಯ್ದಕ್ಕಿ ಮಾರಯ್ಯನ ಕಾಯಕದಲ್ಲಿ ಬಹು ಸ್ಫುಟವಾಗಿ ವ್ಯಕ್ತವಾಗುತ್ತವೆ. (ಶಿವಶರಣರ ಚರಿತ್ರೆಗಳು ಭಾಗ - ಪು. ೧೧೭ ನೋಡಿರಿ.) ನಿಜಲಿಂಗ ಚಿಕ್ಕಯ್ಯನು ಬಸವೇಶ್ವರನನ್ನು ಕೊಲ್ಲಲಿಕ್ಕೆ ಬಂದಂಥವನು. ಆದರೆ ಅವನು ಬಸವೇಶ್ವರನಿಗೆ ಶರಣಾಗತನಾಗಲು ಬಸವನು ಅವನಿಗೆ ಓಲೆಗಳನ್ನು ಮಾರುವ ಕಾಯಕವನ್ನು ಕೊಟ್ಟನು. ಪಿಟ್ಟವ್ವೆಯು ನಿರಾಶ್ರಿತಳಾದ ಮುದುಕಿಯು. ಅವಳು ದೋಸೆಗಳನ್ನು ಮಾಡಿ ಅವುಗಳನ್ನು ಮಾರಿ ದಾಸೋಹಕಾರ್ಯ ಮಾಡುವವಳಾದಳು. ಅವ್ವಪ್ಪೆಯು ತಂದೆ, ತಾಯಿ, ಪತಿ, ಇವರೆಲ್ಲರೂ ಸತ್ತು ಹೋಗಿ ಅನಾಥಳಾದಳು. ಅವಳು ರಾಟಿಯ ಕಾಯಕವನ್ನು ಕೈಕೊಂಡಳು. ಸೊಲ್ಲಾಪುರದ ಅಮುಗಿ ದೇವನು ನೆಯ್ಗೆಯ ಕಾಯಕವನ್ನು ಮಾಡುವವನಾಗಿ ಪರಮಾತ್ಮನನ್ನು ಒಲಿಸಿದನು. ರಾಯಸದ ಮಂಚಣ್ಣನು ಬಸವೇಶ್ವರನಲ್ಲಿ ರಾಯಭಾರಿಯ ಕಾಯಕವನ್ನು ಮಾಡುತ್ತ ಬಂದನು. ಆದರೂ ಅವನು ಶ್ರೇಷ್ಠ ಶಿವಾನುಭವಿ ಎಂದೆನಿಸಿಕೊಂಡನು. ಬಸವೇಶ್ವರನಾದರೂ ಬಿಜ್ಜಳನಲ್ಲಿ ಮಂತ್ರಿಯ ಕಾಯಕವನ್ನು ಮಾಡಿದನು. ಶಿವಶರಣರ ಯಾವ ಚರಿತ್ರೆಯನ್ನು ತೆಗೆದುಕೊಂಡರೂ ಅವರು ಕೆಲವೊಂದು ಕಾಯಕವನ್ನು ಮಾಡುತ್ತ ಪರಮಾತ್ಮನನ್ನು ಒಲಿಸಿದ್ದು ಕಂಡುಬರುತ್ತದೆ.

ಕಂಕರೀ ಕಕ್ಕಯ್ಯನೆಂಬ ಶಿವಶರಣನು ಕಲ್ಯಾಣದಲ್ಲಿರುತ್ತಿದ್ದನು. ಅವನು ಕಂಕರಿಯನ್ನು ನುಡಿಸುತ್ತ ಶಿವಭಜನೆ ಮಾಡುವನು. ಇದೇ ಅವನ ಕಾಯಕವಾಗಿತ್ತು. ಶಿವನು ಅವನ ಮಹಿಮೆಯನ್ನು ಪ್ರಕಟ ಮಾಡಬೇಕೆಂದು ಒಬ್ಬ ಜಂಗಮನ ವೇಷ ಧಾರಣಮಾಡಿ ಕಕ್ಕಯ್ಯನಿದ್ದಲ್ಲಿಗೆ ಬಂದು ಅವನು ನುಡಿಸುತ್ತಿದ್ದ ಕಂಕರಿಯ ಧ್ವನಿಗೆ ಅನುಗುಣವಾಗಿ ಕುಣಿಯ ಹತ್ತಿದನು. ಕುಣಿಕುಣಿದು ಶಿವನೇ ಸೋಲಲು

ಅವನು ಪ್ರೀತನಾಗಿ ಕಕ್ಕಯ್ಯನಿಗೆ-ನಿನಗೇನು ಬೇಕು ಬೇಡು ಎಂದನು. ಕಕ್ಕಯ್ಯನು ಅವನಿಗೆ ಕೈಲಾಸ ಅಥವಾ ಸ್ವರ್ಗವನ್ನು ತನಗೆ ಕೊಡೆಂದು ಕೇಳಲಿಲ್ಲ. ಆದರೆ ತಾನು ಶಂಕರೀ ನುಡಿಸಿದ್ದರ ಬಗ್ಗೆ ಕಾಯಕ ( ಕೂಲಿ ) ಕೊಡೆಂದು ಕೇಳಿದನು ! ಅಂದರೆ ತಾನು ದುಡಿದು ಗಳಿಸುವದು ಕೈಲಾಸಕ್ಕಿಂತಲೂ ಮೇಲೆಂದು ಅವನ ಭಾವವು. ಇದರಿಂದ ಶಿವಶರಣರು ಕಾಯಕಕ್ಕೆ ಎಷ್ಟು ಮಹತ್ವ ಕೊಟ್ಟಿದ್ದಾರೆಂಬುದು ತಿಳಿಯುತ್ತದೆ. ಹೀಗೆ ಕಕ್ಕಯ್ಯ ಬೇಡಿದ್ದಕ್ಕೆ ಶಿವನು-ನಾನು ನಿನ್ನೊಡನೆ ಕುಣಿದಿದ್ದೇನೆ. ಅದರ ಕಾಯಕ (ಕೂಲಿ) ನೀನು ನನಗೆ ಕೊಡಬೇಕಲ್ಲವೇ ಎಂದು ಅವನಿಗೆ ಪ್ರಶ್ನೆ ಮಾಡಿದನು. ಆದಕ್ಕೆ ಕಕ್ಕಯ್ಯನು-ನೀನು ಈ ಕಲ್ಯಾಣದಲ್ಲಿ ಒಂದು ಮನೆಯನ್ನು ಕಟ್ಟು. ಆಗ ನಾನು ನಿನ್ನ ಮನೆಗೆ ಕಾಯಕಕ್ಕೆ ಬರುತ್ತೇನೆ. ಆಗ ನೀನು ನನ್ನೊಡನೆ ಕುಣಿದೆಯಾದರೆ ನಿನಗೆ ಕಾಯಕ ಕೊಡುವೆನೆಂದು ಹೇಳಿದನು. ಅಂದರೆ ಯಾವನು ಈ ಜಗತ್ತಿನಲ್ಲಿದ್ದುಕೊಂಡು ದುಡಿದು ಪ್ರಪಂಚ ಮಾಡುತ್ತಾನೋ ಅವನು ಮಾತ್ರ ಕಾಯಕ ಸ್ವೀಕಾರ ಮಾಡಲಿಕ್ಕೆ ಯೋಗ್ಯನೆಂಬ ಭಾವವು ಇದರಲ್ಲಿದೆ. ಶಂಕರೀ ಕಕ್ಕಯ್ಯನ ಅಭಿಪ್ರಾಯದ ಪ್ರಕಾರ ಪರಮಾತ್ಮನು ಸೋಮಾರಿಯು, ಅವನು ಏನೂ ಕೆಲಸ ಮಾಡುವದಿಲ್ಲ. ಆದ್ದರಿಂದ ಅಂಥವನಿಗೆ ಯಾಕೆ ತಾನು ಕಾಯಕ ಕೊಡಬೇಕು, ಇದು ಉಚಿತವಲ್ಲೆಂದು ಅವನ ಅಭಿಪ್ರಾಯವಿದ್ದ ಹಾಗೆ ತೋರುತ್ತದೆ. ಈ ಪ್ರಕಾರ ಹಿಂದಿನ ಶಿವಶರಣರು ದುಡಿಕೆಗೆ ಅಂದರೆ ಕಾಯಕಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ.

ಭಕ್ತರನ್ನು ಉದ್ಧಾರ ಮಾಡುವದು ಮಠಸ್ಥರ ಮತ್ತು ಜಂಗಮರ ಕರ್ತವ್ಯವಾಗಿದೆ. ಇದಾದರೂ ಒಂದು ಕಾಯಕವಾಗುತ್ತದೆ. ಆದ್ದರಿಂದ ಇವರಿಗೆ ಕೊಟ್ಟದ್ದು ಭಿಕ್ಷೆಯಲ್ಲ. ಅದು ಅವರಿಗೆ ಸಲ್ಲತಕ್ಕ ಪ್ರತಿಫಲವು. ಇದನ್ನು ಭಕ್ತರು ಅವರಿಗೆ ಕೊಡಲೇಬೇಕು. ಆದರೆ ಜಂಗಮರು ತಮ್ಮ ಕಾಯಕ ಮಾಡದೆ ಹೋದರೆ ಅವರಿಗೆ ಶಿವಶರಣರು ಏನೂ ಕೊಡಲಾರರು. ಇಂಥವರನ್ನು ಅವರು ಬಹಳ ಹಳಿದಿದ್ದಾರೆ, ಜಂಗಮರಾದರೂ ಯಾವ ಫಲಾಪೇಕ್ಷೆ ಇಲ್ಲದೆ ಭಕ್ತರಿಗಾಗಿ ತಮ್ಮ ಕಾಯಕವನ್ನು ಮಾಡುವದು ಅವರ ಕರ್ತವ್ಯವಾಗಿದೆ. ಇದರಲ್ಲಿ ಅವರು ಪ್ರತಿಫಲವನ್ನು ಭಕ್ತರಿಂದ ಅಪೇಕ್ಷಿಸದೆ ಭಕ್ತರು ಕೊಟ್ಟದನ್ನು ಆನಂದದಿಂದ ಸ್ವೀಕರಿಸಬೇಕು. ಭಕ್ತ ಜಂಗಮರ ವಿಚಾರವು ಹೇಗಿದ್ದು ಈ ರೀತಿಯನ್ನು

ವಚನಕಾರರು---'ಜಂಗಮನು ಬೇಡಲಾಗದು, ಭಕ್ತನು ಬೇಡಿಸಿಕೊಳ್ಳ ಲಾಗದು' ಎಂದು ಸ್ವಾರಸ್ಯಪೂರ್ಣವಾಗಿ ನುಡಿದಿದ್ದಾರೆ. ಇದು ಅತ್ಯಂತ ಸಾರತರವಾದ ಉಕ್ತಿಯು ಇದೆ. ಹೀಗೆ ಭಕ್ತ ಜಂಗಮರೂ ಮಠಾಧಿ ಪತಿಗಳೂ ಹಿಂದಿನ ಕಾಲದಲ್ಲಿ ಪರಸ್ಪರಾವಲಂಬಿಗಳಾಗಿ ನಡೆದರು. ಇದರಿಂದ ಆ ಕಾಲದಲ್ಲಿ ವೀರಶೈವ ಸಮಾಜವು ಶ್ರೇಷ್ಠ ಸ್ಥಿತಿಗೆ ಬಂದಿತು. ಹೀಗೆ ಈಗಲೂ ಅದು ನಡೆದಲ್ಲಿ ಅದರ ಪ್ರಗತಿಯು ಶೀಘ್ರವಾಗಿ ಆಗು ವದರಲ್ಲಿ ಏನೂ ಸಂದೇಹವಿರಲಾರದು.

## ದಾಸೋಹ

ಶಿವಾನುಭವದಲ್ಲಿ ದಾಸೋಹಕ್ಕೆ ಬಹಳ ಮಹತ್ವದ ಸ್ಥಾನವಿದೆ. ಹಿಂದಿನ ಎಲ್ಲ ಶಿವಶರಣರೂ ದಾಸೋಹಿಗಳಾಗಿದ್ದರೆಂದು ಅವರ ಚರಿತ್ರೆ ಗಳಲ್ಲಿ ವರ್ಣನೆಗಳಿವೆ. ಅವರು ಲಿಂಗಭೋಗೋಪಭೋಗಿಗಳಾಗಿ ತಾವು ದುಡಿದದ್ದನ್ನು ಅರ್ಪಣ ಭಾವದಿಂದ ಸೇವಿಸಿ ಉಳಿದದ್ದನ್ನು ದಾಸೋ ಹಕ್ಕೆ ಅರ್ಪಿಸುತ್ತಾರೆ.

ಭಕ್ತನು ತನಗಿರುವುದೆಲ್ಲ ಶಿವನ ಸೊಮ್ಮು ಅಂದರೆ ಶಿವನ ಜಿಂದಿಗಿ ಅಥವಾ ಒಡವೆ ಎಂದು ಭಾವಿಸಿ ಅದನ್ನು ಅವನು ಪರಮಾತ್ಮನಿಗೆ ಮೊದಲು ಅರ್ಪಿಸಬೇಕು. ಅದು ಹೀಗೆ ಅರ್ಪಿತವಾದ ಬಳಿಕ ಅದು ಪ್ರಸಾದವಾಗುತ್ತದೆ.

ಈ ಪ್ರಸಾದದಲ್ಲಿ ಯಾವುದು ಅರ್ಪಣಯುಕ್ತ ಕ್ರಿಯೆಯೋ ಅದೇ ದಾಸೋಹವೆನಿಸಿಕೊಳ್ಳುತ್ತದೆ. ದಾಸೋಹದಲ್ಲಿ ನಾನು ದಾಸನು, ನಾನು ಕಿಂಕರನು, ಎಂಬ ಭಾವವಿರಬೇಕು. ಇದು ಸೇವಾ ಭಾವವು ಅಥವಾ ಭೃತ್ಯಾಚಾರವು ಈಗಿನ ಭಾಷೆಯಲ್ಲಿ ಇದು ಸಮಾಜ ಸೇವಾ ಬುದ್ಧಿಯು ಎಂದು ಹೇಳಬಹುದು. ಈ ಆಚಾರವಿಲ್ಲದೆ ಹೋದರೆ ಯಾವನೂ ಭಕ್ತ ನಾಗಲಾರನು. ಶರಣನಂತೂ ಎಂದಿಗೂ ಆಗಲಾರನು.

ಮನುಷ್ಯನಿಗೆ ತನು, ಮನ, ಧನ ಅಥವಾ ಲಿಂಗ, ಮನ, ಭಾವ ಎಂಬುವುಗಳಿವೆಯಷ್ಟೇ. ಅವುಗಳನ್ನು ಅವನು ಗುರು ಲಿಂಗ ಜಂಗಮಕ್ಕೆ ಅನುಕ್ರಮವಾಗಿ ಅರ್ಪಿಸತಕ್ಕದ್ದು. ಹೀಗೆ ಅರ್ಪಿಸುವದೇ ದಾಸೋ ಹಿಯ ಆಚರಣೆಯಾಗಿರುತ್ತದೆ. ತನು, ಮನ, ಧನಗಳ ಮೇಲಿನ ಆಶೆಯು

ದೂರಾಗಬೇಕೆಂಬುದೇ ಈ ದಾಸೋಹದ ಮುಖ್ಯ ಉದ್ದೇಶವಾಗಿದೆ. ಇಂಥ ಆಚರಣೆಯಿಂದ ಲಿಂಗ ಮನ ಭಾವಗಳಲ್ಲಿ ತ್ರಿಲಿಂಗಗಳು ಅಂದರೆ ಇಷ್ಟ, ಪ್ರಾಣ, ಭಾವಲಿಂಗಗಳು ಅನುಕ್ರಮವಾಗಿ ನೆಲೆಗೊಳ್ಳುತ್ತವೆ.

ಮೇಲಿನ ವಿಚಾರಗಳಲ್ಲಿ ಶಿವಾನುಭವ ಶಾಸ್ತ್ರದ ವಿಶಿಷ್ಟ ನುಡಿಗಳಿರುತ್ತವೆ. ದಾಸೋಹದ ವಿಚಾರಗಳನ್ನು ನಮ್ಮ ಈಗಿನ ಸಾಮಾನ್ಯ ಭಾಷೆಯಲ್ಲಿ ಹೇಳಬೇಕಾದರೆ ಮನುಷ್ಯನಿಗೆ ತನು, ಮನ, ಧನ ಎಂಬವುಗಳಿದ್ದು ಅವುಗಳ ಉಪಯೋಗವನ್ನು ಪ್ರತಿಯೊಬ್ಬನು ಆತ್ಮೋದ್ಧಾರಕ್ಕೂ ಸಮಾಜೋದ್ಧಾರಕ್ಕೂ ದಾಸಭಾವದಿಂದ ಮಾಡಬೇಕೆಂಬುದೇ ಈ ದಾಸೋಹವೆಂದು ಹೇಳಬಹುದು.

ವೀರಶೈವ ಮಠಗಳ ಕಾರ್ಯವು ಭಕ್ತರು ಮಾಡುವ ದಾಸೋಹ ಕಾರ್ಯಗಳನ್ನು ಕೈಕೊಂಡು ಅವುಗಳಿಗೆ ಪ್ರತಿಯಾಗಿ ಭಕ್ತರನ್ನೂ ಸಮಾಜವನ್ನೂ ಉದ್ಧಾರ ಮಾಡುವದಾಗಿರುತ್ತದೆ. ಹಿಂದಿನ ಕಾಲದಲ್ಲಿ ಮಠಗಳು ಇಂಥ ಕಾರ್ಯವನ್ನು ಮಾಡುತ್ತಾ ಬಂದವು. ಆದ್ದರಿಂದ ಆಗ ಶಿವಶರಣರು ತಮಗೆ ಹೆಚ್ಚಾಗಿ ಉಳಿದದ್ದನ್ನೆಲ್ಲ ಇವುಗಳಿಗೆ ಆನಂದದಿಂದ ಸಲ್ಲಿಸುತ್ತಲಿದ್ದರು.

ನಮ್ಮ ವೀರಶೈವ ಸಮಾಜವು ವರ್ಣಾಶ್ರಮ ಧರ್ಮದ ಮೇಲೆ ನಿಲ್ಲಿಸಲ್ಪಟ್ಟಿಲ್ಲ. ಅದು ಮಠಗಳೆಂಬ ಮಹತ್ವದ ಸಂಸ್ಥೆಗಳ ಮೇಲೆ ನಿಲ್ಲಿಸಲ್ಪಟ್ಟಿರುತ್ತದೆ. ಈ ಮಠಗಳು ಮೊದಲು ದಾಸೋಹ ಮತ್ತು ಕಾಯಕಗಳನ್ನು ಪಾಲಿಸುತ್ತಿದ್ದವು. ಆದರೆ ಈ ಎರಡೂ ಶಬ್ದಗಳ ಭಾವವು ಈಗ ಪೂರ್ಣವಾಗಿ ವಿಪರ್ಯಾಸ ಹೊಂದಿದೆ. ಇದರಿಂದ ವೀರಶೈವ ಸಮಾಜದ ತಳಹದಿಯು ಸಡಿಲಾಗಿರುತ್ತದೆ.

## ಶಿವಶರಣರು ಲೋಭರಹಿತರು.

ಶಿವಶರಣನು ಯಾವಾಗಲೂ ದುಡಿದು ಗಳಿಸುವವನಾದ್ದರಿಂದ ಅವನು ಸೋಮಾರಿಯಲ್ಲ, ಅಪ್ರಮಾಣಿಕನಲ್ಲ, ಲೋಭಿಯಲ್ಲ, ಪರಾವಲಂಬಿಯು ಅಲ್ಲ. ಇದಿರಿಗೆ ದ್ರವ್ಯದ ನಿಧಿಯು ಬಂದು ಬಿದ್ದರೂ ಕೂಡ ಅವನು ಅದನ್ನು ಮುಟ್ಟುವದಿಲ್ಲ. ಬಂಗಾರವೆಂದರೆ ಅವನಿಗೆ ಕಃಪದಾರ್ಥವು. ಹೀಗೆ ತಿಳಿದು ವರ್ತಿಸಿದಂಥ ಶಿವಶರಣರ ಅನೇಕ ಕಥೆಗಳು ಈ ಗ್ರಂಥದಲ್ಲಿ ಬಂದಿವೆ.

ಮೋಳಿಗೆ ಮಾರಯ್ಯನು ಮೊದಲು ಕಾಶ್ಮೀರದರಸನು. ಅವನನ್ನು ಕೆಲವು ಜಂಗಮರು ಕಂಡಾಗ್ಗೆ ಅವನು ಅವರಿಗೆ ದಾನಮಾಡಲು ಹೋದನು. ಅವರು ಅದನ್ನು ಸ್ವೀಕರಿಸದೆ ನೀನು ದುಡಿದು ಗಳಿಸಿದ್ದನ್ನು ನಮಗೆ ಕೊಡು ಎಂದು ಹೇಳಿದರು. ಇಂಥ ದ್ರವ್ಯವು ತನ್ನಲ್ಲಿ ಇರದ್ದರಿಂದ ಅರಸನು ಒಬ್ಬ ಕಮ್ಮಾರನ ಕುಲಿಮೆಯಲ್ಲಿ ಹೋಗಿ ಕಬ್ಬಿಣವನ್ನು ಬಡಿದು ಕಬ್ಬಿಣದ ತುಂಡು ಒಂದನ್ನು ಕೂಲಿಯಾಗಿ ತೆಗೆದುಕೊಂಡು ಬಂದು ಅದನ್ನು ಆ ಜಂಗಮರಿಗೆ ಕೊಟ್ಟನು. ಆ ತುಂಡು ಬಂಗಾರವಾಯಿತು! ಆಗ ಅವನಿಗೆ ರಾಜ್ಯ ಮಾಡುವದರಕಿಂತಲೂ ಹೀಗೆ ಕಾಯಕ ಮಾಡುವದು ಶ್ರೇಷ್ಠವಾದುದೆಂದು ತಿಳಿದು ಅವನು ತನ್ನ ರಾಜ್ಯವನ್ನು ಬಿಟ್ಟು ಕೊಟ್ಟು ಬಸವಾದಿ ಪ್ರಮಥರನ್ನು ಕಾಣಬೇಕೆಂದು ಕಲ್ಯಾಣಕ್ಕೆ ಹೊರಟನು. ಇಂಥವನು ದ್ರವ್ಯಲೋಭಿಯಾಗುವದು ಹೇಗೆ ಸಂಭವವು?

ಮೇದಾರ ಕೇತಯ್ಯನು ಬೆಟ್ಟಕ್ಕೆ ಹೋಗಿ ಬಿದಿರು ಕಡಿದು ಮರ ಬುಟ್ಟಿಗಳನ್ನು ಮಾಡುವ ಕಾಯಕ ಮಾಡುತ್ತಿದ್ದನು. ಅವನು ಒಂದು ದಿವಸ ಬಿದಿರು ಕಡಿಯಲು ಹೋದಾಗ ಅವುಗಳೊಳಗಿಂದ ಹೊನ್ನುಗಳು ಸುರಿಯಹತ್ತಿದವು- ಅವನು ಅವುಗಳನ್ನು ಮುಟ್ಟದೆ ಈ ಬಿದಿರುಗಳಿಗೆ ಬಂಗಾರದ ಹುಳ ಹತ್ತಿವೆಂದು ಅವುಗಳನ್ನು ಬಿಟ್ಟು ಹೋದನು!

ಕಲಕೇತ ಬೊಮ್ಮಯ್ಯನು ಈಗಿನ ನಮ್ಮ ಭಾಷೆಯಲ್ಲಿ ಭಿಕ್ಷುಕ ವರ್ಗಕ್ಕೆ ಸೇರಿದವನು. ಭೃಂಗಿಯ ನಾಂಟ್ಯದಂತೆ ಕುಣಿಯುತ್ತ ಶರಣರ ಕೀರ್ತಿಯನ್ನು ಉಪ್ಪಡಿಸುವದೇ ಅವನ ಕಾಯಕವಾಗಿತ್ತು. ಅವನು ಬಹಳ ಬಡವನು. ಆದರೆ ಈ ಕಾಯಕದಿಂದ ಅವನು ಮುಟ್ಟಿದ್ದೆಲ್ಲ ಬಂಗಾರವಾಗುತ್ತಿತ್ತು. ಅವನು ಆ ಬಂಗಾರನ್ನು ಇಟ್ಟುಕೊಳ್ಳದೆ ದರಿದ್ರರಿಗೆ ಕೊಟ್ಟುಬಿಡುವನು.

ಹೀಗೆ ನಡೆದಂಥ ಶಿವಶರಣರ ಚರಿತ್ರೆಗಳು ಈ ಗ್ರಂಥದಲ್ಲಿ ಅನೇಕ ಇರುತ್ತವೆ.

## ಶರಣರ ನಿರ್ದಾಕ್ಷಿಣ್ಯ ವೃತ್ತಿ.

ಶಿವಶರಣರು ನಿರ್ದಾಕ್ಷಿಣ್ಯವೃತ್ತಿಯವರು. ಅಂದರೆ ಅವರು ಯಾರ ಭಿಡೆ ಮುರುವತ್ತಿಗೆ ಒಳಗಾದವರಲ್ಲ. ಸತ್ಯವಾದುದನ್ನು ಅವರು ಅಂಜದೆ ನುಡಿಯುವವರು. ಅವರು ತಮಗೆ ತೋರಿದ್ದನ್ನು ಸ್ಪಷ್ಟಶಬ್ದಗಳಿಂದ ಆಡಿ

ಬಿಡುವವರು. ಶರಣನು ನ್ಯಾಯನಿಷ್ಠುರ, ದಯಾದಾಕ್ಷಿಣ್ಯಪರನಲ್ಲ ವೆಂದು ಬಸವೇಶ್ವರನು ಹೇಳುತ್ತಾನೆ.

ಕೇಶಿರಾಜನಿಗೆ ವಿಕ್ರಮಾದಿತ್ಯನು ಪ್ರಧಾನಿ ಪಟ್ಟವನ್ನು ಕೊಟ್ಟನು. ಆದರೆ ದೇವರು ಯಾರೆಂಬ ವಿಷಯದಲ್ಲಿ ಅವನಿಗೂ ಕೇಶಿರಾಜನಿಗೂ ಮತಭೇದವಾಗಿ ಇಬ್ಬರಿಗೂ ಕೂಡಿಬರಲಿಲ್ಲ. ಆಗ ಕೇಶಿರಾಜನು ತನ್ನ ಪದವಿಯನ್ನು ಬಿಟ್ಟುಕೊಟ್ಟು ಒಬ್ಬ ಮೇದರವನಲ್ಲಿ ಬಂದು ಇರಹತ್ತಿದನು. ಪುರದ ಜನರು ಅವನ ಈ ಶ್ರೇಷ್ಠ ವರ್ತನೆಯನ್ನು ನೋಡಿ ಅವನಿಗೆ ಮತ್ತಿಷ್ಟು ಮೆಚ್ಚಿದವರಾಗಿ ಅವನ ಕಡೆಗೆ ತಂಡತಂಡವಾಗಿ ಬರಹತ್ತಿದರು. ಒಂದು ದಿವಸ ಅವರು ಅವನನ್ನು ಅತ್ಯಂತ ಸಂಭ್ರಮದಿಂದ ಮೆರವಣಿಗೆಯನ್ನು ಏರ್ಪಡಿಸಿ ಪಟ್ಟಣದ ಬೀದಿಗಳೊಳಗಿಂದ ಹಾಯ್ದು ತ್ರಿಪುರಾಂತಕೇಶ್ವರನ ದೇವಾಲಯಕ್ಕೆ ಕರೆತಂದರು. ಅರಸನು ಅವನ ವೈಭವವನ್ನು ಕಂಡು ಅವನಿಗೋಸ್ಕರ ಆದರಭಾವವನ್ನು ವಹಿಸಿ ಅವನನ್ನು ತಾನೇ ಇದಿರ್ಗೊಂಡು ಅರಮನೆಗೆ ಕರೆತಂದು ಸನ್ಮಾನಿಸಿದನು.

ಮೇಮನಾರಾಧ್ಯನು ಒಂದು ಪಟ್ಟಣದಲ್ಲಿ ಇದ್ದಾಗ್ಗೆ ಆ ಪಟ್ಟಣದರಸು ಅವನನ್ನು ಮಾರ್ಗದಲ್ಲಿ ನೋಡಿ ಅವನಿಗೆ ಗರ್ವದಿಂದ ನುಡಿಯಲು ಮೇಮನಾರಾಧ್ಯನು ಅವನಿಗೆ ಉತ್ತರ ಕೊಡಲಿಲ್ಲ. ಆಗ ಅರಸನು ರಥದಿಂದ ಇಳಿದು ತನಗೆ ಆಶೀರ್ವಾದವನ್ನು ಕೊಡಬೇಕೆಂದು ಕೇಳಿಕೊಂಡರೂ ಅವನು ಲಕ್ಷಿಸಲಿಲ್ಲ. ಅವನು ನೀನು ನಾಳ ಸತ್ತುಹೋಗವಿ ಎಂದು ಅವನಿಗೆ ಹೇಳಿಬಿಟ್ಟನು.

ಸಿದ್ಧರಾಮೇಶ್ವರನು ಸೊನ್ನಲಾಪುರದ ಗಾವುಂಡ (ಗೌಡ) ನಾಗಿ, ಅದರ ಒಡೆಯನಾಗಿದ್ದನು. ಒಂದು ದಿವಸ ಅವನು ಮಲ್ಲಿಕಾರ್ಜುನನ ಪರ್ವವನ್ನು ಮಾಡಬೇಕೆಂದು ಕೆಲವು ಬತ್ತವನ್ನು ಬಿಟ್ಟಿಯಾಗಿ ಕುಟ್ಟಿಸಲಿಕ್ಕೆ ಅಮುಗಿ ದೇವನ ಕಡೆಗೆ ಅದನ್ನು ಕಳಿಸಿದನು. ಆದರೆ ಅಮುಗಿ ದೇವನು ಸಿದ್ಧರಾಮೇಶ್ವರನು ಭವಿ ಎಂದು ಹೇಳಿ ಆ ಬತ್ತವನ್ನು ಕುಟ್ಟದೆ ತಿಪ್ಪೆಗೆ ಹಾಕಿಸಿದನು. ಸಿದ್ಧರಾಮೇಶ್ವರನು ಅದನ್ನು ತಿಳಿದು ಅವನಿಗೆ— ನೀನು ನನ್ನ ಪಟ್ಟಣದಲ್ಲಿರಬೇಡವೆಂದು ಹೇಳಿ ಕಳಿಸಲು ಅಮುಗಿ ದೇವನು ಊರನ್ನು ಬಿಟ್ಟು ಕಲ್ಯಾಣಕ್ಕೆ ಹೊರಟನು.

ಪಿಟ್ಟವ್ವೆಯು ಒಬ್ಬ ಬಡಮುದುಕಿಯು. ದೋಸೆಯನ್ನು ಮಾಡಿ ಮಾರಿಕೊಂಡು ಹೊಟ್ಟೆ ಹೊರೆದುಕೊಳ್ಳುವವಳು. ಚೋಳರಾಜನು ಕಟ್ಟಿಸಿದ ಹೊಳೆಯ ಒಡ್ಡು ಒಡೆಯಲು ಅದಕ್ಕೆ ಬಿಟ್ಟಿಯಾಗಿ ಮಣ್ಣು ಹೊರಲಿಕ್ಕೆ ಅವನ ಸೇವಕರು ಅವಳಿಗೆ ಒತ್ತಾಯ ಪಡಿಸಹತ್ತಿದರು. ಪಿಟ್ಟವ್ವೆಯು ಮಣ್ಣು ಹೊರಲು ನಿರಾಕರಿಸಲು ಶಿವನೇ ಅಲ್ಲಿಗೆ ಬಂದು ಅವಳ ಸಲುವಾಗಿ ಮಣ್ಣು ಹೊರಹತ್ತಿದನು. ಅರಸನ ಸೇವಕರು ಅವನಿಗೆ--ನೀನು ಚನ್ನಾಗಿ ಕೆಲಸ ಮಾಡುವದಿಲ್ಲೆಂದು ಬೆತ್ತದಿಂದ ಹೊಡೆಯ ಹತ್ತಿದರು. ಆದರೆ ಆ ಪೆಟ್ಟುಗಳು ಅರಸನ ಸೇವಕರಿಗೆಯೇ ತಾಕಹತ್ತಿದವು. ಚೋಳರಾಜನು ಅದನ್ನು ಕೇಳಿ ಕೆಲಸ ಮಾಡುವಲ್ಲಿ ಬರಬೇಕಾಯಿತು. ಮತ್ತು ಸೇವಕರು ಮಾಡಿದ ಅನ್ಯಾಯಕ್ಕಾಗಿ ಅವನು ಪಿಟ್ಟವ್ವೆಯ ಕ್ಷಮೆಯನ್ನು ಬೇಡಿಕೊಂಡನು.

ಒಕ್ಕಲು ಮುದ್ದಯ್ಯನು ಒಬ್ಬ ಒಕ್ಕಲಿಗನು. ತಾನು ಅರಸನಿಗೆ ಕೊಡತಕ್ಕ ತೆರಿಗೆಯನ್ನು ಅರಸನಿಗೆ ಒಪ್ಪಿಸಿದ್ದನು. ಆದರೆ ಅವನ ಸೇವಕರು ಅನ್ಯಾಯವಾಗಿ ಹೆಚ್ಚಿಗೆ ತೆರಿಗೆ ಬೇಡಲು ಅವನು ಅದನ್ನು ನಿರಾಕರಿಸಿ ಅವರಿಗೆ--ನಾನು ಕೊಡತಕ್ಕ ತೆರಿಗೆಯನ್ನು ಕೊಟ್ಟಿದ್ದೇನೆ. ಹೆಚ್ಚಿನದನ್ನು ನಾನು ಕೊಡುವದಿಲ್ಲೆಂದು ಹೇಳಿ ಅವರ ಉಪದ್ರವಗಳನ್ನು ಎದುರಿಸಲು ಸಿದ್ಧನಾದನು.

ಮೆರೆಮಿಂಡ ದೇವನು ಒಬ್ಬ ಶಿವಶರಣನು. ಸೌಂದರ ನಂಬೆಣ್ಣನು ಭಕ್ತರ ಕೂಡ ಗರ್ವದಿಂದ ವರ್ತಿಸಿದ್ದನ್ನು ನೋಡಿ ಮೆರೆಮಿಂಡ ದೇವನು ಅವನನ್ನು ಬಂಧಿಸಬೇಕೆಂದು ಮುಂದುವರಿಯಲು ನಂಬೆಣ್ಣನು ಅಂಜಿ ಗರ್ಭಗುಡಿಯನ್ನು ಹೊಕ್ಕು ಕದವನ್ನು ಮುಚ್ಚಿಕೊಂಡನು. ಕದವನ್ನು ತೆರೆಯಲು ಎಷ್ಟು ಪ್ರಯತ್ನ ಮಾಡಿದರೂ ಅದು ತೆರೆಯಲಿಲ್ಲ. ಅದನ್ನು ನೋಡಿ ಶಿವನು ಇಂಥ ಗರ್ವಿಷ್ಟನನ್ನು ರಕ್ಷಿಸುತ್ತಾನೆ, ಇಂಥವನನ್ನು ಭಕ್ತರಾರೂ ಪೂಜಿಸಬಾರದು, ಶಿವನನ್ನು ಹೊರಗಿಡಬೇಕೆಂದು ಡಂಗುರ ಹೊಡಿಸಿದನು.

ಈ ರೀತಿ ಶಿವಶರಣರು ನಿರ್ದಾಕ್ಷಿಣ್ಯ ವೃತ್ತಿಯವರು ಇರುತ್ತಾರೆ. ಅವರು ಅತ್ಯಂತ ಬಡವರಾಗಿದ್ದರೂ ಈ ವೃತ್ತಿಯ ಮೂಲಕ ನಾಡಿನಲ್ಲಿ ಅವರು ವರ್ಚಸ್ಸುಳ್ಳವರಾದರು.

## ಶಿವಶರಣರು ಅಹಿಂಸಾ ವೃತ್ತಿಯುಳ್ಳವರು.

ಶಿವಶರಣರು ಅಹಿಂಸಾ ವೃತ್ತಿಯುಳ್ಳವರು. ಕೊಲ್ಲುವದು ಅಧರ್ಮ ವೆಂದು ಅವರು ಹೇಳುತ್ತಾರೆ. ಪ್ರಾಣಿಮಾತ್ರಕ್ಕೆಲ್ಲ ಅವರು ದಯೆಯುಳ್ಳವ ರಾಗಿ ದಯವೇ ಧರ್ಮವೆಂದು ಸಾರಿ ಹೇಳುತ್ತಾರೆ. ಇಷ್ಟೇ ಅಲ್ಲ, ಎರಡನೆ ಯವರ ಮನಸ್ಸನ್ನು ನೋಯಿಸುವದು, ಎರಡನೆಯವರನ್ನು ಪೀಡಿಸು ವದು, ಪಶುಪಕ್ಷಿಗಳಿಗೂ, ವನಸ್ಪತಿಗಳಿಗೂ ಅಪಾಯ ಮಾಡುವದು ಇವು ಸಹ ಅಹಿಂಸೆ ಎಂದು ಅವರು ತಿಳಿದಿದ್ದಾರೆ.

ಬಸವಯ್ಯನ ಚರಿತ್ರೆಯಲ್ಲಿ ಅಹಿಂಸಾ ವೃತ್ತಿಯುಳ್ಳವನು ಹೇಗೆ ವರ್ತಿಸಬೇಕೆಂಬುದರ ಬಗ್ಗೆ ಬಹು ಸರಸಾದ ವರ್ಣನೆ ಇದೆ. ಅವನ ವಚನಗಳನ್ನು ವಾಚಕರು ನೋಡಬೇಕು. ಅವನು 'ಸಚರಾಚರ ಪ್ರಾಣಿಗಳೆಲ್ಲವು ಸುಖದಿಂದ ಬಾಳಲಿ' ಎಂದು ಆಶೀರ್ವದಿಸುತ್ತ ಸಂಚರಿ ಸುವನು. ಸಕಲ ಪ್ರಾಣಿಗಳನ್ನು ತನ್ನಂತೆಯೇ ಭಾವಿಸುವನು. ಪ್ರಾಣಿ ಗಳಿಗೆ ಅವನು ಎಷ್ಟುಮಾತ್ರವೂ ಹಿಂಸೆ ಮಾಡುತ್ತಿರಲಿಲ್ಲ. ಅವನು ಪುಷ್ಪಗಳನ್ನು ಹರಿಯುತ್ತಿದ್ದಿಲ್ಲ. ಗಿಡಗಳ ಟೊಂಗೆಗಳು ನೊಂದಾವೆಂದು ಅವುಗಳನ್ನು ಬಲವಾಗಿ ಬಗ್ಗಿಸುತ್ತಿದ್ದಿಲ್ಲ. ದಾರಿ ನಡಿಯುವಲ್ಲಿ ಜೀವ ಜಂತುಗಳಿಗೆ ಹಿಂಸೆಯಾದೀತೆಂದು ಸಾವಧಾನದಿಂದ ನಡಿಯುವನು. ಯಾವಾಗಲೂ ಹಿತಕರವಾದ ನುಡಿಗಳನ್ನೇ ನುಡಿಯುವನು. ಯಾರ ಮನಸ್ಸನ್ನೂ ನೋಯಿಸನು. ಇದು ಅವನ ವರ್ತನೆಯಾಗಿತ್ತು. ಅವನು ವಚನಕಾರನೂ ಇದ್ದಾನೆ. ಅವನು ತನ್ನ ವಚನಗಳಲ್ಲಿ ಅಹಿಂಸಾ ವೃತ್ತಿಯನ್ನು ಬಹು ಮಾರ್ಮಿಕ ರೀತಿಯಿಂದ ಬೋಧಿಸಿದ್ದಾನೆ. ಅವನ ವಿಚಾರಗಳು ಹೊಸತರದವಿರುತ್ತವೆ. ಅವನ ಎಲ್ಲ ವಚನಗಳನ್ನು ನಾವು ಈ ಗ್ರಂಥದಲ್ಲಿ ಉದಹರಿಸಿದ್ದೇವೆ.

ಸುಜ್ಞಾನಿದೇವನು ವೀರಶೈವರಲ್ಲಿ ಆದರ್ಶ ಗುರುವಾಗಿದ್ದಾನೆ. ಮಾತಂಗ ತಮ್ಮಣ್ಣನೆಂಬ ಕ್ರೂರನಾದ ಬೇಡನಿಗೆ ಅವನು ಲಿಂಗಧಾರಣೆ ಯನ್ನು ಮಾಡಿದನು. ಅದಕ್ಕೂ ಪೂರ್ವದಲ್ಲಿ ಅವನು ಜೀವಹಿಂಸೆ ಮಾಡ ಬೇಡೆಂದು ಅವನಿಗೆ ತಿಳಿಸಿ ಹೇಳಿದನು. ಆಗ ಅವನಿಗೆ– ನೀನು ಜೀವಹಿಂಸೆ. ಮಾಡುತ್ತೀ, ಇದು ಪಾಪವು. ಸರ್ವ ಜೀವಿಗಳನ್ನು ನಿನ್ನಂತೆ ಭಾವಿಸ ಬೇಕು ಎಂದು ಉಪದೇಶಿಸಿ, ಆಮೇಲೆ ಅವನಿಗೆ ಲಿಂಗಧಾರಣೆ ಮಾಡಿ ದನು.

ಗಟ್ಟಿವಾಳಯ್ಯನೆಂಬ ಶಿವಶರಣನು ಅಹಿಂಸಾ ವೃತ್ತಿಯುಳ್ಳವನು. ಯಾರ ಮೇಲೆಯೂ ಅವನು ಸಿಟ್ಟಾಗದೆ ಯಾವಾಗಲೂ ಸಮಾಧಾನದಿಂದ ಇರುತ್ತಿದ್ದನು. ಒಂದು ದಿವಸ ಅವನು ತನ್ನ ಹೆಂಡತಿಯೊಡನೆ ತನ್ನ ಮಾವನ ಮನೆಗೆ ಒಂದು ಚಕ್ಕಡಿಯಲ್ಲಿ ಕುಳಿತುಕೊಂಡು ಹೊರಟಿದ್ದನು. ಅವನ ಹೆಂಡತಿಯು ಜಾರಿಣಿಯು. ಚಕ್ಕಡಿ ಹೊಡೆಯುವವನು ಅವಳ ವಿಟಪುರುಷನು ದಾರಿಯಲ್ಲಿದ್ದ ಬಾವಿಯಲ್ಲಿ ಗಟ್ಟಿವಾಳಯ್ಯನು ನೀರ ತರಲು ಕೆಳಗೆ ಇಳಿದಾಗ್ಗೆ ಆ ವಿಟನು ಅವನ ಮೇಲೆ ಕಲ್ಲೆಸೆದು ಅವನನ್ನು ನೀರಿನಲ್ಲಿ ಕೆಡವಿದನು. ಆದರೆ ಅವನು ಉಳಿದು ಮೇಲಕ್ಕೆ ಬಂದು ಊರಲ್ಲಿ ಅವರನ್ನು ಕಂಡನು. ಆಗ ಅವನು ತನ್ನನ್ನು ಕೊಲ್ಲಲು ಬಯಸಿದ ಆ ಉಭಯತರಿಗೆ ಏನೂ ಅಪಾಯ ಮಾಡದೆ ಅವರನ್ನು ಕ್ಷಮಿಸಿ ಬಿಟ್ಟನು.

ಹಾವಿನಹಾಳ ಕಲ್ಲಯ್ಯನು ಶ್ರೇಷ್ಠನಾದ ಶಿವಶರಣನು. ಅವನನ್ನು ಒಂದು ಸರ್ಪವು ಕಚ್ಚಲು ಅದರ ವಿಷವು ಅವನಿಗೆ ಏನೂ ಬಾಧೆ ಮಾಡಲಿಲ್ಲ. ಇಷ್ಟೇ ಅಲ್ಲ, ಆ ಸರ್ಪವೇ ಸತ್ತುಬಿದ್ದಿತು. ಕಲ್ಲಯ್ಯನು ಅದನ್ನು ನೋಡಿ ಮನಸ್ಸು ನೊಂದವನಾಗಿ— ಎಲೋ ದೇವನೇ ನಾನು ಎಷ್ಟು ನಿಷ್ಠುರನು! ನಾನು ವಿಷಕ್ಕೆ ವಿಷವಾಗಿ ನಿಂದೆನೇ? ಈ ಹಾವು ನನ್ನಿಂದ ಸತ್ತಿತೇ? ಎಂದು ಶೋಕಿಸುತ್ತ ಈ ಹಾವು ಬದುಕಲಿ, ಎಂದೆನ್ನಲು ಅದಕ್ಕೆ ಕೂಡಲೆ ಜೀವ ಬಂದಿತು. ಇದು ಅವನ ಕೋಮಲ ಹೃದಯವನ್ನು ತೋರಿಸುತ್ತದೆ.

ಈ ಪ್ರಕಾರ ಶಿವಶರಣರು ಅಹಿಂಸಾ ವೃತ್ತಿಯನ್ನು ತಳೆದವರಾಗಿದ್ದಾರೆ.

## ಶಿವಶರಣರು ಆರೋಗ್ಯ ಕಾಯವುಳ್ಳವರು.

ಶಿವಶರಣರು ಯಾವಾಗಲೂ ಆರೋಗ್ಯಕಾಯರು. ಹಿಂದೂ ದೇಶದಲ್ಲಿಯ ಧಾರ್ಮಿಕ ವರ್ಗದವರು ಬಹುತರವಾಗಿ ಅಲ್ಪಾಹಾರವನ್ನುಂಡು ವ್ಯಾಯಾಮವನ್ನು ಮಾಡದೆ ಅಶಕ್ತರಿರುತ್ತಾರೆ. ಈ ಸ್ಥಿತಿಯಾಗಲು ಈ ಸಮಾಜಗಳಲ್ಲಿ ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳನ್ನು ನಿಗ್ರಹ ಮಾಡುವ ವಿಷಯದಲ್ಲಿ ಪ್ರಚಲಿತವಿರುವ ವಿಚಾರಗಳೇ ಕಾರಣವೆಂದು ನಮಗೆ ತೋರುತ್ತದೆ. ಆದರೆ ಹೀಗೆ ನಿಗ್ರಹ ಮಾಡಿದಲ್ಲಿ

ದೋಷಗಳುಂಟಾಗುತ್ತವೆಂದು ಶಿವಶರಣರ ವಿಚಾರಗಳಿರುತ್ತದೆ. ಇಂದ್ರಿಯಗಳು ಚುರುಕಾಗಿರದಿದ್ದರೆ ಲಿಂಗಾರ್ಪಣಕ್ಕೆ ನ್ಯೂನತೆಯುಂಟಾಗುತ್ತದೆ. ಹೀಗೆ ಶಿವಾನುಭವದ ತತ್ವವಿದ್ದದರಿಂದ ಶಿವಶರಣರು ಅಹಿಂಸಾ ವೃತ್ತಿಯುಳ್ಳವರಾಗಿದ್ದರೂ ಅವರು ಗಟ್ಟಿಗರಾಗಿರಬೇಕೆಂದು ಅವರು ಬೋಧಿಸುತ್ತಾರೆ. ಸಿದ್ಧರಾಮೇಶ್ವರನು ತನ್ನ ಒಂದು ವಚನದಲ್ಲಿ ಚಿರಂಜೀವಿ ಎಂದರೆ ನಿರೋಗಿಯು, ಸಶಕ್ತನು, ಬಹುಕಾಲ ಬದುಕುವವನು, ಎಂದು ಹೇಳಿ ಹೀಗಿರುವವನು ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ನುಡಿದಿದ್ದಾನೆ. ಇದರಿಂದ ಶಿವಶರಣರು ಆರೋಗ್ಯಕ್ಕೆ ಎಷ್ಟು ಮಹತ್ವ ಕೊಟ್ಟಿದ್ದಾರೆಂಬುದು ತಿಳಿದುಬರುತ್ತದೆ.

ವೈದ್ಯ ಸಂಗಣ್ಣನು ವೈದ್ಯಕೀ ವೃತ್ತಿಯನ್ನು ಮಾಡುವವನಾಗಿದ್ದನು. ರೋಗ ಬಂದರೆ ಶರಣರು ನರಳುತ್ತ ಅಶಕ್ತರಾಗಿ ನೆಲಕ್ಕೆ ಬೀಳದೆ ವೈದ್ಯರಿಂದ ಔಷಧ ತೆಗೆದುಕೊಂಡು ರೋಗವನ್ನು ನಿವಾರಣೆ ಮಾಡಿಕೊಳ್ಳಬೇಕೆಂದು ಈ ಶರಣನ ಚರಿತ್ರೆಯಿಂದ ತಿಳಿದುಬರುತ್ತದೆ. ಈತನು ತನ್ನ ಒಂದು ವಚನದಲ್ಲಿ 'ಸಂಗನಬಸವಣ್ಣ ಬಾಹಾಗ ತನ್ನವರಕ್ಕೆ ವೈದ್ಯನೆಂದು ಎನ್ನ ಕೊಂಡು ಬಂದ'ನೆಂದು ಹೇಳುತ್ತಾನೆ. ಇದರಿಂದ ಅವನು ಬಸವೇಶ್ವರನ ಕಾಲದಲ್ಲಿ ಶಿವಶರಣರಿಗೆ ಔಷಧವನ್ನು ಕೊಡುತ್ತಿದ್ದನೆಂದು ತಿಳಿಯುತ್ತಿದೆ. ನಗರದ ಬ್ರಹ್ಮಯ್ಯನು ತಾನು ಪಂಚಾಕ್ಷರೀ ಮಂತ್ರ ಸಾಮರ್ಥ್ಯದಿಂದ ಅಷ್ಟೋತ್ತರ ಶತವ್ಯಾಧಿಗಳನ್ನು ದೂರಮಾಡುತ್ತೇನೆಂದು ಹೇಳಿಕೊಂಡಿದ್ದಾನೆ.

ಪುರುಷರಂತೆ ಸ್ತ್ರೀಯರೂ ಕೂಡ ಸಶಕ್ತರಾಗಿರತಕ್ಕದ್ದು. ಪ್ರಸಂಗ ಬಂದಲ್ಲಿ ಅವರು ಯುದ್ಧಮಾಡಲು ಸನ್ನದ್ಧರಾಗಿರಬೇಕು. ಒಂದು ಕಾಲದಲ್ಲಿ ವರದಾನಿಗುಡ್ಡಮ್ಮೆಯು ದಂಡನ್ನು ಕೂಡಿಸಿ ಪರವಾದಿಗಳ ಕೂಡ ಯುದ್ಧವನ್ನು ಮಾಡಿ ಬಾಲಬ್ರಹ್ಮೇಶ್ವರ ಲಿಂಗವನ್ನು ಅಲಂಪುರದಲ್ಲಿ ಸ್ಥಾಪಿಸಿದಳೆಂದು ಅವಳ ಚರಿತ್ರೆಯಿಂದ ತಿಳಿದುಬರುತ್ತದೆ.

## ವೀರಶೈವರಲ್ಲಿ ಚಾತುರ್ವರ್ಣಗಳಿಲ್ಲ.

ಶಿವಶರಣರು ಚಾತುರ್ವರ್ಣಗಳಿರುತ್ತವೆಂದು ಭಾವಿಸುವದಿಲ್ಲ. ಅವರು ಆ ರೀತಿ ವೀರಶೈವರಲ್ಲಿ ಭೇದವನ್ನು ಮಾಡುವದಿಲ್ಲ. ಎಲ್ಲರೂ ಸಮಾನರೆಂದು ಅವರು ಭಾವಿಸುತ್ತಾರೆ. ಅವರೆಲ್ಲರು ಬ್ರಾಹ್ಮಣರಂತೆ

ಆಧ್ಯಾತ್ಮಿಕ ಜ್ಞಾನವುಳ್ಳವರಿರುತ್ತಾರೆ. ಹೀಗಿದ್ದರೂ ಅವರು ಶೂದ್ರರಂತೆ ಕಾಯಕವನ್ನು ಮಾಡುತ್ತಾರೆ. ವೈಶ್ಯರಂತೆ ತಮ್ಮ ಕಾಯಕದಿಂದಾದ ವಸ್ತುಗಳನ್ನು ಪೇಟೆಯಲ್ಲಿ ಹೋಗಿ ಮಾರಲಿಕ್ಕೆ ಸಿದ್ಧರಿರುತ್ತಾರೆ. ಒಂದು ವೇಳೆ ತಮ್ಮ ಆಚಾರಕ್ಕೆ ಕುಂದು ಬಂದಲ್ಲಿ ಗಣಾಚಾರಿಗಳಾಗಿ ಆಯುಧವನ್ನು ಹಿಡಿದು ಯುದ್ಧಕ್ಕೆ ಸನ್ನದ್ಧರೂ ಇರುತ್ತಾರೆ. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಇವೆಲ್ಲ ವರ್ಣದವರು ಮಾಡುವ ಕಾಯಕಗಳನ್ನೆಲ್ಲ ಯಾವ ವೀರಶೈವನಾದರೂ ಮಾಡಬಹುದು. ಆದ್ದರಿಂದ ವರ್ಣಗಳು ಅವನಿಗೆ ಸಂಬಂಧಪಡುವದಿಲ್ಲ.

## ಗುರು

ಭಕ್ತನಿಗೆ ಲಿಂಗಧಾರಣೆ ಮಾಡುವದು ಗುರುವಿನ ಕಾರ್ಯವಾಗಿರುತ್ತದೆ. ಆತ್ಮ ವಿಕಾಸವೇ ಲಿಂಗಧಾರಣೆಯ ಮುಖ್ಯ ಉದ್ದೇಶವಾಗಿರುತ್ತದೆ. ಇದರ ರೀತಿಯನ್ನು ಗುರುವು ಭಕ್ತನಿಗೆ ತಿಳಿಸಿ ಹೇಳುವದೂ ಹಾಗೆ ಭಕ್ತನು ನಡಿಯುವದೂ ಈ ಉಭಯತರ ಕರ್ತವ್ಯವಾಗಿರುತ್ತದೆ.

ಆತ್ಮವಿಕಾಸವು ಭಕ್ತನ ನೈತಿಕಾಚಾರ ಮತ್ತು ಅವನ ಲಿಂಗಾನುಭವ ಇವುಗಳ ಮೇಲೆ ಅವಲಂಬಿಸಿರುತ್ತದೆ. ಲಿಂಗ ದೀಕ್ಷೆ ಮಾಡುವಲ್ಲಿ ಗುರುವು ಶಿಷ್ಯನಿಗೆ ಹೇಗೆ ನೀತಿ ಬೋಧೆಯನ್ನು ಮಾಡಬೇಕೆಂಬುದು ನನ್ನಯ್ಯನ ಚರಿತ್ರೆಯಲ್ಲಿ ಬಹು ಸರಸಾಗಿ ಚಿತ್ರಿಸಲ್ಪಟ್ಟಿರುತ್ತದೆ. ಲಿಂಗಧಾರಣೆಯನ್ನು ಮಾಡುವ ಪೂರ್ವದಲ್ಲಿ ಸುಜ್ಞಾನಿದೇವನು ಮಾತಂಗ ತಮ್ಮನೆಂಬ ಬೇಡನಿಗೆ ಸ್ತ್ರೀಯರೊಡನೆ ಹೇಗೆ ನಡಿಯಬೇಕು, ಪುಣ್ಯಾಪಾಪಗಳೆಂದರೇನು, ಅಹಿಂಸಾಧರ್ಮ, ಇವೇ ಮೊದಲಾದವುಗಳ ರೀತಿಗಳನ್ನು ಬೋಧಿಸಿದ ಬಳಿಕ, ಅವನಿಗೆ ಅಷ್ಟಾವರಣಗಳ ಜ್ಞಾನವನ್ನು ಮಾಡಿಕೊಟ್ಟಿದ್ದಾನೆ. ಆ ಮೇಲೆ ಅವನಿಗೆ ದೀಕ್ಷೆ ಮಾಡಿದ್ದಾನೆ.

ಗುರುವು ಹೀಗೆ ನೈತಿಕಾಚಾರಮಾತ್ರವಲ್ಲದೆ ಶಿಷ್ಯನಿಗೆ ಲಿಂಗದ ನೆಲೆ ಕಲೆಗಳನ್ನು ಅಂದರೆ ಲಿಂಗದ ಭೇದ ವಿಭೇದಗಳನ್ನು, ಅದರ ಸಕೀಲಗಳು, ಮೊದಲಾದವುಗಳ ಜ್ಞಾನವನ್ನು ಸಹ ಮಾಡಿಕೊಡಬೇಕು. ಭಾನುದೇವನ ಚರಿತ್ರೆಯು ಈ ಸಂಗತಿಯನ್ನು ಹೇಳುತ್ತದೆ. ಈ ರೀತಿ ಲಿಂಗಜ್ಞಾನವಿಲ್ಲದೆ ಹೋದರೆ ಭಕ್ತನಿಗೆ ಲಿಂಗಾಂಗ ಸಾಮರಸ್ಯವು ಉಂಟಾಗಲಾರದು. ಗೊಗ್ಗವ್ವೆಯು ಶಿವಜ್ಞಾನಿಯು. ಅವಳು ತನ್ನನ್ನು ಕಂಡ

ಚಾರಮುರಾಯನಿಗೆ ತ್ರಿಲಿಂಗಗಳ ರೀತಿಯನ್ನು ಅರುಹಿದಳು. ಆಗ ಮಾತ್ರ ಪರಮಾತ್ಮನ ಹೃದಯಾಂತರಾಳದಲ್ಲಿ ಇರುವದಕ್ಕೆ ಅವನಿಗೆ ಅರ್ಹತೆಯು ಪ್ರಾಪ್ತವಾಯಿತು. ಗುರುವು ಯೋಗ್ಯನಾಗಿದ್ದರೆ ಮಾತ್ರ ಭಕ್ತನ ಹೃದಯದಲ್ಲಿರುವ ಅಂತರ್ಲಿಂಗವನ್ನು ಅವನು ಬೆಳಗಿಸಲು ಶಕ್ತನಾಗುತ್ತಾನೆ. ಈ ಅಂತರ್ಲಿಂಗವು ಹೀಗೆ ಪ್ರಸ್ಫುರಿಸಹತ್ತಲು ಅದು ಅಂಗದ ಮೇಲಿರುವ ಬಾಹ್ಯಲಿಂಗವನ್ನು ಸಹ ತನ್ನ ಸ್ವರೂಪಕ್ಕೆ ಬರುವಂತೆ ಮಾಡಿ ಬಿಡುತ್ತದೆ. ನಿಜಲಿಂಗ ಚಿಕ್ಕಯ್ಯನು ಬಸವನನ್ನು ಮೊದಲು ಕಂಡಾಗ, ಇಷ್ಟಲಿಂಗದಂತೆ ಬದನೇಕಾಯಿಯನ್ನು ಧರಿಸಿ ಕೊಂಡಿದ್ದನು. ಆದರೆ ಬಸವೇಶ್ವರನ ನೋಟ ಪರುಷದಿಂದ ಅದು ನಿಜವಾದ ಇಷ್ಟ ಲಿಂಗವೇ ಆಗಿ ಬಿಟ್ಟಿತು.

ಆದರೆ ಲಿಂಗಧಾರಣೆಯ ಈ ಎಲ್ಲ ಕಾರ್ಯಗಳು ಭಕ್ತನ ವಿಶ್ವಾಸದ ಮೇಲೆ ಅವಲಂಬಿಸಿರುತ್ತವೆ. ಅವನಲ್ಲಿ ವಿಶ್ವಾಸವಿದ್ದರೆ ಮಾತ್ರ ಅದು ಲಿಂಗವು, ಇಲ್ಲದಿದ್ದರೆ ಅದು ಪಾಷಾಣವು. ಈ ವಿಷಯವಾಗಿ ಕುರಿಯ ಹಿಕ್ಕೆಯನ್ನು ಲಿಂಗವೆಂದು ನಂಬಿ ಪೂಜಿಸಿದ ಗೊಲ್ಲಾಳನ ಉದಾಹರಣೆಯನ್ನು ನಾವು ಕೊಡಬಹುದು. ಅದು ಅವನ ನಂಬಿಗೆಯಿಂದ ನಿಜವಾದ ಲಿಂಗವೇ ಆಯಿತು.

ಹೀಗೆ ಗುರುವು ಭಕ್ತನಿಗೆ ನೀತಿ ನಡೆಗಳನ್ನು ಕಲಿಸುವಂತೆಯೇ ಭಕ್ತರೂ ಕೂಡ ಈ ಕಾರ್ಯವನ್ನು ಇತರ ಭಕ್ತರ ಸಲುವಾಗಿ ಮಾಡಬಹುದೆಂದು ಶಿವಶರಣರ ಚರಿತ್ರೆಗಳು ಹೇಳುತ್ತಿವೆ. ಸೌಂದರ ನಂಬೆಣ್ಣನು ಪರಮಾತ್ಮನು ತನಗೆ ಒಲಿದಿದ್ದಾನೆಂದು ಬಹಳ ಸೊಕ್ಕಿಗೇರಿದ್ದನು. ಆದರೆ ಮೊರೆಯಿಂಡ ದೇವನು ಅವನ ಗರ್ವವನ್ನು ಭಂಗ ಮಾಡಿ ಅವನನ್ನು ಹಾದಿಗೆ ಹಚ್ಚಿದನು. ಚಾರಮುರಾಯನು ಒಂದು ಪ್ರಸಂಗದಲ್ಲಿ ಇದೇ ಸೌಂದರ ನಂಬೆಣ್ಣನ ಗರ್ವಭಂಗ ಮಾಡಿ ಅವನನ್ನು ಸರಿಯಾದ ಮಾರ್ಗಕ್ಕೆ ಹಚ್ಚಿದ್ದಾನೆ. ಗಟ್ಟಿವಾಳಯ್ಯನು ಅವನಕ್ಕಾಗಿ ಬಸವೇಶ್ವರನನ್ನು ಅವಲಂಬಿಸಿಕೊಂಡಿದ್ದ ಜಂಗಮರ ವರ್ತನೆಯನ್ನು ಸ್ಪಷ್ಟ ಶಬ್ದಳಿಂದ ಖಂಡಿಸಲು ಹಿಂದು ಮುಂದು ನೋಡಲಿಲ್ಲ.

ಹೀಗೆ ಗುರುಶಿಷ್ಯರು ಮತ್ತು ಭಕ್ತರು ಜಗತ್ತಿನ ಉದ್ಧಾರಕ್ಕಾಗಿ ಯಾವಾಗಲೂ ಪ್ರಯತ್ನಿಸುತ್ತಾರೆ. ಹೀಗೆ ಪ್ರಯತ್ನಿಸುವವರು ಉಚ್ಚ ವರ್ತನೆಯುವರೆಂಬ ಸಂಗತಿಯು ನಿರ್ವಿವಾದವಾದದ್ದು.

ಗುರುಶಿಷ್ಯರ ಪರಸ್ಪರ ವರ್ತನೆಯು ಹೇಗಿರಬೇಕೆಂಬುದು ತಾಳಿಕೋಟೆಯ ಶಿವದೇವನ ಚರಿತ್ರೆಯಿಂದ ಚನ್ನಾಗಿ ತಿಳಿದುಬರುತ್ತಿದೆ. ಅವರಿದ್ದ ಗ್ರಾಮದಲ್ಲಿ ಕೆಲವೊಂದು ವರ್ಷ ಬರಗಾಲವು ಬೀಳಲು ಶಿಷ್ಯನಾದ ಪಾವನದೇವನು ತಾನು ತಂದ ಭಿಕ್ಷೆಯನ್ನು ತಾನು ತೆಗೆದುಕೊಳ್ಳದೆ ಗುರುವಿಗೆ ಕೊಡುತ್ತಿದ್ದನು. ಇದರಿಂದ ಅವನು ಕೃಶನಾಗಹತ್ತಲು ಅದರ ಕಾರಣವನ್ನು ಶಿವದೇವನು ತಿಳಿದವನಾಗಿ ತಾನೂ ಉಪವಾಸವಿರಹತ್ತಿದನು. ಆಗ ಪರಮಾತ್ಮನು ಅವರಿಗೆ ಪ್ರತ್ಯಕ್ಷನಾದನು. ಹೀಗೆ ಗುರುಶಿಷ್ಯರ ಶ್ರೇಷ್ಠ ನಡೆಯು ಇರುತ್ತಿದೆ.

## ಲಿಂಗ.

ಗುರುವಿನಿಂದ ಭಕ್ತನು ಲಿಂಗಧಾರಣೆಯನ್ನು ಹೊಂದಿದ ಬಳಿಕ, ಅವನು ಅದರ ಮೂಲಕ ತನ್ನ ಪ್ರಾಣಲಿಂಗವನ್ನು ಜಾಗ್ರತಪಡಿಸಹತ್ತಬೇಕು. ಅವನು ತನ್ನ ಆಚರಣೆಯ ಮೂಲಕವೇ ಈ ಕಾರ್ಯವನ್ನು ಸಾಧಿಸತಕ್ಕದ್ದು. ಶಿವಶರಣರು ಯಾವಾಗಲೂ ಪ್ರಾಣಲಿಂಗ ಸಾಧನೆಯಲ್ಲಿರುತ್ತಾರೆ. ಅವರು ಇದನ್ನು ತಮ್ಮ ಧ್ಯಾನದ ಮೂಲಕವೇ ಸಾಧಿಸುತ್ತಾರೆ.

ಅನುಮಿಷನು ನಂದಿಕೇಶ್ವರನಿಂದ ಲಿಂಗಧಾರಣೆಯನ್ನು ಹೊಂದಿದನು. ಅಂದಿನಿಂದ ಅವನು ತನ್ನ ಇಷ್ಟಲಿಂಗದಲ್ಲಿ ಮನಸ್ಸನ್ನಿಟ್ಟು ಧ್ಯಾನ ಪರಾಯಣನಾದನು. ಆದರಿಂದ ಆ ಲಿಂಗವು ಅವನಿಗೆ ಪ್ರಾಣಸ್ವರೂಪವಾಯಿತು. ಆಗ ಅವನಿಗೆ ಅದರ ನೋಟವೇ ಪ್ರಾಣವಾಯಿತು. ಹೀಗೆ ಅವನು ಪ್ರಾಣಲಿಂಗಾನುಸಂಧಾನದಲ್ಲಿ ಉಳಿದು ಕಡೆಗೆ ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದಿದನು.

ಗಜೇಶ ಮಸಣಯ್ಯನು ಲಿಂಗ ಪೂಜೆಯನ್ನು ಮಾಡುತ್ತ ಅದರಲ್ಲಿಯೇ ಮೈಮರೆದು ಬಿಡುವನು. ಆಗ ಅವನಿಗೆ ಚಳಿ, ಮಳೆ, ಗಾಳಿ, ಬಿಸಿಲು ಇವಾವೂ ಭಾಸವಾಗುತ್ತಿರಲಿಲ್ಲ. ಹೊರಗಿನದರ ಅರಿವು ಸಹ ಅವನಿಗೆ ಉಳಿಯುತ್ತಿರಲಿಲ್ಲ. ಇದರಿಂದ ಅವನಲ್ಲಿ ವಿಶ್ವಶಕ್ತಿಯು ತಲೆದೋರಿತು. ಇದು ಅವನು ಪ್ರಾಣಲಿಂಗವನ್ನು ಸಾಧಿಸಿದ್ದರ ಪರಿಣಾಮವಾಗಿದೆ.

ತಂಗಟೂರು ಮಾರಯ್ಯನು ಶಿವಾನುಭವದ ಜ್ಞಾನವನ್ನು ಹೊಂದಿ ಲಿಂಗ ಪೂಜೆಯಲ್ಲಿ ಮಗ್ನನಾಗಿರುತ್ತಿದ್ದನು. ಇದರಿಂದ ಅವನು ಅಂತ

ಲಿಂಗವನ್ನು ಸಾಧಿಸಿದವನಾದನು. ಆಗ ಅವನು ಲಿಂಗಪ್ರಾಣಿ ಎಂದೆನಿಸಿ ಕೊಂಡನು. ಒಂದು ದಿವಸ ಅವನ ಇಷ್ಟ ಲಿಂಗವು ಅವನಿಂದ ದೂರಾ ಗಲು ಅದರೊಡನೆ ಅವನ ಪ್ರಾಣವೂ ತಾನಾಗಿಯೇ ಹೋಗಿ ಬಿಟ್ಟಿತು.

ಶಿವಶರಣನಿಗೆ ಈ ಸ್ಥಿತಿಯುಂಟಾಗಲು ಅವನಿಗೆ ಬಾಹ್ಯ ಮತ್ತು ಅಂತಃಸೃಷ್ಟಿಗಳು ಒಂದೇಯಾಗುತ್ತವೆ. ಇದರಿಂದ ಅವನಲ್ಲಿ ಅಪ್ರಾಕೃತ ಶಕ್ತಿಯು ನೆಲೆಗೊಳ್ಳುತ್ತದೆ- ಅವನು ಪೂರ್ಣಪುರುಷನಾಗುತ್ತಾನೆ.

ಒಂದು ದಿವಸ ಕೇಶಿರಾಜನು ನದೀ ತೀರದಲ್ಲಿ ತನ್ನ ಇಷ್ಟಲಿಂಗ ದಲ್ಲಿ ಧ್ಯಾನಮಗ್ನನಾಗಿದ್ದನು. ಆಗ ಒಂದು ಗರುಡಪಕ್ಷಿಯು ಅವನ ಕೈಯಲ್ಲಿದ್ದ ಲಿಂಗವನ್ನು ನೋಡಿ ಅದನ್ನು ಮೇಲಕ್ಕೆ ಎತ್ತಿಕೊಂಡು ಹೋಗುವಾಗ, ಆ ಲಿಂಗವು ಓಸರಿಸಿ ನದಿಯಲ್ಲಿ ಬಿದ್ದಿತು. ಅದು ಹೀಗೆ ಬಿದ್ದ ಬಳಿಕ ಕೇಶಿರಾಜನು ನದಿಯಲ್ಲಿ ಬಿದ್ದ ಆ ಲಿಂಗವನ್ನು ನೆನೆಯಲಾಗಿ ಅದು ಮಂತ್ರಮಯವಾದುದರಿಂದ ಅದು ತಾನಾಗಿಯೇ ಕೇಶಿರಾಜನ ಕರಸ್ಥಳಕ್ಕೆ ಆಕರ್ಷಿಸಲ್ಪಟ್ಟಿತು. ಇದು ಅವನಲ್ಲಿ ಉಂಟಾದ ಮಂತ್ರ ಶಕ್ತಿಯ ಪರಿಣಾಮವು.

ಗಟ್ಟಿವಾಳಯ್ಯನು ಲಿಂಗವನ್ನು ಇದರಂತೆಯೇ ಸಾಧಿಸಿದ್ದನು. ಅವನು ಬಸವೇಶ್ವರನ ಅರಮನೆಗೆ ಊಟಕ್ಕೆ ಹೋಗುತ್ತಿದ್ದ ಜಂಗಮರನ್ನು ತಿರಸ್ಕರಿಸಿ ನುಡಿಯಲು ಅವರು ಅವನ ಇಷ್ಟಲಿಂಗವನ್ನು ಕಸೆದುಕೊಂಡರು. ಆಗ ಅವನು ಬೆಟ್ಟದ ಗುಂಡನ್ನು ತಂದು ಅದನ್ನು ಲಿಂಗವನ್ನಾಗಿ ಭಾವಿಸಿ ಕಟ್ಟಿಕೊಂಡನು. ಗಟ್ಟಿವಾಳಯ್ಯನು ಪ್ರಾಣಲಿಂಗವನ್ನು ಸಾಧಿಸಿದವನಾದ್ದರಿಂದ ಸೃಷ್ಟಿಯಲ್ಲಿ ಇದು ಹೊರಗಿನದು, ಅದು ಒಳಗಿನದು, ಇದು ದೊಡ್ಡದು, ಅದು ಸಣ್ಣದು ಎಂಬ ಭೇದವೇ ಇರಲಿಲ್ಲ. ನೆರೆದ ಜಂಗಮರು ಅವನ ಇಷ್ಟಲಿಂಗವನ್ನು ಅವನಿಗೆ ತಿರುಗಿ ಕೊಡಲಾಗಿ ಅವನು ಧರಿಸಿದ್ದ ಬೆಟ್ಟದ ಲಿಂಗವನ್ನು ಆ ಇಷ್ಟಲಿಂಗದಲ್ಲಿಯೇ ಅಡಿಗಿಸಿಬಿಟ್ಟನು!

ಹೀಗೆ ಶಿವಶರಣರು ತಮ್ಮ ಲಿಂಗಧ್ಯಾನದಿಂದ ಒಂದು ಅತುಲವಾದ ಸಾಮರ್ಥ್ಯವನ್ನು ಹೊಂದಿ ಜಗತ್ತಿನಲ್ಲಿಯ ವಸ್ತುಗಳಲ್ಲಿ ಲಿಂಗ ವನ್ನು ಕಂಡು ಅದರ ಮೂಲಕ ಅವುಗಳಲ್ಲಿ ಕಾಣುವ ಭಿನ್ನತೆಗಳನ್ನು ಅಳಿದುಬಿಟ್ಟಿದ್ದಾರೆ.

## ಜಂಗಮ.

ಜಂಗಮವು ಭಾವಲಿಂಗಕ್ಕೆ ಸಂಬಂಧಪಡುತ್ತದೆ. ಕಾರಣ ಶರೀರ ವೆಂಬುದು ಈ ಜಂಗಮ ಮತ್ತು ಭಾವಲಿಂಗಗಳಿಗೆ ಸ್ಥಾನವಾಗಿದೆ. ಭಾವ ಲಿಂಗವು ಉತ್ತೇಜನಹೊಂದಲು ಅದು ಜಂಗಮವು ನೆಲೆಗೊಂಡಿದ್ದರ ಗುರುತು. ಈ ಜಂಗಮದಲ್ಲಿ ಅನುಭವದ ಸಂಗ್ರಹವಿರುತ್ತದೆ. ಆದ್ದ ರಿಂದ ಜಂಗಮವು ಜ್ಞಾನವುಳ್ಳದಾಗಿದೆ. ಮೊದಲು ಜಂಗಮದಲ್ಲಿ ಪ್ರೇರಣೆಗಳುಂಟಾಗುತ್ತವೆ. ಆಮೇಲೆ ಅವು ಪ್ರಾಣಲಿಂಗದ ಮೂಲಕ ಇಂದ್ರಿಯಗಳ ಮುಖಾಂತರ ಸ್ಥೂಲಶರೀರಕ್ಕೆ ಬಂದುಮುಟ್ಟುತ್ತವೆ ಹೀಗೆ ಕ್ರಿಯೆಗಳಾಗುತ್ತವೆ. ಆದ್ದರಿಂದ ಈ ಮೂರೂ ಸ್ಥಲಗಳಲ್ಲಿ ಪರಸ್ಪರ ಸಹಕಾರವಿರಬೇಕು. ಇವು ಮೂರೂ ಪರಸ್ಪರಾವಲಂಬಿಗಳು. ಇವು ಗಳಲ್ಲಿ ಒಂದು ಲೋಪವಾದರೆ ಉಳಿದವುಗಳಿಂದ ಸರಿಯಾದ ಕಾರ್ಯ ಗಳಾಗವು.

ನುಲಿಯ ಚಂದಯ್ಯನು ಜಂಗಮವನ್ನು ಮಾತ್ರ ನಂಬಿ ಲಿಂಗ ವನ್ನು ತಿರಸ್ಕರಿಸಿದನು. ಆದರೆ ಶಿವಶರಣರು ಶಿವಾನುಭವಮಂಟಪ ದಲ್ಲಿ ನೆರೆದು ಜಂಗಮವು ಗುರು ಮತ್ತು ಲಿಂಗಗಳನ್ನು ಬಿಟ್ಟಬಿಟ್ಟಲ್ಲಿ ಜಂಗಮದಿಂದ ಕಾರ್ಯಗಳಾಗವು, ಗುರು ಲಿಂಗ ಜಂಗಮ ಈ ಮೂರೂ ಶಿವಾನುಭವಕ್ಕೆ ಬೇಕು ಎಂದು ಇಲ್ಲಿ ಶಿವಶರಣರು ಸಿದ್ಧಪಡಿಸಿದರು. ಈ ವಿಷಯವಾಗಿ ನುಲಿಯ ಚಂದಯ್ಯನ ಚರಿತ್ರೆಯನ್ನು ವಾಚಕರು ನೋಡಬೇಕು.

## ಪಾದೋದಕ, ಪ್ರಸಾದಗಳು.

ಪಾದೋದಕ ಪ್ರಸಾದಗಳ ವಿಷಯವಾಗಿ ಶಿವಾನುಭವ ಶಾಸ್ತ್ರ ದಲ್ಲಿ ವಿಶಿಷ್ಟ ಆಚರಣೆಗಳವೆ. ಈ ಆಚರಣೆಗಳು ಭಾವಪೂರ್ಣವಾಗಿ ರುತ್ತವೆ. ಮಾದಾರ ಚನ್ನಯ್ಯನ ಆಚರಣೆಯಲ್ಲಿ ಪ್ರಸಾದದ ನಿಜ ಸ್ವರೂಪ ವ್ಯಕ್ತವಾಗುತ್ತದೆ. ಅವನು ಸುಂದರವಾದ ವಸ್ತುಗಳನ್ನು ಅಲ್ಲಲ್ಲಿ ಕಂಡಕೂಡಲೆ ಅವನು ಅವುಗಳಿಂದ ಉಂಟಾದ ಆನಂದವನ್ನು ಆಯಾ ಲಿಂಗಗಳಿಗೆ ಅರ್ಪಿತಮಾಡಿ ಅನುಭವಿಸುವನು. ಮನುಷ್ಯನು ತಾನು ಕೇಳುವದು, ರುಚಿಸುವದು, ನೋಡುವದು, ಸ್ಪರ್ಶಿಸುವದು,

ಸಂತೋಷಪಡುವದು, ಇವೆಲ್ಲವುಗಳನ್ನು ತನ್ನಲ್ಲಿರುವ ಲಿಂಗಗಳಿಗೆ ಅರ್ಪಿತವಮಾಡಿ ಭೋಗಿಸತಕ್ಕದ್ದು. ಹೀಗೆ ಅರ್ಪಿತವಮಾಡಿ ಅನುಭವಿಸುವದೇ ಪ್ರಸಾದವೆನಿಸಿಕೊಳ್ಳುವದು. ಇಂಥ ಪ್ರಸಾದವನ್ನು ಮನುಷ್ಯನು ಪ್ರತಿನಿತ್ಯ, ಇಷ್ಟೇ ಅಲ್ಲ, ಪ್ರತಿಕ್ಷಣ ಅನುಭವಿಸಬೇಕು ಹೀಗೆ ಲಿಂಗಕ್ಕೆ ಅರ್ಪಣ ಮಾಡುವದು ಲಿಂಗಭೋಗವು. ಹೀಗೆ ಲಿಂಗವು ಭೋಗಿಸಿದ್ದನ್ನು ತಾನು ಅನುಭವಿಸುವದು ಲಿಂಗಭೋಗೋಪಭೋಗವು. ಈ ಲಿಂಗಗಳು ತನ್ನಲ್ಲಿಯೇ ಇರುತ್ತವೆಂಬುದನ್ನು ವಾಚಕರು ಮರೆಯಕೂಡದು. ಇದು ಪ್ರಸಾದಿಯ ಆಚರಣೆಯಾಗಿದೆ. ಇದು ಉಚ್ಚ ಮನೋವೃತ್ತಿಯುಳ್ಳವನಿಗೆ ಮಾತ್ರ ಸಾಧ್ಯವು.

ಆದರೆ ನಿತ್ಯ ಪರಮಾತ್ಮನ ರಕ್ಷಣೆಯನ್ನು ಕೋರುತ್ತ ಕಾರ್ಯವನ್ನು ಮಾಡುವದು ಮತ್ತು ತನಗೆ ಬಂದದ್ದನ್ನು ಪರಮಾತ್ಮನಿಗರ್ಪಿಸಿ ಅದರಲ್ಲಿ ಸಮಾಧಾನ ಹೊಂದುವದು ಇವುಗಳು ಹೆಚ್ಚಿಗೆ ಸ್ಥೂಲತೆರನಾದರೂ ಅವು ಸಹ ಪ್ರಸಾದಿಯ ಆಚರಣೆಗಳಾಗಿವೆ. ಈ ವಿಷಯವಾಗಿ ಅಮುಗಿದೇವನ ಚರಿತ್ರೆಯನ್ನು ವಾಚಕರು ನೋಡಬೇಕು. ಸಿದ್ಧರಾಮೇಶ್ವರನು ಅವನಿಗೆ ತನ್ನ ಗ್ರಾಮವನ್ನು ಬಿಟ್ಟುಹೋಗೆಂದು ಹೇಳಿಕಳುಹಿದನು. ಆಗ ಅವನು ತನ್ನ ಮನೆಯ ಸಾಮಾನುಗಳನ್ನೆಲ್ಲ ಕಟ್ಟಲಾಗಿ ಅವು ಮೂರು ಗಂಟುಗಳಾದವು. ಅವುಗಳಲ್ಲಿ ಒಂದನ್ನು ತಾನು, ಮತ್ತೊಂದನ್ನು ತನ್ನ ಹೆಂಡತಿಯು ಹೊತ್ತರು. ಮೂರನೆಯದನ್ನು ಯಾರು ತರಬೇಕೆಂದು ಹೆಂಡತಿಯು ಅವನಿಗೆ ಕೇಳಲಾಗಿ ಅಮುಗಿದೇವನು-- ಅದನ್ನು ತರುವದು ಪರಮಾತ್ಮನನ್ನು ಕೂಡಿದೆ ಎಂದು ಹೇಳಿ ಹೊರಟನು. ಮುಂದೆ ಆ ಮೂರನೆಯ ಗಂಟು ಸಹ ಅವರು ಬಂದು ಇಳಿಯತಕ್ಕ ಸ್ಥಳದಲ್ಲಿಯೇ ಮುಂಚಿತವಾಗಿ ಬಂದು ಬಿದ್ದಿತ್ತು. ಹೀಗೆ ಶಿವಶರಣರು ಪರಮಾತ್ಮನ ಮೇಲೆ ಭಾರಹಾಕಿ ಶಕ್ಯವಿದ್ದಷ್ಟು ಪ್ರಯತ್ನಿಸಿದಲ್ಲಿ ಎಲ್ಲವೂ ಕೈಗೂಡುವದೆಂಬ ವಿಚಾರವು ಇದರಲ್ಲಿದೆ.

ನಿತ್ಯ ಲಿಂಗಪೂಜೆಯಲ್ಲಿಯೂ ಪ್ರಸಾದ ಗ್ರಹಣವಿರುತ್ತದೆ. ಪ್ರಸಾದವು ಏಕಾದಶ ಅಂದರೆ ಹನ್ನೊಂದು ಇದ್ದು ಅವುಗಳ ವಿವರಣೆಯು ಅಹಿಂಸಾವಾದಿಯಾದ ದಸರಯ್ಯನ ಹೆಂಡತಿಯಾದ ವೀರಮ್ಮನ ವಚನದಲ್ಲಿ ಬಂದಿದೆ. ಅದನ್ನು ವಾಚಕರು ನೋಡಬೇಕು.

ಪಾದೋದಕವಾದರೂ ಪ್ರಸಾದದಂತೆ ಒಂದು ವಿಶಿಷ್ಟತೆರನ ಆಚರಣೆಯಾಗಿದೆ. ಅದರಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಇವೆಲ್ಲವುಗಳ ಸಮಾವೇಶವಿರುತ್ತದೆ. ಇದು ಮಂತ್ರಪೂರ್ವಕವಾಗಿ ಆಗುವದು. ಇದು ಅತ್ಯಂತ ಭಾವನಾಮಯವಾದುದು. ಇದರ ವಿವರಣೆಯಾದರೂ ಇದೇ ಪೀಠಿಕೆಯ ವಚನದಲ್ಲಿ ಬಂದಿದೆ.

ಪಾದೋದಕ ಪ್ರಸಾದಗಳಲ್ಲಿ ಪ್ರಸಾದವು ಹೆಚ್ಚಿಗೆ ಸೂಕ್ಷ್ಮತರವಾದುದು. ಅದು ಶರೀರವನ್ನೆಲ್ಲ ವ್ಯಾಪಿಸುತ್ತದೆ. ಪಾದೋದಕವು ಅದಕ್ಕಿಂತಲೂ ಹೆಚ್ಚಿಗೆ ಸ್ಥೂಲತರವಾದುದಾದರೂ ಅದರಲ್ಲಿ ಗುರು, ಲಿಂಗ, ಜಂಗಮಕ್ಕೆ ಅರ್ಪಣವಿರುವದರಿಂದ ಅದರಲ್ಲಿ ತ್ರಿಲಿಂಗಗಳ ಕೂಟವಿರುತ್ತದೆ. ಅದಾದರೂ ಒಂದು ಉಚ್ಚತರದ ಶಿವಾನುಭವದ ಆಚರಣೆಯಾಗಿರುತ್ತದೆ. ಹೀಗೆ ಪಾದೋದಕ ಪ್ರಸಾದ ಗ್ರಹಣದ ಮೂಲಕ ಭಕ್ತನು ಪರಿಶುದ್ಧನಾಗಿ ಜಗತ್ತಿನ ವ್ಯವಹಾರಗಳನ್ನು ಮಾಡಲು ಸಮರ್ಥನಾಗುತ್ತಾನೆ.

## ವಿಭೂತಿ ರುದ್ರಾಕ್ಷಿ.

ವಿಭೂತಿಯು ಮಹಾವಸ್ತುವಿನ ತೇಜವೆಂದು ಶಿವಾನುಭವಿಗಳಿಂದ ತಿಳಿಯಲ್ಪಡುತ್ತದೆ. ಅದು ಜ್ಞಾನಾಗ್ನಿಯಿಂದ ಶರೀರದ ದೋಷಗಳನ್ನು ದಹಿಸಿದ ಚಿನ್ಹವು. ಈ ವಿಷಯದಲ್ಲಿ ಭದ್ರಗಾಯಕನ ಚರಿತ್ರೆಯನ್ನು ವಾಚಕರು ನೋಡಬೇಕು. ಅವನು ಅತ್ಯಂತ ಬಡವನು. ಶಿವಶರಣರ ಹಾಡುಗಳನ್ನು ಹಾಡುವದೇ ಅವನಿಗೆ ಕಾಯಕವಾಗಿತ್ತು. ಅವನ ಹೆಂಡತಿಯು ಅವನ ಬಡತನಕ್ಕಾಗಿ ಅವನನ್ನು ಬಹಳ ಪೀಡಿಸಹತ್ತಲು ಅವನು ತನ್ನ ಇಷ್ಟದೇವತೆಯು ಹೇಳಿದ ಪ್ರಕಾರ ಹಣವನ್ನು ತರಬೇಕೆಂದು ಚಾರಮರಾಯನ ಕಡೆಗೆ ಹೋದನು. ಚಾರಮರಾಯನು ಅವನನ್ನು ಕಂಡು ಅವನಿಗೆ ತನ್ನ ಬೊಕ್ಕಸವನ್ನೆಲ್ಲ ತೋರಿಸಿದನು. ಆದರೆ ಭದ್ರಗಾಯಕನು ಅಲ್ಲಿಯ ಹಣವನ್ನು ಏನೂ ಮುಟ್ಟದೆ ಅಲ್ಲಿ ವಿಭೂತಿಯ ಒಂದು ಚೀಲವನ್ನು ನೋಡಿ ಇದು ಭವರೋಗಕ್ಕೆ ಔಷಧವೂ ಇದು ಶ್ರೇಷ್ಠನಾದುದೂ ಎಂದು ತಿಳಿದು, ಅದನ್ನು ತೆಗೆದುಕೊಂಡು ಬಂದು ತನ್ನ ಹೆಂಡತಿಯ ಮುಂದಿಟ್ಟನು. ಅವಳು ಈ ಬೂದಿಯನ್ನೇಕೆ ತಂದೆ ಎಂದು ಅಂದಳು. ಆದಕ್ಕೆ ಭದ್ರಗಾಯಕನು ವಿಭೂ

ತಿಯು ಮಹತ್ತ್ವವನ್ನು ಅವಳಿಗೆ ಹೇಳಿ ಆ ಕಾಲದಲ್ಲಿ ಕೈಹಾಕೆಂದು ನುಡಿಯಲು ಅವರಲ್ಲಿ ಅಪೇಕ್ಷ್ಯವಾದ ವಸ್ತುಗಳೇ ಇರುವದನ್ನು ಅವಳು ಕಂಡಳು. ಶರೀರದಲ್ಲಿಯ ದೋಷಗಳನ್ನು ಕಳೆದವನಿಗೆ ಅಸಾಧ್ಯವಾವುದೂ ಇಲ್ಲೆಂಬ ವಿಚಾರವು ಈ ಚರಿತ್ರೆಯಲ್ಲಿ ಅಡಕವಾಗಿದೆ.

ರುದ್ರಾಕ್ಷಿಗಳು ಶಿವಾನುಭವದ ಅರಿಕೆ ಮಾಡಿಕೊಡುವ ತತ್ತ್ವಚಿಂತಾಮಣಿಗಳೆಂದು ಶಿವಾನುಭವಿಗಳಿಂದ ತಿಳಿಯಲ್ಪಟ್ಟಿವೆ. ಅವುಗಳನ್ನು ಅವರು ಮಂತ್ರಸ್ಮರಣೆಯಿಂದ ಆಯಾ ಸ್ಥಾನಗಳಲ್ಲಿ ಧರಿಸುತ್ತಾರೆ. ಈ ಬಾಹ್ಯ ರುದ್ರಾಕ್ಷಿಗಳಲ್ಲದೆ ಚಿದ್ರುದ್ರಾಕ್ಷಿಗಳೆಂದು ಅಂತರಂಗದಲ್ಲಿಯೂ ಉಂಟು. ಅವು ಶರೀರದಲ್ಲಿರುವ ಆರು ಚಕ್ರಗಳ ದಳಗಳಲ್ಲೆಲ್ಲಾ ಇದ್ದು ಅಲ್ಲಿ ರುದ್ರರು ವಾಸಿಸುತ್ತಾರೆ. ಅವರ ಸಂಖ್ಯೆ ನೂರೆಂಟು ಇವೆ. ಈ ನೂರೆಂಟು ರುದ್ರರಿಗೆ ನೂರೆಂಟು ಶಕ್ತಿಯರಿದ್ದು ಅವರು ರುದ್ರರಲ್ಲಿ ಬೆರೆಯಲು ನೂರೆಂಟು ಚಿದ್ಗ್ರಂಥಿಗಳಾಗುತ್ತವೆ. ಹೀಗಾಗಲು ಅಲ್ಲಿ ಲಿಂಗಶಕ್ತಿಯು ಉದಯವಾಗುತ್ತಿದೆ. ಚಾರಮರಾಯನ ಹೆಂಡತಿಯು ಹೀಗೆ ರುದ್ರಾಕ್ಷಿಯನ್ನು ತನ್ನಲ್ಲಿ ಸಾಧಿಸಿಕೊಂಡಿದ್ದಳು. ಅವಳು ಅದರ ಈ ರೀತಿಯನ್ನು ತನ್ನ ಗಂಡನಿಗೆ ಉಪದೇಶಿಸಲಾಗಿ, ಅವನು ಅಂದಿನಿಂದ ಮಂತ್ರಪೂರ್ವಕವಾಗಿ ವಿಭೂತಿ ರುದ್ರಾಕ್ಷಿಗಳನ್ನು ಧಾರಣ ಮಾಡುವವನಾಗಿ ಶ್ರೇಷ್ಠತರದ ಸಾಮರ್ಥ್ಯವನ್ನು ಹೊಂದುವವನಾದನು.

## ಮಂತ್ರ.

ಮಂತ್ರ ವಿಷಯವಾಗಿ ಶಿವಾನುಭವಿಗಳು ಬಹಳ ಸಂಶೋಧನೆಗಳನ್ನು ಮಾಡಿದ್ದಾರೆ. ಅವು ಅಗಾಧವಾದುವು. ಇವುಗಳು ಸೂಕ್ಷ್ಮದರಲ್ಲಿ ಸೂಕ್ಷ್ಮವಾದವುಗಳಾಗಿವೆ. ಮಂತ್ರ ವಿಷಯವನ್ನು ತಿಳಿಯುವದು ಬಹಳ ಕಠಿಣವಿರುತ್ತದೆ. ಇದರಲ್ಲಿ ಬಹಳ ತೊಡಕುಗಳಿರುತ್ತವೆ. ಶಿವಾನುಭವಿಗಳು ಸ್ಮರಿಸುವ ಮಂತ್ರಕ್ಕೆ ಆರೇ ಅಂಗಗಳಿವೆ. ಆದರೆ ಅವು ಭಕ್ತನ ಪ್ರತಿಯೊಂದು ಅಂಗಕ್ಕೆ, ಇಂದ್ರಿಯಕ್ಕೆ, ಶಕ್ತಿಗೆ, ಸಂಬಂಧಪಡುತ್ತವೆ. ಈ ಸಂಬಂಧವನ್ನು ಶಿವಾನುಭವಿಯು ಅರಿತು ಸ್ಮರಿಸಿದಲ್ಲಿ ಅವನಲ್ಲಿ ಲಿಂಗಶಕ್ತಿಯು ತಲೆದೋರಹತ್ತುತ್ತದೆ. ಮನುಷ್ಯನಿಗೆ ಷಟ್ ಚಕ್ರಗಳೆಂಬುವು ಇರುತ್ತವೆಯಷ್ಟೇ. ಈ ಚಕ್ರಗಳ ಮೂಲಕವಾಗಿಯೇ

ಈ ಶಕ್ತಿಯು ಅವನಿಂದ ಹೊರಬೀಳುತ್ತಿದೆ. ಆದರೆ ಶಿವಯೋಗಿಗೆ ಈ ಶಕ್ತಿಯು ಲಿಂಗಮಯವಾಗಿರುತ್ತದೆ. ಆದ್ದರಿಂದ ಈ ಚಕ್ರಗಳೊಳಗಿಂದ ಲಿಂಗದ ಉಜ್ವಲ ಬೆಳಕು ಅಥವಾ ಶಕ್ತಿಯು ಹರಿಯಹತ್ತುತ್ತದೆ. ಇದು ಅವನ ಸುತ್ತಲೂ ಪಸರಿಸಿರುತ್ತದೆ.

ಅಜಗಣ್ಣನೆಂಬ ಶಿವಶರಣನು ಪಂಚಾಕ್ಷರೀ ಮಂತ್ರವನ್ನು ಯಾವಾಗಲೂ ಸ್ಮರಿಸುತ್ತ ಲಿಂಗಧ್ಯಾನದಲ್ಲಿರುತ್ತಿದ್ದನು. ಇದರಿಂದ ಲಿಂಗವು ಅವನಿಗೆ ಪ್ರಾಣಸ್ವರೂಪವಾಯಿತು. ಆಗ ಅವನು ಅಂತರಂಗದಲ್ಲಿ ಅದಕ್ಕೆ ನಿರ್ಗುಣ ಅಷ್ಟವಿಧಾರ್ಚನೆಯನ್ನು ಮಾಡುತ್ತಾ ಇರುವನು. ಅವನ ಈ ಆಚರಣೆಯ ಮೂಲಕ ಅವನಿಗೆ ಮಂತ್ರವೂ ಲಿಂಗವೂ ಏಕ ರೂಪವಾದವು. ಹೀಗೆ ಅವನು ಆಚರಿಸುತ್ತ ಆಚರಿಸುತ್ತ ನಿರ್ವಾಣ ಸಮಾಧಿಯನ್ನು ಹೊಂದಿದನು.

ನಿಜಲಿಂಗ ಚಿಕ್ಕಯ್ಯನಿಗೆ ಪಂಚಾಕ್ಷರೀ ಮಂತ್ರ ಸ್ಮರಣೆಯೇ ಮುಖ್ಯ ಆಚರಣೆಯಾಗಿತ್ತು. ಅವನು ಕಲ್ಯಾಣ ಪಟ್ಟಣದ ಹೊರಗೆ ಕೆಲವೊಂದು ಏಕಾಂತ ಸ್ಥಳವನ್ನು ಆಯ್ದು ಅಲ್ಲಿಗೆ ಹೋಗಿ ಅಲ್ಲಿಯೇ ಅವನು ಮಂತ್ರವನ್ನು ಜಪಿಸುತ್ತ ಲಿಂಗಧ್ಯಾನದಲ್ಲಿ ಪರವಶನಾಗುವನು. ಹೀಗಿರಲು ಅವನ ಮೇಲೆ ಒಂದು ಅಪವಾದವು ಬರಲು, ಬಿಜ್ಜಳನು ಅವನ ತಲೆಯನ್ನು ಹೊಡೆದುಹಾಕಲು ಅಪ್ಪಣೆಯನ್ನು ಕೊಟ್ಟನು. ಚಾರರು ಅವನಲ್ಲಿಗೆ ಬಂದು ಅವನ ತಲೆಯನ್ನು ಹಾರಿಸಿದರು. ಆದರೆ ಅವನ ತಲೆಯು ಮೇಲಕ್ಕೆ ಹಾರಿಹೋದರೂ ಕೂಡ ಅದು ಪಂಚಾಕ್ಷರಿಯನ್ನೇ ಜಪಿಸುತ್ತಿತ್ತು ಮತ್ತು ಅವನ ಹಸ್ತವು ರುದ್ರಾಕ್ಷ ಮಾಲೆಯನ್ನು ತಿರುಹುತ್ತಲೇ ಇತ್ತು. ಮಂತ್ರಮೂಲಕ ಶಿವಾನುಭವಿಯು ತನ್ನ ಪ್ರಾಣವನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳಲು ಹೇಗೆ ಸಮರ್ಥನಾಗುತ್ತಾನೆಂಬುದಕ್ಕೆ ಇದು ಒಂದು ಉದಾಹರಣೆಯಾಗಿದೆ.

ಪಂಚಾಕ್ಷರಿಯನ್ನು ಜಪಿಸುವವನಲ್ಲಿ ಉಚ್ಚತರದ ನಡೆಯು ಯಾವಾಗಲೂ ಬೇಕು. ಅವನು ಅಹಂಭಾವವನ್ನು ಮುಸುಡಿಯ ಚೌಡಯ್ಯನಂತೆ ತ್ಯಜಿಸಬೇಕು. ಇದರಿಂದ ಅವನು ಉಚ್ಚರಿಸುವ ಪಂಚಾಕ್ಷರೀ ಮಂತ್ರದಲ್ಲಿ ಒಂದು ಅದ್ಭುತ ಶಕ್ತಿಯು ನೆಲೆಗೊಳ್ಳಹತ್ತುತ್ತದೆ. ಇದರಿಂದ ಅವನು ಮಂತ್ರಶರೀರಿಯಾಗುತ್ತಾನೆ.

ಸಗರದ ಬ್ರಹ್ಮಯ್ಯನು ಪಂಚಾಕ್ಷರೀ ಮಂತ್ರದ ಮರ್ಮವನ್ನು ಚೆನ್ನಾಗಿ ಬಲ್ಲವನು. ಆದ್ದರಿಂದ ಅವನು ಪಾದೋದಕ ಪ್ರಸಾದೋಪ ಜೀವಿಯಾಗಿದ್ದನು. ಇದರಿಂದ ಅವನು ಅಷ್ಟೋತ್ತರ ಶತವ್ಯಾಧಿಗಳನ್ನು ದೂರಮಾಡಲು ಸಮರ್ಥನಾಗಿದ್ದನು. ಅವನು ಪಂಚಾಕ್ಷರೀ ಮಂತ್ರ ಸ್ಮರಣೆಯಿಂದಲೇ ತನ್ನ ಬೇನೆಗಳನ್ನು ನಿವಾರಣೆ ಮಾಡಿಕೊಳ್ಳುತ್ತಿದ್ದ ನೆಂದು ಅವನ ಚರಿತ್ರೆಯಲ್ಲಿ ಹೇಳಿದೆ.

ಶಿವಶರಣರೆಲ್ಲರೂ ಈ ಪ್ರಕಾರ ಪಂಚಾಕ್ಷರೀ ಮಂತ್ರವನ್ನು ಬಲ್ಲ ವರಾಗಿ ಮಹಿಮರೆಂದೆನಿಸಿಕೊಂಡಿದ್ದಾರೆ.

## ಶಿವಯೋಗ.

ಅನೇಕರು ಯೋಗಾಭ್ಯಾಸದಿಂದ ಮನುಷ್ಯನಲ್ಲಿ ಪ್ರಬಲ ಸಾಮ ರ್ಥ್ಯವು ಉಂಟಾಗುತ್ತದೆಂದು ಭಾವಿಸಿರುತ್ತಾರೆ. ಇದು ನಿಜವಿರಬಹುದು. ಆದರೆ ಇದು ಲಿಂಗವಿರಹಿತವಾದುದು. ಇದರಿಂದ ಲಿಂಗಾಂಗಸಾಮ ರಸ್ಯ ಸ್ಥಿತಿಯು ಪ್ರಾಪ್ತವಾಗಲಾರದೆಂದು ಶರಣರ ಅಭಿಪ್ರಾಯವಿದೆ. ಆದರೆ ಶಿವಾನುಭವದ ಪ್ರಕಾರ ಇದೇ ಸಾಮರ್ಥ್ಯವನ್ನು ಭಕ್ತನು ತನ್ನ ಷಟ್‌ಸ್ಥಲಾಚರಣೆ ಮತ್ತು ಅಷ್ಟಾವರಣಗಳ ಮೂಲಕ ತನ್ನಲ್ಲಿ ಉಂಟು ಮಾಡಿಕೊಂಡು ಸಾಮರಸ್ಯ ಸ್ಥಿತಿಯನ್ನು ಹೊಂದಬಹುದು.

ಈ ವಿಷಯವಾಗಿ ಗಜೇಶ ಮಸಣಯ್ಯನ ಚರಿತ್ರೆಯನ್ನು ವಾಚ ಕರು ಅವಲೋಕಿಸಬೇಕು. ಅವನು ಶ್ರೇಷ್ಠತರದ ಶಿವಾನುಭವಿಯು. ವೀರಶೈವನು ಗುರೂಪದೇಶವನ್ನು ಮೊದಲು ಹೊಂದಿ ಇಷ್ಟಲಿಂಗವನ್ನು ಪಡೆಯತಕ್ಕದ್ದು. ಹಾಗೆಯೇ ಅವನು ಅದರ ನೆಲೆಕಲೆಗಳನ್ನು ಚನ್ನಾಗಿ ಅರಿತುಕೊಳ್ಳತಕ್ಕದ್ದು. ಈ ವಿಷಯವಾಗಿ ಭಾನುದೇವಯ್ಯನ ಚರಿತ್ರೆ ಯನ್ನು ವಾಚಕರು ಅವಲೋಕಿಸುವುದು. ಭಕ್ತನು ಹೀಗೆ ಆಚರಿ ಸುತ್ತ ಪಂಚಾಕ್ಷರೀ ಮಂತ್ರ ಜಪದ ಮೂಲಕ ಇಷ್ಟಲಿಂಗದಲ್ಲಿ ಧ್ಯಾನ ಮಗ್ನನಾಗಬೇಕು. ಆಗ ಅವನ ಪ್ರಾಣಲಿಂಗವು ಅರಳಹತ್ತುವದು. ಈ ಸ್ಥಿತಿಯಲ್ಲಿ ಅದು ಭಕ್ತನ ಹೃದಯಕಮಲಮಧ್ಯದಲ್ಲಿ ವಾಸಿಸಹತ್ತು ತ್ತದೆ. ಆಗ ಭಕ್ತನು ನಡೆವಲ್ಲಿ, ನುಡಿವಲ್ಲಿ, ಕಾಣುವಲ್ಲಿ, ಕೇಳುವಲ್ಲಿ, ಲಿಂಗ ಚೈತನ್ಯದಿಂದೊಡಗೂಡಿ ಕಾರ್ಯಗಳನ್ನು ಮಾಡಹತ್ತುತ್ತಾನೆ.

ಈ ಸ್ಥಿತಿಯುಂಟಾಗಲು ಅವನ ಭಾವಲಿಂಗವು ಪ್ರಜ್ವಲಿಸಹತ್ತುತ್ತದೆ. ಆಗ ಒಂದು ಅಸಾಧಾರಣ ಶಕ್ತಿಯು ಭಕ್ತನಲ್ಲಿ ಸಂಗ್ರಹವಾಗಹತ್ತುತ್ತದೆ. ಹೀಗೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಚೈತನ್ಯ ಹೊಂದಹತ್ತಲು ಅವುಗಳಿಗೆ ಸಂಬಂಧಿಸಿದ ಷಡ್ಲಿಂಗಗಳು ಅಂದರೆ ಇಷ್ಟಲಿಂಗಕ್ಕೆ ಸಂಬಂಧಿಸಿದ ಆಚಾರಲಿಂಗ ಗುರುಲಿಂಗಗಳು, ಪ್ರಾಣಲಿಂಗಕ್ಕೆ ಸಂಬಂಧಿಸಿದ ಶಿವಲಿಂಗ ಜಂಗಮಲಿಂಗಗಳು, ಭಾವಲಿಂಗಕ್ಕೆ ಸಂಬಂಧಿಸಿದ ಪ್ರಸಾದಲಿಂಗ ಮಹಾಲಿಂಗಗಳು, ಇವು ಕೂಡ ಅವನ ಅಂಗೋಪಾಂಗಗಳಲ್ಲಿ ಒಡಮೂಡಹತ್ತುತ್ತವೆ. ಇವೆಲ್ಲವುಗಳನ್ನು ಶಿವಯೋಗಿಯು ಗ್ರಹಿಸಿದ ಬಳಿಕ ಅವುಗಳಾಚೆ ಇರುವ ತ್ರಿವೇಣೀ ಸಂಗಮವನ್ನು ಅವನು ಪ್ರವೇಶಿಸುವನು. ಅಲ್ಲಿಂದ ಮುಂದೆ ಸಾಗಿ ಬ್ರಹ್ಮರಂಧ್ರದಲ್ಲಿರುವ ನಿಷ್ಕಳಲಿಂಗ, ಶಿಖಾಚಕ್ರದಲ್ಲಿರುವ ಶೂನ್ಯಲಿಂಗ, ಪಶ್ಚಿಮ ಚಕ್ರದಲ್ಲಿರುವ ನಿಶ್ಶೂನ್ಯಲಿಂಗ ಹೀಗೆ ಈ ಮೂರು ಲಿಂಗಗಳು, ಮತ್ತು ಮೊದಲಿನ ಆರುಲಿಂಗಗಳು, ಹೀಗೆ ಒಟ್ಟು ನವಲಿಂಗಗಳನ್ನು ಸಾಧಿಸಿ ಶಿವಯೋಗಿಯು ಬಯಲಲ್ಲಿ ಅಥವಾ ನಿರವಯದಲ್ಲಿ ಬೆರೆಯುವನು. ಈ ರೀತಿಯನರಿತು ವರ್ತಿಸುವದೇ ಶಿವಯೋಗವೆಂದೆನಿಸಿಕೊಳ್ಳುತ್ತದೆ.

ಹೀಗೆ ಯಾವನು ಆಚರಿಸುತ್ತಾನೋ ಅವನಲ್ಲಿ ಕ್ರಮೇಣ ವಿಶ್ವಶಕ್ತಿಯು ತಲೆದೋರಹತ್ತುತ್ತದೆ. ಹೀಗೆ ಷಡ್ಲಿಂಗಗಳನ್ನೂ ಅಷ್ಟಾವರಣಗಳನ್ನೂ ಸಾಧಿಸಿ ಶಿವಯೋಗಿಗಳೆಂದೆನಿಸಿಕೊಂಡ ಅನೇಕ ಶಿವಶರಣರು ಹಿಂದಿನ ಕಾಲದಲ್ಲಿ ಆಗಿಹೋಗಿದ್ದಾರೆ.

**ಶಿವಶರಣರು ಮರಣರಹಿತರು. ಅವರು ಸಾವಿಗೆ ಅಂಜುವದಿಲ್ಲ.**

ಶಿವಯೋಗಿಯು ಮರಣ ಹೊಂದಿದ ಬಳಿಕ ತಾನು ಕೈಲಾಸ ಅಥವಾ ಸ್ವರ್ಗ ಅಥವಾ ಇಂಥ ಕೆಲವೊಂದು ಉತ್ತಮ ಲೋಕಕ್ಕೆ ಹೋಗಲು ಎಂದೂ ಬಯಸುವದಿಲ್ಲ. ಅವನು ಇಹಲೋಕದಲ್ಲಿಯೇ ಅಂಥ ಶ್ರೇಷ್ಠ ಲೋಕಗಳಿವೆ ಎಂದು ಭಾವಿಸುತ್ತಾನೆ. ಇಲ್ಲಿಯೇ ಶಿವಯೋಗಾಚರಣೆಯಲ್ಲಿದ್ದುಕೊಂಡು ತನಗುಚಿತವಾದ ಸಮಾಧಿಯನ್ನು ಹೊಂದಲು ಅಪೇಕ್ಷಿಸುತ್ತಾನೆ. ಶಿವನು ಅವನಿಗೆ ಪ್ರತ್ಯಕ್ಷನಾಗಿ ಕೈಲಾಸಕ್ಕೆ ಬರಲು ಹೇಳಿದರೂ ಕೂಡ ಅವನು ಅದಕ್ಕೆ ಒಪ್ಪದೆ ಜಗತ್ತಿನಲ್ಲಿ ಶಿವಯೋಗಾಚ

ರಣೆಯಲ್ಲಿರುತ್ತ ಇಲ್ಲಿಯೇ ಸಮಾಧಿಯನ್ನು ಹೊಂದುವದೇ ಹೆಚ್ಚಿನ ದೆಂದು ಹೇಳಿ ಕೈಲಾಸಕ್ಕೆ ಶಿವನೊಡನೆ ಹೋಗದೆ ಇದ್ದ ಅನೇಕ ಶಿವಶರಣರ ಚರಿತ್ರೆಗಳು ಈ ಗ್ರಂಥದಲ್ಲಿ ಬಂದಿವೆ. ವೀರಶೈವರಲ್ಲಿ ಎಂಟು ವಿಧ ಸಮಾಧಿಗಳಿವೆ. ಅವುಗಳಲ್ಲಿ ಯಾವ ಸಮಾಧಿಗೆ ತಮ್ಮ ಆಚರಣೆಯ ಮೂಲಕ ಅರ್ಹರೋ ಅಲ್ಲಿರಲು ಶಿವಶರಣರು ಯಾವಾಗಲೂ ಆನಂದ ಪಡುತ್ತಾರೆ.

ವೀರಶೈವರಲ್ಲಿ ಈ ತಿಳಿವಳಿಕೆ ಇರುವ ಮೂಲಕ ಮೃತಶರೀರ ವನ್ನು ಸುಡುವ ಪದ್ಧತಿಯು ಅವರಲ್ಲಿಲ್ಲ. ಅವರು ಸಮಾಧಿಗಳನ್ನು ಮಾಡಿ ಅವುಗಳ ಮೇಲೆ ಲಿಂಗವನ್ನು ಸ್ಥಾಪಿಸುವದುಂಟು. ಆದ್ದರಿಂದ ಅವರ ಸಮಾಧಿಸ್ಥಳಗಳು ಪವಿತ್ರ ಭೂಮಿಗಳು.

ಇದರಿಂದ ಶಿವಾನುಭವಿಗಳು ತೀರಿಕೊಂಡರೆ ಯಾರೂ ದುಃಖಿಸ ತಕ್ಕದ್ದಲ್ಲ. ಅವರು ಶ್ರೇಷ್ಠ ಸ್ಥಿತಿಗೆ ಹೋದರೆಂದು ಆನಂದಿಸತಕ್ಕದ್ದು. ಇದು ಶಿವಶರಣರ ನಡೆಯಾಗಿದೆ. ಈ ವಿಷಯವಾಗಿ ಕೆಳಗೆ ಕಾಣಿ ಸಿದ ಚರಿತ್ರೆಗಳನ್ನು ವಾಚಕರು ಅವಲೋಕಿಸತಕ್ಕದ್ದು.

ನನ್ನಯ್ಯನ ಚರಿತ್ರೆಯಲ್ಲಿ ಸುಜ್ಞಾನಿದೇವನೆಂಬ ಗುರುವಿನ ಉಲ್ಲೇಖ ವಿದೆ. ಈತನು ಕೆಡಕು ಜನರನ್ನು ಸನ್ಮಾರ್ಗಕ್ಕೆ ತಂದು ಅವರಿಗೆ ಲಿಂಗ ಧಾರಣೆಯನ್ನು ಮಾಡುವದೇ ಅವನ ಕಾಯಕವಾಗಿತ್ತು. ಅವನು ಒಂದು ದಿವಸ ಕಲ್ಯಾಣಕ್ಕೆ ಹೋಗುವಾಗ್ಗೆ ದಾರಿಯಲ್ಲಿ ಒಬ್ಬ ಪುಂಡ ಬೇಡನು ಪ್ರಯಾಣಿಕರನ್ನು ಅಡ್ಡಗಟ್ಟಿ ಅವರಲ್ಲಿ ಕೆಲವರನ್ನು ಕೊಂದು ಹಾಕಿ, ಉಳಿದವರನ್ನು ಗಾಯಗೊಳಿಸಿದ್ದನು. ಇಂಥವರಲ್ಲಿ ಕೆಲವರು ಮಾರ್ಗದಲ್ಲಿ ತಿರುಗಿ ಬರುತ್ತ ಇರುವಲ್ಲಿ ಇದಿರಿಗೆ ಸುಜ್ಞಾನಿದೇವನನ್ನೂ ಅವನ ಪರಿಚಾರಕರನ್ನೂ ಅವರು ಕಂಡು ಅವರಿಗೆ ಈ ದಾರಿಯಿಂದ ನೀವು ಮುಂದೆ ಹೋಗಬೇಡಿರಿ, ಮುಂದೆ ಒಬ್ಬ ಪುಂಡ ಬೇಡನು ಸುಲಿಯಲಿಕ್ಕೆ ನಿಂತಿದ್ದಾನೆ, ಅವನಿಂದ ನಾವು ಸುಲಿಸಿಕೊಂಡು ನಮಗಾದ ಹಾಡನ್ನು ನೋಡಿರಿ ಎಂದು ಹೇಳಲು, ಸುಜ್ಞಾನಿದೇವನ ಪರಿವಾರದವರು ಅಂಜಿ ಅವ ನನ್ನು ಬಿಟ್ಟು ತಿರುಗಿ ಹೋದರು. ಆದರೆ ಸುಜ್ಞಾನಿದೇವನು ಅವರಂತೆ ಓಡಿ ಹೋಗಲಿಲ್ಲ, ತನ್ನ ಜೀವಕ್ಕೆ ಅಂಜಲಿಲ್ಲ. ಅವನು ತನ್ನ ಹಸಿಬೆಯನ್ನು ತಾನೇ ಹೊತ್ತುಕೊಂಡು ದಾರಿಯನ್ನು ನಡಿಯುತ್ತ ಬೇಡನಿದ್ದಲ್ಲಿಗೆಯೇ

ಬಂದು ಅವನಿದಿರಿಗೆ ನಿಂತನು. ಆಗ ಅವನು ಆ ಬೇಡನಿಗೆ ಅನೇಕ ರೀತಿಯಿಂದ ಬೋಧಿಸಿ, ಪುಣ್ಯಪಾಪವೆಂದರೇನು, ಸನ್ಮಾರ್ಗವಾವುದು, ಎಂಬುದನ್ನು ತಿಳಿಸಿ ಹೇಳಲು ಆ ಕ್ರೂರ ಬೇಡನು ತನ್ನ ಹಿಂಸಾಕರ್ಮವನ್ನು ಬಿಟ್ಟು ಅವನಿಂದ ಲಿಂಗಧಾರಣೆಯನ್ನು ಹೊಂದಿದನು. ಈ ಕಾಲದಲ್ಲಿ ಸುಜ್ಞಾನಿದೇವನು ಬೇಡನು ತನ್ನನ್ನು ಕೊಲೆಬಡಿಸುವನೆಂದು ಎಷ್ಟು ಮಾತ್ರವೂ ಅಂಜಲಿಲ್ಲ. ಅವನು ಮರಣಕ್ಕೆ ಅಂಜದೆ ಗುರುವಿನ ತನ್ನ ಕರ್ತವ್ಯವನ್ನು ಮಾಡಿದನು.

ರಾಜಪದವಿಯಲ್ಲಿದ್ದ ಕೋವೂರು ಬ್ರಹ್ಮಯ್ಯನ ಹೆಂಡತಿಯು ಕಳಾವತಿಯು. ಅವಳ ಗಂಡನು ಆರು ತಿಂಗಳುಗಳ ವರೆಗೆ ನಾನು ಶಿವಧ್ಯಾನದಲ್ಲಿ ಇರುವೆನು, ಈ ಅವಧಿಯಲ್ಲಿ ಯಾರೂ ನನ್ನನ್ನು ಕಾಣಬಾರದು, ಎಂದು ಕಟ್ಟಪ್ಪಣೆಯನ್ನಿತ್ತು, ರಾಜ್ಯಭಾರದ ಸಂಗತಿಗಳನ್ನೆಲ್ಲ ತನ್ನ ಹೆಂಡತಿಗೂ ಮಂತ್ರಿಗಳಿಗೂ ತಿಳಿಸಿ ಹೇಳಿ ತಾನ ಹೊರಟು ಹೋದನು. ಆಗ ಪರವಾದಿಗಳು ಈ ಸಂಧಿಯನ್ನು ಸಾಧಿಸಿ ಕಳಾವತಿಯ ಮಗನನ್ನು ಕಪಟತನದಿಂದ ಕೊಂದು ಹಾಕಿದರು. ಆದರೆ ಕಳಾವತಿಯು ತನ್ನ ಮಗನು ಮಡಿದನೆಂದು ದುಃಖಿಸಲಿಲ್ಲ. ತನ್ನ ಗಂಡನಿಗೆ ಹೇಳಿ ಸಹ ಕಳಿಸಲಿಲ್ಲ. ಅವಳು ತನ್ನ ಗಂಡನು ತಿರುಗಿ ಬರುವವರೆಗೂ ರಾಜ್ಯಭಾರವನ್ನು ನಡಿಸುತ್ತ ಬಂದಳು. ಇದು ಕಾಯಕವನ್ನು ಮಾಡುವ ಶಿವಾನುಭವಿಗಳ ಉಚ್ಚ ವರ್ತನೆಯಾಗಿದೆ.

ಅಣ್ಣಾಲದೇವಿ ಎಂಬ ಶಿವಶರಣೆಯು ಬೆರಣಿ (ಕುಳ್ಳು) ಯನ್ನು ಆಯುವವಳು. ಅವಳು ತನ್ನ ಚಿಕ್ಕ ಮಗನನ್ನು ಕರೆದುಕೊಂಡು ಅಡವಿಗೆ ಹೋಗಿದ್ದಳು. ಅಲ್ಲಿ ಆ ಮಗನಿಗೆ ಹಾವು ಕಚ್ಚಲು ವಿಷವೇರಿ ಆತನು ತೀರಿಕೊಂಡನು. ಈ ಸ್ಥಿತಿಯಲ್ಲಿ ಬೇರೆ ತಾಯಿಗಳಾಗಿದ್ದರೆ ಅವರು ತಾವು ಕೂಡಿಸಿಟ್ಟ ಬೆರಣಿಗಳನ್ನು ಅಲ್ಲಿಯೇ ಚೆಲ್ಲಿಕೊಟ್ಟು ರೋದಿಸುತ್ತ ಮನೆಗೆ ಬರುತ್ತಿದ್ದರು. ಆದರೆ ಆ ಸಾಧ್ವಿಯು ಹೀಗೆ ಅಳುತ್ತ ಕುಳ್ಳಿರದೆ ಕಾಯಕದಿಂದ ಕೂಡಿಸಿದ ಬೆರಣಿಗಳನ್ನು ತನ್ನ ತಲೆಯಮೇಲೆ ಇಟ್ಟುಕೊಂಡು, ಸತ್ತ ಮಗನನ್ನು ಬೇರೊಂದು ಕೈಯಲ್ಲಿ ಎತ್ತಿಕೊಂಡು, ಮನೆಗೆ ಬಂದಳು. ಈ ಕಾಲದಲ್ಲಿ ಅವಳಾಗಲಿ ಅವಳ ಗಂಡನಾಗಲಿ ಎಷ್ಟು ಮಾತ್ರವೂ ದುಃಖಿಸಲಿಲ್ಲ. ಉಭಯತರು ಮಗನಿಗೆ ಶಿವನ ನಿರೋಪ

ಪಾಯಿತೆಂದು ಸಂತೋಷಿಸಿದರು ಮತ್ತು ಅವನಿಗೆ ಸಮಾಧಿಯನ್ನು ಮಾಡಿದರು. ಇದು ಶಿವಶರಣರ ಶ್ರೇಷ್ಠ ನಡೆಯಾಗಿದೆ.

ಮುಕ್ತಾಯಕ್ಕನು ಅಜಗಣ್ಣನ ತಂಗಿಯು. ಅಜಗಣ್ಣನು ಮರಣ ಹೊಂದಲು, ಅವಳು ಅತ್ಯಂತ ದುಃಖದಿಂದ ಶೋಕಮಾಡಹತ್ತಿದಳು. ಆ ಸಮಯದಲ್ಲಿ ಅಲ್ಲಮ ಪ್ರಭುವು ಅಕಸ್ಮಾತ್ತಾಗಿ ಅಲ್ಲಿಗೆ ಬರಲು ಅವನು ಅವಳನ್ನು ಕಂಡು— ಶಿವಶರಣರಿಗೆ ಮರಣವಾಗಲು ದುಃಖಿಸಬಾರದು. ಅವರ ಸಲುವಾಗಿ ಲೌಕಿಕರಂತೆ ಯಾರೂ ಶೋಕಿಸಬಾರದು. ಅಜಗಣ್ಣನು ಇಹದಲ್ಲಿರುವಾಗ್ಗೆ ಅಂಗಸಂಬಂಧಿಯಾಗಿ ಆಚರಿಸಲಿಲ್ಲ. ಅವನು ಲಿಂಗಸಂಬಂಧಿಯಾಗಿ ಆಚರಿಸುತ್ತ ಲಿಂಗದಲ್ಲಿ ಬೆರೆತು ಹೋಗಿದ್ದಾನೆ. ಅವನಿಗೆ ಮರಣವಿಲ್ಲ. ಹೀಗೆ ಅವನು ಹೇಳಿ ಅವಳನ್ನು ಸಂತವಿಸಿದನು.

ಶಿವಶರಣರ ಈ ನಡೆಗಳು ಸಾಮಾನ್ಯವಾದವುಗಳಲ್ಲ. ವಾಚಕರು ಈ ಚರಿತ್ರೆಗಳನ್ನು ತಾವೇ ನೋಡಿಕೊಂಡು ನಾವು ಮೇಲೆ ವಿವರಿಸಿದ ವಿಷಯಗಳನ್ನು ಮನನ ಮಾಡಿಕೊಳ್ಳಬೇಕೆಂದು ಅವರಿಗೆ ನಮ್ಮ ನಮ್ರ ಸೂಚನೆ ಇದೆ.

## ಶಿವಶರಣರ ಸ್ಥಾನಗಳು.

ವೀರಶೈವೇತಿಹಾಸದ ದೃಷ್ಟಿಯಿಂದ ಈ ಶಿವಶರಣರು ಎಲ್ಲಿಯವರೆಂಬುದನ್ನು ಗೊತ್ತುಹಚ್ಚುವದು ಅತ್ಯಂತ ಮಹತ್ವವಾದದ್ದು. ಇದರಿಂದ ಶಿವಶರಣರು ನಡಿಸಿದ ಚಳವಳಿಯು ಯಾವ ಭಾಗದಲ್ಲಿ ಮೊದಲು ಪ್ರಾರಂಭವಾಯಿತು, ಅದು ಯಾವ ಯಾವ ಭಾಗಗಳಲ್ಲಿ ಮುಂದೆ ಹಬ್ಬುತ್ತ ಹೋಯಿತು, ಈ ಚಳವಳಿಯನ್ನು ಯಾವ ಭಾಗದ ಜನರು ಪುರಸ್ಕರಿಸಿದರು, ಇವೇ ಮೊದಲಾದ ವಿಷಯಗಳನ್ನು ತಿಳಿಯಲು ಬಹಳ ಸಹಾಯವಾಗುತ್ತದೆ. ಇದರಲ್ಲಿ ನಾವು ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ಭಾಗ ೨ ಈ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಚರಿತ್ರೆಗಳನ್ನು ತೆಗೆದುಕೊಂಡಿದ್ದೇವೆ. ಮುಂದಿನ ಗ್ರಂಥಗಳಲ್ಲಿ ಬರಬಹುದಾದವುಗಳನ್ನು ನಾವು ಇಲ್ಲಿ ಉಲ್ಲೇಖಿಸುವದಿಲ್ಲ. ಆದರೂ ಸ್ಥಾನಗಳು ನಮಗೆ ಗೊತ್ತಾಗದೆ ಇದ್ದಂಥ ಶಿವಶರಣರ ಹೆಸರುಗಳು ಇನ್ನೂ ಅನೇಕ ಇರುತ್ತವೆ. ಅವುಗಳನ್ನು ನಾವು ಇಲ್ಲಿ ಅನಿವಾರ್ಯವಾಗಿ ಬಿಟ್ಟು

ಬಿಡಬೇಕಾಗಿರುತ್ತದೆ. ಆದರೂ ನಾವು ಕಂಡುಹಿಡಿದ ಸ್ಥಾನಗಳ ಹೆಸರುಗಳು ಸಾಕಷ್ಟು ಇದ್ದು ಅವುಗಳನ್ನು ವಾಚಕರು ನಿರೀಕ್ಷಿಸಿದಲ್ಲಿ ಮೇಲೆ ಹೇಳಿದ ಮಹತ್ವದ ವಿಷಯಗಳ ಬಗ್ಗೆ ಕೆಲವು ಅನುಮಾನಗಳನ್ನು ನಾವು ಕಂಡುಕೊಳ್ಳಬಹುದಾಗಿದೆ. ಶಿವಶರಣರಿದ್ದ ಸ್ಥಾನಗಳು ಯಾವವೆಂದರೆ—

**(೧) ಸೊಲ್ಲಾಪುರ ಜಿಲ್ಲೆ**:-(೧) ಸೊಲ್ಲಾಪುರದ ಶಿವಮುಗದೇವ.

**(೨) ವಿಜಾಪುರ ಜಿಲ್ಲೆ**:-(೧) ಹಾವಿನಹಾಳ ಕಲ್ಲಯ್ಯ. (೨) ನಾವದಗಿಯ ಗುಡ್ಡವ್ವೆ (೩) ಗುಡ್ಡಾಪುರದ ಪರದಾನಿ ಗುಡ್ಡವ್ವೆ (೪) ಓರೂರಿನ ತಿಲಕವ್ವೆ. (೫) ಗೋಲಗೇರಿಯ ಗೊಲ್ಲಾಳ. (೬) ಕರಜಗಿಯ ಗಜೇಶ ಮಸಣಯ್ಯ. (೭) ಶಿವಣಗಿಯ ನುಲಿಯ ಚಂದಯ್ಯ. (೮) ಕೋಹಳ್ಳಿಯ ಕೋಹೂರು ಬ್ರಹ್ಮಯ್ಯ. (೯) ಮಸಳಿಯ ಅಜಗಣ್ಣ ಮತ್ತು (೧೦) ಮುಕ್ತಾಯಕ್ಕಗಳು. (೧೧) ತಾಳಿಕೋಟೆಯ ಶಿವದೇವ. (೧೨) ಇಲ್ಯಾಳದ ಇಳಿಹಾಳ ಬೊಮ್ಮಯ್ಯ. (೧೩) ಮಸೂತಿಯ ಮಸಣಿಯ ಚೌಡಯ್ಯ. (೧೪) ಪಟ್ಟದಕಲ್ಲಿನ ಅನುಮಿಷ. (೧೫) ಬಾಹೂರಿನ ಬಾಹೂರು ಬ್ರಹ್ಮಯ್ಯ. (೧೬) ಚಿಮ್ಮಲಗಿಯ ಚಂದಿಮರಸ (೧೭) ನಿಜಗುಣ (೧೮) ಎಡೆಮಠದ ನಾಗಿದೇವ ಮತ್ತು (೧೯) ಮಸಣಮ್ಮಗಳು. (೨೦) ನಹೊಕೆಯ ಮಲ್ಲರಸ. (೨೧) ನಿಂಬಾಳದ ನಿಂಬಾಣಗಣೇಶ್ವರ. (೨೨) ಇಂಡಿಯ ಶಾಂತಯ್ಯ. (೨೩) ಪಟ್ಟದಕಲ್ಲಿನ ಗೋರಕ್ಷ. (೨೪) ಮಸಳಿಯ ಕದಿರಿರೆಮ್ಮವ್ವೆ ಇವರು ಇದ್ದಾರೆ. ಇವರಲ್ಲಿ ಗೋರಕ್ಷ, ಶಿವಯೋಗಿ ಮಲ್ಲರಸ, ಅನುಮಿಷ ಮತ್ತು ಇಳಿಹಾಳಿ ಬೊಮ್ಮಯ್ಯ ಇವರು ವಿಜಾಪುರ ಜಿಲ್ಲೆಯ ದಕ್ಷಿಣಭಾಗ ಅಂದರೆ ಕೃಷ್ಣಾನದಿಯ ಕೆಳಗಿನ ಪ್ರದೇಶದವರು. ಉಳಿದವರೆಲ್ಲ ಕೃಷ್ಣಾ ಭೀಮಾ ನದಿಗಳ ಮಧ್ಯ ಪ್ರದೇಶದವರು. ತರ್ದವಾಡಿ ಎಂದು ಈ ಪ್ರಾಂತದ ಪುರಾತನ ಹೆಸರಿದೆ. ಮಂಗಳವಾಡವು ಈ ಪ್ರಾಂತದ ಮುಖ್ಯ ಪಟ್ಟಣವು.

**(೩) ಕಲಬುರ್ಗಿ ಜಿಲ್ಲೆಯ ಪಶ್ಚಿಮ ಭಾಗ**:— ಇದರಲ್ಲಿ ವಿಜಾಪುರ ಜಿಲ್ಲೆಯ ಪೂರ್ವ ಮೇರೆಯಿಂದ ೨೦-೩೦ ಮೈಲುಗಳ ಅಂತರದ ಮೇಲಿನ ಪ್ರದೇಶವನ್ನು ತೆಗೆದುಕೊಂಡಿರುತ್ತೇವೆ. ಇಲ್ಲಿ ಪ್ರಸಿದ್ಧಿಗೆ ಬಂದಂಥ ಶಿವಶರಣರು ಯಾರೆಂದರೆ— (೧) ಕೊಂಡಗುಳಿಯ ಕೇಶಿರಾಜ (೨)

ಕೋಳೂರಿನ ಕೊಡಗೂಸು (೩) ಅಗ್ನಿಯು ಅಗ್ಗವಣಿಯ ಹೊನ್ನಯ್ಯ ಮತ್ತು (೪) ಓಲೆಯ ಶಾಂತಯ್ಯಗಳು (೫) ಗೊಬ್ಬೂರಿನ ಬಿಬ್ಬಿ ಬಾಚಯ್ಯ (೬) ಸಗರದ ಬ್ರಹ್ಮಯ್ಯ (೭) ಕೆಂಭಾವಿಯ ಭೋಗಣ್ಣ (೮) ಅಮರೇಶ್ವರದ ಆಯುವಕ್ಕಿ ಮಾರಯ್ಯ ಮತ್ತು (೯) ಲಕ್ಕಮ್ಮಗಳು. ಮುದನೂರು ಈ ಪ್ರಾಂತದ ಮಹತ್ವದ ಪಟ್ಟಣವು.

**(೪) ಕಲಬುರ್ಗಿ ಜಿಲ್ಲೆಯ ಪೂರ್ವಭಾಗ:**—(೧) ಏಲೇರಿಯ ಏಲೇಶ ಕೇತಯ್ಯ ಮತ್ತು (೨) ರೆವಣ್ಣಪ್ಪಗಳು (೩) ಬೀದರದ ವೀರಸಂಗಯ್ಯ.

**(೫) ಮಹಾರಾಷ್ಟ್ರ ದೇಶ:**—(೧) ಕಂಧಾರದ ಉರಿಲಿಂಗದೇವ (೨) ಉರಿಲಿಂಗ ಪೆದ್ದಿಗಳು ಮತ್ತು (೩) ಕಾಳವ್ವೆಗಳು (೪) ಕೋಲಂಬೆಯಲ್ಲಿಯ ಕೋಲಂಬೆ (೫) ಭಾಲ್ಕಿಯ ಕುಂಬಾರ ಗುಂಡಯ್ಯ (೬) ಪರಳಿಯ ವೈಜವ್ವೆ.

**(೬) ಮೈಸೂರು ಪ್ರಾಂತ:**—(೧) ಹಿರೇ ಜಂಬೂರಿನ ಮಹಾಕಾಳಯ್ಯ ಮತ್ತು (೨) ಸತ್ಯಕ್ಕಗಳು (೩) ಬಿಜ್ಜಾವರದ ಅಮ್ಮವ್ವೆ. ಬಳ್ಳಿಗಾವಿಯು ಈ ಪ್ರಾಂತದ ಮಹತ್ವದ ಪಟ್ಟಣವು.

**(೭) ತೆಲುಗು ಸೀಮೆ:** — (೧) ಭೀಮಾವತಿಯ ಮೈದುನರಾಮಯ್ಯ (೨) ಕದಿರಿಯ ಕದಿರರೆಮ್ಮಯ್ಯ ಮತ್ತು (೬) ಅಣ್ಣಾಲದೇವಿಗಳು (೪) ಬೆಜವಾಡದ ಶ್ರೀಪತಿ ಪಂಡಿತ (೫) ಪಾಲ್ಕುರಿಕೆಯ ವೇಮನಾರಾಧ್ಯ (೬) ತಂಗಟೂರಿನ ಮಾರಯ್ಯ (೭) ಕೋಟಗಿರಿಯ ಬಹುರೂಪಿ (೧) ಚೌಡಯ್ಯ (೮) ಲಿಂಗಂಪಲ್ಲಿಯ (ಜಿ- ಮೆಡಕ) ತೆಲುಗೇಶ ಮಸಣಯ್ಯ (೯) ಕಲ್ಲುಕುರಿಕೆಯ ಸಕಳೇಶ ಮಾದರಸ.

---

(೧) ಇವನ ಚರಿತ್ರೆಯಲ್ಲಿ ನಾವು ನೀಲಗಿರಿಯ ಜಿಲ್ಲೆಯಲ್ಲಿರುವ ಕೋಟಗಿರಿ ಎಂದು ಕಾಣಿಸಿದ್ದೇವೆ. ಆದರೆ ನಿಜಾಮ ಸಂಸ್ಥಾನದಲ್ಲಿಯ ನಿಜಾಮಾಬಾದ ಜಿಲ್ಲೆಯಲ್ಲಿ ಕೋಟಗಿರಿ ಎಂಬ ಗ್ರಾಮವಿದೆ. ಇದು ಕಲ್ಯಾಣಕ್ಕೆ ಬಹಳ ದೂರ ಇಲ್ಲ. ಇದೇ ಚೌಡಯ್ಯನ ಗ್ರಾಮವಾಗಿರಬಹುದು.

(೮) ತಮಿಳು ದೇಶ:--- ೧) ಕಂಚಿಯ ಮಾದಾರ ಚನ್ನಯ್ಯ ಮತ್ತು (೨) ಪಿಟ್ಟವ್ವೆಗಳು (೩) ತಿರುವಾರೂರಿನ ಮೊರೆಮಿಂಡದೇವ (೪) ಪೊರಾಂಡಲದ ಸೂರಂಬೆ (೫) ಚಂದಪೂರಿನ ಶಿವಪ್ರಿಯನಾಚಿ.

(೯) ಬಳ್ಳಾರಿ:—(೧) ಬಳ್ಳಾರಿಯ ಬಳ್ಳೇಶ ಮಲ್ಲಯ್ಯ.

(೧೦) ಮಲಯಾಳ:—(೧ ಅವಲೂರಿನ ಗೊಗ್ಗವ್ವೆ (೨) ಕೊಳು ಕೊಟ್ಟಿಯ ಭದ್ರಗಾಯಕ (೩) ಕುಡಗಲೂರಿನ ಚಾರಮರಾಯ.

(೧೧) ಓಡಿಸಾ:---(೧) ಕರ್ಣಿಕಾಪುರದ ಸುಜ್ಞಾನಿದೇವ ಮತ್ತು (೨ ನನ್ನಯ್ಯ.

(೧೨) ಬನಾರಸ:---(೧) ಕಾಶಿಯ ಶಿವಲೆಂಕ ಮಂಚಣ್ಣ.

(೧೩) ಗುಜರಾಥ ದೇಶ:---(೧) ಶಿವಪುರದ ಆದಯ್ಯ (೨) ಸೊಡ್ಡಳ ಬಾಚರಸ.

(೧೪) ಧಾರವಾಡ ಜಿಲ್ಲೆ:— ಲಕ್ಷ್ಮೇಶ್ವರದ ಆದಯ್ಯ ಮತ್ತು (೨) ಪುಲಿಗೆರಿಯ ಸೋಮಯ್ಯ (೩) ಅಬ್ಬಲೂರಿನ ಏಕಾಂತದ ರಾಮಯ್ಯ.

(೧೫) ಕಾಶ್ಮೀರ ದೇಶ:—(೧) ಮಾಂಡವ್ಯ ಪುರದ ಬೊಂತಾ ದೇವಿ (೨) ಮೋಳಿಗಯ ಮಾರಯ್ಯ ಅಥವಾ ಮಹಾದೇವರಾಜ (೩) ಮಹಾದೇವಿಯಮ್ಮ ಮತ್ತು (೪) ನಿಜಲಿಂಗ ಚಿಕ್ಕಯ್ಯಗಳು.

(೧೬) ಕಲ್ಯಾಣ:---ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣರು ಕಲ್ಯಾಣ ಪಟ್ಟಣದಲ್ಲಿ ವಾಸಮಾಡಿದ್ದಾರೆ. ಆದರೆ ಅವರೆಲ್ಲರೂ ಬಹುತರವಾಗಿ ಹೊರಗಿನವರಾಗಿರುವದರಿಂದ ಅವರ ಹೆಸರುಗಳನ್ನು ನಾವು ಇಲ್ಲಿ ಕಾಣಿಸಿಲ್ಲ.

ಯಾವ ಯಾವ ಭಾಗಗಳಿಂದ ಯಾವ ಶರಣರು ಪ್ರಸಿದ್ಧಿಗೆ ಬಂದಿದ್ದಾರೆಂಬುದನ್ನು ಮೇಲಿನ ಪಟ್ಟಿಯಿಂದ ವಾಚಕರು ಅರಿತುಕೊಳ್ಳಬಹುದು. ಇದರ ಮೇಲಿಂದ ನಂ॥ ೧, ೨, ೩ ಈ ಪ್ರದೇಶಗಳಲ್ಲಿದ್ದ

ಭೂ ಪ್ರದೇಶ ಎಂದರೆ ಭೀಮಾ, ಕೃಷ್ಣಾದಿಗಳ ಮಧ್ಯದಲ್ಲಿದ್ದ ನಾಡೇ ವೀರಶೈವ ಚಳವಳಿಯ ಮುಖ್ಯ ಕೇಂದ್ರವಾಗಿತ್ತೆಂಬುದು ಕೂಡಲೆ ಗೊತ್ತಾಗುವಂತೆ ಇದೆ. ಈ ಭಾಗದಲ್ಲಿ ಅಥವಾ ಈ ಭಾಗಕ್ಕೆ ತೀರ ಸಮೀಪವಿರುವ ಪ್ರದೇಶಗಳಲ್ಲಿಯೇ ರೇವಣಸಿದ್ಧೇಶ್ವರ, ರುದ್ರಮುನಿ, ಬಸವೇಶ್ವರ, ಸಿದ್ಧರಾಮ, ಮಡಿವಾಳ ಮಾಚಿದೇವ, ದೇವರ ದಾಸಿಮಯ್ಯ ಮೊದಲಾದ ಪ್ರಸಿದ್ಧ ಶಿವಶರಣರು ಉತ್ಪನ್ನರಾಗಿದ್ದಾರೆ. ಇವರ ಚರಿತ್ರೆಗಳನ್ನು ನಾವು ಮುಂದಿನ ಭಾಗಗಳಲ್ಲಿ ಕ್ರಮೇಣ ಪ್ರಕಟಿಸುವೆವು ಇಲ್ಲಿ ಉಗಮ ಹೊಂದಿದ ಈ ಚಳವಳಿಯು ಇಡೀ ಹಿಂದುಸ್ಥಾನವನ್ನು ವ್ಯಾಪಿಸಿತ್ತೆಂಬುದು ನಾವು ಮೇಲೆ ಉಲ್ಲೇಖಿಸಿದ ಶಿವಶರಣರ ಸ್ಥಾನಗಳ ಮೇಲಿಂದ ವಾಚಕರಿಗೆ ತಿಳಿಯದೆ ಇರಲಾರದು. ಕರ್ನಾಟಕದ ಈ ಭಾಗದ ತರುವಾಯ ವೀರಶೈವ ಚಳವಳಿಯು ದೃಢವಾಗಿ ನೆಲೆಗೊಂಡ ಪ್ರದೇಶವೆಂದರೆ ಆಂಧ್ರದೇಶವು. ಇಲ್ಲಿ ಅನೇಕ ವಿದ್ವಾಂಸರೂ ಶಿವಶರಣರೂ ಆಗಿ ಹೋಗಿದ್ದಾರೆ. ಇದು ಕರ್ನಾಟಕ ದೇಶದಲ್ಲಿ ಆಗಿ ಹೋದ ಚಳವಳಿಯ ಪರಿಣಾಮವಿರುತ್ತದೆ. ಈ ಆಂಧ್ರ ಮತ್ತು ಕರ್ನಾಟಕ ದೇಶಗಳಲ್ಲಿ ಆಗಿ ಹೋದ ಶಿವಶರಣರು ಮುಂದೆ ತಮಿಳು ದೇಶದಲ್ಲಿ ಹೋಗಿ ಅಲ್ಲಿಯ ಮುಖ್ಯ ಪಟ್ಟಣಗಳಲ್ಲಿ ವಾಸಮಾಡಿ ಅಲ್ಲಿ ತಮ್ಮ ತತ್ವಗಳನ್ನು ಪ್ರಸಾರ ಮಾಡಿದ್ದಾರೆ. ಈ ತಮಿಳರೂ ಕರ್ನಾಟಕಸ್ಥರೂ ಕೂಡಿಕೊಂಡು-ಮಲಯಾಳ ದೇಶದಲ್ಲಿ ತಮ್ಮ ಸಂಸ್ಕೃತಿಯನ್ನು ಹೆಚ್ಚಿಸಿದ್ದಾರೆ. ಇಲ್ಲಿ ಆದ ಗೊಗ್ಗವ್ವೆಯು ಕನ್ನಡ ವಚನಕಾರಳಿದ್ದಾಳೆ. ಹಾಗೆಯೇ ಮಹಾರಾಷ್ಟ್ರದಲ್ಲಿ ಗೋದಾವರೀನದೀತೀರ ಪ್ರದೇಶದಲ್ಲಿಯೂ ಶಿವಶರಣರೂ ಶಿವಶರಣೆಯರೂ ಆಗಿ ಹೋಗಿದ್ದಾರೆ. ಅವರಲ್ಲಿಯೂ ಕೂಡ ಕೆಲವು ಪ್ರಸಿದ್ಧವಚನಕಾರರಾಗಿದ್ದಾರೆ. ಇಷ್ಟೇ ಅಲ್ಲ, ಶೈವ ಸಂಸ್ಕೃತಿಯ ನಾಡುಗಗಳೆಂದು ಪ್ರಸಿದ್ಧಿ ಹೊಂದಿದ ಕಾಶ್ಮೀರ ದೇಶ, ಓಡಿಸಾ ಪ್ರಾಂತ, ಸೋಮನಾಥ ದೇವಾಲಯವುಳ್ಳ ಗುಜರಾಥ ಪ್ರಾಂತ, ಈ ದೇಶಗಳಲ್ಲಿ ಇದ್ದ ಅನೇಕ ಶೈವರು ಕರ್ನಾಟಕಕ್ಕೆ ಬಂದು ಇಲ್ಲಿ ಶಿವಾನುಭವದ ತತ್ವಗಳನ್ನು ಅನುಸರಿಸುವವರಾಗಿದ್ದಾರೆ. ಈ ಪ್ರಕಾರ ಉತ್ತರ ವಿಜಾಪುರ ಜಿಲ್ಲೆ ಮತ್ತು ಪಶ್ಚಿಮ ಕಲಬುರ್ಗೀ ಜಿಲ್ಲೆಗಳಲ್ಲಿ ಉಂಟಾದ ವೀರಶೈವ ಚಳವಳಿಯು ಎಲ್ಲ ಕಡೆಗೂ ಪ್ರಸಾರ ಹೊಂದಿತೆಂಬುದು ಮೇಲೆ ಹೇಳಿದ ಶಿವಶರಣರ ಸ್ಥಾನಗಳ ಮೇಲಿಂದ ತಿಳಿದು ಬರುತ್ತದೆ.

ಮೇಲಿನ ಸಂಗತಿಗಳು ಜರಿಗಿದ್ದಕ್ಕೋಸ್ಕರ ನಾವು ವಿಸ್ಮಯಪಡ ಬೇಕಾದುದೇನೂ ಇಲ್ಲ. ಯಾಕಂದರೆ ೧೧ನೇ ೧೨ನೇ ಶತಮಾನಗಳಲ್ಲಿ ವಿಜಾಪುರ ಮತ್ತು ಕಲಬುರ್ಗಿ ಜಿಲ್ಲೆಗಳು ಮುಂದುವರಿದವುಗಳಾಗಿದ್ದವು. ಆದ್ದರಿಂದ ಹಿಂದುಸ್ತಾನದಲ್ಲಿಯ ಎಲ್ಲ ಪ್ರಾಂತಗಳ ವಿದ್ವಜ್ಜನರು ಇಲ್ಲಿಗೆ ಬಂದು ಹೋಗುವದು ಬಹು ವಾಡಿಕೆಯಾಗಿತ್ತು. ಆದ್ದರಿಂದ ಶಿವಾನುಭವದ ಉಚ್ಚ ತತ್ವಗಳ ತಿಳಿವಳಿಕೆಯು ಅವರಿಗುಂಟಾಗಿ ಅವರಿಂದ ಆ ದೇಶಗಳಲ್ಲಿಯೂ ಶಿವಾನುಭವಿಗಳುಂಟಾಗಿರುವದು ಸಂಭವನೀಯವಿರುತ್ತದೆ.

## ವಚನಶಾಸ್ತ್ರದ ಮಹತ್ವ.

ಈ ಪ್ರಕಾರ ವೀರಶೈವ ಮತವು ಹಿಂದುಸ್ತಾನದಲ್ಲಿ ಬಹುಕಡೆಗೆ ಹಬ್ಬಲಿಕ್ಕೆ ವಚನಶಾಸ್ತ್ರವೇ ಮುಖ್ಯ ಕಾರಣವಾಯಿತೆಂಬುದು ನಿರ್ವಿವಾದವಾದುದು. ಶಿವಶರಣರ ಉಚ್ಚ ತತ್ವಗಳು ಈ ವಾಙ್ಮಯದಲ್ಲಿ ಹೃದಯಂಗಮವಾಗಿ ವಿವೇಚಿಸಲ್ಪಟ್ಟಿರುತ್ತವೆ. ಶಿವಶರಣರ ಚರಿತ್ರೆಗಳ ಸಂಖ್ಯೆಯು ಭಾಗ ೧ ಮತ್ತು ಭಾಗ ೨ ಈ ಗ್ರಂಥಗಳಲ್ಲಿ ಒಟ್ಟು ೧೧೪ ಇದ್ದು ಇವರಲ್ಲಿ ೫೪ ಜನರು ಕನ್ನಡ ವಚನಕಾರರು ಮತ್ತು ಮೂವರು ಬೇರೆ ವಿದ್ವಾಂಸರು ಇದ್ದಾರೆ. ಈ ವಿದ್ವಾಂಸರಲ್ಲಿ ನಾವು ಶ್ರೀಪತಿ ಪಂಡಿತ, ಸೋಮನಾರಾಧ್ಯ ಮತ್ತು ಕೇಶಿರಾಜ ಇವರನ್ನು ಗಣಿಸುತ್ತೇವೆ. ಉಳಿದ ೫೭ ಜನರು ಉನ್ನತ ಸ್ಥಾನವನ್ನು ಹೊಂದಿದ ಶಿವಾನುಭವಿಗಳೂ ಮೊವಾಡ ಪುರುಷರೂ ಆಗಿದ್ದಾರೆ. ವಚನಕಾರರ ಮತ್ತು ವಿದ್ವಾಂಸರ ಈ ದೊಡ್ಡ ಸಂಖ್ಯೆಯನ್ನು ನೋಡಿದಲ್ಲಿ ವೀರಶೈವ ಧರ್ಮದ ಪ್ರಸಾರವು ಅದರ ಸಂಸ್ಕೃತಿ ಮತ್ತು ಅದರಲ್ಲಿರುವ ಉಚ್ಚ ಮತ್ತು ಉದಾರ ತತ್ವಗಳ ಮೂಲಕವೇ ಆಗಿರುತ್ತದೆಂಬುದು ನಿಃಸಂದೇಹವಾದದ್ದು.

## ಬ್ರಾಹ್ಮಣರು.

ಶಿವಶರಣರಲ್ಲಿ ಅನೇಕ ಜನರು ಬ್ರಾಹ್ಮಣರಿದ್ದಾರೆ. ಅವರು ಶಿವಾನುಭವದ ಉಚ್ಚ ತತ್ವಗಳಿಗೋಸ್ಕರ ಪ್ರೇಮವನ್ನು ವಹಿಸಿ ಅದರಂತೆ ನಡಿದಿದ್ದಾರೆ. ಇಷ್ಟೇ ಅಲ್ಲ, ಅವರು ಅವುಗಳ ಪ್ರಸಾರವನ್ನೂ ಕೂಡ ಮಾಡಿದ್ದಾರೆ. ಅವರು ಕೆಳಗೆ ಉಲ್ಲೇಖಿಸಲ್ಪಟ್ಟಿದ್ದಾರೆ.

ಗುಪ್ತಮಂಚಣ್ಣನು:— ವೀರವೈಷ್ಣವನಂತೆ ಆವನಿಗೆ ಬ್ರಾಹ್ಮಣ ಸಂಸ್ಕಾರಗಳಾಗಿದ್ದರೂ ಅವನು ಗುಪ್ತವಾಗಿ ಲಿಂಗಧಾರಣೆಯನ್ನು ಹೊಂದಿ

ರಾತ್ರಿಕಾಲದಲ್ಲಿ ಲಿಂಗಾರ್ಚನೆಯನ್ನು ಮಾಡುತ್ತಿದ್ದನು. ಅವನು ಬಿಜ್ಜಳನ ಅಂತರಂಗ ನಿಯೋಗಿಯಾಗಿದ್ದನು. ಆದರೂ ಅವನು ಬ್ರಾಹ್ಮಣರಿಗೆ ಅಂಜಿ ಹೀಗೆ ಗುಪ್ತವಾಗಿ ನಡಿಯುತ್ತಿದ್ದನು. ಅವನು ಹೀಗೆ ನಡೆಯುವದು ಪ್ರಕಟವಾಗಲು ಅವನು ಸಮಾಧಿಸ್ಥನಾದನು. ಆಗ ಬಸವೇಶ್ವರನು ಅವನನ್ನು ಕೊಂದು ಹಾಕಿದ್ದಾನೆಂದು ಬ್ರಾಹ್ಮಣರು ಅವನ ಮೇಲೆ ಆರೋಪವಿಡಲಾಗಿ ಬಸವೇಶ್ವರನು ಅವನ ಸಮಾಧಿಯನ್ನು ದೂರ ಮಾಡಿ ಅವನಿಗೆ ಪ್ರಾಣವು ತಿರುಗಿಬರುವಂತೆ ಮಾಡಿದನು. ಹೀಗೆ ಅವನ ಭಕ್ತಿಯು ಪ್ರಕಟವಾದ ಬಳಿಕ ಅವನು ವೀರಶೈವರಂತೆ ಬಹಿರಂಗದಲ್ಲಿ ಆಚರಿಸುತ್ತ ವಚನಕಾರನಾದನು.

ಅಮ್ಮವ್ವೆಯು ಬ್ರಾಹ್ಮಣಿಯಾಗಿದ್ದಾಳೆ. ಸಮೀಪದ ಸಂಬಂಧಿಕರೆ ಲ್ಲರು ಮೃತರಾಗಲು ಅವಳು ಅನಾಥಳಾದಳು. ಆಗ ಅವಳು ನಾಲುವ ಕಾಯಕವನ್ನು ಕೈಕೊಂಡು ಶಿವನು ತನ್ನ ಮಗುವೆಂದು ಭಾವಿಸಿ ಶಿವಭಕ್ತಿಯನ್ನು ನಡಿಸಿದಳು.

ಶಿವಲೆಂಕ ಮಂಚಣ್ಣನು ಕಾಶಿಯಲ್ಲಿ ವಿದ್ವಾಂಸನಾದ ಬ್ರಾಹ್ಮಣನು. ಶಿವನೊಬ್ಬನೇ ದೈವವೆಂದು ಪ್ರತಿಪಾದಿಸುವವನಾಗಿ ವಿಷ್ಣುಮೂರ್ತಿಯು ವಿಶ್ವೇಶ್ವರನಿಗೆ ನಮಸ್ಕರಿಸುವಂತೆ ವಾದವನ್ನು ಮಾಡಿದನು. ಅವನು ವಿದ್ವಾಂಸನಿದ್ದಾನೆ ವಚನಕಾರನೂ ಇದ್ದಾನೆ

ಏಕಾಂತದ ರಾಮಯ್ಯನು ಜಿನನು ದೈವವಲ್ಲೆಂದು ಪ್ರತಿಪಾದಿಸುತ್ತ ಒಂದು ವಾದದ ಮೂಲಕ ಅದನ್ನು ಸಿದ್ಧಪಡಿಸಿದನು. ಅವನು ವಚ ನಕಾರನಿದ್ದಾನೆ.

ಬಿಬ್ಬಿ ಬಾಚಯ್ಯನು ಬ್ರಾಹ್ಮಣನಾಗಿದ್ದರೂ ಅಸ್ಪೃಶ್ಯರ ಮನೆಯ ಲ್ಲಿಯು ಪ್ರಸಾದವನ್ನು ಸ್ವೀಕರಿಸಿದನು. ಶ್ರೀಪತಿ ಪಂಡಿತನಾದರೂ ಅವ ನಂತೆಯೇ ನಡಿದನು. ಇದಕ್ಕೆ ಬ್ರಾಹ್ಮಣ ಸಮಾಜದವರು ಉಭಯತ ರನ್ನು ವಿರೋಧಿಸಿದರೂ "ಇವರು ವೀರಶೈವರಲ್ಲಿ ಜಾತಿಭೇದವಿಲ್ಲೆಂಬು ದನ್ನು ಸಿದ್ಧಪಡಿಸಿದ್ದಾರೆ. ಈ ಉಭಯತರೂ ವಿದ್ವಾಂಸರು.

ಕೇಮನಾರಾಧ್ಯನು ವಿದ್ವಾಂಸನಾದ ಬ್ರಾಹ್ಮಣನು. ಅವನು ತ್ರಿಪುರಾಂತಕೇಶ್ವರನಿಂದ ಲಿಂಗಧಾರಣೆಯನ್ನು ಹೊಂದಿ ಜೈನ, ಬೌದ್ಧ, ಚಾರ್ವಾಕರನ್ನು ವಾದದಲ್ಲಿ ಜಯಿಸಿದನು.

ಇವರಲ್ಲದೆ ಏಲೇಶ ಕೇತಯ್ಯ, ಕೆಂಭಾವಿ ಭೋಗಣ್ಣ, ಬಹುರೂಪಿ ಚೌಡಯ್ಯ, ಶಿವಯೋಗಿ ಮಲ್ಲರಸ, ಸೂರಂಬೆ ಇವರೆಲ್ಲರೂ ಬ್ರಾಹ್ಮಣರು. ಆದರೂ ಇವರೆಲ್ಲರೂ ಶಿವಾನುಭವಿಗಳಾಗಿ ಶಿವಶರಣರೆಂದು ಪ್ರಸಿದ್ಧರಾಗಿದ್ದಾರೆ. ಅವರು ಜಾತಿಭೇದವನ್ನು ನಿರಾಕರಿಸಿದ್ದಾರೆ. ಅವರಲ್ಲಿ ಕೆಲವರು ವಚನಕಾರರಾಗಿ ಶಿವಾನುಭವದ ಪ್ರಸಾರ ಮಾಡಿದ್ದಾರೆ. ಅವರ ಚರಿತ್ರೆಗಳು ಶಿವಶರಣರ ಚರಿತ್ರೆಗಳು ಭಾಗ ೧, ಇದರಲ್ಲಿ ಬಂದಿವೆ. ಅವುಗಳನ್ನು ವಾಚಕರು ಆ ಗ್ರಂಥದಲ್ಲಿ ನೋಡಬೇಕು.

## ವೀರಶೈವವು ಬ್ರಾಹ್ಮಣ ವಿರೋಧೀ ಧರ್ಮವಲ್ಲ.

ಅನೇಕರು ವೀರಶೈವವು ಬ್ರಾಹ್ಮಣ ವಿರೋಧೀ ಧರ್ಮವೆಂದು ತಿಳಿದಿದ್ದಾರೆ. ಆದರೆ ಮೇಲೆ ವಿವರಿಸಿದ ಶಿವಶರಣರೆಲ್ಲರೂ ಬ್ರಾಹ್ಮಣರು. ಅವರಲ್ಲದೆ ಬಸವೇಶ್ವರನು, ಅವನ ಮಾವಂದಿರಾದ ಬಲದೇವ ಮಂತ್ರಿ ಮತ್ತು ಸಿದ್ಧಣ್ಣೊಡೆಯರು, ಮಧುವರಸನು, ಶಂಕರದಾಸಿಮಯ್ಯನು ಇವರೆಲ್ಲರೂ ಬ್ರಾಹ್ಮಣರು. ಇವರು ರಾಜ್ಯಭಾರದಲ್ಲಿ ಉಚ್ಚಸ್ಥಾನವನ್ನು ಹೊಂದಿದವರೂ, ವಚನಕಾರರೂ, ವಿದ್ವಾಂಸರೂ ಇದ್ದಾರೆ. ಇವರ ಚರಿತ್ರೆಗಳು ಮುಂದಿನ ಭಾಗಗಳಲ್ಲಿ ಕ್ರಮೇಣ ಪ್ರಸಿದ್ಧಿಸಲ್ಪಡುವವು. ಈ ಯಾವತ್ತರ ಚರಿತ್ರೆಗಳನ್ನು ನಾವು ಪರಿಶೀಲಿಸಿದಲ್ಲಿ ವೀರಶೈವವು ಬ್ರಾಹ್ಮಣ ವಿರೋಧೀ ಧರ್ಮವೆಂದು ಅನೇಕರು ತಿಳಿದಿದ್ದು ಇದು ಸರಿಯಾದ ಸಂಗತಿಯಲ್ಲವೆಂದು ಕಂಡುಬರುತ್ತದೆ. ವೀರಶೈವ ಧರ್ಮವು ಬ್ರಾಹ್ಮಣರನ್ನು ವಿರೋಧಿಸುವದಕ್ಕೋಸ್ಕರ ಉಂಟಾಗಿರುವದಿಲ್ಲ ಅದರ ಧ್ಯೇಯವು ಸಮಾಜದಲ್ಲಿ ಆತ್ಮಾನುಭವವನ್ನು ಹೆಚ್ಚಿಸುವದೇ ಇರುತ್ತದೆ. ಅದು ಹೀಗಿರದಿದ್ದರೆ ವಿದ್ವಾಂಸರಾದ ಬ್ರಾಹ್ಮಣರು ಅದನ್ನು ಎಂದೂ ಪುರಸ್ಕರಿಸುತ್ತಿದ್ದಿಲ್ಲ. ಅವರಲ್ಲನೇಕರು ವೀರಶೈವ ಧರ್ಮವನ್ನು ಅಂಗೀಕರಿಸಿದ್ದಲ್ಲದೆ ಅವರು ಅದರ ಪ್ರಸಾರವನ್ನೂ ಮಾಡಿದ್ದಾರೆ.

ವೀರಶೈವವು ಹೀಗೆ ಆತ್ಮಾನುಭವಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿರುವದರಿಂದ ಕೆಲವು ವಿಷಯಗಳ ಬಗ್ಗೆ ಅದಕ್ಕೂ ಬ್ರಾಹ್ಮಣ ಧರ್ಮಕ್ಕೂ ವ್ಯತ್ಯಾಸಗಳುಂಟಾಗಿರುತ್ತವೆ. ವೀರಶೈವವು ಅನುಭವಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದರಿಂದ ಇಂಥ ಅನುಭವವುಳ್ಳವರಲ್ಲಿ ಅದು ವರ್ಣಭೇದ, ಜಾತಿಭೇದಗಳನ್ನು ಎಣಿಸಿಲ್ಲ. ಅದು ಒಬ್ಬನೇ ದೈವವೆಂದು ಪ್ರದಿಪಾ

ದಿಸುತ್ತದೆ. ಆದ್ದರಿಂದ ಅದು ಅನೇಕ ದೈವಗಳನ್ನು ಭಜಿಸುವ ಬ್ರಾಹ್ಮಣ ಧರ್ಮವನ್ನು ಟೀಕಿಸುವದುಂಟು. ಯಜ್ಞಾದಿಕರ್ಮಗಳನ್ನು ಅದು ಒಪ್ಪಿ ಕೊಳ್ಳುವದಿಲ್ಲ. ಆದರೆ ಬ್ರಾಹ್ಮಣ ಧರ್ಮವು ಅವುಗಳನ್ನು ಒಪ್ಪಿಕೊಳ್ಳು ತ್ತದೆ. ಇವಲ್ಲದೆ ಅದು ತನ್ನದೇ ಆದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಏಕೋತ್ತರ ಶತಸ್ಥಲಗಳನ್ನು ಧರ್ಮಾಚರಣೆಗೋಸ್ಕರ ಏರ್ಪ ಡಿಸಿಕೊಂಡಿರುತ್ತದೆ. ಅದರಿಂದ ಅದು ಬ್ರಾಹ್ಮಣರ ವಿಶಿಷ್ಟ ಆಚರಣೆ ಗಳನ್ನು ಪಾಲಿಸುವದಿಲ್ಲ. ಆದರೆ ಇವೆಲ್ಲವೂ ತಾತ್ವಿಕ ವಿಭೇದಗಳು. ಅವು ಜಾತಿ, ವರ್ಣ, ಮತದ್ವೇಷದಿಂದ ಉಂಟಾದುವಲ್ಲ. ಇಷ್ಟೇಅಲ್ಲ, ವೀರಶೈವ ವಚನಕಾರರೂ ವಿದ್ವಾಂಸರೂ ತಮ್ಮ ಈ ಆಚರಣೆಗಳನ್ನು ಪುರಸ್ಕರಿಸುವಲ್ಲಿ ಬ್ರಾಹ್ಮಣರಂತೆ ವೇದ, ಉಪನಿಷತ್ತು, ಆಗಮ, ಪುರಾಣ ಇವುಗಳ ಆಧಾರಗಳನ್ನು ಆಗಿಂದಾಗ್ಗೆ ತೆಗೆದುಕೊಂಡಿರುತ್ತಾರೆ. ಆದ್ದರಿಂದ ವೀರಶೈವ ಧರ್ಮವು ಅನೇಕರು ತಿಳಿದಿರುವಂತೆ ಕೇವಲ ಬ್ರಾಹ್ಮಣ ದ್ವೇಷಕ್ಕಾಗಿ ಹುಟ್ಟಿದುದಲ್ಲವೆಂಬುದು ಸ್ಪಷ್ಟವಾಗುತ್ತದೆ.

## ಕಸಬುದಾರರು.

ಶಿವಶರಣರು ತಮ್ಮ ಶಿವಾನುಭವಕಾರ್ಯದಲ್ಲಿ ಉದ್ಯೋಗಗಳಿಗೆ ಮಹ ತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಆದ್ದರಿಂದ ಶಿವಶರಣರಲ್ಲಿ ಎಲ್ಲತರದ ಕಸಬುದಾರರು ಇದ್ದಾರೆ. ಕಸಬುಗಳಲ್ಲಿ ಇಂಥವು ಕೀಳುತರದವು ಇಂಥವು ಹೆಚ್ಚಿನತರದವು ಎಂಬ ತಾರತಮ್ಯಭಾವವು ಇರುವದಿಲ್ಲ. ಆದ್ದರಿಂದ ಕಸಬುಗಳ ಮೂಲಕ ವೀರಶೈವರಲ್ಲಿ ಉಚ್ಚನೀಚ ಭಾವವೆಂಬುದು ಉಂಟಾಗಲಾರದು. ಇದೊಂದು ಕ್ರಾಂತಿಕಾರಕ ತತ್ವವು. ಇದರ ಮೂಲಕ ವೀರಶೈವ ಧರ್ಮದ ಪ್ರಗತಿಯು ಬಸವೇಶ್ವರನ ಕಾಲದಲ್ಲಿ ಬಹು ತೀವ್ರವಾಗಿ ಎಲ್ಲ ಸಮಾಜಗಳಲ್ಲಿ ಆದಂತೆ ತೋರುತ್ತದೆ. ಕಸಬುಗ ಳನ್ನು ಮಾಡುತ್ತಿದ್ದ ಶಿವಶರಣರ ವಿವರಣೆಯು ಕೆಳಗೆ ಕಾಣಿಸಲಾಗಿದೆ.

**ಒಕ್ಕಲುತನ ಮಾಡುವವರು:**—ಅಜಗಣ್ಣ, ಇಳಿಹಾಳಬೊಮ್ಮಣ್ಣ, ಒಕ್ಕಲು ಮುದ್ದಯ್ಯ, ಮುಕ್ತಾಯಕ್ಕ, ಏಲೇಶಕೇತಯ್ಯ, ಬಡಿಹೋರಿ ಬ್ರಹ್ಮಯ್ಯ, ಬಾಹೂರು ಬ್ರಹ್ಮಯ್ಯ, ಮಾರಗೌಡ, ರೆಮ್ಮವ್ವೆ. **ಕಟ್ಟಿಗೆ ಮತ್ತು ಕುಳ್ಳುಮಾರುವವರು:**— ಮೋಳಿಗೆಯ ಮಾರಯ್ಯ, ಸಪ್ಪೆ ಯಲ್ಲಮ:ದೇವ, ಅಣ್ಣಲದೇವಿ, ಮಾದಾರ ಚನ್ನಯ್ಯ. **ರಾಟಿಯ**

**ಕಾಯಕದವರು:**— ಅಮ್ಮವ್ವೆ ಮತ್ತು ಕದಿರ ರೆಮ್ಮವ್ವೆ. **ನೆಯ್ಗೆಯ ಕಾಯಕ ಮಾಡುವವ:**— ಅಮುಗಿದೇವ. **ಓಲೆಗಳನ್ನು ಮಾರುವವರು:**— ಓಲಿಯ ಶಾಂತಯ್ಯ ಮತ್ತು ನಿಜಲಿಂಗಚಿಕ್ಕಯ್ಯ. **ಕುರುಬನು:**— ಗೊಲ್ಲಾಳ. **ಹಗ್ಗ ಮಾಡುವವ:**— ನುಲಿಯ ಚಂದಯ್ಯ. **ದೋಸೆಮಾಡುವವಳು:**— ಪಿಟ್ಟವ್ವೆ. **ಗಾಣಿಗನು:**— ಮಾರುಡಿಗೆಯ ನಾಚಯ್ಯ. **ಮೇದರರು:**— ಮೇದಾರ ಕೇತಯ್ಯ, ಮೊರನ ವೇಮಯ್ಯ. **ಅಕ್ಕಸಾಲಿಗರು:**— ಪರದಾಸಿಗುಪ್ತಪೆತ್ರ, ಹಾವಿನಹಾಳ ಕಲ್ಲಯ್ಯ. **ಕುಂಬಾರನು:**— ಕುಂಬಾರ ಗುಂಡಯ್ಯ. **ಬತ್ತ ಕುಟ್ಟುವವಳು:**— ಕೊಟ್ಟಣದ ಸೋಮವ್ವೆ. **ದನಕಾಯುವವರು:**— ತೆಲುಗೇಶ ಮಸಣಯ್ಯ, ಶಂಕಿತೊಂಡಿ, ಗೋರಕ್ಷ. **ಚರ್ಮ ಹದ ಮಾಡುವವ:**— ಮಾದಾರ ಧೂಳಯ್ಯ. **ನೀರು ಹಾಕುವವ:**— ಅಗ್ಗವಣಿಯ ಹೊನ್ನಯ್ಯ. ಅಲ್ಲದೆ ರಾಜ್ಯಾಧಿಕಾರಿಗಳೂ ಅವರಲ್ಲಿ ಇದ್ದಾರೆ. **ಅಧಿಕಾರಿಗಳು:**— ಗುಪ್ತಮಂಚಣ್ಣ, ತಂಗಟೂರು ಮಾರಯ್ಯ, ರಾಯಸದ ಮಂಚಣ್ಣ, ಸೊಡ್ಡಳ ಬಾಚರಸ. **ಗ್ರಾಮದ ಗೌಡನು:**— ಮುಸುಡಿಯ ಚೌಡಯ್ಯ. **ವ್ಯಾಪಾರಸ್ಥರು:** ಆದಯ್ಯ, ಬಳ್ಳೇಶ ಮಲ್ಲಯ್ಯ, ಶಿವಪ್ರಿಯನಾಚಿ. ಹೀಗೆ ಅನೇಕ ತರದ ಕಸಬುಗಳನ್ನು ಮಾಡುವವರು ಶಿವಶರಣರಲ್ಲಿ ಆಗಿಹೋಗಿದ್ದಾರೆ.

## ಅಸ್ಪೃಶ್ಯರು.

ಹೇಗೆ ಶಿವಶರಣರಲ್ಲಿ ಅನೇಕರು ಉಚ್ಚವರ್ಣದವರೂ ಉದ್ಯೋಗಸ್ಥರೂ ಆಗಿರುತ್ತಾರೋ ಹಾಗೆಯೇ ಅಸ್ಪೃಶ್ಯರಲ್ಲಿಯೂ ಕೂಡ ಅವರು ಆಗಿರುತ್ತಾರೆ. ಚನ್ನಯ್ಯನು ಮಾದರವನು. ಆದರೆ ಪರಮಾತ್ಮನು ಅವನ ಭಕ್ತಿಗೆ ಮೆಚ್ಚಿ ಅವನೊಡನೆ ಉಂಡಿದ್ದಾನೆ. ಮಾದರ ಧೂಳಯ್ಯನು ಮೋಚಿಯ ಜೋಡುಗಳನ್ನು ಮಾಡುವವನು. ಆದರೆ ಪರಮಾತ್ಮನು ಅವನ ಉಳಿಯ ಮೊನೆಯಲ್ಲಿ ಪ್ರಕಟವಾದನು. ನಾವದಿಗೆಯ ಗುಡ್ಡವ್ವೆಯನ್ನು ಬ್ರಾಹ್ಮಣರು ಪೀಡಿಸ ಹತ್ತಲು ಅವಳು ಸೌರಾಷ್ಟ್ರ ಸೋಮನಾಥನನ್ನು ಕಾಣಲು ಹೊರಟಳು. ಆಗ ಪರಮಾತ್ಮನು ಅವಳ ಭಕ್ತಿಗೆ ಮೆಚ್ಚಿ ಅವಳಿದ್ದಲ್ಲಿಯೇ ಬಂದು ಪ್ರಕಟವಾದನು. ಬಸವೇಶ್ವರನು ಶಿವನಾಗಮಯ್ಯನ ಪ್ರಸಾದವನ್ನು ನಿಶ್ಶಂಕೆಯಿಂದ ಸೇವಿಸುತ್ತಾ ಇದ್ದನು.

ಬ್ರಾಹ್ಮಣರು ಅದನ್ನು ನೋಡಿ ಬಿಜ್ಜಳನಲ್ಲಿ ದೂರು ಹೇಳಲು ಬಸವೇಶ್ವರನು ಬಿಜ್ಜಳನಲ್ಲಿಗೆ ಬಂದು ಶಿವನಾಗಮಯ್ಯನು ಶ್ರೇಷ್ಠ ಕುಲದವನು, ಅವನ ರಕ್ತವು ಪವಿತ್ರವಾದುದು, ಎಂಬುದನ್ನು ತೋರಿಸಲು ಅವನ ಬೆರಳುಗಳನ್ನು ಹಿಂಡಿ ಅವುಗಳೊಳಗಿಂದ ಹಾಲು ಸುರಿಯುವಂತೆ ಮಾಡಿದನು. ಬಸವೇಶ್ವರನು ಅಸ್ಪೃಶ್ಯರು ಭಕ್ತಿಯುಳ್ಳವರಿದ್ದುದಾದರೆ ಅವರು ಕುಲಜರೆಂಬುದಕ್ಕೆ ಅನೇಕ ಉಕ್ತಿಗಳನ್ನು ನುಡಿದಿದ್ದಾನೆ. ಮೇಲೆ ಉಲ್ಲೇಖಿಸಿದ ಅಸ್ಪೃಶ್ಯರಲ್ಲಿ ನಾವದಿಗೆಯು ಗುಡ್ಡವ್ವೆಯು ಹೊರತರ್ಪ ಉಳಿದವರೆಲ್ಲರೂ ಶ್ರೇಷ್ಠ ತರದ ವಚನಕಾರರು ಆಗಿದ್ದಾರೆ.

ಹೇಗೆ ಬಸವೇಶ್ವರನು ಅಸ್ಪೃಶ್ಯರನ್ನು ಪುರಸ್ಕರಿಸಿದನೋ ಹಾಗೆಯೇ ಬಿಬ್ಬಿ ಬಾಚಯ್ಯ, ಶ್ರೀಪತಿ ಪಂಡಿತ, ಕೆಂಭಾವಿ ಭೋಗಣ್ಣ, ಸೂರಂಬೆ ಇವರೂ ಕೂಡ ಪುರಸ್ಕರಿಸಿದ್ದಾರೆ. ಇವರೆಲ್ಲರೂ ಬ್ರಾಹ್ಮಣರು! ಈ ಎಲ್ಲ ಸಂಗತಿಗಳಿಂದ ೧೨ನೇ ಶತಮಾನದಲ್ಲಿ ಉಂಟಾದ ಶಿವಾನುಭವದ ಪ್ರಸಾರದ ಮೂಲಕ ಉಚ್ಚ ಕುಲದವರಿಂದ ಹಿಡಿದು ನೀಚಕುಲದವರ ವರೆಗೆ ಎಲ್ಲ ತರಗತಿಯ ಜನರು ಹೇಗೆ ಜಾತಿಭೇದವನ್ನು ಕಳೆದು ವಿಶಾಲಹೃದಯಿಗಳಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಈ ಶತಮಾನದಲ್ಲಿ ಕರ್ನಾಟಕದಲ್ಲಿ ಇಂಥ ಸ್ಥಿತಿಯು ಪ್ರಾಪ್ತವಾಗಬೇಕಾದರೆ ಅಲ್ಲಿ ಉಂಟಾದ ನಾಗರಿಕತೆಯ ಉಚ್ಚತಮ ಸ್ಥಿತಿಯನ್ನು ತೋರಿಸುತ್ತದೆ.

## ಜೈನರು.

ಬ್ರಾಹ್ಮಣರಂತೆ ಜೈನರಲ್ಲಿಯೂ ಬಹುಜನರು ವೀರಶೈವ ಧರ್ಮವನ್ನು ಸ್ವೀಕರಿಸಿದ್ದಾರೆ. ಹೀಗೆ ಅವರು ವರ್ತಿಸಲಿಕ್ಕೆ ಕೆಲವು ವಿಶೇಷತರದ ಕಾರಣಗಳೂ ಉಂಟು. ಅವುಗಳಲ್ಲಿ ಶಿವಶರಣರು ಜೈನರ ಹಿಂಸಾತತ್ವವನ್ನು ಪೂರ್ಣವಾಗಿ ಅಂಗೀಕರಿಸಿದ್ದುದು ಮುಖ್ಯವು. ಈ ವಿಷಯವಾಗಿ ದಸರಯ್ಯ, ಹಾವಿನಹಾಳ ಕಲ್ಲಯ್ಯ, ಬಡಿಹೋರಿ ಬ್ರಹ್ಮಯ್ಯ, ನನ್ನಯ್ಯ, ಇವರ ಚರಿತ್ರೆಗಳನ್ನು ವಾಚಕರು ನೋಡಬೇಕು. ಈ ಪ್ರಕಾರ ಜೈನರನೇಕರು ಶಿವಾನುಭವದ ತತ್ವಗಳಿಗೆ ಒಲಿದವರಾಗಿ ವೀರಶೈವ ಧರ್ಮವನ್ನು ಅಂಗೀಕರಿಸಿದ್ದಾರೆ. ಈ ಬಗ್ಗೆ ವಾಚಕರು ತಿಲಕವ್ವೆ, ಪುಲಿಗೆರಿಯ ಸೋಮಯ್ಯ, ವೈಜವ್ವೆ, ಬಳ್ಳೇಶ ಮಲ್ಲಯ್ಯ, ಸೋಹಳಿಯ ಸೋಮವ್ವೆ ಇವರ ಚರಿತ್ರೆಗಳನ್ನು ನೋಡಬೇಕು.

ಕೆಲವು ಸಂದರ್ಭಗಳಲ್ಲಿ ಶಿವಶರಣರಿಗೂ ಬ್ರಾಹ್ಮಣ ಮತ್ತು ಜೈನರಿಗೂ ಕಾದಾಟಗಳಾದದ್ದು ಕಂಡುಬರುತ್ತದೆ. ಧರ್ಮಕ್ರಾಂತಿಯು ಆರಂಭ ಕಾಲದಲ್ಲಿ ಹೀಗಾಗುವದು ಸ್ವಾಭಾವಿಕವಿದೆ. ಆದರೆ ಇದು ಸ್ವಲ್ಪ ಕಾಲ ಮಾತ್ರ ನಡಿಯುತ್ತವೆ. ಮುಂದೆ ಶಾಂತತೆಯು ಉಂಟಾಗುತ್ತದೆ. ಒಂದುಸ್ಥಾನದಲ್ಲಿ ಬಲುಮೆಯಿಂದ ಯಾವ ಧರ್ಮವೂ ಪ್ರಸಾರಹೊಂದಿರುವದಿಲ್ಲ. ಆದರೆ ಕೆಳಗೆ ಕಾಣಿಸಿದ ಕೆಲವು ಸಂಗತಿಗಳನ್ನು ವಿಚಾರ ಮಾಡಿದಲ್ಲಿ ವೀರಶೈವ ಮತ್ತು ಜೈನರಲ್ಲಿ ಹಿಂದಿನ ಕಾಲದಲ್ಲಿ ಪರಸ್ಪರ ವಿರೋಧಭಾವವಿದ್ದುದು ಕಂಡುಬರುವದಿಲ್ಲ.

## ಜೈನ ಮತ್ತು ವೀರಶೈವ ಸಮಾಜಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳು.

ಈ ಕಾಲದಲ್ಲಿ ಜೈನ ಮತ್ತು ವೀರಶೈವರಲ್ಲಿ ಪರಸ್ಪರ ಲಗ್ನ ವ್ಯವಹಾರಗಳು ಆಗಿಂದಾಗ್ಗೆ ನಡಿಯುತ್ತಿದ್ದವೆಂಬುದು ಕೆಲವು ಚರಿತ್ರೆಗಳಿಂದ ಕಂಡುಬರುತ್ತದೆ. ಆಸಯ್ಯನು ವೀರಶೈವನು. ಅವನು ವಚನಕಾರನೂ ಇದ್ದಾನೆ. ಅವನು ವೀರಶೈವನಾದರೂ ಪದ್ಮಾವತಿ ಎಂಬ ಜೈನಳನ್ನು ಲಗ್ನವಾಗಿ ಪುಲಿಗೆರೆಯಲ್ಲಿ ವಾಸಮಾಡುತ್ತಿದ್ದನು. ಹೀಗಿರುವಲ್ಲಿ ಒಂದು ದಿವಸ ಕೆಲವು ಶ್ರಾವಕರು ಅವಳ ತಾಯಿಯ ಮನೆಯಲ್ಲಿ ಊಟಕ್ಕೆ ಬಂದರು. ಆಗ ಅವಳಿಗೆ ಅನ್ನವು ಕಡಿಮೆ ಬೀಳಲು ಅವಳು ತನ್ನಮಗಳು ಪದ್ಮಾವತಿಯ ಮನೆಗೆ ಹೋಗಿ ಅವಳು ಮಹೇಶ್ವರರಿಗಾಗಿ ಸಿದ್ಧಮಾಡಿಟ್ಟ ಅನ್ನವನ್ನೆಲ್ಲ ಕಸೆದುಕೊಂಡು ಬಂದಳು! ಇದರಿಂದ ಜೈನ ವೀರಶೈವರಲ್ಲಿ ಪರಸ್ಪರ ಲಗ್ನ ಮತ್ತು ಅನ್ನೋದಕ ವ್ಯವಹಾರಗಳು ನಿರಾತಂಕವಾಗಿ ನಡಿಯುತ್ತಿದ್ದವೆಂಬುದು ಸ್ಪಷ್ಟವಾಗುತ್ತದೆ. ತಿಲಕವ್ವೆಯು ಮೊದಲು ಜೈನಳು. ಅವಳು ಹಿಂದುಗಡೆ ಜೈನಧರ್ಮವನ್ನು ಬಿಟ್ಟು ಶಿವಧರ್ಮವನ್ನು ಸ್ವೀಕರಿಸಿದಳು. ಆದರೂ ಅವಳ ತಂದೆ ತಾಯಿಗಳು ಅವಳನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನ ಮಾಡಿದರು. ಹಾಗೆಯೇ ಸೋಹಳಿಯ ಸೋಮವ್ವೆಯ ಲಗ್ನದಲ್ಲಿಯೂ ಜರಗಿರುತ್ತದೆ. ಈ ಲಗ್ನಗಳು ತಿಲಕವ್ವೆ ಮತ್ತು ಸೋಮವ್ವೆಯರ ಮನಸ್ಸಿನ ವಿರುದ್ಧವಾಗಿ ಆಗಿದ್ದು, ಆದರಿಂದ ಮುಂದೆ ಅನಾಹುತಗಳಾದವೆಂದು ಅವರ ಕಥೆಗಳಲ್ಲಿ ಕಂಡು ಬರುತ್ತದೆ. ಆದರೂ ಇವುಗಳು ಆಗ ಜೈನ ಮತ್ತು

ವೀರಶೈವರಲ್ಲಿ ಲಗ್ನಗಳಾಗುತ್ತಿದ್ದವೆಂಬ ಸಂಗತಿಯನ್ನು ಸ್ಪಷ್ಟಪಡಿಸುತ್ತವೆ. ವೈಜಣ್ಣೆಯ ತಂದೆತಾಯಿಗಳು ಮೊದಲು ಜೈನರಾಗಿದ್ದರು. ಆದರೆ ಅವರು ಹಿಂದುಗಡೆ ಬಹಿರಂಗವಾಗಿ ವೀರಶೈವಾಚರಣೆಯಂತೆ ನಡೆಯಹತ್ತಿದರು. ಒಂದು ದಿವಸ ವೈಜಣ್ಣೆಯ ತಂದೆಯ ತಂಗಿಯು ಅವನ ಮನೆಗೆ ಬಂದಿರಲು ವೈಜಣ್ಣೆಯನ್ನು ತನ್ನ ಮಗನಿಗೆ ಲಗ್ನ ಮಾಡಿಕೊಡಲು ತನ್ನ ಅಣ್ಣನಿಗೆ ಅವಳು ಕೇಳಿದಳು. ಅದಕ್ಕೆ ಅವನು ಅವಳಿಗೆ ನೀವು ಜೈನರಾದ್ದರಿಂದ ನಿಮಗೆ ನನ್ನ ಮಗಳನ್ನು ಕೊಡೆನು ಎಂದು ಹೇಳಿದನು. ಅದಕ್ಕೆ ಅವಳು ಛಲಹಿಡಿದು ಮನೆಯಲ್ಲಿ ಕುಳಿತಳು. ಆಗ ಅವರ ಬಂಧುಬಳಗದವರು ನೆರೆದು ಇವರು ಜೈನರಾದರೇನಾಯಿತು? ತಂಗಿಯ ಮಗನಿಗೆ ಮಗಳನ್ನು ಕೊಡುವವೇ ಉಚಿತವೆಂದು ಅಣ್ಣನಿಗೆ ಹೇಳಿ ಉಭಯತರ ಲಗ್ನವನ್ನುಮಾಡಿಸಿದರು. ಈ ಸಂಗತಿಗಳಿಂದ ಈ ಕಾಲದಲ್ಲಿ ಜೈನ ವೀರಶೈವರಲ್ಲಿ ಆಗಿಂದಾಗ್ಗೆ ಧರ್ಮಾಂತರಗಳು ಆಗುತ್ತಿದ್ದವೆಂತಲೂ ಅವರಲ್ಲಿ ಲಗ್ನ ವ್ಯವಹಾರಗಳು ಸಹ ನಿರಾತಂಕವಾಗಿ ನಡೆಯುತ್ತಿದ್ದವೆಂತಲೂ ಗೊತ್ತಾಗುತ್ತದೆ. ಈ ಕಾರಣಗಳಿಂದ ಉಭಯ ಸಮಾಜದವರು ಈ ಕಾಲದಲ್ಲಿ ಕೇವಲ ವಿರೋಧಿಗಳಾಗಿ ವರ್ತಿಸುತ್ತಿದ್ದರೆಂದು ಹೇಳುವದು ತಪ್ಪಾಗುತ್ತದೆ.

## ಬ್ರಾಹ್ಮಣ ಮತ್ತು ವೀರಶೈವ ಸಮಾಜಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳು.

ಈ ಸಂಗತಿಯು ಆಗಿನ ಬ್ರಾಹ್ಮಣ ಮತ್ತು ವೀರಶೈವ ಸಮಾಜಗಳಲ್ಲಿಯೂ ಇದ್ದುದು ಕಂಡುಬರುತ್ತದೆ. ಅಮ್ಮವ್ವೆಯ ತಾಯಿತಂದೆಗಳು ಬ್ರಾಹ್ಮಣರು. ಅವರು ಮುಂದೆ ವೀರಶೈವ ಧರ್ಮವನ್ನು ಪಾಲಿಸುವವರಾದರು. ಆದರೂ ಅವಳ ಸೋದರತ್ತೆಯು ಅವಳನ್ನು ತನ್ನ ಮಗನಿಗೆ ತೆಗೆದುಕೊಂಡು ಲಗ್ನ ಮಾಡಿದಳು. ಕೋವೂರಲ್ಲಿದ್ದ ಭಾಸ್ಕರನು ವೈಷ್ಣವನು. ಆದರೂ ಅವನು ವೀರಶೈವನಾದ ಭೀಮಯ್ಯನ ಮಗಳಾದ ಚಂದ್ರಾಣಿದೇವಿಯನ್ನು ಲಗ್ನವಾಗಲು ಇಚ್ಛಿಸಿದನೆಂದು ವೀರಸಂಗಯ್ಯನ ಚರಿತ್ರೆಯಿಂದ ತಿಳಿದು ಬರುತ್ತದೆ.

ಈ ಪ್ರಕಾರ ವೀರಶೈವ ಧರ್ಮವು ಜೈನ ಮತ್ತು ಬ್ರಾಹ್ಮಣ ಸಮಾಜಗಳ ಮೇಲೆ ಪರಿಣಾಮ ಮಾಡಿದ್ದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ

ಈ ತೆರದ ಅನ್ನೋದಕ ವ್ಯವಹಾರಗಳು ಮತ್ತು ಲಗ್ನ ವ್ಯವಹಾರಗಳು ಆ ಕಾಲದಲ್ಲಿ ಪರಸ್ಪರವಾಗಿ ಜರಗುತ್ತಿದ್ದವೆಂದು ತೋರುತ್ತದೆ. ಈ ಸಂಗತಿಗಳು ಹಿಂದಿನ ಕಾಲದಲ್ಲಿ ವೀರಶೈವ, ಜೈನ, ಮತ್ತು ಬ್ರಾಹ್ಮಣ ಈ ಸಮಾಜಗಳಲ್ಲಿ ಪರಸ್ಪರ ವೈರಭಾವವಿಲ್ಲದ್ದನ್ನು ತೋರಿಸುವದಿಲ್ಲ. ಒಂದುವೇಳೆ ಇಂಥ ಪರಿಸ್ಥಿತಿಯು ಆ ಕಾಲದಲ್ಲಿ ಆಯಾ ಸಮಾಜಗಳಲ್ಲಿ ಇದ್ದಿದ್ದರೆ ವೀರಶೈವ ಧರ್ಮವು ಎಂದೂ ಬೆಳೆಯುತ್ತಿದ್ದಿಲ್ಲ.

## ಕುಟುಂಬ ಸುಧಾರಣೆ.

ಶಿವಶರಣರು ಆತ್ಮಸುಧಾರಣೆಗೆ ಅತ್ಯಂತ ಮಹತ್ವವನ್ನು ಕೊಟ್ಟಿರುತ್ತಾರೆಂಬುದು ಹಿಂದಿನ ವಿವರಣೆಗಳಿಂದ ವಾಚಕರಿಗೆ ತಿಳಿದುಬರದೆ ಇರಲಾರದು. ಆದರೆ ಈ ಕಾರ್ಯದಲ್ಲಿ ಮನುಷ್ಯನ ಸುತ್ತಲಿನ ಪರಿಸ್ಥಿತಿಯು ಅಥವಾ ಆವರಣವು ಅವನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಮಾಡುತ್ತದೆ. ಈ ಸಂಗತಿಯನ್ನು ಶಿವಶರಣರು ತಿಳಿದವರಾಗಿ ತಮ್ಮ ಸುತ್ತಲಿನ ಪರಿಸ್ಥಿತಿಯು ಶುದ್ಧವೂ ಸಾತ್ವಿಕವೂ ಇರುವಹಾಗೆ ಬಹಳ ಜಾಗ್ರತೆ ವಹಿಸುತ್ತಾರೆ. ಆದ್ದರಿಂದ ಶಿವಾನುಭವಿಗಳು ಜನರಲ್ಲಿ ಹೇಗೆ ವರ್ತಿಸಬೇಕು, ಎಂಥ ಜನರ ಸಹವಾಸವನ್ನು ಮಾಡಬೇಕು, ಇವೇ ಮೊದಲಾದ ವಿಷಯಗಳನ್ನು ಅವರು ತಮ್ಮ ವಚನಗಳಲ್ಲಿ ಬಹು ಆಳವಾಗಿ ಚರ್ಚಿಸುತ್ತಾರೆ. ಸಾಮಾನ್ಯವಾಗಿ ಮನುಷ್ಯನ ನಿಕಟಸಂಬಂಧವು ಯಾವಾಗಲೂ ತನ್ನ ಕುಟುಂಬದವರೊಡನೆ ವಿಶೇಷವಾಗಿ ಇರುತ್ತದೆ. ಆದ್ದರಿಂದ ಕುಟುಂಬದಲ್ಲಿ ಉಚ್ಚ ಧಾರ್ಮಿಕ ವಾತಾವರಣವಿರುವಂತೆ ಮಾಡುವದು ಆತ್ಮಾನುಭವಿಗಳ ಆದ್ಯಕರ್ತವ್ಯವಾಗಿದೆ. ಇದನ್ನು ಶಿವಾನುಭವಿಗಳು ತಿಳಿದವರಾಗಿ ಆ ರೀತಿ ಅವರು ಆಚರಿಸಿದ್ದೂ ಕಂಡುಬರುತ್ತದೆ.

ಕುಟುಂಬದ ಮುಖ್ಯ ಅಂಗಗಳೆಂದರೆ ಸ್ತ್ರೀಯರು ಮತ್ತು ಬಾಲಬಾಲಿಕೆಯರು. ಇವರ ಶುದ್ಧಾಚರಣೆಯು ಶಿವಾನುಭವಿಗಳ ಶಿವಾನುಭವಕ್ಕೆ ಯಾವಾಗಲೂ ಸಹಾಯಕಾರಿಯಾದುದು. ಇವರು ಹಾಗಿಲ್ಲದಿದ್ದರೆ ಅವರ ಆಚರಣೆಗೆ ಹಾನಿಯುಂಟಾಗುತ್ತದೆ. ಇದನ್ನು ಶಿವಶರಣರು ಕಂಡವರಾಗಿ ತಮ್ಮ ಸ್ತ್ರೀಯರ ಮತ್ತು ಬಾಲಬಾಲಿಕೆಯರ ಧಾರ್ಮಿಕ ವರ್ತನೆಯ ಸಲುವಾಗಿ ಬಹಳ ಜಾಗ್ರತೆಯನ್ನು ವಹಿಸಿರುತ್ತಾರೆ. ಇದು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತದೆ.

ಇದರಿಂದ ವೀರಶೈವ ಸ್ತ್ರೀಯರಲ್ಲಿ ಮತ್ತು ಬಾಲಬಾಲಿಕೆಯರಲ್ಲಿ ಅನೇಕರು ಶಿವಶರಣರಾಗಿರುವದು ಕಂಡುಬರುತ್ತದೆ. ಅವರ ಸಂಕ್ಷಿಪ್ತ ವಿವರಣೆಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

## ಸ್ತ್ರೀಯರು.

"ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ಭಾಗ ೨" ಈ ಗ್ರಂಥಗಳಲ್ಲಿ ಒಟ್ಟು ೧೧೪ ಜನ ಶಿವಶರಣರ ಚರಿತ್ರೆಗಳು ಬಂದಿದ್ದು ಅವರಲ್ಲಿ ೩೨ ಜನ ಶಿವಶರಣೆಯರಿದ್ದಾರೆ. ಇವರಲ್ಲಿ ೧೩ ಜನರು ವಚನಕಾರರು ಇದ್ದಾರೆ. ಇದು ನಿಜವಾಗಿ ದೊಡ್ಡ ಸಂಖ್ಯೆಯು. ಇವರೆಲ್ಲರು ವೀರಶೈವ ಸಮಾಜದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದವರು. ಇಂದಿಗೆ ಎಂಟುನೂರು ವರುಷಗಳಾದರೂ ಕೂಡ ಅವರ ಹೆಸರುಗಳು ಜನರ ಸ್ಮರಣೆಯಲ್ಲಿ ಉಳಿದಿವೆ. ಅನೇಕ ವೀರಶೈವ ಗ್ರಂಥಕಾರರು ಅವರನ್ನು ಆಗಿಂದಾಗ್ಗೆ ತಮ್ಮ ಗ್ರಂಥಗಳಲ್ಲಿ ಸ್ಮರಿಸುತ್ತಾರೆ. ಇದರಿಂದ ಈ ಪುಣ್ಯ ಸ್ತ್ರೀಯರ ಧಾರ್ಮಿಕ ವರ್ತನೆಯು ಎಂಥ ಉಚ್ಚಸ್ಥಿತಿಯನ್ನು ಹೊಂದಿತ್ತೆಂಬುದನ್ನು ನಾವು ಊಹಿಸಬಹುದು.

ಈ ಸ್ತ್ರೀಯರ ಅನೇಕಚರಿತ್ರೆಗಳಲ್ಲಿ ಸತಿಪತಿಗಳಿಬ್ಬರೂ ವಚನಕಾರರಿದ್ದುದು ಕಂಡುಬರುತ್ತದೆ. ಇದರಿಂದ ಪುರುಷರು ತಾವು ಮಾತ್ರವಲ್ಲದೆ ತಮ್ಮಹಾಗೆ ತಮ್ಮ ಸ್ತ್ರೀಯರೂ ಕೂಡ ಜ್ಞಾನಿಗಳಾಗುವಂತೆ ಮಾಡಲು ಯತ್ನಿಸುತ್ತಿದ್ದರೆಂಬದು ಗೊತ್ತಾಗುತ್ತದೆ. ಕೆಲವು ಸ್ತ್ರೀಯರು ಬರೆದ ವಚನಗಳಿಂದ ಅವರು ಸಂಸ್ಕೃತದ ಅಭ್ಯಾಸವನ್ನು ಸಹ ಮಾಡಿದ್ದರೆಂಬ ಅನುಮಾನವು ಉಂಟಾಗುತ್ತದೆ. ವಚನಕಾರರಿರುವ ಸತಿಪತಿಗಳ ಹೆಸರುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

**ವಚನಕಾರರಾದ ಸತಿಪತಿಗಳು**:--ಮಹಾದೇವರಾಜನು ಅಥವಾ ಮೋಳಿಗೆಯಮಾರಯ್ಯನು ಉಚ್ಚತರಗತಿಯ ವಚನಕಾರನು. ಅವನ ಹೆಂಡತಿಯಾದ ಮಹಾದೇವಿಯಮ್ಮನೂ ವಚನಕಾರಳಾದಳು. ಉರಿಲಿಂಗ ಪೆದ್ದಿಯು ಪ್ರಸಿದ್ಧ ವಚನಕಾರನು. ಅವನ ಹೆಂಡತಿ ಕಾಳವ್ವೆಯೂ ಕೂಡ ವಚನಕಾರಳಿದ್ದಾಳೆ. ಆಯುದಕ್ಕಿ ಮಾರಯ್ಯ ಅವನ ಹೆಂಡತಿ ಲಕ್ಕಮ್ಮನೂ, ಎಡೆಮಠದ ನಾಗಿದೇವ ಅವನ ಹೆಂಡತಿ ಮಸಣಮ್ಮನೂ,

ರಾಯಸದ ಮಂಚಣ್ಣ ಅವನ ಹೆಂಡತಿ ರಾಯಮ್ಮನೂ ಹಡಪದಪ್ಪಣ್ಣ ಅವನ ಹೆಂಡತಿ ಲಿಂಗಮ್ಮನೂ ಇವರೆಲ್ಲರೂ ವಚನಕಾರರಿದ್ದಾರೆ. ಈ ಸ್ತ್ರೀಯರ ವಚನಗಳಲ್ಲಿ ಶಿವಾನುಭವದ ಉಚ್ಚ ತತ್ವಗಳ ನಿರೂಪಣೆಯು ಇರುತ್ತವೆ.

ಶಿವಶರಣರ ಚರಿತ್ರೆಗಳಲ್ಲೆಲ್ಲ ಅವರ ಸತಿಯರ, ತಾಯಿತಂದೆಗಳ, ಅಕ್ಕ ತಂಗಿಯರ, ಚಿಕ್ಕ ಮಕ್ಕಳ, ವರ್ತನೆಗಳ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತವೆ. ಅವರೆಲ್ಲರೂ ಪರಸ್ಪರರ ಶಿವಾನುಭವವ ನಡೆಗೆ ಅನುಕೂಲರಾಗಿ ವರ್ತಿಸಿದ್ದನ್ನು ನಾವು ಇವುಗಳಲ್ಲಿ ಕಾಣುತ್ತೇವೆ. ಒಂದು ವೇಳೆ ಗಂಡನು ತಪ್ಪು ಮಾರ್ಗವನ್ನು ಹಿಡಿದಿದ್ದರೆ ಅವನ ಸತಿಯು ಅವನನ್ನು ಹಾದಿಗೆ ಹಚ್ಚಿದ್ದಾಳೆ. ಹೀಗೆ ಅವಳು ಯಾವಾಗಲೂ ಅವನಿಗೆ ಅನುಕೂಲಳಾಗಿ ವಿಧೇಯಳಾಗಿ ನಡಿದಿದ್ದಾಳೆ. ಅವನ ಕಷ್ಟಗಳಲ್ಲಿ ತಾನೂ ಭಾಗವಹಿಸಿ ನಡೆದಿದ್ದಾಳೆ. ಹೀಗೆ ಶಿವಶರಣ ಶರಣೆಯರ ವರ್ತನೆಯು ಇದೆ. ಇದು ಕೆಳಗಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ.

ಆದಯ್ಯನು ಸೋಮನಾಥನನ್ನು ಕರೆತರಲು ಸೌರಾಷ್ಟ್ರಕ್ಕೆ ಹೊರಟನು. ಅವನು ಊರಿಗೆ ತಿರುಗಿ ಬರುವ ವರೆಗೂ ಅವನ ಹೆಂಡತಿಯಾದ ಪದ್ಮಾವತಿಯು ಉಪವಾಸವಿದ್ದಳು. ಸಿದ್ಧರಾಮನು ಅಮುಗಿದೇವನನ್ನು ಪಟ್ಟಣದ ಹೊರಗೆ ಹಾಕಿದನು. ಆಗ ಅಮುಗಿದೇವನ ಹೆಂಡತಿಯಾದ ವರದಾನಿಯಮ್ಮನು ಅವನ ನೇಗಿಯ ಉಪಕರಣಗಳನ್ನು ಹೊತ್ತುಕೊಂಡು ಪತಿಯೊಡನೆ ಹೊರಬಿದ್ದಳು. ಕೋವೂರು ಬ್ರಹ್ಮಯ್ಯನು ರಾಜಧಾನಿಯನ್ನು ಬಿಟ್ಟು ಕೆಲಕಾಲ ಏಕಾಂತವಾಸದಲ್ಲಿದ್ದನು. ಆಗ ಅವನ ಮಗನನ್ನು ಕೊಂದುಹಾಕಿದರು. ಆದರೂ ಅವನ ತಾಯಿಯಾದ ಕಳಾವತಿಯು ತನ್ನ ಪತಿಯ ಅಪ್ಪಣೆಯಂತೆ ರಾಜ್ಯಭಾರ ನಡಿಸುತ್ತ ಬಂದಳು. ಚಾರಮರಾಯನಿಗೆ ಮೊದಲು ಶಿವಜ್ಞಾನವನ್ನು ಮಾಡಿಕೊಟ್ಟವಳು ಅವನ ಹೆಂಡತಿಯು. ತಂಗಟೂರು ಮಾರಯ್ಯನು ಹನ್ನೆರಡು ವರ್ಷ ಬಸವೇಶ್ವರನ ಸೇವೆ ಮಾಡುತ್ತ ತನ್ನ ಮನೆಗೆ ಬಾರದಿದ್ದರೂ ಅವನ ಹೆಂಡತಿಯು ಅವನಿಗೆ ಏನೂ ಅಡ್ಡ ಬರಲಿಲ್ಲ. ಅವಳು ಶಿವಾನುಭವದಂತೆ ನಡೆಯುತ್ತ ಪ್ರಾಣಲಿಂಗಿ ಸ್ಥಳವನ್ನು ಹೊಂದಿದಳು. ಅವಳ ಸೇವಕಳೂ ಕೂಡ ಅವಳಂತೆಯೇ ವರ್ತಿಸಿದಳು. ನಿರ್ಲಜ್ಜ ಶಾಂತಯ್ಯನಿಗೆ ದಿಗಂ

ಬರಿಯಾಗುವ ಪ್ರಸಂಗವು ಉಂಟಾಯಿತು. ಆಗ ಅವನ ಹೆಂಡತಿಯೂ ಕೂಡ ದಿಗಂಬರಿಯಾಗಲು ಸಿದ್ಧಳಾದಳು! ಸಗರದ ಬ್ರಹ್ಮಯ್ಯನು ಪ್ರಸಾದವೇ ಮುಖ್ಯವೆಂದು ಭಾವಿಸಿ ನಡೆವಲ್ಲಿ ತಪ್ಪಲು ಅವನ ಹೆಂಡತಿಯಾದ ಶಿವದೇವಿಯು ಅವನನ್ನು ಎಚ್ಚರಿಸಿದಳು. ಗುಪ್ತಮಂಚಣ್ಣನು ಸಮಾಧಿಯನ್ನು ಹೊಂದಲಾಗಿ ಅವನೊಡನೆ ಅವನ ಹೆಂಡತಿಯೂ ಸಮಾಧಿಯನ್ನು ಹೊಂದಿದಳು. ವರದಾನಿ ಗುಡ್ಡವ್ವೆಯು ಅದ್ಭುತವಾದ ಕಾರ್ಯಗಳನ್ನು ಮಾಡುತ್ತ ದೇಶವನ್ನು ಸಂಚರಿಸುತ್ತಾ ಇದ್ದಳು. ಆಗ ಅವಳ ಗಂಡನಾದ ಸಂಗಮನಾಥನು ಅವಳಿಗೆ ಸಹಾಯ ಮಾಡುತ್ತ ಅವಳೊಡನೆ ಇದ್ದನು. ಮಾದರ ಚನ್ನಯ್ಯನ ಲಿಂಗಾರ್ಪಿತ ಕಾರ್ಯಗಳಲ್ಲಿ ಅವನ ಹೆಂಡತಿಯು ಅವನಿಗೆ ಯಾವಾಗಲೂ ಅನುಕೂಲಳಾಗಿಯೇ ವರ್ತಿಸಿದ್ದಾಳೆ. ಹಾಗೆಯೇ ಮೋರನ ಮೇಮಯ್ಯನ ಹೆಂಡತಿಯು ಗಂಗಾದೇವಿಯು ವರ್ತಿಸಿದ್ದಾಳೆ. ಅವಳು ತನ್ನ ವಶಕ್ಕೆ ಬಂದ ಬಂಗಾರವನ್ನೆಲ್ಲ ಗಂಡನು ಹೇಳಿದಂತೆ ತಿಪ್ಪೆಯಲ್ಲಿ ಒಗೆದುಬಿಟ್ಟಳು! ಅಗ್ಗವಣಿಯ ಹೊನ್ನಯ್ಯನ|ವ್ರತವು ತಪ್ಪಲು ಅವನ ಹೆಂಡತಿಯು ಓಲೆಯ ಶಾಂತಯ್ಯನ ಮೊರೆ ಹೋಗಬೇಕೆಂದು ಅವನಿಗೆ ಉಪದೇಶ ಮಾಡಿದಳು. ಅಜಗಣ್ಣ ಮುಕ್ತಾಯಕ್ಕಗಳು ಸಹೋದರ ಸಹೋದರಿಯರು. ಆದರೂ ಒಂದೇ ಮನೆತನದವರಂತೆ ಅವರು ಪ್ರೀತಿಯಿಂದ ಇದ್ದರು. ಇಬ್ಬರೂ ವಚನಕಾರರು. ಇವೆಲ್ಲವು ಶಿವಾನುಭವಿಗಳಾದ ಸ್ತ್ರೀಯರ ಉಚ್ಚನಡೆಗಳಾಗಿವೆ. ಶಿವಾನುಭವ ಶಾಸ್ತ್ರವು ಸ್ತ್ರೀಯರಿಗೆ ಉಚ್ಚ ಸ್ಥಾನವನ್ನು ಕೊಟ್ಟಿದ್ದರಿಂದ ಅವರು ಹೀಗೆ ಶಿವಜ್ಞಾನಿಗಳಾಗಿ ತಮ್ಮ ಪತಿಗಳ ಕೂಡ ಉತ್ತಮ ಗೃಹಿಣಿಯರಾಗಿ ಆಚರಿಸಿದ್ದಾರೆ.

## ವೀರಶೈವ ಸ್ತ್ರೀಯಳು ಅವಿವಾಹಿತರಾಗಿ ಉಳಿಯಬಹುದು.

ವೀರಶೈವ ಧರ್ಮದ ಪ್ರಕಾರ ಸ್ತ್ರೀಯರು ಪುರುಷರಷ್ಟೇ ಸ್ವಾತಂತ್ರ್ಯವುಳ್ಳವರಿದ್ದಾರೆ. ಅವರಿಗೆ ಲಿಂಗಧಾರಣವಿರುವದರಿಂದ ಅವರು ತಮ್ಮ ಆಚರಣೆಗಳ ಸಾಮರ್ಥ್ಯದಿಂದಲೇ ಮೋಕ್ಷವನ್ನು ಹೊಂದತಕ್ಕದ್ದು. ಬ್ರಾಹ್ಮಣ ಧರ್ಮದಲ್ಲಿರುವಂತೆ ಅವರು ಮೋಕ್ಷ ಹೊಂದುವಲ್ಲಿ ತಮ್ಮ ಪತಿಗಳ ಕ್ರಿಯೆಗಳ ಮೇಲೆ ಅವಲಂಬಿಸಿರುವ ಕಾರಣವಿಲ್ಲ. ಆದ್ದರಿಂದ ವೀರಶೈವ ಸ್ತ್ರೀಯಳು ಲಗ್ನವಾಗಲೇಬೇಕೆಂಬ ನಿರ್ಬಂಧವಿರುವದಿಲ್ಲ. ಅವಳು ಲಗ್ನ

ಮಾಡಿಕೊಳ್ಳುವದು ಅವಳ ಇಚ್ಛೆಯ ಮೇಲೆ ಅವಲಂಬಿಸಿರುತ್ತದೆ. ಆದ್ದರಿಂದ ಶಿವಶರಣೆಯರಲ್ಲಿ ಅನೇಕರು ಅವಿವಾಹಿತರಾಗಿ ಉಳಿದಿದ್ದಾರೆ.

ಶಿವಶರಣೆಯಾದ ಅಕ್ಕ ಮಹಾದೇವಿಯು ಕಡೆಯವರೆಗೂ ಅವಿವಾಹಿತಳಾಗಿ ಉಳಿದಳು. ಬೊಂತಾದೇವಿಯು ಕಾಶ್ಮೀರ ದೇಶದ ರಾಜಕುಮಾರಿಯು. ಅನೇಕರು ಅವಳನ್ನು ವರಿಸಲು ಇಚ್ಛಿಸಿದರು. ಆದರೆ ಅವಳು ಯಾರನ್ನೂ ಲಗ್ನವಾಗದೆ ಕಲ್ಯಾಣ ಪಟ್ಟಣದಲ್ಲಿಯೇ ಅವಿವಾಹಿತಳಾಗಿ ಉಳಿದಳು. ಗೊಗ್ಗವ್ವೆಯ ತಾಯಿತಂದೆಗಳು ಅವಳು ಲಗ್ನವಾಗಬೇಕೆಂದು ಬಹಳ ಇಚ್ಛಿಸಿದರು. ಆದರೆ ಅವಳು ಲಗ್ನವಾಗುವದನ್ನು ನಿರಾಕರಿಸಿ ಕಡೆಯವರೆಗೂ ಹಾಗೆಯೇ ಉಳಿದಳು. ವರದಾನಿ ಗುಡ್ಡಮ್ಮೆಯು ಕಲ್ಯಾಣ ಪಟ್ಟಣದಲ್ಲಿರುವ ವರೆಗೆ ಲಗ್ನವಾಗದೆ ಇದ್ದಳು. ಆದರೆ ಅವಳು ತನ್ನ ಗ್ರಾಮಕ್ಕೆ ಹೋದ ಬಳಿಕ ಸಂಗಮನಾಥನೆಂಬುವನನ್ನು ವರಿಸಿದಳು. ಹೀಗೆ ವೀರಶೈವರಲ್ಲಿ ಸ್ತ್ರೀಯಳು ಲಗ್ನವಾಗುವದು ಅಥವಾ ಬಿಡುವದು ಅವಳ ಇಚ್ಛೆಯ ಮೇಲೆ ಇದೆ. ವೀರಶೈವರಲ್ಲಿ ಸ್ತ್ರೀಯರಿಗೆ ಸ್ವತಂತ್ರಾಧಿಕಾರವಿರುವದರಿಂದ ಅವರು ಹೀಗೆ ವರ್ತಿಸಿದಲ್ಲಿ ಯಾವ ದೋಷವೂ ಇರುವದಿಲ್ಲ.

## ಸ್ತ್ರೀಯರು ಕಾಯಕ ಮಾಡತಕ್ಕದ್ದು.

ಶಿವಾನುಭವದ ಪ್ರಕಾರ ಸ್ತ್ರೀಯಳಿಗೆ ಸ್ವಾತಂತ್ರಾಧಿಕಾರವಿರುವದರಿಂದ ಕೆಲವೊಂದು ಉದ್ಯೋಗವನ್ನು ಕೈಕೊಂಡು ಅವಳು ಅದರಿಂದ ಉಪಜೀವನವನ್ನು ಹೊಂದತಕ್ಕದ್ದು. ಅಂದರೆ ಹೇಗೆ ಪುರುಷರಿಗೆ ಕಾಯಕದ ತತ್ವಗಳು ಅನ್ವಯಿಸುತ್ತವೆಯೋ ಹಾಗೆಯೇ ಅವು ಸ್ತ್ರೀಯಳಿಗೂ ಅನ್ವಯಿಸುತ್ತವೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣೆಯರು ಪುರುಷರಂತೆ ಕೆಲವೊಂದು ಉದ್ಯೋಗವನ್ನು ಕೈಕೊಂಡು ಅದರಿಂದ ಅವರು ಉಪಜೀವನವನ್ನು ಹೊಂದುತ್ತ ದಾಸೋಹಿಗಳಾಗಿ ವರ್ತಿಸಿದ್ದಾರೆ.

ಅಮ್ಮವ್ವೆಯು ಬ್ರಾಹ್ಮಣಿಯು. ಅವಳ ಚಿಕ್ಕ ವಯಸ್ಸಿನಲ್ಲಿಯೇ ಅವಳ ತಂದೆ ತಾಯಿ, ಪತಿಗಳೆಲ್ಲರೂ ತೀರಿಕೊಳ್ಳಲು ಅವಳು ಅನಾಥಳಾದಳು. ಆದರೆ ಅವಳು ಆಗ ಭಿಕ್ಷೆ ಬೇಡಲಿಲ್ಲ. ಅವಳು ರಾಟಿಯ

ಕಾಯಕವನ್ನು ಕೈಕೊಂಡಳು. ಪಿಟ್ಟವ್ವೆಯು ಮುದುಕಿಯಾಗಲು ದೋಸೆ ಗಳನ್ನು ಮಾಡುವ ಕಾಯಕವನ್ನು ಕೈಕೊಂಡಳು. ಕದಿರೆ ರೆಮ್ಮವ್ವೆಯು ನೂಲುವ ಕಾಯಕವನ್ನು ಕೈಕೊಂಡಳು. ಅಣ್ಣಲದೇವಿಯು ಬೆರಣಿ ಗಳನ್ನು ಆಯುವ ಕಾಯಕವನ್ನು ಕೈಕೊಂಡಿದ್ದಳು. ಏಲೇರಿಯ ಅಮ್ಮ ವ್ವೆಯು ಒಕ್ಕಲುತನ ಮಾಡುತ್ತಿದ್ದಳು. ಒಂದುವೇಳೆ ಇಂಥ ಕಾಯಕ ಗಳು ಸ್ತ್ರೀಯರ ದೇಹಕ್ಕೆ ಕಷ್ಟಕರವೆನಿಸಿದಲ್ಲಿ ಅವರು ತಮಗೆ ಸುಲಭ ವಾದ ಬೇರೊಂದು ಜನೋಪಯೋಗೀ ಕಾಯಕವನ್ನು ಮಾಡತಕ್ಕದ್ದು. ಆದ್ದರಿಂದ ಸತ್ಯಕ್ಕನು ಶಿವಭಕ್ತರ ಮನೆಗಳಿಗೆ ಹೋಗಿ ಅವುಗಳನ್ನು ಉಡಿಗಿ ಸಮ್ಮಾರ್ಜನೆಯನ್ನು ಮಾಡುವಳು. ಇವಳು ವಚನಕಾರಳೂ ಇದ್ದಾಳೆ. ಸೇವಿಕೆ ಗೌರವ್ವೆಯು ಶಿವಭಕ್ತರ ಕೂಟಗಳಲ್ಲಿ ಮತ್ತು ಪ್ರಸ್ತ ಗಳಲ್ಲಿ ಹೋಗಿ ಅಲ್ಲಿಗೆ ಬಂದ ಸ್ತ್ರೀಪುರುಷರುಗಳಿಗೆ ದಾರಿಯನ್ನು ತೋರಿಸಿ ಅವರವರ ಸ್ಥಾನಗಳಲ್ಲಿ ಕುಳ್ಳಿರಿಸುವಳು. ತೊಂಗಿನ ಮಹಾದೇವಿಯು ಬೆಳಗಿನಲ್ಲೆದ್ದು ಭಕ್ತರನ್ನು ಎಚ್ಚರಿಸಿ ಅವರವರ ನಿತ್ಯದ ಕಾಯಕಕ್ಕೆ ತೊಡಗಿಸುವಳು. ಹೀಗೆ ಬಸವೇಶ್ವರನ ಕಾಲದಲ್ಲಿ ಸ್ತ್ರೀಯರು ಅನೇಕ ವಿಧವಾದ ಕಾಯಕಗಳನ್ನು ಮಾಡಿದ್ದಾರೆ.

ಕೆಲವು ಶಿವಶರಣೆಯರು ವಿದ್ವಾಂಸರಿದ್ದು ಅವರು ತಮ್ಮ ವಿದ್ವತ್ತಿಯ ಉಪಯೋಗವನ್ನು ಇತರರಿಗೆ ಮಾಡಿಕೊಡುವ ಕಾಯಕವನ್ನು ಕೈಕೊಂಡಿದ್ದರು. ಉದಾಹರಣಾರ್ಥವಾಗಿ ವೀರದೇವಮ್ಮನು ಶಿವಾನುಭವ ಶಾಸ್ತ್ರದಲ್ಲಿ ಪಾರಂಗತಳಾಗಿ ಶಿವಶರಣರ ನಾನಾವಿಧ ವಚನಗಳನ್ನು ದಿನಾಲು ಮೂರು ಹೊತ್ತು ಸ್ತ್ರೀಯರಲ್ಲಿ ಓದಿ ಹೇಳುವ ಕಾಯಕವನ್ನು ಮಾಡುತ್ತಾ ಇದ್ದಳು. ಇದರಿಂದ ಅವಳಿಗೆ 'ಉಗ್ಗಡಿಸುವ ಕನ್ನೆವೀರಾದೇವಿ' ಎಂಬ ಹೆಸರು ಉಂಟಾಗಿತ್ತು. ಶಿವ ಮಹಾದೇವಿಯು ದಿನಾಲು ಸ್ತ್ರೀಯರಿದ್ದಲ್ಲಿಗೆ ಹೋಗಿ ಶಿವಶರಣರ ಚರಿತ್ರೆಗಳದ್ದ ಪುರಾಣಗಳನ್ನು ಓದಿ ಹೇಳುವಳು. ವಿಮಳಾದೇವಿಯು ತನ್ನ ಶಿವಾನುಭವವನ್ನು ಇತರ ಸ್ತ್ರೀಯರಿಗೆ ಬೋಧಿಸಿ ಅವರಿಗೆ ಸುಜ್ಞಾನ ದೀಕ್ಷೆಯನ್ನು ಕೊಡುವಳು. ಹೀಗೆ ಬಸವೇಶ್ವರನ ಕಾಲದಲ್ಲಿ ಸ್ತ್ರೀಯರು ಅನೇಕ ತರದ ಕಾಯಕ ಗಳನ್ನು ಕೈಕೊಂಡು ತಮ್ಮ ಮತ್ತು ಸಮಾಜದ ಉದ್ಧಾರವನ್ನು ಮಾಡಿದ್ದಾರೆ.

ಬಹುಜನ ಸ್ತ್ರೀಯರು ಇಂಥ ಕಾಯಕಗಳನ್ನು ಕೈಕೊಳ್ಳದಿದ್ದರೂ ಮನೆಯಲ್ಲಿಯೇ ಇದ್ದುಕೊಂಡು ಮನೆಗೆಲಸ ಮಾಡುತ್ತ ಶಿವಾನುಭವದಲ್ಲಿ ಇರುವವರಾಗಿದ್ದರು. ಇವರು ಮಾಡುತ್ತಿದ್ದ ಮನೆಗೆಲಸಗಳೂ ಕೂಡ ಕಾಯಕಗಳಲ್ಲಿ ಬರುತ್ತವೆ.

## ಮನೆತನದ ಆಸ್ತಿಯಲ್ಲಿ ಸ್ತ್ರೀಯರಿಗೆ ಭಾಗ.

ಸ್ತ್ರೀಯರು ಕಾಯಕಗಳನ್ನು ಮಾಡಿಕೊಂಡು ತಮಗೆ ದೊರೆತದ್ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವವರಾದ್ದರಿಂದ ಅವರು ದುಡಿದದ್ದು ಅವರಿಗೆಯೇ ಸಲ್ಲತಕ್ಕದ್ದು. ಇದೇ ಧರ್ಮಾಚರಣೆಗೆ ಸಮ್ಮತವಾದುದು. ಅವರು ಎರಡನೆಯವರು ದುಡಿದದ್ದನ್ನು ತಮ್ಮ ದಾಸೋಹಕ್ಕೆ ಉಪಯೋಗಿಸುವದು ಶಿವಾನುಭವಕ್ಕೆ ವಿರೋಧವಾದುದು. ಆದ್ದರಿಂದ ಸ್ತ್ರೀಯರು ಮನೆತನದಲ್ಲಿದ್ದರೂ ಕೂಡ ಅವರು ಶ್ರಮಪಟ್ಟು ಗಳಿಸಬೇಕು. ಒಂದು ವೇಳೆ ಮನೆತನದಲ್ಲಿದ್ದವರು ಸಾಮೂಹಿಕವಾಗಿ ದುಡಿಯುತ್ತಿದ್ದರೆ ಅದರಲ್ಲಿ ಅವಳು ಅವರಿಗೆ ಸಹಾಯುವಾಗಬೇಕು. ಹೀಗೆ ಸಹಾಯುವಾಗಿ ಎಲ್ಲರೂ ದುಡಿದದ್ದರಲ್ಲಿ ಅವಳು ತನ್ನ ಭಾಗವನ್ನು ತೆಗೆದುಕೊಂಡು ಅದರ ಮೂಲಕ ದಾಸೋಹ ಕಾರ್ಯಗಳನ್ನು ನಡಿಸತಕ್ಕದ್ದು. ವೀರಶೈವರಾದ ಸ್ತ್ರೀ ಪುರುಷರು ಸಮಾನಾಧಿಕಾರವುಳ್ಳವರಾದ್ದರಿಂದ ಅವರಿಗೆ ಸಲ್ಲತಕ್ಕ ಈ ಭಾಗವು ಪುರುಷರಿಗಿರುವಷ್ಟೇ ಇರುತ್ತಿದೆ. ಹೀಗೆ ಹಿಂದಿನ ಕಾಲದಲ್ಲಿ ಶಿವಶರಣರು ಆಚರಿಸಿದ್ದಾರೆ. ಆದರೆ ಈ ತತ್ವವು ಬ್ರಾಹ್ಮಣ ಧರ್ಮಶಾಸ್ತ್ರಗಳಲ್ಲಿ ಇರುವ ಸಂಭವವಿಲ್ಲ. ಯಾಕಂದರೆ ಈ ಶಾಸ್ತ್ರಗಳ ಪ್ರಕಾರ ಸ್ತ್ರೀಯರಿಗೆ ಸ್ವತಂತ್ರಾಧಿಕಾರವಿರುವದಿಲ್ಲ. ಆದ್ದರಿಂದ ಅವರಿಗೆ ಮನೆತನದ ಆಸ್ತಿಯಲ್ಲಿ ಭಾಗವು ಸಿಗದೆ 'ಪೋಟಿಗಿ' ಮಾತ್ರ ದೊರೆಯುತ್ತದೆ. ಆದರೆ ಶಿವಾನುಭವದ ಪ್ರಕಾರ ಸ್ತ್ರೀಯರು ಸ್ವತಂತ್ರಾಧಿಕಾರವುಳ್ಳವರಾದ್ದರಿಂದ ಅವರಿಗೆ ಮನೆತನದ ಆಸ್ತಿಯಲ್ಲಿ ಸ್ವತಂತ್ರ ಹಿಸೆ ಅಥವಾ ಭಾಗವು ದೊರೆಯುವದು. ಇದೇ ಶಿವಾನುಭವದ ಸರಿಯಾದ ಆಚರಣೆಯು. ಇದು ಶಿವಶರಣೆಯಾದ ಶಿವಪ್ರಿಯನಾಚಿಯ ಚರಿತ್ರೆಯಿಂದ ತಿಳಿದುಬರುತ್ತದೆ.

ಶಿವಪ್ರಿಯನಾಚಿಯು ಚಂದಪೂರು ಎಂಬ ಗ್ರಾಮದವಳು. ಅವಳಿಗೆ ಅಣ್ಣನಾಚಯ್ಯ ಮತ್ತು ಆರುಣಾದ್ರಿ ಎಂಬ ಅಣ್ಣಂದಿರಿದ್ದರು. ಅವರ

ತಂದೆಯು ತೀರಿಕೊಂಡ ಬಳಿಕ ಈ ಮೂವರೂ ಮನೆತನದ ಆಸ್ತಿಯಲ್ಲಿ ಸಮವಾಗಿ ಮೂರು ಭಾಗಗಳನ್ನು ಮಾಡಿಕೊಂಡರು. ಹೀಗಿರುವಲ್ಲಿ ಅಣ್ಣನಾಚಯ್ಯನು ವ್ಯಾಪಾರಕ್ಕೋಸ್ಕರ ಪರದೇಶಕ್ಕೆ ಹೋಗಿ ಅಲ್ಲಿಯೇ ಮೃತನಾದನು. ಆದ್ದರಿಂದ ಅವನು ಬಹಳ ದಿವಸ ತನ್ನ ಗ್ರಾಮಕ್ಕೆ ಬಾರದಿರಲು ಅರುಣಾದ್ರಿಯು ತನ್ನ ತಂಗಿಗೆ ಬಂದ ಪಾಲನ್ನು ಅವಳ ಕಡೆಯಿಂದ ಬಲಾತ್ಕಾರದಿಂದ ಕಸೆದುಕೊಂಡು ಬಿಟ್ಟನು. ಆದರೆ ಶಿವ ಪ್ರಿಯನಾಚಿಯು ಪರಮಾತ್ಮನ ಕೇವಲ ಭಕ್ತಳು. ಅವಳು ತನ್ನ ಕಿರಿಯ ಣ್ಣನು ಮಾಡಿದ ಅನ್ಯಾಯಕ್ಕೋಸ್ಕರ ಪರಮಾತ್ಮನಲ್ಲಿ ಮೊರೆ ಇಡಲು, ಪರಮಾತ್ಮನು ಅಣ್ಣನಾಚಯ್ಯನ ರೂಪನ್ನು ಧರಿಸಿಕೊಂಡು ಗ್ರಾಮಕ್ಕೆ ಬಂದು ಶಿವಪ್ರಿಯನಾಚಿಯ ಪಾಲನ್ನು ಅವಳಿಗೆ ಅರುಣಾದ್ರಿಯ ಕಡೆಯಿಂದ ತಿರುಗಿ ಕೊಡಿಸಿದನು. ಹೀಗೆ ಈ ಚರಿತ್ರೆಯು ಇದ್ದು ಇದರಿಂದ ವೀರಶೈವ ಸ್ತ್ರೀಯಳಿಗೆ ಮನೆತನದ ಆಸ್ತಿಯಲ್ಲಿ ಸ್ವತಂತ್ರ ಪಾಲು ಇರುತ್ತದೆಂಬುದು ತಿಳಿದುಬರುತ್ತಿದೆ.

## ಶಿವಶರಣರಾದ ಬಾಲ ಬಾಲಿಕೆಯರು.

ಬ್ರಾಹ್ಮಣ ಧರ್ಮಶಾಸ್ತ್ರದ ಪ್ರಕಾರ ಬಾಲಕರು ಯಜ್ಞೋಪವೀತ ವನ್ನು ಧಾರಣ ಮಾಡುವವರೆಗೆ ಅವರಿಗೆ ವೇದಾಧಿಕಾರವಿರುವದಿಲ್ಲ. ಆದ್ದರಿಂದ ಧರ್ಮಶಾಸ್ತ್ರವನ್ನು ಅಭ್ಯಸಿಸಲು ಅವರು ಅನರ್ಹರಿರುತ್ತಾರೆ. ಆದರೆ ಶಿವಾನುಭವದ ಪ್ರಕಾರ ಬಾಲಬಾಲಿಕೆಯರು ಹುಟ್ಟಿದಾರಭ್ಯ ಲಿಂಗಧಾರಣೆಗೆ ಯೋಗ್ಯರು. ಆದ್ದರಿಂದ ಅವರ ಶಿವಾನುಭವದ ವರ್ತ ನೆಯು ಅಂದಿನಿಂದಲೇ ಪ್ರಾರಂಭವಾಗುತ್ತದೆ. ಅಂದಿನಿಂದಲೇ ಅವರ ಮಾನಸಿಕ ಮತ್ತು ಬೌದ್ಧಿಕ ಬೆಳವಣಿಗೆಯು ಆಗಹತ್ತುತ್ತಿದೆ. ಇದು ಕ್ರಮಕ್ರ ಮೇಣ ಹೆಚ್ಚುತ್ತಲೇ ಹೋಗುತ್ತಿದೆ. ಶಿವಾನುಭವವು ಈ ತತ್ವವನ್ನು ಸ್ವೀಕ ರಿಸಿದ್ದರಿಂದ ವೀರಶೈವರಲ್ಲಿ ಅನೇ ಬಾಲಬಾಲಿಕೆಯರು ಶಿವಶರಣ ಶರ ಣೆಯರಾಗಿದ್ದಾರೆ. ಅವರ ಶಿವಾನುಭವದ ಆಚರಣೆಯ ಮೂಲಕ ಪರಮಾತ್ಮನು ಅವರಿಗೆ ಒಲಿದಿದ್ದಾನೆ. ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ೨ ಈ ಗ್ರಂಥಗಳಲ್ಲಿ ಬಾಲಕರಾದ ವೈದುನರಾಮಯ್ಯ, ಶಂಕಿ ತೊಂಡಿ, ಗೊಲ್ಲಾಳ, ಬಾಲಲಿಂಗಣ್ಣ ಮತ್ತು ಬಾಲಿಕೆಯರಾದಕೋಲಂಬೆ, ಕೋಳೂರು ಕೊಡಗೂಸು, ಹಾವಿನಹಾಳ ಕಲ್ಲಯ್ಯನ ಮಗಳಾದ ಕಲ್ಲವ್ವೆ,

ಇವರ ಚಾರಿತ್ರ್ಯಗಳು ಬಂದಿವೆ. ಕೋಲಂಬೆಯು ದೇವರಿಗಾಗಿ ಮಾಡಿದ ಹುಲ್ಲು ಗುಡಿಸಲು ಅವಳ ಭಕ್ತಿಗೋಸ್ಕರ ಅದು ಕಲ್ಲುಗುಡಿಯಾಯಿತು. ಶಂಕಿತೊಂಡಿಯು (ಶಿವಶರಣರ ಚರಿತ್ರೆಗಳು ಭಾಗ ೧–ಪುಟ ೧೩೬ ನೋಡಿರಿ.) ತಾನು ಪರಮಾತ್ಮನ ಗುಡಿಗೋಸ್ಕರ ಕೂಡಿಸಿಟ್ಟ ಕಲ್ಲುಗಳಲ್ಲಿ ಒಂದು ಕಲ್ಲು ಕಡಿಮೆಯಾಗಲು ಅವನು ತನ್ನ ಶಿರವನ್ನು ಅರ್ಪಿಸಲು ಸಿದ್ಧನಾದನು. ವೈದುನ ರಾಮಯ್ಯನು ಪರಮಾತ್ಮನು ತನ್ನ ಭಾವ ನೆಂದು ತಿಳಿದು ಇವನೆಲ್ಲಿದ್ದಾನೆಂದು ಶ್ರೀಶೈಲದಲ್ಲಿ ಹುಡುಕುತ್ತಿರಲು ಅವನು ಅವನಿಗೆ ಪ್ರತ್ಯಕ್ಷನಾಗಿ ಅವನ ಮನೆಗೆಯೇ ಬಂದನು. ತರಳ ನಾದ ಗೊಲ್ಲಾಳನಿಗೆ ಕುರಿಯು ಹಿಕ್ಕಿಯೇ ಲಿಂಗವಾಯಿತು. ಕೊಡ ಗೂಸು ಅರ್ಪಿಸುತ್ತಿದ್ದ ಹಾಲನ್ನು ಪರಮಾತ್ಮನು ಪ್ರತ್ಯಕ್ಷ ಸ್ವೀಕರಿಸುವವ ನಾದನು ಚಿಕ್ಕಮಾದಣ್ಣ. ಮಹಾದೇವಿ ಮತ್ತು ಬಾಲಲಿಂಗಣ್ಣ ಇವ ರೆಲ್ಲರೂ ಶಿವಾನುಭವಿಗಳು. ಆದ್ದರಿಂದ ಬಾಲಲಿಂಗಣ್ಣನ ಇಚ್ಛೆಯಂತೆ ಚಿಕ್ಕಮಾದಣ್ಣನ ಪ್ರಾಣವು ಹಿಂದಿರುಗಿ ಬಂದಿತು. ಈ ಪ್ರಕಾರ ವೀರ ಶೈವರಲ್ಲಿ ಶಿವಶರಣರ ಸ್ಥಾನವನ್ನು ಹೊಂದಿದ ಅನೇಕ ಬಾಲಬಾಲಿ ಕೆಯರಾಗಿಹೋಗಿದ್ದಾರೆ.

ಶಿವಾನುಭವದ ಮೂಲಕ ಕುಟುಂಬಗಳು ಉಚ್ಚ ಸಂಸ್ಕೃತಿಯನ್ನು ಹೊಂದುತ್ತವೆ. ಇದರಿಂದ ಅವುಗಳಲ್ಲಿರುವ ಸ್ತ್ರೀಪುರುಷ ಬಾಲಬಾಲಿಕೆ ಯರೆಲ್ಲರೂ ಹೀಗೆ ಉಚ್ಚ ಸ್ಥಿತಿಯನ್ನು ಹೊಂದಿದ್ದಾರೆ.

## ವೀರಶೈವ ಧರ್ಮದ ಪ್ರಸಾರ.

ಇನ್ನುಮುಂದೆ ನಾವು ವೀರಶೈವ ಧರ್ಮವು ಪ್ರಸಾರ ಹೊಂದಲು ಕಾರಣಗಳಾವವೆಂಬುದನ್ನು ಕುರಿತು ಸಂಕ್ಷಿಪ್ತವಾಗಿ ವಿವೇಚಿಸುತ್ತೇವೆ. ಇದರಲ್ಲಿ ನಾವು ಈ ವರೆಗೆ ಪ್ರಸಿದ್ಧಮಾಡಿರುವ ಶಿವಶರಣರ ಚರಿತ್ರೆಗ ಳನ್ನೇ ಆಧಾರವಾಗಿಟ್ಟುಕೊಂಡು ನಿರೂಪಿಸುತ್ತೇವೆ. ಆದರೆ ಆರಂಭ ದಲ್ಲಿ ನಾವು ವೀರಶೈವ ಧರ್ಮದ ಕೆಲವು ಸಾಮಾನ್ಯ ಲಕ್ಷಣಗಳನ್ನು ವಿವರಿಸುವದು ಅವಶ್ಯವಿರುತ್ತದೆ.

## ವೀರಶೈವ ಧರ್ಮವು ಜನಸಮುದಾಯದ ಸರ್ವಸಾಮಾನ್ಯ ಧರ್ಮವು.

ವೀರಶೈವ ಸಮಾಜವು ಕರ್ನಾಟಕದ ಮಧ್ಯ ಮತ್ತು ಉತ್ತರ ಭಾಗಗಳಲ್ಲಿರುವ ಅನೇಕ ಸಮಾಜಗಳಲ್ಲೆಲ್ಲ ಬಹು ನಿಬಿಡವಾಗಿ ಹಬ್ಬಿ

ರುವದು ಕಂಡುಬರುತ್ತದೆ. ಇಲ್ಲಿ ವೀರಶೈವರ ಜನ ಸಂಖ್ಯೆಯು ಸುಮಾರು ೨೫ ರಿಂದ ೩೦ ಲಕ್ಷದ ವರೆಗೆ ಇರುತ್ತದೆ. ಹೀಗೆ ಒಂದೇ ಕಡೆಗೆ ದಟ್ಟವಾದ ಜನವಸತಿಯುಳ್ಳ ಧರ್ಮವು ಹಿಂದುಸ್ತಾನದಲ್ಲಿ ಸೀಖ ಧರ್ಮದ ಹೊರತಾಗಿ ಬೇರೆ ಯಾವ ಧರ್ಮದಲ್ಲಿಯೂ ಇರುವದು ಕಂಡುಬರುವದಿಲ್ಲ. ಮುಸಲ್ಮಾನ, ಬ್ರಾಹ್ಮಣ ಧರ್ಮೀಯರ ಸಂಖ್ಯೆಯು ವೀರಶೈವರ ಸಂಖ್ಯೆಗಿಂತಲೂ ಅನೇಕ ಮಡಿ ಹೆಚ್ಚಿಗೆ ಇರುತ್ತಿದೆ. ಆದರೆ ಅವರ ವಸತಿಯು ಬೇರೆ ಬೇರೆ ಪ್ರಾಂತಗಳಲ್ಲಿ ಹರಿದು ಹಂಚಿಹೋಗಿರುತ್ತದೆ. ಹೀಗೆ ವೀರಶೈವ ಧರ್ಮವು ಒಂದೇ ಕಡೆಗೆ ಅನೇಕ ಸಮಾಜಗಳಲ್ಲಿ ದಟ್ಟವಾಗಿ ಹಬ್ಬಿದ್ದರ ಮೇಲಿಂದ ಅದು ಹಿಂದಿನ ಕಾಲದಲ್ಲಿ ಜನಸಮುದಾಯಕ್ಕೆಲ್ಲ ಸರ್ವಸಾಮಾನ್ಯಧರ್ಮವಾಗಿದ್ದಿತೆಂಬುದನ್ನು ತೋರಿಸುತ್ತದೆ. ಹೀಗೆ ಅದು ಪ್ರಸಾರಹೊಂದುವದಕ್ಕೆ ಆವ ಸಂಗತಿಗಳು ಕಾರಣವಾದವೆಂಬುದನ್ನು ನಾವು ಇಲ್ಲಿ ನಿರ್ದೇಶಿಸುತ್ತೇವೆ.

## ಶಿವಶರಣರು ರಾಜ್ಯಾಧಿಕಾರಿಗಳಿಂದ ಸಹಾಯ ಹೊಂದಿಲ್ಲ.

ಅನೇಕರು ಶಿವಶರಣರು ಹಿಂದಿನ ಕಾಲದಲ್ಲಿ ರಾಜಕೀಯ ಅಧಿಕಾರಿಗಳಿಂದ ಸಹಾಯವನ್ನು ಹೊಂದಿ ಹೀಗೆ ತಮ್ಮ ಧರ್ಮವನ್ನು ಬೆಳಸಿದರೆಂದು ತಿಳಿದಿದ್ದಾರೆ. ಆದರೆ ಇದು ತೀರ ತಪ್ಪು ತಿಳವಳಿಕೆ ಎಂಬುದು ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತಿದೆ. ಶಿವಶರಣರು ರಾಜ್ಯಾಧಿಕಾರಿಗಳಿಂದ ಯಾವ ಸಹಾಯವನ್ನೂ ಹೊಂದಿರುವದಿಲ್ಲ. ಇಷ್ಟೇ ಅಲ್ಲ, ಅವರು ಇಂಥ ಅಧಿಕಾರಿಗಳಿಂದ ಆಗಿಂದಾಗ್ಗೆ ವಿರೋಧಿಸಲ್ಪಟ್ಟಿದ್ದಾರೆ.

ಶಿವಶರಣರು ಕರ್ನಾಟಕದಲ್ಲಿ ಉದಯವಾದ ಕಾಲದಲ್ಲಿ ಜೈನ, ಬ್ರಾಹ್ಮಣ, ಪಾಶುಪತ, ಕಾಳಾಮುಖ ಮೊದಲಾದ ಧರ್ಮಗಳು ಉಚ್ಚಸ್ಥಿತಿಯನ್ನು ಹೊಂದಿದ್ದವು. ಆ ಧರ್ಮಗಳಲ್ಲಿ ಈ ಕಾಲದಲ್ಲಿ ಅನೇಕ ಧರ್ಮಸ್ಥಾಪಕರೂ, ವಾಙ್ಮಯವಿಶಾರದರೂ, ಪಂಡಿತರೂ, ಕಲಾವಿದರೂ ಆಗಿಹೋಗಿದ್ದಾರೆ. ಇವರನ್ನು ಆಗಿನ ಮಹತ್ವದ ರಾಜಮನೆತನಗಳಾದ ಚಾಲುಕ್ಯ, ಹೊಯಿಸಳರೂ ಅವರ ಮಾಂಡಲಿಕರಾದ ಶಿಲಾಹಾರ, ಕಲಚೂರ್ಯ, ನೊಳಂಬ ಪಲ್ಲವ, ಪಾಂಡ್ಯವಂಶದವರೂ ಪುರಸ್ಕರಿಸುವವರಾಗಿದ್ದರು. ಇಂಥ ರಾಜರ ಸಹಾಯವು ಶಿವಶರಣರಿಗೆ ದೊರೆತಿದ್ದುದು ಶಿವಶರಣರ ಯಾವ ಚರಿತ್ರೆಯಲ್ಲಿಯೂ ಕಂಡುಬರು

ವದಿಲ್ಲ. ಬಸವೇಶ್ವರನು ಮಂತ್ರಿ ಪದದಲ್ಲಿದ್ದರೂ ಬಿಜ್ಜಳರಾಜನು ಅವನಿಗೆ ಬೆಂಬಲಕೊಟ್ಟಿದ್ದು ಈ ಚರಿತ್ರೆಗಳಲ್ಲಿ ಕಂಡುಬರುವದಿಲ್ಲ. ಇದರ ಬದಲು ಬಿಜ್ಜಳನು ಆವನಿಗೆ ಹೆಜ್ಜೆ ಹೆಜ್ಜೆಗೂ ಪ್ರತಿರೋಧಿಸುತ್ತಾ ಬಂದಿದ್ದಾನೆ. ಅಶೋಕರಾಜನಿಂದ ಬೌದ್ಧ ಧರ್ಮವು, ಕಾನಸ್ಟಂಟಾಯಿನ ಚಕ್ರವರ್ತಿಯಿಂದ ಕ್ರಿಸ್ತೀ ಧರ್ಮವು, ಮತ್ತು ಖಲೀಫರಿಂದ ಇಸ್ಲಾಮ ಧರ್ಮವು ಪ್ರಸಾರ ಹೇಗೆ ಹೊಂದಿದವೋ ಹಾಗೆ ವೀರಶೈವ ಧರ್ಮವು ಯಾವ ರಾಜಕೀಯ ಸತ್ತಾಧಿಕಾರಿಗಳಿಂದಲೂ ಬಲವನ್ನು ಸಂಪಾದಿಸಿಕೊಂಡು ದೇಶದಲ್ಲಿ ಪ್ರಸಾರ ಹೊಂದಿರುವದಿಲ್ಲ. ಇದರ ಬದಲು ಇಂಥ ರಾಜಕೀಯ ಮತ್ತು ಧಾರ್ಮಿಕ ಸತ್ತಾಧಿಕಾರಿಗಳು ಶಿವಶರಣರ ಹಿಂಸೆಯನ್ನು ಆಗಿಂದಾಗ್ಗೆ ಮಾಡಿದ್ದು ಅವರ ಚರಿತ್ರೆಗಳಲ್ಲಿ ಕಂಡುಬರುತ್ತಿದೆ. ಇದನ್ನು ನಾವು ಮುಂದೆ ವಿವರಿಸುವೆವು.

ವೀರಶೈವ ಧರ್ಮವು ಪ್ರಸಾರ ಹೊಂದಿದ್ದು ಅದರಲ್ಲಿರುವ ಸರ್ವಸಮ್ಮತವಾದ ತತ್ವಗಳ ಮೂಲಕವೇ ಇರುತ್ತಿದೆ. ಈ ತತ್ವಗಳನ್ನು ಶಿವಶರಣರು ತಾವು ಅಕ್ಷರಶಃ ಪಾಲಿಸುತ್ತ ಅವುಗಳನ್ನು ಅವರು ಜನತೆಯಲ್ಲಿ ವಚನಗಳ ಮೂಲಕ ಪ್ರಸಾರ ಮಾಡಿದ್ದಾರೆ. ಅವರ ಈ ಕಾರ್ಯವು ಬಸವೇಶ್ವರನಗಿಂತ ೧೦೦-೧೫೦ ವರ್ಷಗಳ ಪೂರ್ವದಲ್ಲಿಯೇ ಪ್ರಾರಂಭವಾಗಿ ಅದು ಹೆಚ್ಚು ಕಡಿಮೆ ಪ್ರಮಾಣದಿಂದ ಮುಸಲ್ಮಾನರು ಕರ್ನಾಟಕವನ್ನು ಅಭಿಯೋಗಿಸುವ ವರೆಗೂ ನಡಿಯುತ್ತ ಬಂದಿರುತ್ತದೆ. ಈ ಸಂಗತಿಯು ಶಿವಶರಣರ ಕಾಲ ಮತ್ತು ಅವರ ಚರಿತ್ರೆಗಳಿಂದ ಕಂಡು ಬರುತ್ತದೆ. ಶಿವಶರಣರಲ್ಲಿ ಯಾರು ಬಸವೇಶ್ವರನಕ್ಕಿಂತ ಮೊದಲು ಇದ್ದರು ಎಂಬುದನ್ನು ನಾವು ಮುಂದೆ ವಿವರಿಸುತ್ತೇವೆ.

## ಶಿವಶರಣರ ಕಾಲದಲ್ಲಿ ವೀರಶೈವರ ಅಲ್ಪ ಸಂಖ್ಯೆ.

ಶಿವಶರಣರು ತಮ್ಮ ಧರ್ಮ ಪ್ರಸಾರ ಕಾರ್ಯವನ್ನು ಕೈಕೊಂಡಾಗ್ಗೆ ವೀರಶೈವರ ಜನಸಂಖ್ಯೆಯು ನಾಡಿನಲ್ಲಿ ಬಹು ವಿರಳವಾಗಿತ್ತೆಂದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಪುಲಿಗೆರೆ ಅಥವಾ ಲಕ್ಷ್ಮೇಶ್ವರವನ್ನು ಆದಯ್ಯನು ಪ್ರವೇಶಿಸಿದಾಗ್ಗೆ ವೀರಶೈವರ ವಸತಿಯೇ ಅಲ್ಲಿರಲಿಲ್ಲ. ಅಲ್ಲಿ ಎಲ್ಲೆಲ್ಲಿಯೂ ಚೈತ್ಯಾಲಯಗಳೇ ಅವನ ಕಣ್ಣಿಗೆ ಬಿದ್ದವು. ವೀರಶೈವರ ವಸತಿಯು ಕಲಬುರ್ಗಿ ಜಿಲ್ಲೆಯಲ್ಲಿ ಈಗ ದಟ್ಟವಾಗಿ

ಇರುತ್ತದೆ. ಆದರೆ ಅದರ ಮಧ್ಯ ಸ್ಥಳವಾದ ಮಾರುಡಿಗೆಯಲ್ಲಿ ವೀರಶೈವರಾರೂ ಇರಲಿಲ್ಲ. ಇದೇ ಸ್ಥಿತಿಯು ಏಕಾಂತದ ರಾಮಯ್ಯನ ಸ್ಥಳವಾದ ಅಬ್ಬಲೂರು (ಧಾರವಾಡ ಜಿಲ್ಲೆ) ಕೋವೂರ ಬ್ರಹ್ಮಯ್ಯನ ಸ್ಥಳವಾದ ಕೋಹಳ್ಳಿ (ವಿಜಾಪುರ ಜಿಲ್ಲೆ) ಏಲೇಶ ಕೇತಯ್ಯನ ಸ್ಥಳವಾದ ಏಲೇರಿ (ಕಲಬುರ್ಗಿ ಜಿಲ್ಲೆ) ಇಲ್ಲಿಯೂ ಇದ್ದಿತು. ಇವೆಲ್ಲವೂ ಹಿಂದಿನ ಕಾಲದಲ್ಲಿ ಮುಖ್ಯ ಗ್ರಾಮಗಳು. ಇಂಥ ಗ್ರಾಮಗಳಲ್ಲಿ ವೀರಶೈವರ ಸಂಖ್ಯೆಯು ಅತ್ಯಲ್ಪವಾಗಿದ್ದರ ಮೇಲಿಂದ ಗ್ರಾಮಾಂತರಗಳಲ್ಲಿಯೂ ಕೂಡ ಇದೇ ಸ್ಥಿತಿಯು ಇದ್ದಿರಬೇಕೆಂಬ ಅನುಮಾನವು ಉಂಟಾಗುತ್ತದೆ.

ಆದರೆ ಈ ಗ್ರಾಮಗಳು ಇದ್ದ ಭಾಗಗಳಲ್ಲಿ ವೀರಶೈವರ ಸಂಖ್ಯೆಯು ಈಗ ಬಹು ದಟ್ಟವಾಗಿರುತ್ತದೆ. ಹೀಗೆ ಅವರ ಸಂಖ್ಯೆಯು ಬೆಳೆಯುಲಿಕ್ಕೆ ಕಾರಣಗಳಾವವೆಂಬುದನ್ನು ನಾವು ಕಂಡು ಹಿಡಿಯುವದು ಬಹಳ ಮಹತ್ವದ್ದಿರುತ್ತದೆ. ಆದರೆ ಈ ವಿಷಯದಲ್ಲಿ ಕೆಲವು ಕಾರಣಗಳು ಅನೇಕರಿಂದ ತೋರಿಸಲ್ಪಡುತ್ತಿದ್ದು ಅವುಗಳು ಸರಿಯಾದುವಲ್ಲವೆಂದು ನಿರ್ದೇಶ ಮಾಡುವದು ಮೊದಲು ನಮಗೆ ಅವಶ್ಯ ತೋರುತ್ತದೆ.

## ವೀರಶೈವರಲ್ಲಿ ಜಾತ್ಯಾನುಸಾರ ಧರ್ಮಾಂತರಗಳಾಗಿಲ್ಲ.

ಈ ಕಾಲದಲ್ಲಿ ಜಾತಿಗೊಬ್ಬ ಶರಣನಾಗಿ ಅವನು ತನ್ನ ಜಾತಿಯವರನ್ನೆಲ್ಲ ಲಿಂಗಧಾರಿಗಳನ್ನಾಗಿ ಮಾಡಿದನೆಂದು ಕೆಲವರು ಊಹಿಸುತ್ತಾರೆ. ಆದರೆ ಶಿವಶರಣರ ಚರಿತ್ರೆಗಳನ್ನು ಪರಿಶೀಲಿಸಿದಲ್ಲಿ ಅವರು ಇಂಥ ಜಾತಿ ವಿಶಿಷ್ಟ ಭಾವನೆಯನ್ನು ತಾಳಿದ್ದು ಕಂಡುಬರುವದಿಲ್ಲ. ಅವರು ಜಾತಿ ಅಥವಾ ಪಂಗಡಗಳನ್ನು ಎಷ್ಟುಮಾತ್ರವೂ ಲಕ್ಷಿಸದೆ ಹೊಲೆಯ ಮೊದಲ್ಗೊಂಡು ಬ್ರಾಹ್ಮಣ ವರ್ಗದವರೆಲ್ಲರಿಗೂ ಸಮನಾಗಿ ಬೋಧಿಸಿರುತ್ತಾರೆ. ಇದು ಅವರು ರಚಿಸಿದ ವಚನಗಳಿಂದ ಸ್ಪಷ್ಟವಾಗುತ್ತದೆ. ಒಂದುವೇಳೆ ಅವರು ಹೀಗೆ ವರ್ತಿಸದೆ ತಮ್ಮ ಜಾತಿಯವರಿಗಷ್ಟೇ ಬೋಧಿಸಿದ್ದರೆ, ವೀರಶೈವ ಸಮಾಜದಲ್ಲಿ ಜಾತಿಗೊಬ್ಬೊಬ್ಬ ಸ್ವತಂತ್ರ ಗುರುವು ಅಥವಾ ಮಠಾಧಿಕಾರಿಯಾಗುತ್ತಿದ್ದನು. ಆದರೆ ಹೀಗೆ ಇರುವದು ಕಂಡು ಬರದೆ, ಮಠಾಧಿಕಾರಿಗಳಿಗೆಲ್ಲ ಅನೇಕ ಜಾತಿಯ ಶಿಷ್ಯ ಮನೆತನಗಳಿರುವದನ್ನು ನಾವು ಈಗ ನೋಡುತ್ತೇವೆ. ಇದರಿಂದ ಹಿಂದಿದ ಕಾಲದಲ್ಲಿ ಶಿವ

ಶರಣರು ಮತ್ತು ಪುರಾಧಿಕಾರಿಗಳು ತಾವು ಹೊಂದಿನ ಸಂಗಡ ಅಥವಾ ಜಾತಿ ಈ ಭಾವನೆಯನ್ನಿಟ್ಟುಕೊಂಡು ಧರ್ಮಪ್ರಸಾರ ಮಾಡಿಲ್ಲೆಂದು ತೋರುತ್ತದೆ.

## ಶಿವಶರಣರು ಸ್ವೈರ ವೃತ್ತಿಗೆ ಇಂಬುಗೊಟ್ಟು ಧರ್ಮಾಂತರಗೊಳಿಸಿಲ್ಲ.

ಬೇರೆ ಕೆಲವರು ಹಿಂದಿನಕಾಲದಲ್ಲಿ ಶಿವಶರಣರು ಅಜ್ಞಾನಿಗಳಿಗೆ ಅನೇಕ ರೀತಿಯಿಂದ ಮೋಹವನ್ನು ಉಂಟುಮಾಡಿ ಅವರ ಸ್ವೈರ ವೃತ್ತಿಗೂ ದುರಾಶೆಗಳಿಗೂ ಇಂಬುಕೊಟ್ಟು ಅಥವಾ ಅವರ ಮೇಲೆ ಬಲಾತ್ಕಾರ ಮಾಡಿ ಅವರನ್ನು ಧರ್ಮಾಂತರಗೊಳಿಸಿರಬೇಕೆಂದು ಭಾವಿಸಿದ್ದಾರೆ. ಈ ರೀತಿ ಈಗಿನ ಕೆಲವು ಪ್ರಮುಖ ಧರ್ಮಗಳ ಪ್ರಚಾರಕರು ವರ್ತಿಸಿರುವದು ಕಂಡುಬರುತ್ತದೆ. ಆದರೆ ಯಾವ ಶಿವಶರಣರ ಚರಿತ್ರೆಗಳಲ್ಲಿಯೂ ಈ ರೀತಿಯು ಕಂಡುಬರುವದಿಲ್ಲ. ಅವರು ಅನೀತಿಯನ್ನೂ ವ್ಯಸನಗಳನ್ನೂ ಕಡುತರವಾದ ಶಬ್ದಗಳಿಂದ ಯಾವಾಗಲೂ ಟೀಕಿಸುವದುಂಟು. ಇಂಥವರು ಇಂಥ ಹೇಯವಾದ ಮಾರ್ಗವನ್ನು ಅವಲಂಬಿಸಿ ಇತರರನ್ನು ಧರ್ಮಾಂತರಗೊಳಿಸುವದು ಸಂಭವನೀಯವಲ್ಲ.

## ಶಿವಶರಣರ ಉಚ್ಚತರದ ಧರ್ಮಬೋಧೆಯ ಮೂಲಕ ಧರ್ಮಾಂತರಗಳು.

ಈ ಕಾಲದಲ್ಲಿ ಗುರುಗಳು ಶಿಷ್ಯರಿಗೆ ಹೇಗೆ ಬೋಧೆಮಾಡುತ್ತಿದ್ದರೆಂಬುದು ಸುಜ್ಞಾನಿದೇವನ ಚರಿತ್ರೆಯಿಂದ ಬಹು ಸರಸಾಗಿ ವ್ಯಕ್ತವಾಗುತ್ತದೆ. ಸುಜ್ಞಾನಿದೇವನು ತನ್ನನ್ನು ಸುಲಿಯಲಿಕ್ಕೆ ಬಂದಂಥ ಕ್ರೂರನಾದ ಬೇಡನಿಗೆ ಸದಾಚಾರವನ್ನು ಮೊದಲು ಬೋಧಿಸಿ ಆಮೇಲೆ ಅವನಿಗೆ ಲಿಂಗಧಾರಣೆಯನ್ನು ಮಾಡಿದ್ದಾನೆ. ಲಿಂಗಧಾರಣೆಯನ್ನು ಹೊಂದಿದ ಬಳಿಕ ಭಕ್ತನು ಲಿಂಗದ ನೆಲೆ ಕಲೆಗಳನ್ನು ಅರಿತುಕೊಳ್ಳಬೇಕು. ಇಂಥ ಜನರ ಸಂಖ್ಯೆಯು ಗ್ರಾಮಾಂತರಗಳಲ್ಲಿ ಹೆಚ್ಚುತ್ತಹೋದ ಹಾಗೆ ವೀರಶೈವ ಧರ್ಮವು ನಾಡಿನಲ್ಲಿ ಪ್ರಸಾರವಾಗುತ್ತ ನಡೆಯಿತು. ಈ ವಿಷಯವಾಗಿ ಭಾನುದೇವ, ತೆಲುಗೇಶ ಮಸಣಯ್ಯ, ಕದಿರರೆಮ್ಮಯ್ಯ ಇವರೇ ಮೊದಲಾದ ಶಿವಶರಣರ ಚರಿತ್ರೆಗಳನ್ನು ವಾಚಕರು ನೋಡಬೇಕು. ಈ ಚರಿತ್ರೆ

ಗಳಿಂದ ಹಿಂದಿನಕಾಲದಲ್ಲಿ ಲಿಂಗಜ್ಞಾನವನ್ನು ಹೊಂದಲು ಜನರಲ್ಲಿದ್ದ ಉತ್ಸುಕತೆ ಮತ್ತು ಅದಕ್ಕನುಸಾರವಾಗಿ ನಡೆಯಬೇಕೆಂಬ ಅವರ ಆಕಾಂಕ್ಷೆ ಇವು ಎಷ್ಟು ಗಾಢವಾಗಿದ್ದವೆಂಬುದು ವ್ಯಕ್ತವಾಗುತ್ತದೆ. ಈ ಪ್ರಕಾರ ಶಿವಶರಣರು ಧರ್ಮಜ್ಞಾನವನ್ನು ಪ್ರಸಾರ ಮಾಡುತ್ತ ಬಂದುದರಿಂದಲೇ ವೀರಶೈವ ಸಮಾಜವು ಬೆಳೆದಿರುತ್ತದೆ.

## ಗುರುಗಳಿಂದ ಲಿಂಗಜ್ಞಾನವು. ಅವರಿಂದ ಧರ್ಮಪ್ರಸಾರವು.

ವೀರಶೈವವು ವಿಶೇಷಾಚರಣೆಗಳುಳ್ಳ ಧರ್ಮವಾಗಿರುತ್ತದೆ. ಲಿಂಗಧಾರಿಯು ಅವುಗಳ ಮರ್ಮವನ್ನು ಬಲ್ಲವರಿಂದ ಅರಿತುಕೊಂಡು ಆಚರಿಸಬೇಕು. ಇಂಥ ಲಿಂಗಾನುಭವ ಅಥವಾ ಆತ್ಮಾನುಭವವನ್ನು ಅವನು ಈ ವಿಷಯವನ್ನು ಬಲ್ಲ ಗುರುವಿನಿಂದಲೇ ಹೊಂದಬೇಕು. ಆದ್ದರಿಂದ ಅವನೂ ಅವನ ಕುಟುಂಬದವರೂ ಒಬ್ಬ ಗುರುವಿನನ್ನು ಆಶ್ರಯಿಸಬೇಕು. ಆದ್ದರಿಂದ ವೀರಶೈವ ಸಮಾಜದಲ್ಲಿ ಪ್ರತಿಯೊಂದು ಮನೆತನಕ್ಕೆ ಕೆಲವೊಬ್ಬ ಗುರುವು ಉಂಟಾಗಿರುತ್ತಾನೆ. ಇಂಥ ಗುರುಗಳು ಗ್ರಾಮಗಳಲ್ಲಿ ಮಠಗಳನ್ನು ಸ್ಥಾಪಿಸಿ ಆ ಗ್ರಾಮಗಳಲ್ಲಿರುವವರಿಗೆ ಧರ್ಮೋಪದೇಶವನ್ನು ಮಾಡುತ್ತ ಲಿಂಗಧಾರಣೆಯನ್ನು ಅಲ್ಲಿಯವರಿಗೆ ಮಾಡಿರುತ್ತಾರೆ. ಈ ಗುರುಗಳು ತಮ್ಮ ಗ್ರಾಮಗಳಲ್ಲಷ್ಟೇ ಅಲ್ಲ, ಇತರ ಗ್ರಾಮಗಳಲ್ಲಿಯೂ ಕೂಡ ವೀರಶೈವ ಮತಬೋಧೆಯನ್ನು ಮಾಡಿ ಅಲ್ಲಿಯೂ ಮಠಗಳನ್ನು ಸ್ಥಾಪಿಸಿರುತ್ತಾರೆ. ಈ ರೀತಿಯಾಗಿ ವೀರಶೈವ ಧರ್ಮವು ಶಿವಶರಣರ ಕಾಲದಲ್ಲಿ ದೇಶದಲ್ಲೆಲ್ಲ ಪ್ರಸಾರ ಹೊಂದಿರುತ್ತದೆ. ಈ ಪ್ರಸಾರ ಕಾರ್ಯವು ಬಹು ದಿವಸಗಳ ವರೆಗೆ ಅಂದರೆ ಬಸವೇಶ್ವರನ ತರುವಾಯ ಸುಮಾರು ೧೦೦-೧೫೦ ವರ್ಷಗಳ ವರೆಗೂ ನಡೆದಿರಬಹುದೆಂದು ತೋರುತ್ತದೆ.

## ವೀರಶೈವ ಮಿಶನರಿಗಳು ಅಥವಾ ಬೋಧಕರು.

ಶಿವಶರಣರು ಈ ರೀತಿಯನ್ನು ಕೈಕೊಂಡಿದ್ದರಿಂದ ಈ ಕಾಲದಲ್ಲಿ ಬಹು ಜನ ಬೋಧಕರು ನಾಡಿನಲ್ಲಿ ಉಂಟಾದರು. ಅವರು ಅನೇಕ ವಚನಗಳನ್ನೂ ಪದ ಪದ್ಯಗಳನ್ನೂ ಪುರಾಣಗಳನ್ನೂ ರಚಿಸುವವರಾದರು. ಅವರೆಲ್ಲರೂ ಅವುಗಳನ್ನು ಜನರಿಗೆ ಓದಿ ಹೇಳಿ ಬೋಧಿಸುವರು. ಈ

ಶ್ರೇಷ್ಠ ಕಾರ್ಯವನ್ನು ಅನೇಕ ಸ್ತ್ರೀಯರೂ, ಮಠಾಧಿಕಾರಿಗಳೂ, ಭಕ್ತರೂ, ಅಸ್ಪೃಶ್ಯರೂ, ಬ್ರಾಹ್ಮಣರೂ, ಹೀಗೆ ಎಲ್ಲ ತರಗತಿಯ ಜನರು ಈ ಕಾಲದಲ್ಲಿ ಮಾಡಿದ್ದಾರೆ. ಇದರಲ್ಲಿ ಅವರು ಕೈಕೊಂಡ ಪದ್ಧತಿಗಳು ಈಗಿನ ಮಿಶನರಿಗಳು ಸಹ ಅನುಕರಣ ಮಾಡುವಂತೆ ಇವೆ. ಆದರೆ ಇದರಲ್ಲಿ ಶಿವಶರಣ ಧ್ಯೇಯವು ಜನರ ಧರ್ಮಾಂತರ ಮಾಡುವದು ಮಾತ್ರ ಇರದೆ ಅವರಲ್ಲಿ ಧರ್ಮ ಜಾಗ್ರತೆಯನ್ನುಂಟುಮಾಡುವದೇ ಮುಖ್ಯವಾಗಿತ್ತೆಂಬುದನ್ನು ನಾವು ಲಕ್ಷಿಸತಕ್ಕದ್ದು.

## ವಚನ ಶಾಸ್ತ್ರದಿಂದ ಧರ್ಮಬೋಧೆ.

ವೀರದೇವಮ್ಮನೆಂಬ ಶಿವಶರಣೆಯು ವಚನ ಶಾಸ್ತ್ರದಲ್ಲಿ ಪಾರಂಗತಳು. ಅವಳು ವಚನಗಳನ್ನು ದಿನಾಲು ಮೂರು ಹೊತ್ತು ಸ್ತ್ರೀಯರಲ್ಲಿ ಓದುವ ಪರಿಪಾಠವನ್ನಿಟ್ಟುಕೊಂಡಿದ್ದಳು. ಅವಳು ಅವುಗಳನ್ನು ರಾಜನ ಮುಂದೆಯೂ ದೇವಾಲಯಗಳಲ್ಲಿಯೂ ಎಲ್ಲರೂ ಕೇಳುವಂತೆ ಉಗ್ಗಡಿಸುವಳು. ಇದರಿಂದ ಅವಳಿಗೆ "ಉಗ್ಗಡಿಸುವ ಕನ್ನೆ ವೀರಾದೇವಿ" ಎಂಬ ಹೆಸರು ಪ್ರಾಪ್ತವಾಗಿತ್ತು. ಶಿವಮಾಯಿದೇವಿಯು ಶಿವಶರಣರ ಪುಣ್ಯ ಕಥೆಗಳನ್ನು ಹೇಳಿ ಬೋಧಿಸುವಳು. ಏಲೇಶ ಕೇತಯ್ಯನು ವಚನಕಾರನು. ಒಂದು ದಿವಸ ವಿರೋಧಿಗಳು ಅವನನ್ನು ಕೊಂದು ಹಾಕಬೇಕೆಂದು ಅವನ ಮನೆಯನ್ನು ಮುತ್ತಿದರು. ಆದರೆ ಅವನು ಅದಕ್ಕೆ ಅಂಜದೆ ಅವರನ್ನು ಮನೆಯಲ್ಲಿ ಬರಮಾಡಿಕೊಂಡು ಅವರಿಗೆ ಅಂಗ ಲಿಂಗ ಸಂಬಂಧ, ಷಟ್‌ಸ್ಥಲಾಚರಣೆ, ಇವುಗಳನ್ನು ಬೋಧಿಸಲು ಅವರ ರೋಷವು ಅಡಗಿತು. ಆಗ ಅವರು ಅವನಿಂದ ವೀರಶೈವ ಧರ್ಮವನ್ನು ಸ್ವೀಕರಿಸಿದರು. ಹೀಗೆ ಶಿವಶರಣರು ವೀರಶೈವ ಧರ್ಮವನ್ನು ಬೋಧಿಸುತ್ತ ಧರ್ಮಜಾಗ್ರತಿಯನ್ನು ಮಾಡಿದ್ದಾರೆ.

## ಕಾಯಕಗಳಿಂದ ಧರ್ಮ ಬೋಧೆ.

ಕೆಲವು ಶಿವಶರಣರು ಜನರು ತಾವಾಗಿಯೇ ತಮ್ಮಲ್ಲಿಗೆ ಬರುವಂತೆ ಮಾಡಿ ಅವರಿಗೆ ಧರ್ಮಬೋಧೆಯನ್ನು ಮಾಡಿದ್ದಾರೆ. ಇದಕ್ಕೋಸ್ಕರ ಅವರು ತಕ್ಕ ಕಾಯಕಗಳನ್ನು ಕೈಕೊಂಡಿದ್ದಾರೆ. ವೈದ್ಯ ಸಂಗಣ್ಣನು ವೈದ್ಯಕೀ ವೃತ್ತಿಯವನು. ಆದ್ದರಿಂದ ಬಹುಜನರು ಅವನ

ದ್ದಲ್ಲಿಗೆ ಬರುವರು. ಆಗ ಅವನು ಅವರಿಗೆ ಷಟ್‌ಸ್ಥಲದ ಮಾರ್ಗ ಗಳನ್ನು ಬೋಧಿಸುವನು. ನಗೆಮಾರಿತಂದೆಯು ನಗಿಸುವ ಕಾಯಕ ವನ್ನು ಕೈಕೊಂಡಿದ್ದನು. ಇದರಿಂದ ಜನರು ಅವನಿದ್ದಲ್ಲಿಗೆ ಬಂದು ಅವನ ಹಾಸ್ಯಗಳನ್ನು ಕೇಳಿ ಆನಂದಿಸುವಾಗ್ಗೆ ಅವನು ಅವರಿಗೆ ಧರ್ಮ ಬೋಧೆಯನ್ನು ಮಾಡುವನು. ಹೆಂಡದ-ಮಾರಯ್ಯನು ಕಲ್ಯಾಣದಲ್ಲಿ ಅರವಟಿಗೆಯನ್ನಿಟ್ಟಿದ್ದನು. ಅವನು ದಾರಿಕಾರರಿಗೆ ನೀರನ್ನೆರೆಯುವ ಕಾಯ ಕವನ್ನು ಕೈಕೊಂಡು ಅಲ್ಲಿ ನೆರೆದ ಜನರಿಗೆ ಶಿವಾನುಭವವನ್ನು ಬೋಧಿ ಸುವನು. ಅವನಲ್ಲಿಗೆ ಭವಿಜನರೂ ಬರಹತ್ತಿದರು. ಅವರಿಗೂ ಅವನು ಬೋಧಿಸುವನು. ಮುಂದೆ ಸರಾಯಿ ಹೆಂಡ ಕುಡಿಯುವವರೂ ಬರ ಹತ್ತಿದರು. ಆಗ ಅವನು ಅವರಿಗೆ ಪ್ರಿಯವಾದ ಈಚಲ, ತೆಂಗು, ತಾಡವಾಲಿ, ಭಗಿನಿ ಇಂಥ ಗಿಡಗಳಿಂದಾದ ಮಾದಕ ಪದಾರ್ಥಗಳನ್ನು ಇಟ್ಟು ಕುಡಿಯಲಿಕ್ಕೆ ಕೊಡುವನು. ಅವರು ಅಲ್ಲಿ ನೆರೆದಾಗ್ಗೆ ಅವನು ಅವರಿಗೆ ಶಿವಾನುಭವವನ್ನು ಬೋಧಿಸುತ್ತ, ಇಂಥ ಪದಾರ್ಥಗಳನ್ನು ಸೇವಿ ಸದೆ ಲಿಂಗಾಂಗ ಸಾಮರಸ್ಯದ ರೀತಿಯನ್ನು ತಿಳಿದುಕೊಂಡು ನಿತ್ಯಾನಂದ ದಲ್ಲಿರಬೇಕೆಂದು ಅವರಿಗೆ ಬೋಧಿಸುವನು. ಈ ಶಿವಶರಣರು ಉಚ್ಚ ಶಿವಾನುಭವಿಗಳೂ ವಚನಕಾರರೂ ಇದ್ದಾರೆ. ಹೀಗೆ ಅನೇಕ ವಿಧವಾಗಿ ಶರಣರು ಜನರಲ್ಲಿ ಬೆರೆದು ಧರ್ಮಬೋಧೆ ಮಾಡಿದ್ದಾರೆ.

## ಭೃತ್ಯಾಚಾರದಿಂದ ಧರ್ಮಬೋಧೆ.

ಕೆಲವು ಶಿವಶರಣರು ಎಲ್ಲರೊಡನೆ ಭೃತ್ಯಾಚಾರದಿಂದ ನಡೆಯುತ್ತ ಅವರ ಮನಸ್ಸು ಶಿವಾನುಭವಕ್ಕೆ ಒಲಿಯುವಂತೆ ಮಾಡಿದ್ದಾರೆ. ಚಾಂ ಗುಬಲ್ಲಯ್ಯನು ಭಕ್ತರ ಮನೆಗೆ ದಿನಾಲು ಮುಂಜಾವಿನಲ್ಲಿ ಹೋಗಿ "ಚಾಂಗು ಭಲಾ" ಎಂಬ ಶಬ್ದಗಳಿಂದ ಅವರನ್ನು ಎಚ್ಚರಿಸಿ ಅವರನ್ನು ಲಿಂಗಾರ್ಚನೆಗೆ ತೊಡಗಿಸುವನು. ತೊಂಗಿನ ಮಹಾದೇವಿಯು ಇದೇ ರೀತಿಯ ಕಾಯಕವನ್ನು ಮಾಡುವಳು. ಅವಳು ಮನೆಯ ಜನರನ್ನು ಎಬ್ಬಿಸಿ ಅವರು ಗೃಹ ಕೃತ್ಯಕ್ಕೆ ತೊಡಗುವ ವರೆಗೆ ವಿನಯದಿಂದಲೂ, ಭಕ್ತಿ ಯಿಂದಲೂ, ಮನೆಯಲ್ಲಿ ನಿಂತು ಬಿಡುವಳು. ಆ ಮೇಲೆ ಅವಳು ಬೇರೊಂದು ಮನೆಗೆ ಹೋಗುವಳು. ಮುಸುಡಿಯ ಚೌಡಯ್ಯನು ಜನರನ್ನು ಕಂಡಾಗ್ಗೆ ಅವರಿಗೆ "ಶರಣು" "ಶರಣು" ಎಂದೆನ್ನುತ್ತ ಶರಣು ಭಾವದಿಂದ

ಅವರೊಡನೆ ಸೇವಕನಂತೆ ವರ್ತಿಸುವನು. ಈ ತೆರದ ವರ್ತನೆಯಿಂದ ಅವನು ಜನರ ಮನಸ್ಸಿನ ಮೇಲೆ ಪರಿಣಾಮ ಮಾಡುವನು ಶಿವ ಭೃತ್ಯಮಲ್ಲಯ್ಯನೆಂಬ ಶಿವಶರಣನ ರೀತಿಯಾದರೂ ಹೀಗೆಯೇ ಇದೆ. ಈ ಪ್ರಕಾರ ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರು ಭೃತ್ಯಾ ಚಾರಿಗಳಾಗಿ ನಡೆಯುತ್ತ ಜನರನ್ನು ಪಾರಮಾರ್ಥಕ್ಕೆ ಎಳೆದಿದ್ದಾರೆ.

## ಗಾಯನ, ನಾಟ್ಯ, ನೃತ್ಯ, ಕೀರ್ತನೆಗಳಿಂದ ಧರ್ಮಬೋಧೆ.

ಕೆಲವು ಶಿವಶರಣರು ಗಾಯನ ಕಲೆಯಲ್ಲಿ ನಿಷ್ಣಾತರಾಗಿ ಅದರ ಮೂಲಕ ಶಿವಾನುಭವವನ್ನು ಬೋಧಿಸಿದ್ದಾರೆ. ಇಂಡಿಯ ಶಾಂತ ಯ್ಯನು ಗಾಯಕನಾಗಿ ಕೀರ್ತನೆಗಳನ್ನು ಮಾಡುವನು. ಅವನು ಹೊಸ ತರದ ಸ್ತೋತ್ರಗಳನ್ನು ದಿನಾಲು ರಚಿಸಿ ಪರಮಾತ್ಮನನ್ನು ಭಜಿಸು ವನು. ಅಲ್ಲದೆ ಶಿವಭಕ್ತರಿಗೆ ಪಾಠವನ್ನೂ ಹೇಳುವನು. ನಿಂಬಾಣದ ಗಣೇಶ್ವರನು ಪದ ಪದ್ಯಗಳನ್ನು ರಚಿಸಿ ಅವುಗಳ ಮೂಲಕ ಶಿವಾನು ಭವದ ತತ್ವಗಳನ್ನು ಜನರಿಗೆ ಬೋಧಿಸಿದ್ದಾನೆ. ರಾಗ ರಸಾಂಕನು ಗಾಯಕನಾಗಿ ಮೇಲೆ ಹೇಳಿದ ರೀತಿಯಂತೆಯೇ ಆಚರಿಸಿದ್ದಾನೆ. ಸಿದ್ಧ ದೇವಮ್ಮನು ನಾಟ್ಯ ಕಲೆಯಲ್ಲಿ ಪ್ರವೀಣಳು. ಅವಳು ಅದರ ಮೂಲ ಕವಾಗಿ ಶಿವಶರಣರ ಚರಿತ್ರೆಗಳನ್ನು ಜನರ ಇದಿರಿಗೆ ಆಡಿತೋರಿಸು ವಳು. ಬಹುರೂಪಿ ಚೌಡಯ್ಯನು ಅನೇಕ ತರದ ವೇಷಗಳನ್ನು ಧರಿಸಿ ಶಿವಶರಣರ ಚರಿತ್ರೆಗಳನ್ನು ಆಡಿತೋರಿಸುವನು. ಅವನು ವಚನಕಾ ರನೂ ಇದ್ದಾನೆ. ಅಲ್ಲಯ್ಯನು ಸಂಗೀತದಲ್ಲಿ ಬಲ್ಲಿದನು. ಅವನು ಭಕ್ತರ ಮದುವೆ ಹಬ್ಬಗಳಲ್ಲಿ ಹೋಗಿ ಜನರ ಮುಂದೆ ಭಕ್ತಿ ಪೂರಿತ ಹಾಡುಗಳನ್ನು ಹಾಡುವನು. ಭದ್ರಗಾಯಕನು ಗಾಯನಕಲೆಯನ್ನು ಕಲಿತು ಪದಗಳ ಮೂಲಕ ಶಿವಶರಣರ ಮಹಿಮೆಗಳನ್ನೂ ಲಿಂಗ ಭಕ್ತಿಯ ಮಹತ್ವವನ್ನೂ ಜನರಿಗೆ ತಿಳಿಸಿ ಹೇಳುವನು. ಕೇಶಿರಾಜನು ವಿದ್ವಾಂಸನು ಮತ್ತು ಕವಿಯು. ಅವನು ದಿನಾಲು ಕಂದ, ತ್ರಿಪದಿ, ರಗಳೆ, ವಚನ, ಪದಪದ್ಯ, ದಂಡಕ ಅಷ್ಟಕಗಳನ್ನು ಹೊಸದಾಗಿ ರಚಿ ಸುತ್ತ ಜನರಿಗೆ ಬೋಧೆ ಮಾಡುವನು. ಕಲಕೇತ ಬೊಮ್ಮಯ್ಯನು ವಚನಕಾರನಿದ್ದಾನೆ. ಅವನು ತನ್ನ ಜಾತಿ ಧರ್ಮಕ್ಕನುಸಾರವಾಗಿ ಅನೇಕ ತರದ ಉಡುಪುಗಳನ್ನು ಧರಿಸಿಕೊಂಡು ಕುಣಿಯುತ್ತ ಶರ

ಣರ ಕೀರ್ತಿಯನ್ನು ಉಗ್ಗಡಿಸುತ್ತ ಪರವಾದಿಗಳ ತತ್ವಗಳನ್ನು ಖಂಡಿಸುತ್ತ ಶಿವಾನುಭವದ ಬೋಧೆಮಾಡುವನು. ಗಟ್ಟಿವಾಳಯ್ಯನು ನರ್ತನ ಮಾಡುವ ಕಾಯಕವನ್ನು ಮಾಡುತ್ತ ಮದ್ದಳೆಯನ್ನು ನುಡಿಸುತ್ತ ಶಿವಾನುಭವದ ತತ್ವಗಳನ್ನು ಹಾಡುವನು. ಕಿಂಕರೀ ಕಕ್ಕಯ್ಯನು ಕಿಂಕರಿಯನ್ನು ನುಡಿಸುತ್ತ ದೇವರ ಭಜನೆ ಮಾಡುವನು. ಹೀಗೆ ಅನೇಕ ಶಿವಶರಣರು ಗಾಯನ, ನಾಟ್ಯ, ನೃತ್ಯ ಮೊದಲಾದ ಕಲೆಗಳನ್ನು ಕಲಿತುಕೊಂಡು ಅವುಗಳ ಮೂಲಕ ಶಿವಾನುಭವದ ತತ್ವಗಳನ್ನು ಜನರಲ್ಲಿ ಬೋಧಿಸಿದ್ದಾರೆ.

## ಸ್ತ್ರೀಯರ ಧರ್ಮ ಪ್ರಸಾರಕಾರ್ಯಗಳು.

ಈ ಕಾಲದಲ್ಲಿ ಸ್ತ್ರೀಯರೂ ಕೂಡ ಬೋಧಿಸುವ ಕಾರ್ಯವನ್ನು ಕೈಕೊಂಡು ಬಹು ಜನರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾರೆ. ವರದಾನಿ ಗುಡ್ಡಮ್ಮೆಯು ಶಿವಶರಣೆಯು. ಅವಳು ಈ ಕಾರ್ಯವನ್ನು ಘನತರವಾದ ರೀತಿಯಿಂದ ಮಾಡಿದ್ದಾಳೆ. ಅವಳು ಮೊದಲು ಆದವಾನಿಯಲ್ಲಿ, ಆ ಮೇಲೆ ಆಲಂಪುರದಲ್ಲಿ ಪರವಾದಿಗಳನ್ನು ಗೆದ್ದು ಈ ಗ್ರಾಮಗಳಲ್ಲಿ, ಆ ಮೇಲೆ ಮೈಸೂರು ಸೀಮೆಗೆ ಹೋಗಿ ಕಪಿಲಾ ಕಾವೇರಿ ಸಂಗಮಸ್ಥಳದಲ್ಲಿ, ತಮಿಳು ದೇಶದಲ್ಲಿ ಕಾಂಚೀಪುರದಲ್ಲಿ, ಆ ಮೇಲೆ ತನ್ನ ಗ್ರಾಮಕ್ಕೆ ಬರುವ ಮಾರ್ಗದಲ್ಲಿ ಬಾಗೇವಾಡಿ, ಮನಗೋಳಿಯಲ್ಲಿ ಹೀಗೆ ಅನೇಕ ಕಡೆಗೆ ಸಂಚರಿಸಿ ಬಹು ಜನರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾಳೆ. ವೈಜವ್ವೆ ತಿಲಕವ್ವೆಯರು ಜೈನಧರ್ಮೀಯರಾದ ತಮ್ಮ ಪತಿಗಳಿಂದ ಮೊದಲು ಯಾತನೆಗಳನ್ನು ಅನುಭವಿಸಿದರೂ ಅವರು ಕಡೆಗೆ ತಮ್ಮ ಪತಿಗಳು ವೀರಶೈವರಾಗುವಂತೆ ಮಾಡಿದರು. ಗೊಗ್ಗವ್ವೆಯು ಚಾರಮರಾಯನಿಗೆ ಲಿಂಗತತ್ವಗಳನ್ನು ಬೋಧಿಸಿದ್ದಾಳೆ. ವಿಮಳಾದೇವಿಯು ಶಿವಾನುಭವಿಯಾಗಿ ಸ್ತ್ರೀಯರಿಗೆ ಬೋಧಿಸಿ ಅವರಿಗೆ ವೀರಶೈವದೀಕ್ಷೆಯನ್ನು ಕೊಡುವದನ್ನೇ ತನ್ನ ಕಾಯಕವನ್ನಾಗಿ ಇಟ್ಟುಕೊಂಡಿದ್ದಳು. ವೀರಶೈವ ಧರ್ಮ ಪ್ರಸಾರಕಾರ್ಯದಲ್ಲಿ ಸ್ತ್ರೀಯರು ಹಿಂದಿನಕಾಲದಲ್ಲಿ ಬಹು ಮಹತ್ವದ ಅಂಗವನ್ನು ವಹಿಸಿದ್ದಾರೆಂಬುದು ಈ ಚರಿತ್ರೆಗಳಿಂದ ತಿಳಿದು ಬರುತ್ತದೆ.

ಆಮೇಲೆ ಸುಜ್ಞಾನಿದೇವನು ಪ್ರಪಂಚದಲ್ಲಿ ಸುಖದುಃಖಗಳು ಹೇಗಾಗುತ್ತವೆಂಬುದನ್ನು ಬೇಡನ ತಾಯಿ ತಂದೆಗಳು ಹೇಗೆ ಮರಣ ಹೊಂದಿದರೆಂಬುದರ ಮೇಲಿಂದ ತಿಳಿಸಿ ಹೇಳುತ್ತ, ಪುಣ್ಯಕಾರ್ಯಗಳನ್ನು ಮಾಡಿದರೆ ಮನುಷ್ಯನಿಗೆ ಸುಖವಾಗುತ್ತದೆ, ಪಾಪಕಾರ್ಯಗಳನ್ನು ಮಾಡಿದರೆ ಅವನಿಗೆ ದುಃಖವಾಗುತ್ತದೆ, ಸತ್ಕರ್ಮದ ಫಲವು ಮಾತ್ರ ತನ್ನೊಡನೆ ಯಾವಾಗಲೂ ಇರುತ್ತದೆ, ಯಾರಿಗೆ ಯಾರೂ ಸಹಾಯಕರಿಲ್ಲ, ಎಂಬ ಮಹತ್ವದ ತತ್ವಗಳನ್ನು ಬಹು ಸುಲಭರೀತಿಯಿಂದ ತಿಳಿಸಿಹೇಳಿದನು. ಆಮೇಲೆ ಆ ಬೇಡನು ಪುಣ್ಯಕರ್ಮಗಳಾವವು ಪಾಪಕರ್ಮಗಳಾವವು ಎಂಬುದನ್ನು ಕೇಳಲಾಗಿ, ಸುಜ್ಞಾನಿದೇವನಿಗೆ ಬೇಡನ ಹಿಂಸಾಚರಣೆಯನ್ನು ನಿಲ್ಲಿಸಬೇಕಾಗಿದ್ದರಿಂದ ಹಿಂಸೆಯನ್ನು ಮಾಡುವದೇ ಪಾಪವು, ದಯೆಯಿಂದಿರುವದೇ ಪುಣ್ಯವು, ಎಂಬ ತತ್ವವನ್ನು ಶಿವಶರಣರ ಅನೇಕ ಕಥೆಗಳನ್ನು ಹೇಳಿ ತಿಳಿಯಪಡಿಸಿದನು. ಮಾತಂಗತಮ್ಮನಂಥ ಅಪಕ್ವ ಮತ್ತು ಅಜ್ಞಾನಿ ಜನರ ಮೇಲೆ ಇಂಥ ಮನೋವೇಧಕ ಕಥೆಗಳು ಬಹಳ ಪರಿಣಾಮ ಮಾಡುತ್ತವೆ. ಕೇವಲ ತಾತ್ವಿಕ ವಿಚಾರಗಳು ಅವರ ತಿಳಿವಳಿಕೆಗೆ ಬರುವದಿಲ್ಲ. ಆದ್ದರಿಂದ ಮಾತಂಗತಮ್ಮನಿಗೆ ಉಪದೇಶ ಮಾಡುವಲ್ಲಿ, ಸುಜ್ಞಾನಿತಂದೆಯು ಇದೇ ರೀತಿಯನ್ನು ಅನುಸರಿಸಿದ್ದಾನೆ. ಅವನು ಹೀಗೆ ಅನೇಕ ಕಥೆಗಳನ್ನು ಹೇಳುತ್ತ ಹಿಂಸೆಯನ್ನು ಬಿಟ್ಟುಕೊಟ್ಟು ದಯಾಬುದ್ಧಿಯುಳ್ಳವನಾಗಿರು, ದಾನಧರ್ಮ ಮಾಡು ಎಂದು ಬೋಧಿಸಿದನು.

ಈ ಮೇರೆಗೆ ಸುಜ್ಞಾನಿದೇವನು ಪುಣ್ಯಪಾಪಗಳೆಂದರೇನು, ಸದಾಚಾರ ಅನಾಚಾರಗಳಾವವು, ಸತ್ಕರ್ಮ ದುಷ್ಕರ್ಮಗಳಾವವು, ಇವೇ ಮೊದಲಾದ ವಿಷಯಗಳನ್ನು ಬೋಧೆ ಮಾಡಿದಬಳಿಕ ಮಾತಂಗತಮ್ಮನ ಮನಸ್ಸಿನ ಮೇಲೆ ಇವು ಬಹಳ ಪರಿಣಾಮ ಮಾಡಿದ್ದನ್ನು ಕಂಡು ಆಮೇಲೆ ಅವನು ಅವನಿಗೆ ವೀರಶೈವ ಧರ್ಮದ ತತ್ವಗಳನ್ನು ತಿಳಿಸಿ ಹೇಳತೊಡಗಿದನು. ಅವನಿಗೆ ಅಷ್ಟಾವರಣಗಳಾದ ಗುರುಲಿಂಗ ಜಂಗಮಾದಿಗಳ ವಿಚಾರಗಳನ್ನು ಅನೇಕ ಕಥೆಗಳ ಮೂಲಕ ತಿಳಿಸಿ ಹೇಳಿದನು. ಶಿವಶರಣರ ಚರಿತ್ರೆಗಳಲ್ಲಿ ಇಂಥ ಕಥೆಗಳು ಅನೇಕವಿರುತ್ತವೆ. ಹೀಗೆ ಬೋಧಿಸಿದಬಳಿಕ ಮಾತಂಗತಮ್ಮನಲ್ಲಿ ತಾನು ಲಿಂಗಧಾರಣೆ ಹೊಂದಬೇಕೆಂಬ ಅಪೇಕ್ಷೆಯು ಉಂಟಾಗಲು, ಅವನು ಸುಜ್ಞಾನಿತಂದೆಗೆ ಸಾಷ್ಟಾಂಗವೆರಗಿ ತನಗೆ ಉಪದೇಶಮಾಡಬೇಕೆಂದು ಕೇಳಿ

ದ್ದುದು ಕರ್ನಾಟಕ ಇತಿಹಾಸದಿಂದ ತಿಳಿದುಬರುತ್ತದೆ. ವಿಜಾಪುರ ಪ್ರಾಂತದಲ್ಲಿದ್ದ ಕೋವೂರು ಬ್ರಹ್ಮಯ್ಯ, ಗೋಲಗಿರಿಯ ಗೊಲ್ಲಾಳ, ಇಲಿಹಾಳದಲ್ಲಿಯ ಬ್ರಹ್ಮಯ್ಯ ಈ ಮೂವರೂ, ಮೈಸೂರು ದೇಶದಲ್ಲಿದ್ದ ಬಿಜ್ಜಾವರದ ಬಿಜ್ಜಮಹಾದೇವಿಯೂ ಗೋದಾವರೀತೀರ ಪ್ರದೇಶದಲ್ಲಿದ್ದ ಪರಿವಳಿಗೆಯ ಮೈಜಾಂಬೆಯೂ ಧಾರವಾಡ ಪ್ರಾಂತದಲ್ಲಿದ್ದ ಪುಲಿಗೆರಿಯ ಆದಯ್ಯನೂ ಇವರೆಲ್ಲರ ಚರಿತ್ರೆಗಳಲ್ಲಿ ಜಂಗಮರ ಅಥವಾ ಮಾಹೇಶ್ವರರ ಉಲ್ಲೇಖಗಳು ಬಂದಿರುತ್ತವೆ. ಈ ಉಲ್ಲೇಖಗಳಿಂದ ಜಂಗಮರು ಹಿಂದಿನಕಾಲದಲ್ಲಿ ಅಸ್ತಿತ್ವದಲ್ಲಿದ್ದು ಅವರು ಹಿಂದುಸ್ತಾನದಲ್ಲೆಲ್ಲ ಧರ್ಮಬೋಧೆಮಾಡುತ್ತ ಸಂಚರಿಸುತ್ತಿದ್ದರೆಂದು ತೋರುತ್ತಿದೆ.

ಮೇಲೆ ವಿವರಿಸಿದ ಶಿವಶರಣರಲ್ಲಿ ಪರಿವಳಿಗೆಯ ಮೈಜವ್ವೆ ಮತ್ತು ಇಲಿಹಾಳ ಬೊಮ್ಮಯ್ಯ ಇವರು ಬಸವೇಶ್ವರನಕಿಂತಲೂ ಮೊದಲಿನವರು ಇದ್ದಾರೆ. ಮತ್ತು ಬಸವೇಶ್ವರನು ಜಂಗಮರನ್ನು ತನ್ನ ವಚನಗಳಲ್ಲಿ ಪದೇಪದೇ ಸ್ತುತಿಸುತ್ತಾನೆ. ಆದ್ದರಿಂದ ಜಂಗಮರು ಬಸವೇಶ್ವರನಕಿಂತಲೂ ಮೊದಲು ಇದ್ದರೆಂಬುದು ಸ್ಪಷ್ಟವಿದೆ.

## ಅನುಭಾವ ಅಥವಾ ಶಿವಾನುಭವದಿಂದ ಧಾರ್ಮಿಕ ಜಾಗ್ರತಿ.

ಆದರೆ ಇಂಥ ಬೋಧಕರ ಬೋಧೆಯ ಪರಿಣಾಮಗಳು ಸಾಮಾನ್ಯವಾಗಿ ಅಜ್ಞಾನಿಗಳ ಮನಸ್ಸಿನ ಮೇಲೆ ಕ್ಷಣಿಕವಾಗಿರುತ್ತವೆ. ಆದ್ದರಿಂದ ಅವುಗಳನ್ನು ದೃಢಪಡಿಸುವ ವಿಷಯವಾಗಿ ಎಲ್ಲ ಧರ್ಮಗಳಲ್ಲಿ ಕೆಲವೊಂದು ಯೋಜನೆಯು ಇರುತ್ತದೆ. ಉದಾಹರಣಾರ್ಥವಾಗಿ ಹಿಂದೂ ಜನರಲ್ಲಿ ದೇವಾಲಯಗಳು, ಕ್ರಿಸ್ತೀಜನರಲ್ಲಿ ಪ್ರಾರ್ಥನಾಲಯಗಳು (ಚರ್ಚಗಳು), ಜೈನರಲ್ಲಿ ಚೈತ್ಯಾಲಯಗಳು, ಬೌದ್ಧರಲ್ಲಿ ಬೌದ್ಧಾಲಯಗಳು ಮತ್ತು ವಿಹಾರಗಳು ಮತ್ತು ಮುಸಲ್ಮಾನರಲ್ಲಿ ಮಶೀದಿಗಳು ಇರುತ್ತವೆ. ಆದರೆ ಶಿವಶರಣರು ಇಂಥ ಆಲಯಗಳನ್ನು ಕಟ್ಟಿಸಲಿಕ್ಕೆ ಹೋಗಿಲ್ಲ. ಅವರು ಕೇವಲ ಶಾಬ್ದಿಕ ಬೋಧೆಗೆ ಮಹತ್ವಕೊಟ್ಟಿರುವದಿಲ್ಲ. ಆದರೆ ಅವರು ಅನುಭಾವಕ್ಕೆ ಮಹತ್ವಕೊಟ್ಟಿರುತ್ತಾರೆ. ಅನುಭಾವಕ್ಕೆ ವಚನಶಾಸ್ತ್ರದಲ್ಲಿ ವಿಶೇಷಾರ್ಥವಿರುತ್ತದೆ. ಅದು ಶಿವಶರಣರ ಉಕ್ತಿಗಳನ್ನು ಓದುವದು, ಅವುಗಳನ್ನು ತಿಳಿದವರೊಡನೆ ಚರ್ಚಿಸುವದು ಮತ್ತು ಅವು

ಗಳನ್ನು ಹೀಗೆ ಮನನಮಾಡಿಕೊಂಡು ಅವುಗಳಂತೆ ನಡಿಯುವದು ಎಂದು ಇರುತ್ತದೆ. (೧) ಇದರಿಂದ ಬೋಧೆಮಾಡಿದ್ವರ ಪರಿಣಾಮ ಗಳು ದೃಢಪಡುತ್ತವೆ. ಶಿವಶರಣರು ಈ ಸಂಗತಿಯನ್ನು ಲಕ್ಷಿಸಿ ಅನು ಭಾವ ಅಥವಾ ಶಿವಾನುಭವಕ್ಕೆ ಬಹಳ ಮಹತ್ವಕೊಟ್ಟಿರುತ್ತಾರೆ. ಈ ಕಾರ್ಯವನ್ನು ಮುಖ್ಯವಾಗಿ ಆಗಿನ ಮಠಗಳು ಬಹು ಬಲವಾಗಿ ಸಾಗಿ ಸಿರುತ್ತವೆ. ಆದ್ದರಿಂದ ಈ ಮಠಗಳಲ್ಲಿ ಷಟ್‌ಸ್ಥಲವಿಷಯಕವಾದ ಅಸಂಖ್ಯ ಗ್ರಂಥಗಳೂ ವಚನಗಳೂ ಉಂಟಾಗಿರುತ್ತವೆ. ಶಿವಾನುಭವದ ಮೂಲಕ ವೀರಶೈವ ಸಮಾಜದಲ್ಲಿ ಬೇರೆ ಸಮಾಜಗಳಲ್ಲಿದ್ದಂತೆ ದೇವಾಲಯಗ ಳಿಗೆ ಮಹತ್ವದ ಸ್ಥಾನವು ಪ್ರಾಪ್ತವಾಗದೆ, ಮಠಗಳಿಗೆ ಮಹತ್ವದ ಸ್ಥಾನವು ಪ್ರಾಪ್ತವಾಗಿದೆ. ಆದ್ದರಿಂದ ಈ ಮಠಗಳು ವೀರಶೈವರ ವಸತಿಯು ಇದ್ದ ಎಲ್ಲ ಗ್ರಾಮಗಳಲ್ಲಿ ಸ್ಥಾಪಿಸಲ್ಪಟ್ಟಿರುತ್ತವೆ. ಇವುಗಳಿಂದ ಈ ಕಾಲದಲ್ಲಿ ನಾಡಿನಲ್ಲಿ ಧಾರ್ಮಿಕ ಉಚ್ಚ ವಾತಾವರಣವು ನೆಲೆಗೊಳ್ಳಲು ಕಾರಣವಾಯಿತು.

ಈ ಧಾರ್ಮಿಕ ಚಳವಳಿಯು ಬಸವೇಶ್ವರನ ತರುವಾಯ ಸುಮಾರು ೧೦೦-೧೫೦ ವರುಷಗಳ ವರೆಗೆ ನಡಿಯಿತೆಂದು ತೋರುತ್ತದೆ. ಇದೇ ವಚನವಾಙ್ಮಯದ ಅಭ್ಯುದಯದ ಕಾಲವು. ಆದರೆ ಇದರ ಮುಂದೆ ಶಿವಶ ರಣರು ಪೊವಾಡ ಪುರುಷರಾದರು. ಆಗ ಅವರ ಬಗ್ಗೆ ಪುರಾಣಗಳು ರಚಿ ಸಲ್ಪಡಹತ್ತಿದವು. ಅಜ್ಞಾನ ಜನರಿಗೆ ಇವು ಪ್ರಿಯವಾಗಹತ್ತಿದವು. ಇದರಿಂದ ವಚನಶಾಸ್ತ್ರದ ವಿಚಾರಗಳು ಮೆಲ್ಲಗೆ ಅಡಗಹತ್ತಿದವು. ಬರಬರುತ್ತ ಅವು ರುಚಿಸದಂತಾದವು. ಇದರಿಂದ ವಚನಗಳನ್ನು ರಚಿಸುವ ಪದ್ಧತಿಯು ನಿಂತುಹೋಯಿತು. ಅವುಗಳ ಸ್ಥಳದಲ್ಲಿ ಪುರಾಣಗಳ ಸಂಖ್ಯೆಯು ಬೆಳೆ ಯಿತು. ಆದರೆ ಇವುಗಳಲ್ಲಿ ವಚನಶಾಸ್ತ್ರದಲ್ಲಿಯ ತತ್ವಗಳ ವಿವರಣೆಯು ಬಹಳ ಕಡಿಮೆ ಇರುತ್ತದೆ. ಕೆಲವುಗಳಲ್ಲಿ ಇದ್ದರೂ ಅದು ಅತ್ಯಲ್ಪವು. ಹೀಗೆ ಶಿವಶರಣರ ವಚನಶಾಸ್ತ್ರವು ಅನೇಕ ಶತಮಾನಗಳಿಂದ ಅಡಗಿ ಹೋದದ್ದರಿಂದ ಅದರ ಗ್ರಂಥಗಳು ಸಹ ನಮಗೆ ಈಗ ಉಪಲಬ್ಧವಿರು ವದಿಲ್ಲ. ಅವು ಅವ್ಯವಸ್ಥಿತವಾಗಿ ಅಲ್ಲಲ್ಲಿ ಮಾತ್ರ ದೊರೆಯುತ್ತವೆ.

---

(೧) ಹೊಸಪದ್ಧತಿಯ ಬಸವೇಶ್ವರನ ವಚನಗಳು ಪುಟ ೧೪೪ ನೋಡಿರಿ.

## ರಾಜರು ಮೊದಲ್ಗೊಂಡು ಎಲ್ಲತರಗತಿಯ ಜನರಲ್ಲಿ ವೀರಶೈವ ಧರ್ಮದ ಪ್ರಸಾರ.

ಶಿವಶರಣರು ಅನೇಕವಿಧವಾಗಿ ನಡಿಸಿದ ಧರ್ಮಪ್ರಸಾರ ಕಾರ್ಯಗಳ ಮೂಲಕ ನಾಡಿನಲ್ಲಿ ಎಲ್ಲ ತರಗತಿಯ ಜನರು ವೀರಶೈವ ಧರ್ಮವನ್ನು ಸ್ವೀಕರಿಸುವವರಾದರು. ಈ ಕಾಲವಲ್ಲಿ ರಾಜ್ಯಾಧಿಪತಿಗಳು ಮೊದಲ್ಗೊಂಡು ಅಸ್ಪೃಶ್ಯರ ವರೆಗೆ ಅಸಂಖ್ಯ ಜನರು ಇದರಲ್ಲಿ ಸೇರಿಕೊಂಡಿದ್ದು ಕಂಡುಬರುತ್ತದೆ. ಕೆಲವು ರಾಜರು ಶಿವಾನುಭವದ ತತ್ವಗಳಿಗೋಸ್ಕರ ಪ್ರೇಮವನ್ನು ವಹಿಸಿದವರಾಗಿ ತಮ್ಮ ಉಚ್ಚ ಸ್ಥಾನಗಳನ್ನು ತ್ಯಜಿಸಿ ಬಿಟ್ಟಿದ್ದಾರೆ. ಮಹಾದೇವರಾಜನು ಕಾಶ್ಮೀರದೇಶದರಸನು. ಅವನು ತನ್ನ ಸ್ಥಾನವನ್ನು ಬಿಟ್ಟುಕೊಟ್ಟು ಕಲ್ಯಾಣಕ್ಕೆ ಬಂದು ಅಲ್ಲಿ ಬಸವೇಶ್ವರನ ಶಿವಾನುಭವಮಂಟಪವನ್ನು ಸೇರುವವನಾದನು. ಅವನ ಹೆಂಡತಿಯಾದ ಮಹಾದೇವಿಯಮ್ಮನು ಕೂಡ ಅವನೊಂದಿಗೆ ಬರುವವಳಾದಳು. ಈ ಉಭಯ ಸತಿಪತಿಗಳು ಶ್ರೇಷ್ಠ ತರಗತಿಯ ವಚನಕಾರರಿದ್ದಾರೆ. ಬೊಂತಾದೇವಿಯು ಕಾಶ್ಮೀರದೇಶದಲ್ಲಿಯ ಇನ್ನೊಬ್ಬ ರಾಜಕುಮಾರ್ತಿಯು. ಅವಳೂ ಕೂಡ ತನ್ನ ಉಚ್ಚ ಸ್ಥಾನವನ್ನು ಬಿಟ್ಟುಕೊಟ್ಟು ಕಲ್ಯಾಣಕ್ಕೆ ಬರುವವಳಾದಳು. ಅವಳೂ ವಚನಕಾರಳು. ಅನುಮಿಷನು ಪಟ್ಟದಕಲ್ಲಿನಲ್ಲಿ ಆಳುತ್ತಿದ್ದ ರಾಜನಾಗಿದ್ದನು. ಅವನು ತನ್ನ ರಾಜ್ಯವನ್ನು ಬಿಟ್ಟುಕೊಟ್ಟು ಬಳ್ಳಿಗಾವಿಗೆ ಬಂದು ಅಲ್ಲಿ ಶಿವಯೋಗದಲ್ಲಿ ಮಗ್ನನಾದನು. ಸಕಳೇಶ ಮಾದರಸನು ಮೊದಲು ರಾಜ್ಯಾಧಿಪತಿಯು. ಇವನು ಸಹ ಆ ಸ್ಥಾನವನ್ನು ಬಿಟ್ಟುಕೊಟ್ಟು ಕಲ್ಯಾಣಪಟ್ಟಣಕ್ಕೆ ಬಂದು ವಾಸಿಸುವವನಾದನು. ಚಂದಿಮರಸನು ಕೆಂಭಾವಿಯಲ್ಲಿ ರಾಜ್ಯವಾಳುತ್ತಿದ್ದನು. ಅವನು ತನ್ನ ರಾಜ್ಯವನ್ನು ತೊರೆದು ಚಿಮ್ಮಲಿಗೆ (ಜಿಲ್ಲಾ ವಿಜಾಪುರ) ಯಲ್ಲಿ ಬಂದು ನಿಂತನು. ಚಾರವರಾಯನು ಕೇರಳದೇಶದ ಅಧಿಪತಿಯು. ಅವನು ಸಹ ತನ್ನ ರಾಜ್ಯವನ್ನು ಪರಿತ್ಯಜಿಸಿ ಶಿವನೆಲ್ಲಿದಾನೆಂಬುದನ್ನು ಹುಡುಕಲು ದೇಶಗಳನ್ನು ಸಂಚರಿಸುತ್ತ ಕಡೆಗೆ ಗೊಗ್ಗವ್ವೆಯನ್ನು ಕಂಡು ಅವಳಿಂದ ಲಿಂಗತತ್ವವನ್ನು ಅರಿತುಕೊಂಡನು. ಈ ಗೊಗ್ಗವ್ವೆಯು ವಚನಕಾರಳು. ಶಿವಯೋಗಿ ಮಲ್ಲರಸನು ಮೊದಲು ಐಹೊಳೆ (ಜಿ. ವಿಜಾಪುರ) ಯಲ್ಲಿ ರಾಜನಾಗಿದ್ದನು. ಅವನು ಆ ಸ್ಥಾನವನ್ನು ತ್ಯಜಿಸಿ ಶ್ರೀಶೈಲದಲ್ಲಿ ಶಿವ

ಯೋಗದಲ್ಲಿ ನಿರತನಾದನು. ಗುಪ್ತಮಂಚಣ್ಣ, ತಂಗಟೂರು ಮಾರಯ್ಯ, ರಾಯಸದ ಮಂಚಣ್ಣ, ಸೊಡ್ಡಳ ಬಾಚರಸ ಇವರೆಲ್ಲರೂ ರಾಜ್ಯದಲ್ಲಿ ಸಣ್ಣ ದೊಡ್ಡ ಅಧಿಕಾರ ಸ್ಥಾನಗಳಲ್ಲಿದ್ದವರು. ಅವರೆಲ್ಲರೂ ವೀರಶೈವ ಧರ್ಮವನ್ನು ಪಾಲಿಸುವವರಾದರು. ಶಿವಶರಣರಲ್ಲಿ ಅಸ್ಪೃಶ್ಯ ಮೊದಲ್ಗೊಂಡು ಎಲ್ಲ ಸಮಾಜದವರೂ ಕೂಡ ಇರುತ್ತಾರೆ. ಹೀಗೆ ದೇಶದಲ್ಲಿಯ ಎಲ್ಲ ತರಗತಿಯ ಜನರು ಈ ಕಾಲದಲ್ಲಿ ವೀರಶೈವ ಧರ್ಮವನ್ನು ಸ್ವೀಕರಿಸಿದ್ದು ಕಂಡುಬರುತ್ತಿದೆ.

## ಧರ್ಮಪ್ರಸಾರ ಕಾರ್ಯದಲ್ಲಿ ಶಿವಶರಣರಿಗಾದ ಕಷ್ಟಗಳು.

ಶಿವಾನುಭವ ಪ್ರಸಾರಕಾರ್ಯದಲ್ಲಿ ಶಿವಶರಣರಿಗೆ ಯಾವ ತೊಂದರೆಗಳೂ ಸಂಭವಿಸದೆ ಅವರು ತಮ್ಮ ಕಾರ್ಯವನ್ನು ಬಹು ಹಗುರಾಗಿ ಸಾಗಿಸುತ್ತ ಬಂದರೆಂದು ಅನೇಕರು ಭಾವಿಸಿರಬಹುದು. ಆದರೆ ನಿಜಸ್ಥಿತಿಯು ಹೀಗಿರುವದಿಲ್ಲ. ಶಿವಶರಣರು ತಮ್ಮ ಶಿವಾನುಭವ ಕಾರ್ಯಗಳನ್ನು ಮುಂದುವರಿಸುವಲ್ಲಿ ಅವರಿಗೆ ಅನೇಕ ತರದ ಕಷ್ಟಗಳು ಬಂದಿರುತ್ತವೆ. ಇದನ್ನು ನಾವು ಅವರ ಚರಿತ್ರೆಗಳಲ್ಲಿ ಕಾಣುತ್ತೇವೆ. ಶಿವಶರಣರ ಪ್ರಯತ್ನಗಳಲ್ಲಿ ಆಗಿನ ಪ್ರಮುಖ ಸಮಾಜಗಳು ಅವರನ್ನು ಬಲವಾಗಿ ವಿರೋಧಿಸಿರುತ್ತವೆ. ಈ ಸಮಾಜದವರು ಅವರಿಗೆ ಅನೇಕ ತರದ ತೊಂದರೆಗಳನ್ನು ತಂದೊಡ್ಡಿದ್ದಲ್ಲದೆ ಅವರನ್ನು ಬಹಳ ಹಿಂಸಿಸಿದ್ದಾರೆ. ಇಷ್ಟೇ ಅಲ್ಲ, ಒಮ್ಮೊಮ್ಮೆ ಸಮಾಜ ಸಮಾಜಗಳ ಮಧ್ಯದಲ್ಲಿ ಅನೇಕ ಬಗೆಯ ಕೋಲಾಹಲಗಳೆದ್ದಿವೆ, ಹೊಡೆದಾಟಗಳಾಗಿವೆ, ಯುದ್ಧಗಳೂ ಕೂಡ ಸಂಭವಿಸಿವೆ. ಬಲಿಷ್ಠ ಸಮಾಜಗಳು ಆಗ ದುರ್ಬಲಸ್ಥಿತಿಯಲ್ಲಿದ್ದ ವೀರಶೈವ ಸಮಾಜಕ್ಕೆ, ಅದರಲ್ಲಿ ವಿಶೇಷವಾಗಿ ಸ್ತ್ರೀಯರಿಗೆ, ಅನೇಕ ತರದ ಪೀಡೆಗಳನ್ನು ಕೊಟ್ಟಿರುತ್ತವೆ. ಆದರೂ ಶಿವಾನುಭವವು ಬಹುಜನ ಸಮಾಜಕ್ಕೆ ಬಹು ಪ್ರಿಯವಾದುದಾದ್ದರಿಂದ ಅದು ನಾಡಿನಲ್ಲಿ ಪಸರಿಸುತ್ತಲೇ ಹೋಯಿತು. ಈ ಕಾರ್ಯದಲ್ಲಿ ಶಿವಶರಣರಿಗೆ ಉಂಟಾದ ಕಷ್ಟಗಳ ವಿವರಣೆಗಳನ್ನು ಕೆಳಗೆ ಕಾಣಿಸಿದ ಚರಿತ್ರೆಗಳಲ್ಲಿ ನಾವು ಕಾಣಬಹುದು.

ಏಲೇಶಕೇತಯ್ಯನು ವೀರಶೈವಾಚಾರದಲ್ಲಿ ನಿರತನಾಗಿ ಶೈವಸಾಂಪ್ರ... ಕೂಡ ಸಹ ಯಾವ ತೆರದ ಸಂಬಂಧವನ್ನಿಡುತ್ತಿದ್ದಿಲ್ಲ. ಇದ

ರಿಂದ ಅವನು ಅವರ ರೋಷಕ್ಕೆ ಗುರಿಯಾದನು. ಬಿತ್ತುವ ಬೀಜದ
ಅವನ ಕಾಳುಗಳನ್ನು ಅವರು ಸುಟ್ಟುಬಿಟ್ಟರು. ಅವನ ದನಕರುಗ
ಳನ್ನು ಓಡಿಸಿಬಿಟ್ಟರು. ಕಡೆಗೆ ಅವರು ಅವನನ್ನು ಕೊಂದುಹಾಕಬೇ
ಕೆಂದು ಅವನ ಮನೆಯನ್ನು ಮುತ್ತಿದರು. ಆದರೆ ಕೇತಯ್ಯನು ಅವ
ರನ್ನು ಮನೆಯಲ್ಲಿ ಬರಮಾಡಿಕೊಂಡು ತನ್ನ ಶಿವಾನುಭವದ ಬೋಧೆ
ಯಿಂದ ಅವರನ್ನು ಶಾಂತಗೊಳಿಸಿದನು. ಗುಪ್ತಮಂಚಣ್ಣನು ಮೊದಲು
ವೀರವೈಷ್ಣವನು, ಬಿಜ್ಜಳನ ನಿಯೋಗಿಯು. ಮುಂದೆ ಅವನು ಶಿವಾ
ನುಭವದ ತತ್ವಗಳಿಗೆ ಒಲಿದವನಾದನು. ಆದರೂ ಅವನು ತನ್ನ
ಜಾತಿ-ಬಾಂಧವರ ರೋಷಕ್ಕೆ ಅಂಜಿ ತನ್ನ ಶಿವಾನುಭವದ ಆಚರಣೆ
ಗಳನ್ನು ಗುಪ್ತವಾಗಿ ಆಚರಿಸುತ್ತಿದ್ದನು. ಇದರಿಂದ ಹಿಂದಿನಕಾಲದಲ್ಲಿ
ತಮ್ಮ ಮೊದಲಿನ ಧರ್ಮವನ್ನು ಪರಿತ್ಯಾಗಮಾಡಿ ತಮ್ಮ ಆಚರಣೆಗ
ಳನ್ನು ಆಚರಿಸುವಲ್ಲಿ ವೀರಶೈವರಿಗೆ ಹೇಗೆ ಬಾಧೆಗಳುಂಟಾಗುತ್ತಿದ್ದ
ವೆಂಬುದನ್ನು ನಾವು ಊಹಿಸಬಹುದು.

ಶಿವಾನುಭವವು ಜಾತಿಭೇದವನ್ನು ಎಣಿಸುವದಿಲ್ಲ. ಬ್ರಾಹ್ಮಣ
ಅಸ್ಪೃಶ್ಯ ಯಾರಿದ್ದರೂ ಅವರೆಲ್ಲರೂ ಸಮಾನರೆಂದು ಅದು ಭಾವಿಸು
ವದಲ್ಲದೆ ಅವರಲ್ಲಿ ಪರಸ್ಪರ ಭೋಜನ ಮತ್ತು ಲಗ್ನ ವ್ಯವಹಾರಗ
ಳಾದರೆ ಅದು ಅದನ್ನು ಸಮರ್ಥಿಸುತ್ತದೆ. ಶಿವಶರಣರು ಈ ತತ್ವಗ
ಳನ್ನು ಪಾಲಿಸುವಲ್ಲಿ ಇತರ ಸಮಾಜದವರ ಕಡುತರವಾದ ಕ್ರೋಧಕ್ಕೆ
ಗುರಿಯಾದರು. ಕೆಂಭಾವಿ ಭೋಗಣ್ಣನು ಮೊದಲು ಬ್ರಾಹ್ಮಣನು.
ಅವನು ಒಬ್ಬ ಅಸ್ಪೃಶ್ಯನ ಪ್ರಸಾದವನ್ನು ಸ್ವೀಕರಿಸಿದ್ದರಿಂದ ಗ್ರಾಮದ
ಲ್ಲಿದ್ದ ಬ್ರಾಹ್ಮಣರು ಅವನನ್ನು ಊರಬಿಟ್ಟು ಹೊರಗೆ ಹಾಕಿದರು.
ನಾವದಿಗೆಯ ಗುಡ್ಡವ್ವೆಯು ಒಬ್ಬ ಅಸ್ಪೃಶ್ಯಳು. ಅವಳು ಬ್ರಾಹ್ಮಣ
ರಿದ್ದ ಕೇರಿಯನ್ನು ಪ್ರವೇಶಿಸಲಾಗಿ, ಅವರು ಅವಳನ್ನು ಅಲ್ಲಿಂದ ಹೊರಗೆ
ಹಾಕಿಬಿಟ್ಟರು. ಸೂರಂಬೆಯು ವೀರಶೈವರಲ್ಲಿ ಅತ್ಯಂತ ಪ್ರಸಿದ್ಧನಾದ
ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯಳು. ಅವಳು ಅಂತ್ಯಜರಿದ್ದರೂ
ಕೂಡ ಅವರನ್ನು ಮನೆಯಲ್ಲಿ ಕರೆತಂದು ಸತ್ಕರಿಸಿ ಉಪಚರಿಸುವಳು.
ಬ್ರಾಹ್ಮಣರು ಅವಳ ಈ ವರ್ತನೆಗೋಸ್ಕರ ಬಹಳ ಕೆರಳಿದವರಾಗಿ
ಅವಳನ್ನು ಶಿಕ್ಷಿಸುವ ಬಗ್ಗೆ ಅರಸನಿಗೆ ಹೇಳಿಕೊಂಡರು. ಬಿಬ್ಬಿಬಾಚಯ್ಯನು
ಇದರಂತೆಯೇ ವರ್ತಿಸಲು ವಿಪ್ರರು ಅವನು ಗ್ರಾಮವನ್ನು ಪ್ರವೇಶ

ಮಾಡುವಾಗ ಅವನನ್ನು ತಡೆಯುವವರಾದರು. ಬಸವೇಶ್ವರನು ಮಂತ್ರಿಯಾಗಿದ್ದರೂ ಕೂಡ ಅವನಿಗೂ ಸಹ ಇಂಥ ಪ್ರಸಂಗಗಳು ಮೇಲಿಂದ ಮೇಲೆ ಬರುತ್ತಿದ್ದವು. ಆದರೆ ಅವನು ಸಕಾಲದಲ್ಲಿ ಬಿಜ್ಜಳನಿಗೂ ಇತರ ಸಮಾಜದವರಿಗೂ ಶಿವಾನುಭವದ ಬೋಧೆಯನ್ನು ಬೋಧಿಸುತ್ತ ಅವರ ರೋಷವನ್ನು ಜಾಣತನದಿಂದ ದೂರಮಾಡುತ್ತ ಬಂದನು.

ಬ್ರಾಹ್ಮಣ ಧರ್ಮದ ಪ್ರಕಾರ ಸ್ತ್ರೀಯರು ಲಗ್ನವಾಗುವದು ಅವಶ್ಯವು. ಆದರೆ ಅನೇಕ ಸ್ತ್ರೀಯರು ಹಿಂದಿನಕಾಲದಲ್ಲಿ ಶಿವಾನುಭವಕ್ಕೆ ಒಲಿದವರಾಗಿ ಲಗ್ನವಾಗುವದನ್ನು ನಿರಾಕರಿಸಿದ್ದಾರೆ. ಆದ್ದರಿಂದ ಅವರು ತಮ್ಮ ಸಮಾಜದ ರೋಷಕ್ಕೆ ಗುರಿಯಾಗಿದ್ದಾರೆ. ಗೊಗ್ಗವ್ವೆಯು ಲಗ್ನವಾಗುವದನ್ನು ಒಪ್ಪಲಿಲ್ಲ. ಅದಕ್ಕೆ ಅವಳ ತಾಯಿತಂದೆಗಳು ಅವಳ ಮೇಲೆ ಬಲಾತ್ಕಾರ ಮಾಡಲು ಅವಳು ತನ್ನ ಮನೆಯನ್ನು ಬಿಟ್ಟು ಓಡಿಹೋಗಬೇಕಾಯಿತು. ಬೊಂತಾದೇವಿಯು ಲಗ್ನವಾಗುವದನ್ನು ನಿರಾಕರಿಸಲು ಅವಳು ತನ್ನ ನಾಡನ್ನು ಬಿಟ್ಟು ಕಲ್ಯಾಣಕ್ಕೆ ಹೊರಟು ಬರಬೇಕಾಯಿತು. ಅವಳು ಅಲ್ಲಿ ಕಡೆಯ ವರೆಗೆ ಅವಿವಾಹಿತಳಾಗಿಯೇ ಉಳಿದಳು. ಅಕ್ಕಮಹಾದೇವಿಯು ಹೀಗೆಯೇ ಆಚರಿಸಿದ್ದು ಪ್ರಸಿದ್ಧವಿದೆ.

ಶಿವಾನುಭವದ ಪ್ರಕಾರ ಪರಮಾತ್ಮನೊಬ್ಬನೇ ದೇವರೆಂದು ಭಾವಿಸಿ ಭಕ್ತರು ವರ್ತಿಸತಕ್ಕದ್ದು. ಇದರಿಂದ ಅವರಲ್ಲನೇಕರು ಇತರ ಸಮಾಜಗಳ ರೋಷಕ್ಕೆ ಗುರಿಯಾದರು. ಉರಲಿಂಗದೇವನು ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನು. ಅವನು ಒಂದು ನದೀತೀರದಲ್ಲಿ ಗುಡಿಸಲು ಹಾಕಿಕೊಂಡು ವಾಸಿಸುವಾಗ ಪರವಾದಿಗಳು ಅದಕ್ಕೆ ಬೆಂಕೀ ಹಚ್ಚಿದರು. ಕೋಲಂಬೆಯು ಚಿಕ್ಕವಯಸ್ಸಿನ ಬಾಲಿಕೆಯು. ಅವಳು ಬೇರೆ ಮಕ್ಕಳನ್ನು ಕೂಡಿಕೊಂಡು ಒಂದು ಹುಲ್ಲು ಗುಡಿಸಲನ್ನು ಮಾಡಿ ಅಲ್ಲಿ ಶಿವನೆಂದು ಒಂದು ಶಿಲೆಯನ್ನು ಸ್ಥಾಪಿಸಿ ಎಲ್ಲರೂ ಕೂಡಿಕೊಂಡು ದೇವಪೂಜೆಯ ಆಟವಾಡುವರು. ಆದರೆ ಒಂದು ದಿನ ಗ್ರಾಮದಲ್ಲಿಯ ಒಬ್ಬ ವೈಷ್ಣವನು ಆ ಗುಡಿಸಲಿಗೆ ಬೆಂಕಿಹಚ್ಚಿದನು!

ಇದೇ ಪ್ರಕಾರ ಜೈನರೂ ಕೂಡ ಶಿವಶರಣರನ್ನು ಕಾಡಿದ್ದಾರೆ. ತಿಲಕವ್ವೆಯ ತಾಯಿತಂದೆಗಳು ಜೈನರು. ಅವಳು ಶಿವಾನುಭವಕ್ಕೆ ಮೆಚ್ಚಿದವಳಾಗಲು ಅವಳ ಶಿವಾರ್ಚನೆಯನ್ನು ಅವರು ಪೂರ್ಣವಾಗಿ

ವಿಲ್ಲಿಸಿಬಿಟ್ಟರು ಮತ್ತು ಅವಳ ಮನಸ್ಸಿಗೆ ವಿರೋಧವಾಗಿ ಅವಳನ್ನು
ಒಬ್ಬ ಜೈನನಿಗೆ ಕೊಟ್ಟು ಲಗ್ನಮಾಡಿದರು. ಹೀಗಿರಲು ಒಂದುದಿನ
ಅವಳು ಶಿವಾಲಯವನ್ನು ಪ್ರವೇಶಿಸಲು ಅದನ್ನು ಅವಳ ಗಂಡನು
ಕಂಡು ಅವಳನ್ನು ಕೊಂದುಹಾಕಲು ಮುಂದುವರಿದನು. ಸೋಹ
ಳಿಯ ಸೋಮವ್ವೆಯು ಮೊದಲು ಒಂದು ಜೈನ ಮನೆತನದವಳು.
ಅವಳು ಶಿವಾನುಭವಕ್ಕೆ ಒಲಿದವಳಾಗಲು ಅವಳ ಅತ್ತೆ ಮತ್ತು ಗಂಡ
ಇವರು ಅವಳಿಗೆ ಶಿವಾರ್ಚನೆಯನ್ನು ಮಾಡಗೊಡಲಿಲ್ಲ. ಆದ್ದರಿಂದ
ಅವಳು ಗುಪ್ತವಾಗಿ ಶಿವಾಲಯಕ್ಕೆ ಹೋಗಹತ್ತಿದಳು. ಇದು ಅವಳ
ಗಂಡನಿಗೆ ಗೊತ್ತಾಗಲು ಅವಳನ್ನು ಅವನು ಖಡ್ಗದಿಂದ ಕೊಂದು
ಹಾಕಲು ಮುಂದಾದನು. ವೈಜವ್ವೆಯು ಒಂದು ಜೈನಮನೆತನದವಳು.
ಅವಳು ಶಿವಭಕ್ತಿಯುಳ್ಳವಳಾದಳು. ಆದರೆ ಅವಳ ಮನಸ್ಸಿನ ವಿರು
ದ್ಧವಾಗಿ ಅವಳ ತಾಯಿತಂದೆಗಳು ಅವಳನ್ನು ಒಬ್ಬ ಜೈನನಿಗೆ ಕೊಟ್ಟು
ಲಗ್ನಮಾಡಿದರು. ಅವಳು ತನ್ನ ಗಂಡನ ಮನೆಯಲ್ಲಿರುವಾಗ ತಾನು
ಸಿದ್ಧಪಡಿಸಿದ ಆಹಾರ ಪದಾರ್ಥಗಳನ್ನು ಒಬ್ಬ ಜಂಗಮನಿಗೆ ನೀಡಿ
ಬಿಟ್ಟಳು. ಅವಳು ಹೀಗೆ ಮಾಡಿದ್ದನ್ನು ಅವಳ ಗಂಡನು ತಿಳಿದು
ಅವಳನ್ನು ಹೊಡೆದುಬಡಿದು ಬಹಳ ಹಿಂಸಿಸಿದನು. ಅವಳನ್ನು ಮನೆ
ಯಿಂದ ಹೊರಗೆ ಸಹ ಹಾಕಿದನೆಂತಲೂ ತಿಳಿಯುತ್ತಿದೆ. ಈ ಸಂಗತಿ
ಗಳಿಂದ ಹಿಂದಿನಕಾಲದಲ್ಲಿ ಶಿವಾನುಭವದ ತತ್ವಗಳು ಸ್ತ್ರೀಯರ
ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡಿದವೆಂಬುದು
ಕಂಡುಬರುತ್ತದೆ. ಆದರೆ ಅವರು ವೀರಶೈವಾಚಾರದಂತೆ ನಡೆಯ
ಹತ್ತಲು ಬೇರೆ ಧರ್ಮದವರಾದ ಅವರ ಮನೆಯವರು ಈ ಅಬಲೆಯ
ರನ್ನು ಬಹಳ ಹಿಂಸಿಸಿದ್ದು ಕಂಡುಬರುತ್ತದೆ.

ಕೊಂಡದ ಮಾರಯ್ಯನು ಅರವಟಿಗೆಯನ್ನಿಟ್ಟು ಶಿವಾನುಭವದ ತತ್ವ
ಆಚರಣೆಗಳಂತೆ ನಡೆಯುತ್ತಾ ಇದ್ದನು. ಆದರೆ ಬಿಜ್ಜಳನು ಅವನ
ಆಚರಣೆಯ ರೀತಿಯನ್ನು ತಿಳಿಯದೆ ಅವನ ಕೈಗಳನ್ನು ಕಡಿಸಿ
ಹಾಕಿಸಿದನು. ಪೆರ್ಮಾಡಿರಾಯನು ಕೇಶಿರಾಜನು ವಿದ್ವಾಂಸನೆಂದು
ಅವನಿಗೆ ಮೊದಲು ಪ್ರಧಾನಿಯ ಕೆಲಸವನ್ನು ಕೊಟ್ಟನು. ಆದರೆ ಅರ
ಸನು ಅವನ ವಿರೋಧಿಗಳ ಮಾತನ್ನು ಕೇಳಿ ಪ್ರಧಾನಿ ಪಟ್ಟದಿಂದ
ಅವನನ್ನು ತಳ್ಳಿಹಾಕಿದನು. ಸಿದ್ಧರಾಮೇಶ್ವರನು ಗ್ರಾಮಾಧಿಪತಿಯು.

ಆದರೆ ಅಮುಗಿದೇವನು ತನ್ನ ಮಾತನ್ನು ಮೀರಿದನೆಂದು ಅವನನ್ನು ಅವನು ಊರ ಬಿಡಿಸಿ ಹೊರಗೆ ಹಾಕಿಸಿದನು. ಒಂದು ದಿನ ಚೋಳ ರಾಜನ ಅಧಿಕಾರಿಗಳು ಪಿಟ್ಟವ್ವೆಗೆ ಬಿಟ್ಟಿಯಾಗಿ ಮಣ್ಣು ಹೊರಲು ಹೇಳಿ ದರು. ಆದರೆ ಅವಳು ಅದನ್ನು ನಿರಾಕರಿಸಲು ಅವರು ಅವಳ ಮೇಲೆ ಬಲಾತ್ಕಾರ ಮಾಡಲು ಮುಂದಾದರು. ಒಕ್ಕಲು ಮುದ್ದಯ್ಯನು ತಾನು ರಾಜನಿಗೆ ಕೊಡತಕ್ಕ ಭೂಮಿಯ ತೆರಿಗೆಯನ್ನು ಕೊಟ್ಟಿದ್ದನು. ಆದರೆ ರಾಜನ ಕೈಕೆಳಗಿನ ಅಧಿಕಾರಿಗಳು ಹೆಚ್ಚಿಗೆ ತೆರಿಗೆ ಕೊಡೆಂದು ಅವನಿಗೆ ಒತ್ತಾಯ ಮಾಡಲು ಅವನು ಅದನ್ನು ಧೈರ್ಯದಿಂದ ನಿರಾಕರಿಸಿದನು. ಹೀಗೆ ರಾಜರೂ ರಾಜನ ಅಧಿಕಾರಿಗಳೂ ಶಿವಶರಣರನ್ನು ಕ್ಲೇಶಪಡಿ ಸಿದ್ದು ಕಂಡು ಬರುತ್ತದೆ.

ಹೀಗೆ ಶಿವಶರಣರು ತಮ್ಮ ಆಚರಣೆಗಳನ್ನು ಪಾಲಿಸುವಾಗ್ಗೆ, ತಮ್ಮ ಆಪ್ತರಿಷ್ಟರು, ತಮ್ಮ ತಂದೆ ತಾಯಿಗಳು, ಬಾಂಧವರು, ರಾಜರು ಇವರ ರೋಷಕ್ಕೆ ಪಾತ್ರರಾಗಿದ್ದಾರೆ. ಅವರಿಂದ ಹಿಂಸಿಸಲ್ಪಟ್ಟಿದ್ದಾರೆ. ಊರವರು ಅವರನ್ನು ಊರಿನಿಂದ ಹೊರಗೆ ಹಾಕಿದ್ದಾರೆ. ಅವರನ್ನು ಹೊಡೆದು ಬಡಿದು ಗಾಸಿಮಾಡಿದ್ದಾರೆ. ರಾಜರು ಅವರನ್ನು ಪೀಡಿಸಿ ದ್ದಾರೆ. ಹೀಗೆ ಶಿವಶರಣರು ತಮ್ಮ ಧರ್ಮೋದ್ಧಾರ ಕಾರ್ಯಗಳಲ್ಲಿ ಅನೇಕ ತರದ ಕಷ್ಟಗಳಿಗೆ ಗುರಿಯಾಗಿದ್ದಾರೆ. ಈ ಸ್ಥಿತಿಯು ಅವರಿಗೆ ಉಂಟಾಗಿದ್ದರೂ ಅವರು ಇಂಥ ಕಷ್ಟಗಳನ್ನು ಸಹಿಸಿಕೊಂಡು ಯಾವದು ಶಿವಾನುಭವದ ಪ್ರಕಾರ ಯೋಗ್ಯವಾದುದೋ ಅದನ್ನೇ ಅನುಸರಿಸುತ್ತ ಬಂದರು.

ಶಿವಶರಣರು ತಮ್ಮ ಆಚರಣೆಗಳಂತೆ ನಡೆಯುವಲ್ಲಿ ಅವರು ಯುದ್ಧಗಳನ್ನು ಮಾಡುವ ಪ್ರಸಂಗಗಳು ಸಹ ಬಂದಿವೆ. ಅಂಥ ಪ್ರಸಂಗಗಳಲ್ಲಿ ಅವರು ಹಿಂದೆಗೆದಿಲ್ಲ. ಆಗ ಅವರು ದಂಡನ್ನು ಕೂಡಿಸಿ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ತಮ್ಮ ವಿರೋಧಿಗಳ ಕೂಡ ಯುದ್ಧ ಮಾಡಿದ್ದಾರೆ.

ಕೋಹೂರು ಬ್ರಹ್ಮಯ್ಯನು ಕೋವಳ್ಳಿ (ವಿಜಾಪುರ ಜಿಲ್ಲೆ) ಯಲ್ಲಿ ರಾಜ್ಯವಾಳುತ್ತಿರಲು ಜೈನರು ಮೊದಲು ಅವನ ಮಗನನ್ನು ಕೊಂದು ಹಾಕಿದರು. ಅವರು ರಾಜನಿಗೆ ಅನೇಕ ತೊಂದರೆಗಳನ್ನುಂಟುಮಾಡುತ್ತ

ಕಡೆಗೆ ಅವನನ್ನು ಕೊಂದು ಹಾಕಬೇಕೆಂದು ಅವನ ಅರಮನೆಯನ್ನು ಮುತ್ತಿದರು. ಆಗ ಬ್ರಹ್ಮಯ್ಯನು ಅವರೊಡನೆ ಯುದ್ಧಮಾಡಿ ಅವರನ್ನು ಹಿಂದಕ್ಕಟ್ಟಬೇಕಾಯಿತು. ಮರದಾನಿ ಗುಡ್ಡವ್ವೆಯು ವಿಜಾಪುರಕ್ಕೆ ಸಮೀಪವಿರುವ ಗುಡ್ಡಾಪುರ ಎಂಬ ಗ್ರಾಮದವಳು. ಶ್ರೀಶೈಲಕ್ಕೆ ಸಮೀಪವಿರುವ ಅಲಂಪುರದಲ್ಲಿದ್ದ ಬಾಲಬ್ರಹ್ಮೇಶ ದೇವಾಲಯದಲ್ಲಿದ್ದ ಶಿವಲಿಂಗವನ್ನು ಪರವಾದಿಗಳು ಕಿತ್ತಿಹಾಕಲು ಅವಳು ಒಂದು ಸೈನ್ಯವನ್ನು ಕೂಡಿಸಿ ಅವರೊಡನೆ ಯುದ್ಧಮಾಡಿ ಶಿವಲಿಂಗವನ್ನು ಆ ದೇವಾಲಯದಲ್ಲಿ ಪುನಃ ಪ್ರತಿಷ್ಠಾಪಿಸಿದಳು. ಕಲಬುರ್ಗಿ ಜಿಲ್ಲೆಯಲ್ಲಿರುವ ಮಾರುಡಿಗೆಯಲ್ಲಿ ಜೈನರಿಗೂ ಶಿವಭಕ್ತರಿಗೂ ಘೋರವಾದ ಯುದ್ಧವು ಸಂಭವಿಸಲು ಅದರಲ್ಲಿ ವೀರಶೈವರು ಜಯಶಾಲಿಗಳಾದರು. ಇದರ ಪರಿಣಾಮವಾಗಿ ಈ ಭಾಗದಲ್ಲೆಲ್ಲ ಜಿನಾಲಯಗಳಿದ್ದ ಸ್ಥಳಗಳಲ್ಲಿ ಶಿವಾಲಯಗಳು ಸ್ಥಾಪಿತವಾದವು. ಸಗರವೆಂಬ ಗ್ರಾಮವು ಇದೇ ಭಾಗದಲ್ಲಿದೆ. ಅಲ್ಲಿಯ ಶಿವಶರಣನಾದ ಬ್ರಹ್ಮಯ್ಯನು ಜೈನರೊಡನೆ ಕಾದಾಡುವ ಪ್ರಸಂಗವು ಅವನಿಗುಂಟಾಯಿತು. ಬೀದರ ಗ್ರಾಮದಲ್ಲಿದ್ದ ವೀರಸಂಗಯ್ಯನೆಂಬ ಶಿವಶರಣನು ಕೋವೂರಲ್ಲಿದ್ದ ಭಾಸ್ಕರನ ಕೂಡ ಯುದ್ಧವನ್ನು ಮಾಡಬೇಕಾಯಿತು.

ಏಕಾಂತದ ರಾಮಯ್ಯನು ಕಲಬುರ್ಗಿ ಜಿಲ್ಲೆಯಲ್ಲಿರುವ ಆಳಂದೆ ಎಂಬ ಗ್ರಾಮದವನು. ಅವನು ಧಾರವಾಡ ಜಿಲ್ಲೆಯಲ್ಲಿರುವ ಅಬ್ಬಲೂರಿಗೆ ಹೋದಾಗ್ಗೆ ಅವನು ಅಲ್ಲಿ ಜೈನರೊಡನೆ ಕಾದಾಡುವ ಪ್ರಸಂಗವು ಬಂದೊದಗಿತು. ಶಿವಶರಣನಾದ ಆದಯ್ಯನು ಲಕ್ಷ್ಮೇಶ್ವರದಲ್ಲಿ ವಾಸವಾಗಿದ್ದನು. ಅವನಿಗೆ ಜೈನರೊಡನೆ ಕಾದಾಡುವ ಪ್ರಸಂಗವು ಉಂಟಾಯಿತು. ಹೀಗೆ ಉತ್ತರ ಕರ್ನಾಟಕದ ಅನೇಕ ಭಾಗಗಳಲ್ಲಿ ಶಿವಶರಣರು ಪರವಾದಿಗಳ ಕೂಡ ಯುದ್ಧಗಳನ್ನು ಮಾಡಿ ತಮ್ಮ ರಕ್ತವನ್ನು ಸೂರೆ ಮಾಡಿದ್ದಾರೆ.

ಈತರದ ರಕ್ತಪಾತಗಳು ಕ್ರಾಂತಿಯ ಆರಂಭಕಾಲದಲ್ಲಿ ಯಾವಾಗಲೂ ಆಗುವದುಂಟು. ಹಿತಸಂಬಂಧಿಗಳ ಹಿತಕ್ಕೆ ಬಾಧೆಯುಂಟಾದ ಕೂಡಲೆ ಹೀಗೆ ವಿರೋಧಗಳು ಉತ್ಪನ್ನವಾಗುತ್ತವೆ. ಆದರೆ ನಾಡಿನಲ್ಲಿ ಪ್ರಸಾರವಾದ ತತ್ವಗಳು ಬಹು ಜನಸಮಾಜಕ್ಕೆ ಹಿತಕರ ಮತ್ತು ಸಮ್ಮತವಾದ ಪಕ್ಷದಲ್ಲಿ ಇಂಥ ರಕ್ತಪಾತಗಳು ಮುಂದೆ ತೀವ್ರವಾಗಿ

ಅಡಗಿಹೋಗುತ್ತವೆ ಮತ್ತು ಹೊಸತರದ ಸಮಾಜವ್ಯವಸ್ಥೆಯು ತಲೆದೋರುತ್ತದೆ. ಇದೇ ಸ್ಥಿತಿಯು ಶಿವಶರಣರ ಕಾಲದಲ್ಲಿ ಕರ್ನಾಟಕದಲ್ಲಿ ಉಂಟಾದುದು ತೋರಿಬರುತ್ತದೆ. ಆದರೆ ಮುಂದೆ ಹೀಗೆ ಕಷ್ಟಪಟ್ಟವರೆಲ್ಲರು ಪವಾಡ ಪುರುಷರಾದರು. ಅವರ ಹೆಸರಿನ ದೇವಾಲಯಗಳು ಸ್ಥಾಪಿಸಲ್ಪಡಹತ್ತಿದವು. ಅವರ ಜಾತ್ರೆಗಳಾಗಹತ್ತಿದವು. ಈ ದೇವಾಲಯಗಳಿಗೆ ಭಾವಿಕರೂ ರಾಜರೂ ಉಂಬಳಿಗಳನ್ನು ಸಹ ಹಾಕಿಕೊಡಹತ್ತಿದರು। ಹೀಗೆ ಉಂಬಳಿ ಹಾಕಿಕೊಟ್ಟಿದ್ದರ ಬಗ್ಗೆ ಉಲ್ಲೇಖಗಳಿದ್ದ ಶಿಲಾಶಾಸನಗಳನ್ನು ನಾವು ಇಲ್ಲಿ ಬಹು ಸಂಕ್ಷಿಪ್ತವಾಗಿ ಉಲ್ಲೇಖಿಸುತ್ತೇವೆ.

ಆಮುಗಿದೇವನು ಭೀಮಾತೀರದಲ್ಲಿರುವ ಪುಳುಜ ಎಂಬ ಗ್ರಾಮದಲ್ಲಿ ವಾಸಿಸುತ್ತಿರುವಾಗ ದೇವಗಿರಿಯ ಯಾದವ ವಂಶದ ಪ್ರಸಿದ್ಧ ರಾಜನಾದ ಸಿಂಘಣನು ಅವನ ಕೀರ್ತಿಯನ್ನು ಕೇಳಿದನು. ಆಗ ಅವನು ಅವನನ್ನು ಕಂಡು ಅವನ ಇಷ್ಟದೇವತೆಯಾದ ಸಿದ್ಧಸೋಮನಾಥ ದೇವಾಲಯಕ್ಕೂ ಅವನಿಗೂ ಒಂದು ಗ್ರಾಮವನ್ನು ಉಂಬಳಿ ಹಾಕಿಕೊಟ್ಟನು. ಹಾಗೆಯೇ ಅವನ ಸೇನಾನಾಯಕರು ಈ ಶಿವಶರಣನಿಗೆ ಅನೇಕ ದಾನಗಳನ್ನು ಕೊಟ್ಟಿದ್ದಾರೆ. ಇದು ೧೧೯೯ ನೇ ಇಸ್ವಿಯಲ್ಲಿಯ ಅಲ್ಲಿಯ ಶಿಲಾಶಾಸನದಲ್ಲಿ ಉಲ್ಲೇಖವಾಗಿದೆ. ದೇವಗಿರಿ ಯಾದವ ರಾಜನಾದ ಮಹಾದೇವರಾಜನ ಮಾಂಡಲಿಕನಾದ ಸಾಯಿದೇವನೆಂಬವನು ವಿಜಾಪುರ ಜಿಲ್ಲೆಯ ಉತ್ತರ ಭಾಗವನ್ನು ಆಳುತ್ತಿದ್ದನು. ಅವನು ವರದಾನಿಗುಡ್ಡಮ್ಮಯ ವಿಷಯವಾಗಿ ಅತ್ಯಂತ ಭಕ್ತಿಭಾವವನ್ನು ತಾಳಿ ಅವಳ ಸ್ಮರಣಾರ್ಥವಾಗಿ ವಾತಃಖ್ಯಪುರವೆಂಬ ಗ್ರಾಮವನ್ನು ಭೀಮಾತೀರದಲ್ಲಿ ಹೊಸದಾಗಿ ಸ್ಥಾಪಿಸಿ ಅಲ್ಲಿ ಅವಳ ದೇವಾಲಯವನ್ನು ಕಟ್ಟಿಸಿದನು. ಇದು ೧೨೭೮ ರಲ್ಲಿ. ಸಂಭವಿಸಿತು ಏಕಾಂತದ ರಾಮಯ್ಯನು ಅಬ್ಬಲೂರಿನಲ್ಲಿ ಇರುತ್ತಿದ್ದನು. ಅಲ್ಲಿ ಇರುವಾಗ್ಗೆ ಚಾಳುಕ್ಯ ರಾಜನಾದ ೪ನೇ ಸೋಮೇಶ್ವರನೂ, ಕದಂಬರಾಜನಾದ ಕಾಮದೇವನೂ ಅವನ ತರುವಾಯದ ಬೇರೆ ಕದಂಬರಾಜರೂ ಮಾಂಡಲಿಕನಾದ ಕೇಶಿರಾಜನೂ ಅವನಿಗೂ ಅವನು ಸ್ಥಾಪಿಸಿದ ದೇವಾಲಯಕ್ಕೂ ಅನೇಕ ಉಂಬಳಿಗಳನ್ನು ಹಾಕಿಕೊಟ್ಟರು. ಶ್ರೀಪತಿ ಪಂಡಿತಾರಾಧ್ಯನು ಶೂದ್ರರೊಡನೆ ಭೋಜನ ಮಾಡಿದ್ದರಿಂದ ಅವನಿಗೆ ಆರಂಭದಲ್ಲಿ ಬ್ರಾಹ್ಮಣ

ರಿಂದ ಬಹಳ ಹಿಂಸೆಗಳಾದವು. ಆದರೆ ಮುಂದೆ ಅನೇಕ ಗ್ರಂಥಕಾರರು ಅವನನ್ನು ಬಹಳ ಸ್ತುತಿಸಿರುವರಲ್ಲದೆ ಅನೇಕ ಮಾಂಡಲಿಕರೂ ರಾಜರೂ ಅವನಿಗೆ ಅನೇಕ ಶಾಸನಗಳನ್ನು ಹಾಕಿಕೊಟ್ಟಿದ್ದಾರೆ. ಹೀಗೆ ಶಿವಶರಣರು ಕರ್ನಾಟಕ ಮತ್ತು ಆಂಧ್ರ ದೇಶಗಳ ಧಾರ್ಮಿಕ ಇತಿಹಾಸದಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿರುತ್ತಾರೆ.

## ಶಿವಶರಣರ ಚಳವಳಿಯ ಪ್ರಾರಂಭ ಕಾಲ.

ಶಿವಶರಣರ ಈ ಚಳವಳಿಯು ಎಂದಿನಿಂದ ಪ್ರಾರಂಭವಾಯಿತೆಂಬುದನ್ನು ಸಂಶೋಧಿಸುವದು ಬಹಳ ಮಹತ್ವದ ವಿಷಯವಾಗಿದೆ. ಆದರೆ ಅವರ ಚರಿತ್ರೆಗಳನ್ನೆಲ್ಲ ಸಂಗ್ರಹಿಸಿ ಅವುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದಲ್ಲದೆ ಈ ಸಂಗತಿಯನ್ನು ನಿಶ್ಚಿತವಾಗಿ ಕಂಡುಹಿಡಿಯುವದು ಕಠಿಣವಾದುದು. ಹಾಗೆಯೇ ವೀರಶೈವ ಧರ್ಮದ ಸ್ವರೂಪವು ಯಾವ ಯಾವ ಕಾಲದಲ್ಲಿ ಹೇಗಿತ್ತೆಂಬುದನ್ನು ತಿಳಿಯುವದಾದರೂ ಅಷ್ಟೇ ಮಹತ್ವದ್ದು. ಆದರೆ ಇದು ಕರ್ನಾಟಕ, ಆಂಧ್ರ, ಸಂಸ್ಕೃತ, ದ್ರಾವಿಡ ಭಾಷೆಗಳಲ್ಲಿರುವ ಶೈವ, ವೀರಶೈವ ವಾಙ್ಮಯವನ್ನು ಆಳವಾಗಿ ಅಭ್ಯಾಸ ಮಾಡದ ಹೊರ್ತು ಗೊತ್ತಾಗಲಾರದು. ಹೀಗೆ ನಿಶ್ಚಯಿಸುವ ಕಾಲವು ಇನ್ನು ಬಂದಿಲ್ಲೆಂದು ನಮ್ಮ ತಿಳವಳಿಕೆ ಇದೆ. ಆದರೂ ಈ ವಿಷಯವನ್ನು ನಾವು ವಿಸ್ತೃತವಾಗಿ ಇಲ್ಲಿ ವಿವೇಚಿಸದೆ, ಈ ವರೆಗೆ ನಾವು ಪ್ರಸಿದ್ಧ ಮಾಡಿದ ಶಿವಶರಣರ ಚರಿತ್ರೆಗಳ ಸಹಾಯದಿಂದ ಅವರ ಚಳವಳಿಯ ಕಾಲವನ್ನು ಕುರಿತು ಸ್ಥೂಲವಾಗಿ ಇಲ್ಲಿ ನಿರ್ದೇಶಿಸಲೆಣಿಸಿದ್ದೇವೆ.

ಕೆಲವರು ಶಿವಶರಣರ ಚಳವಳಿಯು ಬಸವೇಶ್ವರನ ಕಾಲದಲ್ಲಿಯೇ ಪ್ರಾರಂಭವಾಯಿತೆಂದು ತಿಳಿದಿರುತ್ತಾರೆ. ಆದರೆ ಈ ವಿಧಾನವು ಯಥಾರ್ಥವಲ್ಲೆಂದು ನಮಗೆ ತೋರುತ್ತದೆ. ಶಿವಶರಣರ ಚಳವಳಿಯು ಅವನಕಿಂತಲೂ ಮೊದಲೇ ಪ್ರಾರಂಭವಾಗಿತ್ತೆಂದು ತೋರುತ್ತದೆ. ಯಾಕಂದರೆ ಅನೇಕ ಶಿವಶರಣರು ಮತ್ತು ವಚನಕಾರರು ಅವನಕಿಂತಲೂ ಮೊದಲಿನವರಿರುತ್ತಾರೆ.

ಕೇಶಿರಾಜ, ಇಳಿಹಾಳ ಬೊಮ್ಮಯ್ಯ, ಬಾಹೂರು ಬೊಮ್ಮಯ್ಯ, ರಾಗದ ಸಂಕಣ್ಣ, ಇವರು ಪೆರ್ಮಾಡಿರಾಯನ ಕಾಲದವರು. ಚಾಲು

ಕ್ಯಗಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ವಿಕ್ರಮಾದಿತ್ಯನಿಗೆ ಪೆರ್ಮಾಡಿ ಎಂಬ ಹೆಸರಿತ್ತು. ಈ ರಾಜನು ೧೦೭೬ ರಿಂದ ೧೧೨೬ ರ ವರೆಗೆ ಅಂದರೆ ಬಸವೇಶ್ವರನಕಿಂತಲೂ ಮೊದಲು ರಾಜ್ಯವಾಳಿದನು. ಆದ್ದರಿಂದ ಈ ನಾಲ್ವರೂ ಶಿವಶರಣರು ಅವನಕಿಂತಲೂ ಹಿಂದಿನವರಾಗುತ್ತಾರೆ. ಇವರಲ್ಲಿ ಬಾಹೂರು ಬೊಮ್ಮಯ್ಯನು ವಚನಕಾರನಿದ್ದಾನೆ.

ಕರಿಕಾಲ ಚೋಳನು ೧೦೭೦ ರಿಂದ ೧೧೨೦ ರ ವರೆಗೆ ಕಾಂಚೀ ಪಟ್ಟಣದಲ್ಲಿ ರಾಜ್ಯವಾಳಿದನು. ಇವನಿಗೆ ಕೇರಳದ ಚಾರಮರಾಯನು ಸಮಕಾಲೀನನು. ಈ ಚಾರಮರಾಯನಿಗೆ ಗೊಗ್ಗವ್ವೆ ಮತ್ತು ಭದ್ರ ಗಾಯಕ ಇವರ ಚರಿತ್ರೆಗಳು ಸಂಬಂಧಪಡುತ್ತವೆ. ಕರಿಕಾಲಚೋಳನಿಗೆ ಮೆರೆಮಿಂಡದೇವ, ಮಾದರ ಚನ್ನಯ್ಯ ಮತ್ತು ಪಿಟ್ಟವ್ವೆ ಇವರು ಸಂಬಂಧಪಡುತ್ತಾರೆ. ಆದ್ದರಿಂದ ಈ ಆರೂ ಜನ ಶಿವಶರಣರು ಬಸವೇಶ್ವರನಕಿಂತಲೂ ಮೊದಲಿನವರಾಗುತ್ತಾರೆ. ಇವರಲ್ಲಿ ಗೊಗ್ಗವ್ವೆ, ಮೆರೆಮಿಂಡದೇವ ಮತ್ತು ಮಾದರ ಚನ್ನಯ್ಯ ಇವರು ವಚನಕಾರರಿದ್ದಾರೆ.

ಕರ್ನಾಟಕ ದೇಶದಲ್ಲಿ ಪುಲಿಗೆರೆಯ ಸೋಮಯ್ಯ, ಕೆಂಭಾವಿಯ ಭೋಗಣ್ಣ, ಚಂದಿಮರಸು, ನಿಜಗುಣ ಇವರೂ ಆಂಧ್ರ ದೇಶದಲ್ಲಿಯ ಶ್ರೀಪತಿ ಪಂಡಿತಾರಾಧ್ಯನೂ ಬಸವೇಶ್ವರನಕಿಂತ ಮೊದಲಿನವರು. ಈ ವಿಷಯದ ಬಗ್ಗೆ ಅವರ ಚರಿತ್ರೆಗಳನ್ನು ನೋಡಬೇಕು. ಇವರಲ್ಲಿ ನಿಜಗುಣನೂ ಚಂದಿಮರಸನೂ ಶ್ರೇಷ್ಠತರದ ವಚನಕಾರರಿದ್ದಾರೆ.

ಕೆಲವು ಶಿವಶರಣರು ಬಸವೇಶ್ವರನ ಕಾಲದಲ್ಲಿದ್ದರೂ ಅವರು ಅವನಿಗಿಂತಲೂ ಹಿರಿಯರಾಗಿ ವೀರಶೈವ ಧರ್ಮವನ್ನು ಸ್ವತಂತ್ರವಾಗಿ ವಿಸ್ತಾರಪಡಿಸಿದ್ದಾರೆ. ಅವರು ಬಸವೇಶ್ವನಿಗಾಗಲಿ ಇಲ್ಲವೆ ಅವನ ಶಿವಾನುಭವ ಮಂಟಪಕ್ಕಾಗಲಿ ಸಂಬಂಧಪಟ್ಟವರಲ್ಲ. ರೇವಣಸಿದ್ಧೇಶ್ವರನ ಹೇಳಿಕೆಗನುಸಾರವಾಗಿ ಅವನ ಮಗನಾದ ರುದ್ರಮುನಿಯು ದೀಕ್ಷೆ ಕೊಟ್ಟ ಹಾವಿನಹಾಳ ಕಲ್ಲಯ್ಯನು ಬಸವೇಶ್ವರನಕಿಂತಲೂ ಹಿರಿಯನಾಗುತ್ತಾನೆ. ಅಲ್ಲಮ ಪ್ರಭುವಿನ ಗುರುವಾದ ಅನಿಮಿಷನು, ಅಜಗಣ್ಣನ, ಅವನ ತಂಗಿ ಮುಕ್ತಾಯಿಯು, ಮೊದಲು ಚೋಳ ರಾಜ್ಯದಲ್ಲಿದ್ದು ಹಿಂದುಗಡೆ ಕರ್ನಾಟಕಕ್ಕೆ ಬಂದ ಎಡೆಮಠದ ನಾಗಿದೇವ, ಅವನ ಹೆಂಡತಿಯಾದ ಮಸಣಮ್ಮ, ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯಳಾದ ಸೂರಂಬೆಯು, ಶಿವಯೋಗಿ ಮಲ್ಲರಸನು, ಗೋರಕ್ಷನು ಮತ್ತು

ಏಕಾಂತದ ರಾಮಯ್ಯನು ಇವರೆಲ್ಲರೂ ಬಸವೇಶ್ವರನಕಿಂತಲೂ ಕೆಲ ಕಾಲ ಹಿರಿಯರಾಗುತ್ತಾರೆ. ಇವರೆಲ್ಲರೂ ಸ್ವತಂತ್ರ ರೀತಿಯಿಂದ ಶಿವಾನುಭವದ ತತ್ವಗಳನ್ನು ದೇಶದಲ್ಲಿ ಪ್ರಸಾರ ಮಾಡಿದ್ದಾರೆ. ಇವರಲ್ಲಿ ಹಾವಿನಹಾಳ ಕಲ್ಲಯ್ಯ, ಅಜಗಣ್ಣ, ಮುಕ್ತಾಯಿ, ಮಸಣಮ್ಮ, ಗೋರಕ್ಷ ಮತ್ತು ಏಕಾಂತದ ರಾಮಯ್ಯ ಇವರೆಲ್ಲರು ವಚನಕಾರರೆಂಬುದನ್ನು ನಾವು ಲಕ್ಷಿಸತಕ್ಕದ್ದು.

ಹೀಗೆ ನಾವು ಪ್ರಸಿದ್ಧಿಸಿರುವ ಶಿವಶರಣರ ಚರಿತ್ರೆಗಳಲ್ಲಿ ೨೫ ಜನರ ಚರಿತ್ರೆಗಳು ಬಸವೇಶ್ವರನಕಿಂತಲೂ ಮೊದಲಿನವು ಇರುತ್ತವೆ. ಇವರಲ್ಲಿ ಮೂರು ಜನ ಶಿವಶರಣರನ್ನು ಬಸವೇಶ್ವರನು ಬಹು ಭಕ್ತಿಯಿಂದ ತನ್ನ ವಚನಗಳಲ್ಲಿ ಸ್ಮರಿಸಿದ್ದಾನೆ. ಅವರು ಯಾರೆಂದರೆ:— ಮಾದರ ಚನ್ನಯ್ಯ, ಕೆಂಭಾವಿ ಭೋಗಣ್ಣ ಮತ್ತು ಚಾರಮರಾಯ. ಇವರಲ್ಲಿ ಮಾದರ ಚನ್ನಯ್ಯನು ವಚನಕಾರನಿದ್ದಾನೆ. ಈ ಎಲ್ಲ ಸಂಗತಿಗಳಿಂದ ವಚನ ವಾಙ್ಮಯದ ಪ್ರಾದುರ್ಭಾವವು ಮತ್ತು ಶಿವಶರಣರ ಚಳವಳಿಗಳು ಬಸವೇಶ್ವರನಕಿಂತಲೂ ಮೊದಲು ಉಂಟಾಗಿದ್ದವೆಂಬದು ಗೊತ್ತಾಗುತ್ತದೆ. ಆದರೆ ಅವು ಎಂದು ಪ್ರಾರಂಭವಾದವೆಂಬುದನ್ನು ತಿಳಿಯಲು ನಮಗೆ ಸಾಕಷ್ಟು ಆಧಾರಗಳು ದೊರೆತಿಲ್ಲ.

## ಉಪಸಂಹಾರ.

ಒಂದು ಕಾಲದಲ್ಲಿ ಬಸವೇಶ್ವರನು ಜನರ ಸ್ವೈರವೃತ್ತಿಗೆ ಇಂಬು ಗೊಟ್ಟು ವೀರಶೈವ ಧರ್ಮವನ್ನು ಪ್ರಸಾರಮಾಡಿದನೆಂಬ ತಿಳಿವಳಿಕೆ ಇತ್ತು. ಆದರೆ ವಚನ ವಾಙ್ಮಯದಲ್ಲಿ ಇಂಥ ಅನೀತಿ ಅನಾಚಾರಗಳಿಗೆ ಎಷ್ಟು ಮಾತ್ರವೂ ಇಂಬು ಇರುವದಿಲ್ಲ. ಯಾವ ಶಿವಶರಣರ ವಚನಗಳನ್ನು-ತೆಗೆದುಕೊಂಡರೂ ಅವುಗಳಲ್ಲಿ ಶ್ರೇಷ್ಠತರದ ಧಾರ್ಮಿಕ ತತ್ವಗಳ ವಿವೇಚನೆಯು ಇರುವದೇ ಹೊರ್ತು ಅನಾಚಾರದ ಸೋಂಕು ಸಹ ಇರುವದಿಲ್ಲ. ಶಿವಶರಣರ ಚರಿತ್ರೆಗಳಲ್ಲಿಯೂ ಕೂಡ ಇದೇ ಸಂಗತಿಯು ಕಂಡು ಬರುತ್ತವೆ. ಈ ಪ್ರಕಾರ ಶಿವಶರಣರು ನಾಡಿನಲ್ಲಿ ಉತ್ಕೃಷ್ಟತರದ ಧಾರ್ಮಿಕ ಕ್ರಾಂತಿಯನ್ನು ಮಾಡಿದ್ದಾರೆ. ಈ ಮಹಾತ್ಮರ ಪ್ರಯತ್ನದ ಫಲವಾಗಿ ವೀರಶೈವ-ಮತವು ದಟ್ಟವಾಗಿ ಎಲ್ಲ ಕಡೆಗೂ ಪಸರಿಸಿರುತ್ತದೆ.

ಈ ಮಹತ್ವದ ಕಾರ್ಯವನ್ನು ಮಾಡಿದವರು ಕೇವಲ ಸಾಮಾನ್ಯ ಜನರು. ಅಂದರೆ ಬಡವರು, ಕೈಗಾರಿಕೆಯವರು, ಒಕ್ಕಲಿಗರು ಇಂಥವರೇ ಇದ್ದಾರೆ. ಅವರ ಈ ಚಳವಳಿಯ ಪರಿಣಾಮವಾಗಿ ಕನ್ನಡ ಭಾಷೆಯಲ್ಲಿ ಒಂದು ಉಚ್ಚ ವಾಙ್ಮಯವು ಉಂಟಾಯಿತು. ಅದರ ಪ್ರಭಾವವು ಸುತ್ತಲಿನ ದೇಶಗಳಲ್ಲಿ ಸಹ ವ್ಯಾಪಿಸಿತು. ಇದರಿಂದ ತೆಲುಗು, ದ್ರಾವಿಡ, ಸಂಸ್ಕೃತ ಬಾಷೆಗಳಲ್ಲಿ ಅನೇಕ ವೀರಶೈವ ಗ್ರಂಥಗಳುಂಟಾದವು. ಇಷ್ಟೇಅಲ್ಲ, ಮಲಯಾಳ, ಗುಜರಾಥ, ಓಡಿಸಾ, ಕಾಶ್ಮೀರ ಇಂಥ ದೂರ ದೂರದ ದೇಶಗಳಲ್ಲಿಯ ವಿದ್ಯಾವಂತರು, ಮುಖ್ಯವಾಗಿ ಶೈವರು, ಶಿವಶರಣರ ತತ್ವಗಳನ್ನು ತಿಳಿಯಲು ಕರ್ನಾಟಕಕ್ಕೆ ಬರುವವರಾದರು. ಈ ಸಂಗತಿಗಳು ನಾವು ಈ ವರೆಗೆ ಪ್ರಸಿದ್ಧ ಮಾಡಿದ ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತಿದೆ. ಇದರಿಂದ ಈ ಕಾಲದಲ್ಲಿ ಕರ್ನಾಟಕದ ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ ಒಂದು ಅದ್ಭುತ ಕ್ರಾಂತಿಯುಂಟಾಯಿತು. ಉರಿಲಿಂಗಪೆದ್ದಿ, ನನ್ನಯ್ಯ, ನಿಜಲಿಂಗ ಚಿಕ್ಕಯ್ಯ ಇವರು ಮೊದಲು ಕೊಲೆ ಸುಲಿಗೆಗಳನ್ನು ಮಾಡುತ್ತ ಹಾದಿ ಬಡಿಯುವವರಾಗಿದ್ದರು. ಇಂಥವರು ಶಿವಾನುಭವದ ಮೂಲಕ ತಮ್ಮ ಕ್ರೂರ ಕರ್ಮಗಳನ್ನು ಬಿಟ್ಟುಬಿಡುವವರಾದರು. ದುರಾಚಾರಿಗಳು ಸದ್ವರ್ತನೆಯಿಂದ ನಡೆಯುವವರಾದರು. ಉಚ್ಚ ವರ್ಣದವರು ಕೆಳಗಿನ ವರ್ಣದವರೊಡನೆ ಸಮಾನತೆಯಿಂದ ನಡೆಯಹತ್ತಿದರು. ಸ್ತ್ರೀಯರು ಶಿವಾನುಭವದ ಸಲುವಾಗಿ ಪ್ರೀತಿಯನ್ನು ವಹಿಸಿ ತಮಗುಂಟಾದ ಕಠಿಣಕಾಲದಲ್ಲಿ ಸಾವನ್ನು ಸಹ ಎದುರಿಸಲು ಧೈರ್ಯಮಾಡುವವರಾದರು. ಬಾಲಕರೂ ಎಳೆ ವಯಸ್ಸಿನವರೂ ಕೂಡ ಕಷ್ಟವನ್ನು ಸಹಿಸಲು ಮುಂದಾದರು. ರಾಜರು ರಾಜ್ಯದ ಹಂಬಲವನ್ನು ತೊರೆದರು. ಹೀಗೆ ಈ ಕಾಲದಲ್ಲಿ ಒಂದು ಅದ್ಭುತ ಸಾಮರ್ಥ್ಯವು ಸಮಾಜದಲ್ಲಿ ಉಂಟಾಯಿತು. ಇದು ಶಿವಾನುಭವದ ಪರಿಣಾಮವಾಗಿದೆ.

ನಾವು ಈ ವರೆಗೆ ೧೧೪ ಜನ ಶಿವಶರಣರ ಚರಿತ್ರೆಗಳನ್ನು ಸಂಶೋಧಿಸಿ ಎರಡು ಭಾಗಗಳಲ್ಲಿ ಅವುಗಳನ್ನು ಪ್ರಸಿದ್ಧಿಸಿದ್ದೇವೆ. ಇವರಲ್ಲದೆ ಇನ್ನೂ ಅನೇಕ ಶಿವಶರಣರು ನಾಡಿನಲ್ಲಿ ಉದ್ಭವಿಸಿದ್ದಾರೆ. ಅವರೂ ಅನೇಕ ಮಹತ್ತರವಾದ ಕಾರ್ಯಗಳನ್ನು ಮಾಡಿದ್ದಾರೆ. ಅವರ ಚರಿತ್ರೆಗಳನ್ನು ನಾವು ಕ್ರಮೇಣ ಮುಂದಿನ ಭಾಗಗಳಲ್ಲಿ ಪ್ರಸಿದ್ಧಿಸುತ್ತ ಹೋಗುವೆವು.

ಈ ಗ್ರಂಥದ ಪ್ರಸ್ತಾವನೆಯು ಅನಿರೀಕ್ಷಿತವಾಗಿ ಬಹಳ ಬೆಳೆಗು ಬಂದಿತು. ಶಿವಶರಣರು ಮಾಡಿದ ಕಾರ್ಯಗಳ ಮಹತ್ವವನ್ನು ವಾಚಕರು ಅರಿಯುವದು ಅವಶ್ಯವೆಂದು ನಮಗೆ ತೋರಿದ್ದರಿಂದ ನಾವು ಇಷ್ಟು ದೀರ್ಘವಾದ ಪ್ರಸ್ತಾವನೆಯನ್ನು ಬರೆಯಬೇಕಾಯಿತು. ಇದಕ್ಕೋಸ್ಕರ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ.

ನಾವು ಈ ಚರಿತ್ರೆಗಳನ್ನೆಲ್ಲ ಶಿವಾನುಭವಪತ್ರಿಕೆಯ ದ್ವಾರಾ ಪ್ರಕಟ ಮಾಡುತ್ತ ಬಂದಿದ್ದೇವೆ. ಇವುಗಳಲ್ಲಿ ಯಾವವೂ ಒಂದೇಕಾಲಕ್ಕೆ ಬರೆಯಲ್ಪಟ್ಟಿರುವದಿಲ್ಲ. ಇದರಿಂದ ಕೆಲವು ದೋಷಗಳು ಈ ಗ್ರಂಥದಲ್ಲಿ ಉಂಟಾಗಿರುತ್ತವೆ. ಅಲ್ಲಲ್ಲಿ ಅವ್ಯವಸ್ಥಿತ ವಾಕ್ಯರಚನೆಗಳೂ ಭಾಷಾ ದೋಷಗಳೂ ಉಂಟಾಗಿರುತ್ತವೆ. ಕೆಲವು ಸಮಯಗಳಲ್ಲಿ ಅವಸರದಿಂದ ಪ್ರೂಫು ತಿದ್ದಬೇಕಾದ್ದರಿಂದ ಪ್ರಿಂಟಿನ ದೋಷಗಳೂ ಆಗಿರುತ್ತವೆ. ಇದಕ್ಕೋಸ್ಕರ ನಾವು ವಾಚಕರ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ. ಈ ದೋಷಗಳು ಮುಂದಣ ಮುದ್ರಣಕಾಲದಲ್ಲಿ ಸರಿಪಡಿಸಲ್ಪಡುವವು.

ಈ ಗ್ರಂಥದ ಮುದ್ರಣಕಾಲದಲ್ಲಿ ಯಾವಾಗಲೂ ಕಾಗದದ ಕೊರತೆ ಇದ್ದದರಿಂದಲೂ ಸ್ವಲ್ಪ ಪ್ರತಿಗಳನ್ನು ನಾವು ಮುದ್ರಿಸಬೇಕಾದ್ದರಿಂದಲೂ ಗ್ರಂಥದ ಬೆಲೆಯನ್ನು ಹೆಚ್ಚಿಸಬೇಕಾಗಿ ಬಂದಿದೆ. ಆದರೆ ಈ ಸ್ಥಿತಿಯು ಗ್ರಂಥದ ಮುಂದಿನ ಮುದ್ರಣಕಾಲದಲ್ಲಿ ಉಳಿಯಲಿಕ್ಕಿಲ್ಲೆಂದು ನಾವು ಭಾವಿಸಿದ್ದೇವೆ.

ಫ. ಗು. ಹಳಕಟ್ಟಿ,

ಸಂಪಾದಕ.

# ಶಿವಶರಣರ ಚರಿತ್ರೆಗಳು.

## ಭಾಗ ೨.

---

### ಬೊಂತಾದೇವಿ.

ಬೊಂತಾದೇವಿಯು ಕಾಶ್ಮೀರದೇಶದಲ್ಲಿಯ ಮಾಂಡವ್ಯಪುರವೆಂಬ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದ ಅರಸನ ಮಗಳು. ಆಕೆಯು ಹುಟ್ಟಿದಾಗಿನ ಹೆಸರು ನಿಜದೇವಿ ಎಂಬುದಾಗಿತ್ತು. ಅವಳು ಚಿಕ್ಕಂದಿನಿಂದಲೂ ಕೇವಲ ಶಿವಭಕ್ತಿಯಿಂದ ಆಚರಿಸುವವಳಾಗಿದ್ದಳು. ಅವಳು ದೊಡ್ಡವಳಾದ ಬಳಿಕ ಅವಳಲ್ಲಿ ವೈರಾಗ್ಯ ಭಾವವು ಹೆಚ್ಚಿತು. ಆಗ ಅವಳು ತನ್ನ ತಂದೆಯ ರಾಜವೈಭವವನ್ನು ತೊರೆದಳು. ತನ್ನ ಉಡಿಗೆತೊಡಿಗೆಗಳನ್ನು ಸಹ ಬಿಟ್ಟುಕೊಟ್ಟು ದಿಗಂಬರಿಯಾದಳು! ಆಗ ತಂದೆತಾಯಿಗಳು ಅವಳಿಗೆ— ಎಲೆ ಮಗಳೇ, ಇದೆಲ್ಲಿಯ ಭ್ರಾಂತಿ ನಿನಗೆ? ಈ ಮಾರ್ಗವನ್ನು ಬಿಟ್ಟು ಬಿಡು, ಎಂದು ಎಷ್ಟು ಬೋಧಿಸಿದರೂ ಅದು ಅವಳಿಗೆ ರುಚಿಸಲಿಲ್ಲ. ಅವಳು ಅವರಿಗೆ— ನನಗೆ ಶಿವನ ಭ್ರಾಂತಿಯುಂಟಾಗಿದೆ. ನನಗೆ ನಿಮ್ಮ ರಾಜವೈಭವವು ಬೇಡ. ಕಲ್ಯಾಣದಲ್ಲಿ ಬಸವಾದಿ ಪ್ರಮಥರು ಶಿವಾನುಭವ ಮಾರ್ಗವನ್ನು ಬೋಧಿಸುತ್ತಲಿದ್ದಾರೆ, ಅವರಿದ್ದೆಡೆಗೆ ಹೋಗುವೆನು, ಎಂದು ಹೇಳಿ ತನ್ನ ದೇಶವನ್ನು ತೊರೆದು ಕಲ್ಯಾಣಕ್ಕೆ ಹೊರಡಲನುವಾದಳು!

ಆಗ ತಂದೆತಾಯಿಗಳು ಎಷ್ಟು ಪರಿಯಿಂದ ಹೇಳಿದರೂ ಶಿವದೇವಿಯು ತನ್ನ ನಿಶ್ಚಯವನ್ನು ಬಿಡಲಿಲ್ಲ. ಅವಳು ಪಾದಚಾರಿಯಾಗಿ ಘೋರಾರಣ್ಯಗಳನ್ನು ಪ್ರವೇಶಿಸುತ್ತ ಮಾರ್ಗಕ್ರಮಣ ಮಾಡಹತ್ತಿದಳು. ಅವಳು ಅತ್ಯಂತ ಲಾವಣ್ಯವತಿಯು. ಮಾರ್ಗದಲ್ಲಿ ಅವಳನ್ನು ಬಹು ಜನರು ಕಂಡು ಅವಳಿಗೆ ಮೋಹಿತರಾದರು. ಅವರು ತಮ್ಮೊಡನೆ ಸುಖವಾಗಿರಲು ಅವಳಿಗೆ ಬಹಳ ಹೇಳಿಕೊಂಡರು. ಆದರೆ ವೈರಾಗ್ಯಶೀಲೆಯಾದ ನಿಜದೇವಿಯು ಅವರನ್ನು ನಿರಾಕರಿಸಿದಳು. ಒಂದು ದಿನ ಶಿವನು ಅವಳನ್ನು

ಪರೀಕ್ಷಿಸಬೇಕೆಂದು ಒಬ್ಬ ಸುಂದರ ಪುರುಷನ ವೇಷವನ್ನು ಧಾರಣಮಾಡಿ ಅವಳಿದ್ದೆಡೆಗೆ ಬಂದು— ಎಲೇ ನಿಜದೇವಿಯೇ, ನೀನು ನನ್ನ ಸತಿಯಾಗಿ ನನ್ನೊಡನೆ ಸುಖವಾಗಿ ಬಾಳು, ಎಂದು ಹೇಳಿಕೊಂಡನು. ಆದರೆ ನಿಜ ದೇವಿಯು ಅವನಾರೆಂಬುದನ್ನು ತತ್‌ಕ್ಷಣವೇ ತನ್ನ ಸುಜ್ಞಾನದಿಂದ ತಿಳಿದು ನಗುತ್ತ— ನೀನಾರೆಂಬುದು ನನಗೆ ತಿಳಿಯಿತು. ನೀನು ಕಾಮವೈರಿ ಎಂಬುದನ್ನು ನಾನು ಬಲ್ಲೆನು. ಆದರೆ ಆ ಕಾಮ ನನಗಿಲ್ಲ, ಹೋಗು, ಎಂದೆನ್ನಲು ಶಿವನು— ಆಹಾ ಇವಳು ನನ್ನನ್ನು ಗುರುತಿಸಿದಳು, ಎಂದು ಬಯಲಾಗಿ ಹೋದನು. ಮುಂದೆ ನಿಜದೇವಿಯು ಮಾರ್ಗ ಕ್ರಮಣ ಮಾಡುತ್ತಿರಲು, ಶಿವನು ಒಬ್ಬ ವಾಣಿಜನ ವೇಷವನ್ನು ಧರಿಸಿ ಪುನಃ ಅವಳೆಡೆಗೆ ಬಂದು— ನಿಜದೇವಿಯೇ, ನನಗೆ ಯಾರೂ ಇಲ್ಲ. ನೀನೆನಗೆ ಸತಿಯಾಗಿರು ಎಂದೆನ್ನಲು ಅವಳು— ನಿನ್ನ ಜಡೆ, ತೊಡೆ ಗಳ ಮೇಲೆ ಗಂಗೆ ಗೌರಿಯರೆಂಬ ಸ್ತ್ರೀಯರಿದ್ದಾರೆ. ಷಣ್ಮುಖ, ವೀರಭದ್ರ, ವಿನಾಯಕರೆಂಬ ಪುತ್ರರು ಇದ್ದಾರೆ. ಇಂಥ ನಿನ್ನನ್ನು ವರಿಸಿದರೆ, ಕಲ್ಯಾ ಣದ ಶರಣರು ನನ್ನನ್ನು ನೋಡಿ ನಗಲಿಕ್ಕಿಲ್ಲವೇ? ಕೈಲಾಸದ ಪ್ರಮಥರು ಮೆಚ್ಚರು, ಎಂದು ನುಡಿಯಲು ಶಿವನು ಅವಳ ವಿರಕ್ತಿಯನ್ನು ನೋಡಿ ಮೆಚ್ಚಿ ಪ್ರತ್ಯಕ್ಷನಾಗಿ— ಎಲೇ ನಿಜದೇವಿಯೇ, ನಿನ್ನ ವೈರಾಗ್ಯಕ್ಕೆ ನಾನು ಮೆಚ್ಚಿದೆನು. ನನ್ನ ಮಾತನ್ನು ನೀನು ಕೇಳು. ನೀನು ಹೀಗೆ ದಿಗಂಬರಿ ಯಾಗದೆ ನಾನು ನಿನಗೆ ಈಗ ಕೊಡುವ ಬೊಂತೆ (ಕೌದಿ) ಯನ್ನು ತೆಗೆದುಕೋ. ಇದನ್ನು ನೀನು ಹೊದ್ದುಕೊಂಡು, ಮಾರ್ಗಕ್ರಮಣ ವನ್ನು ಮಾಡು, ಎಂದು ಹೇಳಲು, ನಿಜದೇವಿಯು ಶಿವನ ಅಪ್ಪಣೆ ಯನ್ನು ಮೀರಲಾರದೆ ಹಾಗೆಯೇ ಮಾಡುವೆನೆಂದು ಹೇಳಿ ಅದನ್ನು ಹೊದೆಯಲಿಕ್ಕೆ ಪ್ರಾರಂಭಿಸಿದಳು. ಅಂದಿನಿಂದ ಅವಳಿಗೆ 'ಬೊಂತಾ ದೇವಿ' ಎಂಬ ಹೆಸರು ಪ್ರಾಪ್ತವಾಯಿತು.

ಹೀಗೆ ಬೊಂತಾದೇವಿಯು ಮಾರ್ಗದಲ್ಲಿ ಅನೇಕ ಕಷ್ಟಗಳನ್ನು ಸಹಿ ಸುತ್ತ ಕಲ್ಯಾಣಪಟ್ಟಣಕ್ಕೆ ಬಂದು ತಲ್ಪಿದಳು. ಆದರೆ ಅವಳು ಅಲ್ಲಿ ತಾನಾರೆಂಬುದನ್ನು ಯಾರಿಗೂ ತಿಳಿಸಲಿಲ್ಲ. ಗುಪ್ತ ಭಕ್ತಿಯಿಂದ ಪಟ್ಟಣ ದಲ್ಲಿ ಇರಲಿಕ್ಕೆ ಹತ್ತಿದಳು. ಅವಳು ಬಸವೇಶ್ವರ, ಅಲ್ಲಮಪ್ರಭು ಮೊದ ಲಾದ ಶಿವಶರಣರಿದ್ದ ಶಿವಾನುಭವಮಂಟಪವನ್ನು ಸೇರಿ, ಅಲ್ಲಿ ನಡೆ ಯುತ್ತಿದ್ದ ಶಿವಾನುಭವವನ್ನು ಆಲಿಸುವವಳಾದಳು. ಇಷ್ಟೇ ಅಲ್ಲ, ಅವಳೂ

ತನ್ನ ಶಿವಾನುಭವವನ್ನು ವಚನಗಳ ಮೂಲಕ ನಿರೂಪಿಸುವವಳಾದಳು. ಅವಳು ಬಸವೇಶ್ವರನ ಸನ್ನಿಧಿಯಲ್ಲಿ ಅವನ ದಿವ್ಯವಾದ ಮಂದಿರದಲ್ಲಿರಲಿ, ಇಲ್ಲವೆ ಪಟ್ಟಣದಲ್ಲಿದ್ದ ತಿಪ್ಪೆಗಳ ಮೇಲಿರಲಿ, ಅವೆಲ್ಲವೂ ಸರಿ ಎಂದು ಭಾವಿಸಿ ಕಲ್ಯಾಣಪಟ್ಟಣದಲ್ಲಿ ಕಾಲಕಳೆಯುಹತ್ತಿದಳು. ಆದರೆ ಅವ ಳಾರೆಂಬುದನ್ನು ಯಾರೂ ಅರಿತಿರಲಿಲ್ಲ. ಅವಳನ್ನು ಅರಿತವನು ಶಿವ ಜ್ಞಾನಿಯಾದ ಅಲ್ಲಮಪ್ರಭುವು ಮಾತ್ರ.

ಹೀಗೆ ಬೊಂತಾದೇವಿಗೆ ಅನೇಕ ವರ್ಷಗಳು ಸಂದಿಹೋದವು. ಮುಂದೆ ಪಟ್ಟಣದಲ್ಲಿ ಮಧುವರಸ ಹರಳಯ್ಯಗಳ ಮೂಲಕ ಬಿಜ್ಜಳನಿಗೂ ಶಿವಶರಣರಿಗೂ ಮನಸ್ತಾಪಗಳುಂಟಾದವು. ಬಿಜ್ಜಳನು ಹರಳಯ್ಯ ಮಧು ವಯ್ಯಗಳನ್ನು ಕೊಲೆಬಡಿಸಿದನು. ಇದರಿಂದ ಪಟ್ಟಣದಲ್ಲಿ ರಕ್ತಪಾತ ಗಳುಂಟಾದವು. ಬಹುಜನ ಶಿವಶರಣರು ಪಟ್ಟಣವನ್ನು ಬಿಟ್ಟು ತೊಲ ಗಿದರು. ಆಗ ಮಹಾದೇವಿಯಕ್ಕನೂ ಶ್ರೀಶೈಲಕ್ಕೆ ಹೊರಡಲು ಸನ್ನದ ಳಾದಳು. ಅವಳು ಹೋಗುವವದನ್ನು ನೋಡಿ ಶಿವಶರಣರು— ಮಹಾ ದೇವಿಯಕ್ಕನಂಥ ವೀರಭಕ್ತೆಯರು ಕಲ್ಯಾಣದಲ್ಲುಂಟೇ? ಎಂದು ದುಃಖಿ ಸುತ್ತಿರಲು, ಅಲ್ಲಮಪ್ರಭುವು ಅದನ್ನು ಕೇಳಿ, ಬೊಂತಾದೇವಿಯನ್ನು ಅವರಿಗೆ ತೋರಿಸಿ— ನಿಮಗೆ ಗೊತ್ತಿಲ್ಲ. ಇಗೋ ಈ ಬೊಂತಾದೇವಿಯು ಇಲ್ಲಿದ್ದಾಳೆ. ಇವಳು ಕಾಶ್ಮೀರದೇಶದ ಅರಸನ ಕುವರಿಯು. ಇವಳ ಚರಿತೆಯು ಮಹಾದೇವಿಯಕ್ಕನಕಿಂತಲೂ ಬಹಳ ಹೆಚ್ಚಿನದು. ವೀರವಿರಕ್ತಿ ಭಾವವುಳ್ಳವಳು. ಅವಳು ಇಂಥ ಸಮಯದಲ್ಲಿ ಕಲ್ಯಾಣಪಟ್ಟಣವನ್ನು ತೊರೆದು ಹೋಗುವವಳಲ್ಲ. ಅವಳು ಇಲ್ಲಿಯೇ ಇರುವಳು ಎಂದು ಆಕೆಯ ಮಹತ್ವವನ್ನು ಅವರಿಗೆ ವಿವರಿಸಿ, ಅವರನ್ನು ಸಂತೈಸಿ, ತಾನು ಶ್ರೀಶೈಲಕ್ಕೆ ಹೊರಡುವವನಾದನು.

ಬೊಂತಾದೇವಿಯು ಕಡೆಯುವರೆಗೆ ಕಲ್ಯಾಣಪಟ್ಟಣದಲ್ಲಿಯೇ ಉಳಿದು ಅಲ್ಲಿಯೇ ತನ್ನ ಇಷ್ಟಲಿಂಗದಲ್ಲಿ ಅಡಗಿದಳು. ಆ ಸಮಯದಲ್ಲಿ ಒಂದು ಅದ್ಭುತವಾಯಿತು. ಅವಳು ತಾನುಟ್ಟಿದ್ದ ಶಿವನು ಕೊಟ್ಟಿದ್ದ ಬೊಂತೆಯನ್ನು ಗಗನಕ್ಕೆ ಹಾರಿಸಲು ಅದು ಅಲ್ಲಿಯೇ ಬಯಲಾಯಿತು ಮತ್ತು ಅದರೊಡನೆಯೇ ತಾನೂ ನಿರವಯವನ್ನು ಹೊಂದಿದಳು.

ಬೊಂತಾದೇವಿಯು ವಚನಕಾರ್ತಿಯು. ಅವಳ ಎರಡು ವಚನ ಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

ಬೊಂತಾದೇವಿಗೆ ಬೆಂತಲಾದೇವಿ ಎಂಬ ಇನ್ನೊಂದು ಹೆಸರಿದೆ. ಪುರಾತನ ದೇವಿಯರ ತ್ರಿವಿದಿಯಲ್ಲಿ ಈಕೆಯ ವಿಷಯವಾಗಿ ಹೇಳಿರುವದೇನೆಂದರೆ—

ಭ್ರಾಂತಿ ಭ್ರಮೆಗಳನಳಿದು ಕಂತು ಕಾಲರನೊದೆದು
ಅಂತಕಾಂತಕನ ಧ್ಯಾನ ಮುಪ್ಪುರಿಗೊಂಡ
ಬೆಂತಲಾದೇವಿ ಶರಣಾಗು.

ಇದರಲ್ಲಿ ಬೊಂತಾದೇವಿಯು ನಿಜವನ್ನರಿತವಳು, ಕಾಮನನ್ನೂ ಯಮನನ್ನೂ ಜಯಿಸಿದವಳು ಎಂದು ಕವಿಯು ಹೇಳಿ ಅವಳು ಪರಮಾತ್ಮನ ಧ್ಯಾನದಲ್ಲಿ ಅತ್ಯಂತವಾಗಿ ನಿರತಳಾದವಳು ಎಂದು ಅವಳನ್ನು ಸ್ಮರಿಸಿದ್ದಾನೆ.

## ವಚನಗಳು.

(೧) ಊರೊಳಗಣ ಬಯಲು, ಊರಹೊರಗಣ ಬಯಲು ಎಂದುಂಟೇ? ಊರೊಳಗಣ ಬ್ರಾಹ್ಮಣ ಬಯಲು, ಊರಹೊರಗಣ ಹೊಲೆಯ ಬಯಲೆಂದುಂಟೇ? ಎಲ್ಲಿ ನೋಡಿದರೆ ಬಯಲೊಂದೇ. ಭಿತ್ತಿಯಿಂದೊಳಹೊರಗೆಂಬ ನಾಮವೈಸೆ. ಎಲ್ಲಿ ನೋಡಿ ಕರೆದರೆ ಓ ಎಂಬಾತನೇ ಬಿಡಾಡಿ.

ಭಾವಃ—ಜಾತಿಭೇದವೆಂಬುದಿಲ್ಲ. ಅದು ಕೃತ್ರಿಮವಾದುದು ಎಂಬುವನ್ನು ಬೊಂತಾದೇವಿಯು ಅತ್ಯಂತ ತಾತ್ವಿಕರೀತಿಯಿಂದ ಈ ವಚನದಲ್ಲಿ ಬೋಧಿಸಿದ್ದಾಳೆ.

(೨) ಪರಷುಟ್ಟಿನಾಥ ಎಂಬ ಲಿಂಗ ತರಗೆಲೆಗಳಿಗೊಂದೇ ಗಾಳಿ ಹಾರುತಿಪ್ಪ ಒಂದೇ ಅನಿಲನಿಂದ ದೇಹ ಪರಪಟ್ಟಿಗಳೊಳಗೆಲ್ಲ ಕರೆದರೆ ಓ ಎಂಬಾತನೇ ಬಿಡಾಡಿ.

ಭಾವಃ— ವಚನವು ಅಶುದ್ಧವಿದೆ. ಆದರೆ ಭಾವವು ೧ನೇ ವಚನದಲ್ಲಿದ್ದಂತೆಯೇ ಇರುತ್ತಿದೆಂದು ತೋರುತ್ತಿದೆ.

ಈಕೆಯ ಮುದ್ರಿಕೆಯು 'ಓ ಎಂಬಾತನೇ ಬಿಡಾಡಿ' ಎಂದಿದ್ದು ಇದರಮೇಲಿಂದ ಪರಮಾತ್ಮನ ಸ್ವರೂಪನ್ನು ಕುರಿತು ಅವಳ ವಚನಗಳಲ್ಲಿ ನಿರೂಪಣೆ ಹೆಚ್ಚಾಗಿ ಇದ್ದುದಾಗಿ ನಾವು ಊಹಿಸುತ್ತೇವೆ.

# ಗೊಗ್ಗವ್ವೆ.

ಕೇರಳದೇಶದಲ್ಲಿ[೧] ಅವಲೂರೆಂಬ ಪುರವಿದೆ. ಅಲ್ಲಿ ಅತ್ಯಂತ ಶಿವ ಭಕ್ತಿಯುತರಾದ ದಂಪತಿಗಳಿದ್ದು ಅವರ ಉದರದಲ್ಲಿ ಗೊಗ್ಗವ್ವೆಯು ಜನಿಸಿದಳು. ಅವರ ಸಹವಾಸದಿಂದ ಗೊಗ್ಗವ್ವೆಯೂ ಕೂಡ ಶಿವಭಕ್ತೆಯುತಳಾಗಿ ಬೆಳೆದಳು. ಅವಳಿಗೆ ಯೌವ್ವನವು ಪ್ರಾಪ್ತವಾಯಿತು. ಆಗ ಅವಳ ತಾಯಿತಂದೆಗಳು ಅವಳಿಗೆ ಲಗ್ನಮಾಡಬೇಕೆಂದು ಬಯಸಿ ಯೋಗ್ಯ ವರನನ್ನು ಶೋಧಿಸಲು ಪ್ರಾರಂಭಿಸಿದರು. ಇದನ್ನು ಗೊಗ್ಗವ್ವೆಯು ತಿಳಿದು ಆವಳು ತಾಯಿತಂದೆಗಳಿಗೆ--ನಾನು ಲಗ್ನವಾಗುವದಿಲ್ಲ. ಶಿವನ ಸೇವೆಯಲ್ಲಿಯೇ ಇರುವೆನೆಂದು ಹೇಳಿದಳು. ಆದರೆ ತಾಯಿತಂದೆಗಳು ಹೀಗಿರುವದು ಸರಿಯಾದುದಲ್ಲ, ಎಂದು ತಿಳಿಸಿ ವರನ ಶೋಧದಲ್ಲಿ ತೊಡಗಿದರು. ಆಗ ಗೊಗ್ಗವ್ವೆಯು ತನ್ನ ಇಚ್ಛೆಯು ನೆರವೇರದೆಂದು ಭಾವಿಸಿ ಅವಳು ಯಾರಿಗೂ ತಿಳಿಯದಂತೆ ಮನೆಯನ್ನು ಬಿಟ್ಟು, ಪಟ್ಟಣದಲ್ಲಿದ್ದ ಗೊಗ್ಗೇಶ್ವರನ ದೇವಾಲಯದಲ್ಲಿ ಹೋಗಿ ಅವಿತುಕೊಂಡು ಕುಳಿತಳು. ತಾಯಿತಂದೆಗಳು ಅವಳನ್ನು ಎಷ್ಟು ಹುಡಿಕಿದರೂ ಆಕೆಯು ಸಿಕ್ಕಲಿಲ್ಲ. ಮೂರು ದಿವಸಗಳ ವರೆಗೆ ಹುಡಿಕಿದರು. ಆಗ ಅವರು ಅತ್ಯಂತ ಮನ ಮರುಗಿ ಉಪತಾಪಿಸುತ್ತ ಮಗಳನ್ನು ಹುಡುಕುತ್ತ ಹುಡುಕುತ್ತ ಗೊಗ್ಗೇಶ್ವರನ ದೇವಾಲಯಕ್ಕೆ ಬಂದು ಅವರು ಲಿಂಗದ ಮುಂದೆ ನಿಂತು-- ಗೊಗ್ಗೇಶ್ವರನೇ, ನಿನಗೆ ಬೇಡಿಕೊಂಡು ಮಗಳನ್ನು ಪಡೆದೆವು. ಅವಳಿಗೆ ನಿನ್ನ ಹೆಸರನ್ನೇ ಇಟ್ಟೆವು. ಇನ್ನುಮೇಲೆ ನೀನೇ ಆಕೆಗೆ ಕಲ್ಯಾಣವನ್ನು ಮಾಡು, ಎಂದು ಲಿಂಗಕ್ಕೆ ಬೇಡಿಕೊಂಡು ವಂದಿಸಿ ಮನೆಗೆ ಹೋದರು.

ಗೊಗ್ಗವ್ವೆಯು ದೇವಾಲಯದಲ್ಲಿ ಮರೆಗೆ ನಿಂತು ಇದನ್ನೆಲ್ಲ ಕೇಳುತ್ತಿದ್ದಳು. ಅವಳು ತಾಯಿತಂದೆಗಳು ದೇವರಿಗೆ ಹೇಳಿದ ಮಾತನ್ನು ಕೇಳಿ ಗುಡಿಯಿಂದ ಮನೆಗೆ ಬಂದಳು. ಅವಳು ಬರಲು ತಾಯಿತಂದೆಗಳು ಅತ್ಯಂತ ಹರುಷಿತರಾಗಿ ಮಗಳಿಗೆ--ನೀನು ಮದುವೆಯನೊಲ್ಲದಿದ್ದರೆ ಬಿಟ್ಟುಬಿಡು. ನಿನ್ನ ಮನಸ್ಸಿಗೆ ಬಂದಂತೆ ಲಿಂಗಪೂಜೆಯನ್ನು ಮಾಡಿಕೊಂಡಿರು ಎಂದು ಹೇಳಿದರು. ಅದಕ್ಕೆ ಗೊಗ್ಗವ್ವೆಯು--ನನಗೆ

---

೧. **ಈಗಿನ ಮಲಬಾರ ಪ್ರಾಂತ.**

ಲಿಂಗಪೂಜೆಯ ರೀತಿಯು ಗೊತ್ತಿಲ್ಲ. ನಾನು ಶಿವಾಲಯಕ್ಕೆ ಹೋಗಿ ದೀಪವನ್ನು ಹತ್ತಿಸಿ, ದೇವರಿಗೆ ಧೂಪವನ್ನಿಕ್ಕಿ ಮಾತ್ರ ಬರುವೆನು. ಇದೇ ನನ್ನ ಪೂಜೆಯು, ಎಂದು ಹೇಳಿ ಅವಳು ದಿನಾಲು ಗುಡಿಗೆ ಹೋಗಿ ತುಪ್ಪದಿಂದ ದೀಪವನ್ನು ಹತ್ತಿಸಿ, ಕರ್ಪೂರ ಅಗರು ಕುಮುಂಜನ ದಿಂದ ಧೂಪವನ್ನಿಕ್ಕುವಳು. ಆಮೇಲೆ ಲಿಂಗಕ್ಕೆ ಶರಣೆಂದು ಮನೆಗೆ ತಿರುಗಿ ಬರುವಳು. ಇದೇ ಅವಳ ಲಿಂಗಪೂಜೆಯು. ಅವಳು ತಪ್ಪದೆ ಈ ಕ್ರಮವನ್ನು ಇಟ್ಟುಕೊಂಡಿದ್ದರಿಂದ ಅವಳಿಗೆ ಲೋಕದಲ್ಲಿ 'ಧೂಪದ ಗೊಗ್ಗವ್ವೆ' ಎಂಬ ಹೆಸರಾಯಿತು.

ಹೀಗಿರುವಲ್ಲಿ ಒಂದು ದಿನ ಶಿವನು ಅವಳನ್ನು ಪರೀಕ್ಷಿಸಬೇಕೆಂದು ಬಯಸಿ ಅವನು ರೂಪುಳ್ಳ ಸುಂದರ ಪುರುಷನಾಗಿ ಕಯ್ಯಲ್ಲಿ ಅಲ ಗನ್ನು ಹಿಡಿದುಕೊಂಡು ಗೊಗ್ಗವ್ವೆಯನ್ನು ಕಂಡು— ನೀನು ಇನ್ನು ಮೇಲೆ ನನ್ನ ಸತಿಯಾಗಿರಬೇಕು. ನನ್ನನ್ನು ನೀನು ವರಿಸದಿದ್ದರೆ ಈ ಅಲಗಿನಿಂದ ನಿನ್ನನ್ನು ಇರಿಯುವೆನು, ಎಂದು ಅವಳನ್ನು ಭೀತಿ ಗೊಳಿಸಿದನು. ಆದರೆ ಗೊಗ್ಗವ್ವೆಯು ಅದಕ್ಕೆ ಅಂಜಲಿಲ್ಲ. ಅವಳು ಅವನಿಗೆ— ನಾನು ನಿನ್ನನ್ನು ವರಿಸುವದಿಲ್ಲ, ಎಂದು ನುಡಿಯಲು, ಆ ವೇಷಧಾರಿಯಾದ ಶಿವನು ಅಲಗನ್ನೆತ್ತಿ ಅವಳ ಶಿರಸ್ಸನ್ನು ಕತ್ತರಿಸು ವಾಗ ಆ ಶರಣೆಯು ಶಿವನನ್ನು ಸ್ಮರಿಸುತ್ತ 'ಶಿವನೇ' ಎಂದು ಉಚ್ಚರಿ ಸಲು ಶಿವನು ಅವಳಿಗೆ ಪ್ರತ್ಯಕ್ಷನಾಗಿ—ನಾನು ನಿನಗೆ ಮೆಚ್ಚಿದೆನು. ನಿನಗೆ ಬೇಕಾದದ್ದನ್ನು ಬೇಡು ಕೊಡುವೆನೆಂದೆನಲು ಅವಳು— ನನ ಗೇನು ಬೇಡ. ನಾನು ಶಿವಭಕ್ತರ ಬಳಿಯಲ್ಲಿದ್ದುಕೊಂಡು ಅವರಿಗೆ ನನ್ನ ಭಕ್ತಿಯನ್ನು ಸಲ್ಲಿಸುವಂತೆ ಮಾಡು, ಎಂದೆನಲು ಶಿವನು ಪ್ರೀತ ನಾಗಿ ಹಾಗೆಯೇ ಆಗಲಿ ಎಂದು ನುಡಿದನು. ಆದರೆ ಅವನು ಅಷ್ಟಕ್ಕೆ ಬಿಡದೆ ಗೊಗ್ಗವ್ವೆಗೆ ತಾನೇ ಗುರುವಾಗಿ ಅವಳಿಗೆ ವೀರಶೈವೋಪದೇಶ ವನ್ನು ಮಾಡಿದನು. ಆಮೇಲೆ ಅವಳಿಗೆ— ನೀನು ದಿನಾಲು ಶಿವಭಕ್ತರ ಲ್ಲಿಗೆ ಹೋಗಿ ಅವರ ಪೂಜೆಗೋಸ್ಕರ ಧೂಪವನ್ನರ್ಪಿಸುತ್ತಿರು, ಈ ಕಾಯಕವನ್ನು ಅನುಸರಿಸುತ್ತ ಶಿವಾನುಭವವುಳ್ಳವಳಾಗು ಎಂದು ಹೇಳಿ ಅಂತರ್ಧಾನನಾದನು. ಅಂದಿನಿಂದ ಗೊಗ್ಗವ್ವೆಯು ತನ್ನ ಧೂಪದ ಕಾಯಕವನ್ನು ಭಕ್ತರಲ್ಲಿ ನಡಿಸುತ್ತ ಶಿವಾನುಭವದಲ್ಲಿದ್ದಳು.

ಹೀಗೆ ಗೊಗ್ಗವ್ವೆಯು ಕಾಲಕಳೆಯುತ್ತಿರಲು ಕೇರಳದೇಶದ ರಾಜನಾದ ಚಾರಮರಾಯನು ಕೇವಲ ಶಿವಭಕ್ತಿಯುತನಾಗಿ ಕುಡಗಲೂರು ಎಂಬ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಅವನು ಒಂದು ದಿನ ಪರಮಾತ್ಮನು ನಂಜಣ್ಣನೆಂಬ ಶಿವಶರಣನನ್ನು ಕೈಲಾಸಕ್ಕೆ ಕರೆದೊಯ್ದನೆಂಬ ವಾರ್ತೆಯನ್ನು ಕೇಳಿ ಅವನನ್ನು ಕಾಣಬೇಕೆಂದು ತನ್ನ ಸೇನೆಯೊಂದಿಗೆ ಅವನನ್ನು ಸುತ್ತಲೂ ಹುಡುಕಹತ್ತಿದನು. ಆಗ ಅವನು ಗೊಗ್ಗವ್ವೆಯು ಇದ್ದ ಅವಲೂರು ಗ್ರಾಮಕ್ಕೆ ಬರಲಾಗಿ ಅವಳು ಒಬ್ಬ ಭಕ್ತನ ಮನೆಯಲ್ಲಿ ಧೂಪವನ್ನಿಕ್ಕಿ ತಿರುಗಿ ಬರುವದನ್ನು ಕಂಡನು. ಗೊಗ್ಗವ್ವೆಯು ದಾರಿಯಲ್ಲಿ ಚಾರಮರಾಯನನ್ನು ಕಂಡು ಅವನಿಗೆ-- ನೀವಿದೆಲ್ಲಿಗೆ ಗಮಿಸುತ್ತೀರಿ ಎಂದು ಕೇಳಲು ಅವನು-- ನಂಜಣ್ಣನು ಶಿವನೊಡನೆ ಕೈಲಾಸಕ್ಕೆ ಹೋದುದನ್ನು ಕೇಳಿ ನಾನು ಅವನನ್ನು ಹುಡುಕುತ್ತಲಿದ್ದೇನೆ. ಅವನು ಇನ್ನೂ ಸಿಕ್ಕಿಲ್ಲ. ಅವನನ್ನು ಕಾಣುವ ಬಗೆಹೇಗೆ? ಎಂದು ಕೇಳಲು ಗೊಗ್ಗವ್ವೆಯು ಅದಕ್ಕೆ ನಕ್ಕು--ನಂಜಣ್ಣನು ಎಂದಾದರೂ ನಿಮಗೆ ಮರ್ತ್ಯಲೋಕದಲ್ಲಿ ಸಿಕ್ಕುವದುಂಟೇ? ಅವನನ್ನು ಕಾಣಲು ನೀವು ಕೈಲಾಸಕ್ಕೆ ಹೋಗಬೇಕು ಎಂದು ಹೇಳಿದಳು. ಅದಕ್ಕೆ ಚಾರಮನು ಅವಳಿಗೆ-- ಆ ಕೈಲಾಸಕ್ಕೆ ಹೇಗೆ ಹೋಗಬೇಕು, ಅದೆಷ್ಟು ದೂರವಿದೆ? ಎಂದು ಕೇಳಿದನು. ಅದಕ್ಕೆ ಗೊಗ್ಗವ್ವೆಯು-- ಕೈಲಾಸವು ದೂರವಿಲ್ಲ. ಅದು ಇಲ್ಲಿಂದ ಒಂದೇ ಗೇಣು ಮಾತ್ರ ದೂರವಿದೆ ಎಂದು ನುಡಿದಳು. ಅದಕ್ಕೆ ಚಾರಮನು ಬಹಳ ಆಶ್ಚರ್ಯಚಕಿತನಾಗಿ-- ನನಗೆ ಆ ದಾರಿಯನ್ನು ತೋರಿಸುತ್ತೀಯಾ? ಎಂದು ಕೇಳಲು ಗೊಗ್ಗವ್ವೆಯು ಅರಸನಿಗೆ ತನ್ನ ಧೂಪದ ಕಾಯಕದ ರೀತಿಯನ್ನು ವಿವರಿಸಿ ನೀನು ಆತ್ಮಲಿಂಗಕ್ಕೆ ಹೀಗೆಯೇ ಭಕ್ತಿಯಿಂದ ಧೂಪವನಿಕ್ಕಿದಲ್ಲಿ ಮೇಲಕ್ಕೆ ಹೋಗುವ ಅದರ ಹೊಗೆಯಲ್ಲಿಯೇ ನಿನಗೆ ಕೈಲಾಸದ ದಾರಿಯು ಕಾಣುವದು. ಆ ದಾರಿಯಿಂದ ಅಲ್ಲಿಗೆ ಹೋಗೆಂದು ಅವನಿಗೆ ತಿಳಿಸಿದಳು. ಆಗ ಶಿವಭಕ್ತನಾದ ಚಾರಮನು ಆಕೆಯಿಂದ ಆತ್ಮಲಿಂಗದ ಸ್ವರೂಪನ್ನು ತಿಳಿದುಕೊಂಡು ಧೂಪವನಿಕ್ಕಲು ಅದರೊಳಗಿಂದ ಕೈಲಾಸದ ದಾರಿಯು ಅವನಿಗೆ ಕಾಣಲು ಅವನು ಅದರೊಳಗಿಂದಲೇ ಶಿವನೆಡೆಗೆ ಹೋದನು. ಹೀಗೆ ಗೊಗ್ಗವ್ವೆಯು ಚಾರಮರಾಯನಿಗೆ ತನ್ನ ಕಾಯಕದ ರೀತಿಯನ್ನು ತಿಳಿಸಿ ಅವನಿಗೆ ಮೋಕ್ಷದ ಹಾದಿಯನ್ನು ತೋರಿಸಿದಳು.

ಗೊಗ್ಗವ್ವೆಯು ವಚನಕಾರ್ತಿಯು ಇದ್ದಾಳೆ. ಅವಳು ತನ್ನ ಶಿವಾನುಭವವನ್ನು ವಚನಗಳ ಮೂಲಕ ನಿರೂಪಿಸಿದ್ದಾಳೆ. ನಮಗೆ ದೊರೆತ ಅವಳ ಆರು ವಚನಗಳನ್ನು ನಾವು ಮುಂದೆ ಕೊಟ್ಟಿದ್ದೇವೆ.

ಈಪ್ರಕಾರ ಗೊಗ್ಗವ್ವೆಯು ಜನರಿಗೆ ಬೋಧಿಸುತ್ತ ತನ್ನ ಕಾಯಕವನ್ನು ನಡಿಸುತ್ತ ಭಕ್ತರಿಗೆ ಧೂಪವನ್ನು ನೀಡುತ್ತ ಅಷ್ಟರ ಹೊಗೆಯೊಳಗೆಯೇ ಲಿಂಗದೊಡನೆ ಕೂಡಿದಳು.

ಪುರಾತನ ದೇವಿಯರ ತ್ರಿವಿದಿಯಲ್ಲಿ ಈಕೆಯನ್ನು ವರ್ಣಿಸಿದ್ದು ಹೇಗೆಂದರೆ—

ಮೂರು ಲೋಕಗಳರಿಯೆ ಚಾರಮರಾಯನಿಗೆ
ಮಾರಹರನೂರ ದಾರಿಯನ್ನು ತೋರಿಸಿದ
ನೀರೆ ಗೊಗ್ಗವ್ವೆ ಶರಣಾಗು.

ಗೊಗ್ಗವ್ವೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವಳು ಪುರಾತನಳು. ಬಸವೇಶ್ವರನು ತನ್ನ ವಚನಗಳಲ್ಲಿ ಚಾರಮರಾಯನನ್ನು ಬಹಳ ಸ್ತುತಿಸಿದ್ದಾನೆ. ಆದ್ದರಿಂದ ನಂಬಿಯಣ್ಣನೂ ಚಾರಮನೂ ಗೊಗ್ಗವ್ವೆಯೂ ಬಸವೇಶ್ವರನಕಿಂತಲೂ ಮೊದಲಿನವರಾಗಿರಬಹುದು.

ಗೊಗ್ಗವ್ವೆಯ ಹೆಸರುಉತ್ತರ ಕರ್ನಾಟಕದಲ್ಲಿ ಇನ್ನೂ ರೂಢಿಯಲ್ಲಿದೆ. ಯಾವಳಾದರೂ ಬಾಲಿಕೆಯು ಅಥವಾ ಸ್ತ್ರೀಯು ತನ್ನ ತಲೆಗೂದಲುಗಳನ್ನು ಬಾಚಿಕೊಳ್ಳದೆ ಅಸ್ತವ್ಯಸ್ತವಾಗಿಟ್ಟುಕೊಂಡು ಹೊಲಸು ಬಟ್ಟೆಯನ್ನು ಹಾಕಿಕೊಂಡಿದ್ದರೆ, ಜನರು ಅವಳಿಗೆ ನೀನು 'ದೀಪದ ಗೊಗ್ಗವ್ವೆ' ಯಾಗಿದ್ದೀಯೆ, ಎಂದು ಸಿಟ್ಟುಮಾಡುವದುಂಟು. ಈ ಶಬ್ದವು ಕೃಷ್ಣಾತೀರ ಮತ್ತು ಉತ್ತರ ವಿಜಾಪುರ ಭಾಗಗಳಲ್ಲಿ ಪ್ರಚಲಿತವಿದೆ. ಆದರೆ ಪಶ್ಚಿಮ ಧಾರವಾಡ ಜಿಲ್ಲೆಯಲ್ಲಿ 'ದೀಪದ ಗೊಗ್ಗವ್ವೆ' ಎಂಬ ಶಬ್ದದಬದಲು 'ನೀನು ಗೊಗ್ಗವ್ವೆಯಾಗಿದ್ದೀಯೆ' ಎಂದು ಮಾತ್ರ ಅನ್ನುವದುಂಟು.

ಜನರು ಹೇಗೆ ಕುಂಬಾರ ಗುಂಡಯ್ಯನನ್ನು ಪರಿಹಾಸಪೂರ್ವಕವಾಗಿ ನುಡಿಯುವದುಂಟೋ, ಹಾಗೆಯೇ ಗೊಗ್ಗವ್ವೆಯನ್ನು ಈ ಪ್ರಾಂತದ ಜನರು ಹೀಗೆ ನುಡಿಯುತ್ತಿರುವದು ಬಹು ಖೇದಕರವಾದದ್ದು. ಈ ಉಭಯತರ ಚರಿತ್ರೆಗಳು ಜನರಿಗೆ ಗೊತ್ತಿರುವದಿಲ್ಲಾದ್ದರಿಂದ ಈ ಸ್ಥಿತಿ

ಯುಂಟಾಗಿದೆಂದು ತೋರುತ್ತದೆ. ಆದರೆ ಈ ಮಹಾನುಭಾವರು ಹೆಚ್ಚಿನ ತರಗತಿಯವರೆಂದು ಅವರ ಚರಿತ್ರೆಗಳಿಂದ ತಿಳಿದುಬರುತ್ತಿದೆ. ಚರಿತ್ರೆಗಳು ಗೊತ್ತಿರದ್ದರಿಂದ ಯಾವ ಸ್ಥಿತಿಯುಂಟಾಗುತ್ತದೆಂಬುದಕ್ಕೆ ಇದೊಂದು ಉದಾಹರಣೆಯಾಗಿದೆ.

## ವಚನಗಳು.

(೧) ಉದ್ದವನೆಯ್ದುವದಕ್ಕೆ ಗದ್ದುಗೆ ಇಲ್ಲದೆ ಏರಬಾರದು. ಚಿದ್ರೂಪನನರಿವುದಕ್ಕೆ ಅರ್ಚನೆ, ಪೂಜೆ ನಿತ್ಯನೇಮವಿಲ್ಲದೆ ಕಾಣಬಾರದು. ಆವ ಸತ್ಯದಿಂದ ಮಾಡಿ ಅಸತ್ಯವ ಮರೆದಡೆ ಇದೇ ಸತ್ಯ ನಾಸ್ತಿನಾಥಾ.

(೨) ಅನಲ ಕೊಂಡ ಘೋಗಕ್ಕೆ ಪರಿಪ್ರಕಾರ ಉಂಟೇ? ಲಿಂಗ ಮುಟ್ಟಿದಂಗಕ್ಕೆ ಮತ್ತೆ ಪುಣ್ಯಾಪೆಂಬುದು ಹುಸಿ ನಾಸ್ತಿ ನಾಥಾ.

(೩) ಮೊಲೆ ಮುಡಿ ಬಂದರೆ ಹೆಣ್ಣೆಂಬರು. ಮೀಸೆ, ಕಾಸೆ ಬಂದರೆ ಗಂಡೆಂಬರು. ಈ ಉಭಯದ ಜ್ಞಾನ ಹೆಣ್ಣೋ ಗಂಡೋ? ನಾಸ್ತಿ ನಾಥಾ.

(೪) ಭಕ್ತರು ಜಂಗಮದಲ್ಲಿ ಕಟ್ಟು ಹೊರಲೇಕೆ? ಧೂಪದ ಹೊಗೆ ಎತ್ತ ಹೋದರೂ ಸರಿ. ಇದು ಸತ್ಯವೆಂದೆ ನಾಸ್ತಿ ನಾಥಾ.

(೫) ಮಾರುತನಲ್ಲಿ ಬೆರೆದ ಗಂಧದಂತೆ, ಸುರತದಲ್ಲಿ ಬೆರೆದ ಸುಖದಂತೆ, ಮೆಚ್ಚಿನಲ್ಲಿ ಕೊಡುವ ಉಚಿತದಂತೆ ಭಕ್ತರಿಗಿದೇ ಹಾದಿ ಎಂದೆ ನಾಸ್ತಿ ನಾಥಾ.

(೬) ಗಂಡು ಮೋಹಿಸಿ ಹೆಣ್ಣ ಹಿಡಿದಡದು ಒಬ್ಬರೊಡವೆ ಎಂದರಿಯಬೇಕು. ಹೆಣ್ಣು ಮೋಹಿಸಿ ಗಂಡ ಹಿಡಿದರೆ ಉತ್ತರವಾವುದೆಂದರಿಯಬೇಕು. ಈ ಎರಡರ ಭಯವ ಕಳೆದು ಸುಖಿಯು ತಾನಾಗಬಲ್ಲಡೆ ನಾಸ್ತಿ ನಾಥನು ಪರಿಪೂರ್ಣನೆಂಬೆ.

---

## ದಸರಯ್ಯ.

ದಸರಯ್ಯನೆಂಬ ಶಿವಶರಣನು ರಾಮಗೊಂಡೆ ಎಂಬ ಗ್ರಾಮದಲ್ಲಿ ವಾಸ ಮಾಡುತ್ತಿದ್ದನು. ಅವನು ಶಿವಾನುಭವಿಯಾಗಿ ಏಕೋತ್ತರ ಮಹೇಶ್ವರ ಸ್ಥಲದಲ್ಲಿ ಒಂದು ಸ್ಥಲವಾದ ಧರ್ಮಾಚಾರದಲ್ಲಿದ್ದುಕೊಂಡು ತನ್ನ ಆಚರಣೆಗಳನ್ನು ನಡಿಸುತ್ತಾ ಇದ್ದನು. ಧರ್ಮಾಚಾರವುಳ್ಳವನ ರೀತಿಗಳಾವವೆಂದರೆ:—

(೧) ಭಕ್ತ ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಪ್ಪ ವಚನವ ನುಡಿಯಬೇಕು. ಲಿಂಗಜಂಗಮದಲ್ಲಿ ಕುಂದುನಿಂದೆಗಳಿಲ್ಲದಿರಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು. ತನುಮನಧನವ ಗುರುಲಿಂಗಜಂಗಮಕ್ಕೆ ಸಮರ್ಪಿಸಬೇಕು. ಅಪಾತ್ರದಾನವ ಗೆಯ್ಯದಿರಬೇಕು. ಇದೇ ಮೊದಲಲ್ಲಿ ಬೇಹ ಶೌಚ ನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಎನಗಿದೇ ಸಾಧನವು ನೋಡಾ ಕೂಡಲಸಂಗಮದೇವಾ.

(೨) ತನ್ನ ಗುಣವ ಹೊಗಳಬೇಡ. ಇದಿರ ಗುಣವ ಹಳಿಯಬೇಡ. ಕೆಮ್ಮನೊಬ್ಬರ ನುಡಿಯಬೇಡ. ನುಡಿದು ನುಂಪಿತನಾಗಬೇಡ. ತನ್ನ ಮನ ವಿಕಳನಾಗಿ ಇದಿರ ಮನವ ನೋಯಿಸಬೇಡ. ತಾನು ಬದುಕುವವ್ವೆಸುದಿನ? ಸಮತೆ ಸಮಾಧಾನ ತುಂಬಿ ತುಳುಕಬೇಕು. ಮಹಾಲಿಂಗ ಕಲ್ಲೇಶ್ವರ ನಿಚ್ಚಳ ನಿಜವನರಿತ ಬಳಿಕ ಸಕಲರೊಳಗೆ ಬಚ್ಚಬರಿಯ ಮರುಳಾಗಿರಬೇಕು.

ದಸರಯ್ಯನು ಧರ್ಮಾಚಾರದ ಈ ತತ್ವಗಳಂತೆ ನಡೆಯುತ್ತ ತನ್ನ ನುಡಿಯಲ್ಲಿ "ಸಚರಾಚರ ಪ್ರಾಣಿಗಳೆಲ್ಲವು ಸುಖದಿಂದ ಬಾಳಲಿ" ಎಂದು ಆಶೀರ್ವದಿಸುತ್ತ ಸಂಚರಿಸುವನು. ಸಕಲ ಪ್ರಾಣಿಗಳನ್ನು ತನ್ನಂತೆಯೇ ಭಾವಿಸುವನು. ಪ್ರಾಣಿಗಳಿಗೆ ಎಷ್ಟು ಮಾತ್ರವು ಹಿಂಸೆ ಮಾಡುತ್ತಿರಲಿಲ್ಲ. ಹೀಗೆ ಅವನು ಅಹಿಂಸಾ ವ್ರತವನ್ನು ತನ್ನ ಆಚರಣೆಯಲ್ಲಿ ಮುಖ್ಯವಾಗಿಟ್ಟುಕೊಂಡು ಶಿವಾನುಭವದಂತೆ ನಡೆಯುವನು. ಅವನು ತನ್ನ ಶಿವಾನುಭವದ ಬೋಧೆಯಲ್ಲಿ ಅನಿತ್ಯವಾದ ಸಂಸೃತಿಯನ್ನು ನಂಬಲಾಗದು, ಹಿತವರಾದವರನ್ನು ಸ್ತುತಿಸಲಾಗದು, ಅಹಿತರಾದವರನ್ನು ನಿಂದಿಸಲಾ

ಗದು, ಮನ ಮುಂದುವರಿದು ಆರನ್ನೂ ಧಿಕ್ಕರಿಸಲಾಗದು, ಸುವಿಚಾರವನ್ನು ಇತರರಿಗೆ ಹೇಳಿದೆನೆಂದು ತನ್ನ ಬಣ್ಣಿಸಲಾಗದು ಹಿಗ್ಗಲಾಗದು, ಅಜ್ಞಾನದಿಂದ ಮನವಿಕಳನಾಗಿ ಪರರ ಮನವ ನೋಯಿಸಲಾಗದು, ಕ್ಷಮೆ, ದಮೆ, ಶಾಂತಿ ಸದಾಚಾರ, ಸದ್ಭಕ್ತಿ ಇವುಗಳಿಂದೊಡಗೂಡಿರಬೇಕು, ಶಿವತತ್ವಾನುಭವದಲ್ಲಿ ಎರಡಿಲ್ಲವೆಂದು ತಿಳಿಯಬೇಕು, ಯಾರಾವರೂ ನಿಂದಿಸಿದರೆ ತಗ್ಗಲಾಗದು, ನಂದಿಸಿದರೆ ಹಿಗ್ಗಲಾಗದು, ಸದಾಚಾರ ಸದ್ಭಕ್ತಿಯುಳ್ಳ ಶರಣರಲ್ಲಿ ಶಿವನಿರುವನೆಂದು ಭಾವಿಸಬೇಕು, ತಾನು ಹೆರವರನ್ನು ನಿಂದಿಸದೆ, ತಾನು ಅವರ ನಿಂದೆಗೆ ಒಳಗಾಗದೆ, ಸದಾಚಾರ ಸದ್ಭಕ್ತಿಯುಳ್ಳಿರುವದೇ ಶಿವಧರ್ಮವೆಂದು ತಿಳಿಯಬೇಕು, ನಡೆವಲ್ಲಿ ನುಡಿವಲ್ಲಿ ಜೀವ ಹಿಂಸೆ ಮಾಡಕೂಡದು, ಎಂದು ಬೋಧಿಸುತ್ತ ಅದರಂತೆ ತಾನೂ ನಡೆಯುತ್ತ ಜನರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದನು. ಹೀಗೆ ಅವನು ಶಿವಾನುಭವದಂತೆ ನಡೆಯುತ್ತಿರುವಲ್ಲಿ ಚರಾಚರ ಪ್ರಾಣಿಗಳಲ್ಲೆಲ್ಲ ಅವನು ಅತ್ಯಂತ ಪ್ರೀತಿಯನ್ನು ವಹಿಸಿದವನಾಗಿದ್ದನು. ಇದರಿಂದ ಅವನಲ್ಲಿ ಒಂದು ಅಗಾಧವಾದ ಶಕ್ತಿಯು ಉಂಟಾಗಿ ಅದರ ಮೂಲಕ ಅವನು ಸಚರಾಚರ ಪ್ರಾಣಿಗಳ ಸಾವುನೋವುಗಳನ್ನೂ ಅವುಗಳು ಹೊಂದುವ ಕುಂದುಕೊರತೆಗಳನ್ನೂ ಅಂತಜ್ಞಾನದಿಂದ ತಿಳಿಯುವವನಾದನು. ಶಿವಚೈತನ್ಯವು ತನ್ನಲ್ಲಿ ಪ್ರಸ್ಫುರಿಸಹತ್ತಲು ಚರಾಚರ ಪ್ರಾಣಿಗಳಲ್ಲಿಯ ಬಯಕೆಗಳ ಅರಿವು ದಸರಯ್ಯನಿಗೆ ಉಂಟಾಗಹತ್ತಿತು. ಹೀಗೆ ದಸರಯ್ಯನು ಶಿವಾನುಭವದ ಆಚರಣೆಯನ್ನು ಪಾಲಿಸುತ್ತ ಬಂದನು.

ಹೀಗಿರಲು ಅವನು ಒಂದು ದಿವಸ ತನ್ನ ಪೂಜೆಗೆ ಪುಷ್ಪವನ್ನೆತ್ತುವದಕ್ಕೋಸ್ಕರ ತೋಟಕ್ಕೆ ಹೋಗಿ ಅಲ್ಲಿ ಒಂದು ಗಿಡದ ಮೇಲಿನ ಪುಷ್ಪವನ್ನು ಮೇಲೆತ್ತಲು, ಆಗ ಆ ಗಿಡವು 'ಅಯ್ಯೋ ನಾನುನೊಂದೆನು' ಎಂಬ ಸ್ವರವು ಅವನಿಗೆ ಕೇಳಬಂದಿತು. ಅದನ್ನು ಕೇಳಿ ದಸರಯ್ಯನು ಬಹಳ ಮೃದುವಾಗಿ ಆ ಪುಷ್ಪವನ್ನು ಮುಟ್ಟಲು, ಅದು ನರಳುವ ಶಬ್ದವು ಕೇಳಬಂದಿತು. ಆದರೂ ದಸರಯ್ಯನು ತನ್ನ ಪೂಜೆಗೋಸ್ಕರ ಅದನ್ನು ಹರಿದುಬಿಡಲು ಅದರೊಳಗಿಂದ ಹರಿದುಬಂದ ರಸ ಪ್ರವಾಹವು ರಕ್ತದ ಧಾರೆಯಾಗಿ ಬೀಳುವಂತೆ ಅವನ ದೃಷ್ಟಿಗೆ ಕಂಡಿತು. ಅದನ್ನು ದಸರೇಶ್ವರನು ಕಂಡು ಅತ್ಯಂತ ಮನಸ್ಸು ನೊಂದವನಾಗಿ— ಅಯ್ಯೋ ಗಿಡ

ಗಳ ಮೇಲಿರುವ ಹೂವುಗಳನ್ನು ಕೊಯ್ಯುವದು ಹಿಂಸೆಯಲ್ಲವೇ? 'ದಯದಿಂದ ಬಿಟ್ಟು ಧರ್ಮವದಾವುದು? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವು?' ಎಂದಿರುವ ಗುರು ವಾಕ್ಯವನ್ನು ನೆನಪಿಗೆ ತಂದು ದಸರಯ್ಯನು ತನ್ನ ಲಿಂಗಪೂಜೆಗೋಸ್ಕರ ಬೇಕಾಗಿದ್ದ ಹೂವುಗಳನ್ನು ಕೊಯ್ಯುವದನ್ನು ಆಕ್ಷಣವೇ ಬಿಟ್ಟು ಕೊಟ್ಟನು.

ಮುಂದೆ ದಸರಯ್ಯನು ತಾನು ಹೂವನ್ನು ಕೊಯ್ದು ಗಿಡದ ಕೆಳಗೆ ಪೂಜೆಯನ್ನು ಮಾಡಬೇಕೆಂದು ಸ್ಥಳವನ್ನು ಅಣಿಮಾಡಿ ಚಾಪೆಯನ್ನು ಮರೆಗಟ್ಟಿ ಅಲ್ಲಿ ಉದುರಿಬಿದ್ದ ಪುಷ್ಪಗಳನ್ನು ಎತ್ತಿ ತಂದು ಲಿಂಗಾರ್ಚನೆಯನ್ನು ಮಾಡುವವನಾದನು. ಈ ರೀತಿಯಾಗಿ ಅವನು ಬಿದ್ದ ಹೂವುಗಳನ್ನು ದಿನಾಲು ಆರಿಸಿತರುತ್ತ ತನ್ನ ನಿತ್ಯ ಲಿಂಗಾರ್ಚನೆಯನ್ನು ಮಾಡುವವನಾದನು. ಇದೇ ಅವನ ಲಿಂಗಪೂಜೆಯು ನಿತ್ಯಕ್ರಮವಾಯಿತು.

ಅವನ ಈ ಅಹಿಂಸಾಭಾವವು ದಿನೇ ದಿನೇ ಹೆಚ್ಚುತ್ತಲೇ ಹೋಯಿತು. ಅವನು ಪುಷ್ಪಗಳನ್ನು ಹರಿಯುವದು ಮಾತ್ರವಲ್ಲ, ಗಿಡಗಳ ಟೊಂಗೆಗಳು ನೊಂದಾವೆಂದು ಅವುಗಳನ್ನು ಬಲವಾಗಿ ಬಗ್ಗಿಸುತ್ತಿರಲಿಲ್ಲ. ದಾರಿ ನಡಿಯುವಲ್ಲಿ ಜೀವಜಂತುಗಳಿಗೆ ಹಿಂಸೆಯಾದೀತೆಂದು ಸಾವಧಾನದಿಂದ ನಡೆಯುವನು. ಯಾವಾಗಲೂ ಹಿತಕರವಾದ ನುಡಿಗಳನ್ನೇ ಎಲ್ಲರಗೂಡ ನುಡಿಯುವನು. ಯಾರ ಮನಸ್ಸನ್ನೂ ನೋಯಿಸನು. ಈ ವರ್ತನೆಯು ಅವನಲ್ಲಿ ಹೆಚ್ಚುತ್ತಲೇ ಬಂದಿತು. ಹೀಗೆ ಪಶುಪಕ್ಷಿ, ವನಸ್ಪತಿ, ಮನುಷ್ಯರು ಇವರುಗಳೆಲ್ಲರಲ್ಲ ಅಹಿಂಸೆಯನ್ನು ತಾಳಿದವನಾದನು. ಈ ಅಹಿಂಸೆಯು ಕೇವಲ ಬಾಹ್ಯ ಅಂಗಕ್ಕೆ ಮಾತ್ರವಲ್ಲ, ಪ್ರಾಣಿಗಳೆಲ್ಲವುಗಳ ಮನ, ಬುದ್ಧಿ, ಚಿತ್ತ ಇವುಗಳಿಗೆ ಸಹ ನೋವು ಉಂಟಾದೀತೆಂದು ಬಹು ಸಮಾಧಾನದಿಂದ ವರ್ತಿಸುವನು.

ಅವನ ಈ ಅಹಿಂಸಾ ವರ್ತನೆಯ ಮೂಲಕ ನಾಡಿನಲ್ಲೆಲ್ಲ ಅವನ ಕೀರ್ತಿ ವಾರ್ತೆಗಳು ಬಹಳ ಹಬ್ಬಿದವು. ಅವನು ಒಬ್ಬ ಶ್ರೇಷ್ಠ ಶರಣನೆಂದು ಲೋಕದ ಜನರು ನುಡಿಯ ಹತ್ತಿದರು. ಆದರೆ ಜಗತ್ತಿನಲ್ಲಿ ದುರ್ಜನರು ತುಂಬಿರುತ್ತಾರೆ. ಅವರು ಮಾತ್ರ ದಸರಯ್ಯನ ಈ ಕೀರ್ತಿ

ಯನ್ನು ಕೇಳಿ ಅಸೂಯೆಯುಳ್ಳವರಾಗಿ ಅದನ್ನು ಸಹಿಸಲಾರದಾದರು.. ಅವರು ತಮ್ಮ ತಮ್ಮೊಳಗೆ—ನಮ್ಮೂರಲ್ಲಿ ದಸರಯ್ಯನೆಂಬುವನಿದ್ದಾನಂತೆ. ಅವನು ಯಾರನ್ನೂ ನಿಂದಿಸುವದಿಲ್ಲವಂತೆ. ಅವನು ಗಿಡದಲ್ಲಿಯ ಪುಷ್ಪವನ್ನೆತ್ತಿದ ಕೂಡಲೆ ಗಿಡವು ರಕ್ತವನ್ನು ಸುರಿಸಿತಂತೆ. ಈತನ ಕ್ಷಮೆದಮೆಯನ್ನು ನಾವು ಪರೀಕ್ಷಿಸುವೆವು, ಎಂದು ಅತ್ಯಂತ ಆವೇಶವನ್ನು ತಾಳಿ ದಸರಯ್ಯನಿಗೆ ಕೇಡುಬಗೆಯುವವರಾದರು.

ಈ ದುರ್ಜನರು ಒತ್ತಟ್ಟಿಗೆ ಸೇರಿ ಒಂದು ಕುಯುಕ್ತಿಯನ್ನು ತೆಗೆದು ಊರಲ್ಲಿ ಒಬ್ಬ ದುಷ್ಟನು ಶರೀರದಲ್ಲಿ ಪುಷ್ಟನಾಗಿ ಕಳವು ಮಾಡುತ್ತಿರಲು; ಅವನು ಅಧಿಕಾರಿಗಳ ಕೈಗೆ ಸಿಕ್ಕಿಬೀಳಲು ಅವರು ಪೂರ್ವದ ಪದ್ಧತಿಯಂತೆ ಅವನ ಕಯ್ಗಳನ್ನು ಕಡಿಸಿಹಾಕಿಸಿದ್ದರು. ಆದರೂ ಆ ದುಷ್ಟನು ತನ್ನ ಮೊದಲಿನ ಕ್ರೂರ ಸ್ವಭಾವವನ್ನು ಬಿಡದೆ ಗ್ರಾಮದಲ್ಲಿ ವರ್ತಿಸುತ್ತಿದ್ದನು. ಅವನನ್ನು 'ಮೋಟಮಲ್ಲುಗ' ನೆಂದು ಜನರು ಕರೆಯುತ್ತಿದ್ದರು. ಅವನನ್ನು ಈ ದುರ್ಜನರು ಹುಡಿಕಿಕೊಂಡು ಬಂದು ಅವನಿಗೆ ಬೋಧಿಸಿ, ತಮ್ಮೊಳಗೆ ಮಾತಾಡಿಕೊಂಡು ಮೊದಲು ಅವನ ತಲೆಯನ್ನು ಬೋಳಿಸಿ, ಅವನಿಗೆ ಭಸಿತವನ್ನು ಉದ್ಧೂಳಿಸಿ, ಅವನ ನೆಜ್ಜೆಯಲ್ಲಿ ಲಿಂಗವನ್ನಿಡದೆ ಅದನ್ನು ಬರಿದಾಗಿಟ್ಟು, ಅದಕ್ಕೆ ಶಿವಧಾರವನ್ನು ಮಾತ್ರ ಕಟ್ಟಿ, ಕಾವಿ ಕಾಷಾಯಾಂಬರವನ್ನು ಉಡಿಸಿ ಅವನಿಗೆ ಜಂಗಮ ವೇಷವನ್ನು ಅಳವಡಿಸಿದರು. ಆಮೇಲೆ ಅವರು ಅವನಿಗೆ—ನೀನು ಇನ್ನುಮೇಲೆ ದಸರಯ್ಯನ ಬೆನ್ನುಹಿಂದೆಹೋಗಿ, ನಿನ್ನ ಮೋಟುಗಯ್ಯಿಂದ ಅವನನ್ನು ಗುದ್ದಿ ಗುದ್ದಿ ಒಳಿತಾಗಿ ನೋಯಿಸು ಎಂದು ಹೇಳಿಕಳುಹಿದರು.

ಆಗ ಆ ಮೋಟನು ಅಂಗಚೇಷ್ಟೆಗಳನ್ನು ಮಾಡುತ್ತ, ಬಂಕದಿಂದ ಬೆರೆಯುತ್ತ, ದಸರಯ್ಯನಿದ್ದೆಡೆಗೆ ಬಂದು ಅವನೊಡನೆ ಜಗಳ ತೆಗೆಯಬೇಕೆಂದು ಅವನ ಮೇಲೆ ತಾನೇ ನುಗ್ಗಿ—ಎಲೋ ದಸರಯ್ಯನೇ, ನಿನ್ನ ಕಣ್ಣು ಕಾಣುವದಿಲ್ಲವೇ? ನಿನ್ನ ಸೊಕ್ಕು ಎಷ್ಟು? ನಿನ್ನನ್ನು ಕರೆದರೆ ನುಡಿಯದೆ ಹೋಗುತ್ತೀಯಲ್ಲಾ. ಇದು ನಿನ್ನ ತಪ್ಪಲ್ಲವೇ? ಎಂದು ಗರ್ಜಿಸಿ ತನ್ನ ಮೋಟುಗಯ್ಯಿಂದ ಅವನನ್ನು ಹೊಡೆಯಹತ್ತಿದನು.

ಆಗ ದಸರಯ್ಯನು ಇವನು ಅಂಗಹೀನನು, ಮೋಟನು ಎಂಬುದನ್ನು ನೋಡಿ, ಅವನನ್ನು ತಾನು ಹಿಂಸೆ ಮಾಡಬಾರದೆಂದು ತನ್ನ

ವ್ರತವನ್ನು ನೆನೆದು ಸುಮ್ಮನೆ ಅವನಿಂದ ಹೊಡಿಸಿಕೊಳ್ಳುತ್ತ ಸ್ತಬ್ಧ ನಾಗಿ ನಿಂತುಬಿಟ್ಟನು! ಆದರೂ ಆ ಮೋಟನು ಅವನನ್ನು ತನ್ನ ಮೋಟುಗೈಗಳಿಂದ ಹೊಡೆಯುವದನ್ನು ಬಿಡಲಿಲ್ಲ. ಆಗ ದಸರಯ್ಯನ ಶಿರವು ಒಡೆಯಿತು, ಮೈ ಸೀಳಿತು, ರಂಧ್ರಗಳೊಳಗಿಂದ ರಕ್ತವು ಹರಿ ಯತೊಡಗಿತು. ಆದರೂ ಅವನು ಎಷ್ಟುಮಾತ್ರವೂ ಸಿಟ್ಟನ್ನು ಹೊಂದ ಲಿಲ್ಲ. ಆದರೆ ಆ ಮೋಟನು ಹೊಡೆಯುವಲ್ಲಿ ಅವನ ಕೈನೊಂದುತ್ತ ವೆಯಲ್ಲಾ ಎಂದು ಅವನಿಗೋಸ್ಕರ ಪರಿತಪಿಸಿದನು! ಇದನ್ನು ಆ ಮೋಟ ನಿಗೆ ಹೇಳಬೇಕೆನ್ನುವಷ್ಟರಲ್ಲಿ——ಹೀಗೆ ಹೇಳಿದರೆ ಆ ಮೋಟನ ಮನಸ್ಸು ನೊಂದೀತಲ್ಲಾ ಎಂಬ ವಿಚಾರವು ಹೊಳೆಯಲು ಅವನು ಕೂಡಲೆ ಸುಮ್ಮನಾದನು. ಆಗ ಆ ಮೋಟನು ದಸರಯ್ಯನನ್ನು ಹೊಡೆದು ಹೊಡೆದು ಅವನೇ ಶ್ರಮಬಟ್ಟು ಕಡೆಗೆ ಸುಮ್ಮನಾದನು. ಆಗ ದಸ ರಯ್ಯನು ಎದ್ದುನಿಂತು, ಆ ಮೋಟನನ್ನು ಹಿಡಿದು ಅವನ ಮೈಯ್ಯನ್ನು ತಡವರಿಸುತ್ತ——ಹರಹರಾ! ಏನುಕಾರಣ ಇಷ್ಟು ಬಳಲಿದಿರಿ, ಚರ ಲಿಂಗವೇ! ನಿಮ್ಮ ಹಸ್ತಗಳು ನೊಂದವೇ? ದೇವಾ! ಎಂದು ನುಡಿ ಯುತ್ತ ಆ ವೇಷಧಾರಿಯಾದ ಜಂಗಮನ ಕೈಕಾಲುಗಳನ್ನು ತಡವರಿಸಿ ಒತ್ತಹತ್ತಿದನು. ನೆರೆದ ಜನರು ಅದನ್ನು ನೋಡಿ ಚಕಿತರಾದರು. ಅಷ್ಟರಲ್ಲಿ ಒಂದು ಅದ್ಭುತವಾಯಿತು. ದಸರಯ್ಯನು ಅಹಿಂಸಾ ವ್ರತ ವನ್ನು ಅಚ್ಚಳಿಯದೆ ಪಾಲಿಸುತ್ತ ಬಂದಿದ್ದರಿಂದ ಅವನ ಮಹಿಮೆಯು ಆಗ ಹೊರಬಿದ್ದಿತು. ಅವನ ಪ್ರೇಮಪೂರಿತವಾದ ಹಸ್ತಸ್ಪರ್ಶನವು ಆ ಮೋಟನಿಗೆ ಆದಕೂಡಲೆ ಅವನ ಮೋಟಗೈಗಳು ಕೂಡಲೆ ಚಿಗಿ ತವು. ಅವನ ಬರಿದಾದ ಸೆಜ್ಜೆಯಲ್ಲಿ ನಿಜವಾದ ಲಿಂಗವು ಪ್ರಕಟವಾ ಯಿತು. ಅವನು ನಿಜವಾದ ಜಂಗಮನೇ ಆದನು!

ಅದನ್ನು ಆ ಮೋಟನು ನೋಡಿ ತನ್ನಿಂದ ಆದ ಮಹಾಪರಾಧ ವನ್ನು ತಿಳಿದವನಾಗಿ ದಸರೇಶ್ವರನ ಕ್ಷಮೆಯನ್ನು ಬೇಡಿಕೊಂಡನು. ಅದನ್ನು ನೋಡಿ ಪುರದಲ್ಲಿದ್ದ ದುಷ್ಟರು ದಸರಯ್ಯನ ಸಮೀಪಕ್ಕೆ ಬಂದು ಅವನನ್ನು ವಂದಿಸಿ——ದಸರಯ್ಯನೇ, ನಿನ್ನನ್ನು ಹೊಡೆಯಲಿಕ್ಕೆ ಕಳಿಸಿ ದವರು ನಾವು. ದಯಾಘನನಾದ ಶಿವನೆಂಬ ಸಮುದ್ರಕ್ಕೆ ನೀನು ಚಂದ್ರಮನಂತಿದ್ದೀ. ನಿನ್ನನ್ನು ಹಿಂಸೆ ಮಾಡಿದರೂ ಈ ಮೋಟನು ಸದ್ಗ ತಿಯನ್ನು ಹೊಂದಿದನು. ಇದೆಂಥ ಅದ್ಭುತವು! 'ದುರ್ಜನರ ಹಿತಕರ

ಕೃತ್ಯಕ್ಕಿಂತಲೂ ಸಜ್ಜನರ ಹಗೆತನವೇ ಲೇಸು' ಎಂಬ ನಾಣ್ಣುಡಿಯು ಇಂದಿನ ದಿನ ನಮ್ಮ ತಿಳುವಳಿಕೆಗೆ ಬಂದಿತು, ಎಂದೆನ್ನುತ್ತ ಅವರು ದಸರಯ್ಯನಿಗೆ ಸಾಷ್ಟಾಂಗವೆರಗಿದರು. ದಸರಯ್ಯನು ಅವರಿಗೆ ಅಭಯ ವನ್ನು ಕೊಟ್ಟು ಅವರನ್ನು ಕಳಿಸಿದನು. ಇದರಿಂದ ಅವನ ಕೀರ್ತಿಯು ಜಗತ್ತಿನಲ್ಲಿ ಮತ್ತಿಷ್ಟು ಹಬ್ಬಿತು. ಹೀಗೆ ಅವನು ಅಹಿಂಸಾಚರಣೆ ಯನ್ನು ಆಚರಿಸುತ್ತ ದಸರೇಶ್ವರಲಿಂಗವೆಂಬ ತನ್ನಿಷ್ಟಲಿಂಗದಲ್ಲಿ ಬಯ ಲಾದನು.

ದಸರಯ್ಯನು ವಚನಕಾರನಿದ್ದಾನೆ. ಅವನ ೧೦ ವಚನಗಳನ್ನು ನಾವು ಮುಂದೆ ಉದಹರಿಸಿದ್ದೇವೆ. ಅವುಗಳಲ್ಲಿ ಶ್ರೇಷ್ಠತಮವಾದ ತತ್ವ ಗಳಿದ್ದು ಅವುಗಳನ್ನೆಲ್ಲ ನಾವು ಇಲ್ಲಿ ಕೊಟ್ಟಿದ್ದೇವೆ. ಅವುಗಳಲ್ಲಿ ಶಿವಾನು ಭವದ ತತ್ವಗಳು ತುಂಬಿತುಳುಕುತ್ತವೆ. ಅವು ಅಶುದ್ಧವಾಗಿದ್ದರೂ ಅವುಗಳ ಮರ್ಮವನ್ನು ನಾವು ಕಂಡುಹಿಡಿಯಬಹುದಾಗಿದೆ. ಮೊದಲು ನಾವು ಬರೆದ ಭಾವವನ್ನು ತಿಳಿದು ಆಮೇಲೆ ಮೂಲ ವಚನಗಳ ಅರ್ಥವನ್ನು ವಾಚಕರೇ ಮಾಡಿಕೊಳ್ಳಬೇಕೆಂದು ನಮ್ಮ ನಮ್ರ ಸೂಚನೆ ಇದೆ.

ದಸರಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಆದ್ದರಿಂದ ಅವನು ವೀರಶೈವರಿಗೆಲ್ಲ ಅತ್ಯಂತ ಪೂಜ್ಯನಾಗಿದ್ದಾನೆ.

## ವಚನಗಳು.

ಕೆಳಗಿನ ೧ನೇ ವಚನದಿಂದ ದಸರಯ್ಯನು ಉದುರಿಬಿದ್ದ ಹೂವು ಗಳನ್ನು ಎತ್ತಿಕೊಂಡು ಪೂಜೆಮಾಡುತ್ತಿದ್ದುದು ನಿಜವೆಂದು ಕಂಡುಬ ರುತ್ತದೆ. ಅವನು ಹೀಗೇಕೆ ಮಾಡುತ್ತಿದ್ದನೆಂಬುದಕ್ಕೆ ಕೆಲವೊಂದು ಅಲೌಕಿಕ ಕಾರಣವು ಹಿಂದೆ ಅವನ ಚರಿತ್ರೆಯಲ್ಲಿ ಹೇಳಿದೆ. ಆದರೆ ಈ ವಚನದಲ್ಲಿ ಇದಕ್ಕೆ ತಾತ್ವಿಕ ಮತ್ತು ಸಮಂಜಸವಾದ ಕಾರಣ ಗಳನ್ನು ವಚನಕಾರನು ಹೇಳಿದ್ದಾನೆ.

ವಚನ ೧ :— ಉದುರಿ ಬೀಳುವನ್ನಕ್ಕ ನಿನ್ನ ಹಂಗಯ್ಯ! ಉದುರಿ ಬಿದ್ದಲ್ಲಿ ಬಳಿಕ ಎನ್ನೊಡವೆಯಯ್ಯ ತಂದೆ! ನಾ ಪೂಜಿಸುವನ್ನಕ್ಕ ನೀ ದೇವ. ಎನ್ನ ಪೂಜೆಗೊಳಗಾದಲ್ಲಿ ನೀ ಭಕ್ತ, ನಾ ನಿತ್ಯನಯ್ಯ.

ಇಂತೀ ಸರ್ವದಯಾ ವಸ್ತು ಬೀಜವಲಾ ನೀನು. ಸರ್ವ ಮಲತ್ರಯ ದೂರನೇ, ಸರ್ವಾಂಗ ಸಂತೋಷಿಯೇ, ನಿಗರ್ವಿಯೇ, ಎಲೆ ದಸರೇಶ್ವರ ಲಿಂಗವೇ, ತಥ್ಯಮಿಥ್ಯವ ಬಿಟ್ಟೆನಗೆ ನಿನ್ನ ಕಾರುಣ್ಯಪ್ರಸಾದವ ಕರುಣಿಸಯ್ಯ.

ಭಾವಃ—- ದಸರಯ್ಯನು ಯಾವ ತರದ ವಸ್ತುಗಳನ್ನು ಪರಮಾತ್ಮ ನಿಗರ್ಪಿಸಬೇಕೆಂಬುದನ್ನು ಇಲ್ಲಿ ವಿವರಿಸಿದ್ದಾನೆ. ಅವನು ಹೇಳುವ ದೇನೆಂದರೆ—- ಅರ್ಪಿಸುವ ವಸ್ತುಗಳು ನನ್ನವಿರಬೇಕೇ ಹೊರತು ಹೆರ ವರವಿರಬಾರದು. ಆದರೆ ಗಿಡದ ಮೇಲಿದ್ದ ಹೂವುಗಳು ನನ್ನವಲ್ಲ. ಅವು ಪರಮಾತ್ಮನಿಗೆ ಸಂಬಂಧಪಟ್ಟ ಗಿಡದವಿರುತ್ತವೆ. ಆದ್ದರಿಂದ ಅವುಗಳನ್ನು ಅರ್ಪಿಸಲಿಕ್ಕೆ ನನಗೆ ಬರಲಾರದು. ಆದರೆ ಅವು ಗಿಡದ ಮೇಲಿಂದ ಕೆಳಗೆ ಬಿದ್ದ ಬಳಿಕ ಅವು ಗಿಡದವಲ್ಲ. ಅವುಗಳನ್ನು ನಾನು ತೆಗೆದುಕೊಂಡ ಕೂಡಲೆ ಅವು ನನ್ನವಾಗುತ್ತವೆ. ಆದ್ದರಿಂದ ಅವುಗಳನ್ನು ನಾನು ಅರ್ಪಿಸುತ್ತೇನೆ. ಇದರ ಮೇಲಿಂದ ಗಿಡದ ಮೇಲಿದ್ದ ಹೂವುಗಳನ್ನರ್ಪಿಸುವದು ನ್ಯಾಯುವಲ್ಲ ಎಂಬ ಅಭಿಪ್ರಾಯುವನ್ನು ದಸರಯ್ಯನು ಈ ವಚನದ ಮೊದಲಿನ ವಾಕ್ಯದಲ್ಲಿ ಹೇಳಿದ್ದಾನೆ.

ಮುಂದೆ, ದಸರಯ್ಯನಿಗೆ ಕೆಳಗೆ ಬಿದ್ದ ಹೂವುಗಳು ಬಾಡಿದವುಗಳು, ಆದ್ದರಿಂದ ಅವು ಪರಮಾತ್ಮನಿಗೆ ಹೇಗೆ ಅರ್ಪಿತವಾಗಬಹುದು, ಎಂಬ ಸಂಶಯುವು ಬಂದು ಅದಕ್ಕೆ ಆವನು ಸಮಾಧಾನವನ್ನು ಇದರ ಮುಂದಿನ ವಾಕ್ಯದಲ್ಲಿ ಹೇಳಿದ್ದಾನೆ. ಅದು ಯಾವದೆಂದರೆ—- "ನಾ ಪೂಜಿಸುವನ್ನಕ್ಕ ನೀ ದೇವ! ಎನ್ನ ಪೂಜೆಗೊಳಗಾದಲ್ಲಿ ನೀ ಭಕ್ತ, ನಾ ನಿತ್ಯನಯ್ಯ" ಎಂದಿರುತ್ತದೆ. ಎಂದರೆ ನಾನು ಯಾವ ವರೆಗೆ ಕೆಲವೊಂದು ವಸ್ತುವನ್ನು ತೆಗೆದುಕೊಂಡು ಭಕ್ತಿಯಿಂದ ನಿನಗರ್ಪಿಸಿ ಪೂಜಿಸುತ್ತೇನೆಯೋ ಆ ವರೆಗೆ ನಾನು ಭಕ್ತನು, ನೀನು ದೇವನು. ಆದರೆ ನೀನು ನನಗೆ ಇಂಥಿಂಥ ವಸ್ತುವೇ ಬೇಕೆಂದು ಅಪೇಕ್ಷೆಬಟ್ಟರೆ, ಆಕ್ಷಣವೇ ನೀನು ದೇವನಾಗಲಾರಿ, ನೀನು ಕೇವಲ ಭಕ್ತನು ಎಂದು ದಸರಯ್ಯನು ಹೇಳುತ್ತಾನೆ. ಆದ್ದರಿಂದ ನಾನು ಕೊಡುವ ಹೂವುಗಳು ಬಾಡಿದವಿದ್ದರೂ ಅವುಗಳನ್ನು ನಾನು ಭಕ್ತಿಯಿಂದ ನಿನಗೆ ಕೊಟ್ಟಲ್ಲಿ ಅವುಗಳನ್ನು ನೀನು ಪ್ರೀತಿಯಿಂದ ಸ್ವೀಕರಿಸಲೇಬೇಕು. ನೀನು ಅವು ಬಾಡಿದವೆಂದು ಸ್ವೀಕರಿಸದಿದ್ದರೆ, ನಿನಗೆ ಆಶೆ ಎಂಬುದಿದೆ ಎಂದು ನಾನು

ತಿಳಿದು, ನೀನು ದೇವನಲ್ಲ, ನೀನು ಕೇವಲ ಭಕ್ತನೆಂದು ನಾನು ತಿಳಿಯುತ್ತೇನೆ ಎಂದು ಹೇಳುತ್ತಾನೆ. ಅಂದರೆ ಬಿದ್ದಂಥ ಮತ್ತು ಬಾಡಿದಂಥ ಹೂವುಗಳಿದ್ದರೂ ಅವುಗಳನ್ನು ಭಕ್ತಿಯಿಂದ ಅರ್ಪಿಸಿದಲ್ಲಿ ದೋಷವಲ್ಲವೆಂದು ದಸರಯ್ಯನ ಅಭಿಪ್ರಾಯವು. ಯಾಕಂದರೆ ಕೊಟ್ಟ ಹೂವುಗಳಲ್ಲಿ ಇವು ಶುಚಿಯಾದವುಗಳು, ಇವು ಅಶುಚಿಯಾದವುಗಳು ಎಂಬ ಭಾವವು ಪರಮಾತ್ಮನಲ್ಲಿ ಇರಕೂಡದು. ಪ್ರೇಮಳ ಮನಸ್ಸಿನಿಂದ ಅವುಗಳನ್ನು ಕೊಟ್ಟಿದ್ದಾದರೆ ಅವು ಎಂಥವಿದ್ದರೂ ಅವುಗಳನ್ನು ಅವನು ಸ್ವೀಕರಿಸಲೇಬೇಕೆಂದು ವಚನಕಾರನು ಹೇಳುತ್ತಾನೆ.

ಮುಂದೆ ವಚನಕಾರನು ಪರಮಾತ್ಮನ ಗುಣಗಳನ್ನು ವಿವರಿಸುತ್ತ ಹೋಗಿ ಇಂಥ ಶ್ರೇಷ್ಠತರ ವಸ್ತುವು ಪರಮಾತ್ಮನು ಇರುವದರಿಂದ ಪರಮಾತ್ಮನಿಗೆ ಶುದ್ಧಾಶುದ್ಧ ಭಾವವಿರಕೂಡದೆಂಬ ಭಾವವನ್ನು ಅವನು ಮುಂದಿನ ವಾಕ್ಯಗಳಲ್ಲಿ ತೋರಿಸಿದ್ದಾನೆ. ಅಂಥ ಆ ಗುಣಗಳು ಯಾವವೆಂದರೆ— ಪರಮಾತ್ಮನು ಸರ್ವಜೀವದಯಾಭರಿತನಾಗಿ ಎಲ್ಲದರಲ್ಲಿ ಬೀಜರೂಪನಾಗಿ ಇದ್ದಾನೆ. ಅವನಿಗೆ ಆಣವಮಲ, ಮಾಯಾಮಲ, ಕಾರ್ಮಿಕಮಲ ಎಂಬ ಮಲತ್ರಯಗಳು ಇರುವದಿಲ್ಲ. ಅವನ ಸರ್ವಾಂಗವೆಲ್ಲ ಸಂತೋಷಮಯವಾಗಿದೆ. ಅವನು ನಿಗರ್ವಿಯು. ಅವನಲ್ಲಿ ತಥ್ಯಮಿಥ್ಯವೆಂಬುವಿಲ್ಲ. ಆದ್ದರಿಂದ ವಸ್ತುಗಳ ಬಾಹ್ಯ ಶುಚಿ ಮತ್ತು ಅಶುಚಿಗಳು ಅವನಿಗೆ ಅಂಟಲಾರವು. ಬಾಡಿದಂಥ ಮತ್ತು ಬಿದ್ದಂಥ ಹೂವಿದ್ದರೂ ಕೂಡ ಅದು ಅವನಿಗೆ ಅರ್ಪಿತವು. ಈಪ್ರಕಾರ ವಚನಕಾರನು ಹೇಳಿ ಎಲೋ ಪರಮಾತ್ಮನೇ ನಾನು ಕೊಟ್ಟಿದ್ದನ್ನು ನೀನು ಸ್ವೀಕರಿಸಿ ನನಗೆ ನಿನ್ನ ಕಾರುಣ್ಯಪ್ರಸಾದವನ್ನು ಕೊಡು ಎಂದು ದೇವರನ್ನು ಕುರಿತು ಪ್ರಾರ್ಥಿಸುತ್ತಾನೆ.

ವಚನ ೨:— ಶಿವನಲ್ಲಿ ಅನುಭಾವಿಯಾದಲ್ಲಿ, ಇದಿರೆಲ್ಲಿ, ತಾನೆಲ್ಲಿ? ತಾನೆಲ್ಲಿ, ಇದಿರೆಲ್ಲಿ? ಭಿನ್ನಭಾವವನ್ಯರಲ್ಲಿ ತೋರಿದಲ್ಲಿ, ಆ ಗುಣ ತನ್ನನೇ ಅನ್ಯವೆನಿಸುವುದು. ತನ್ನಯ ಶಾಂತಿ ಅನ್ಯರಲ್ಲಿ ತೋರಿ, ಅಲ್ಲಿ ಭಿನ್ನಭಾವವಿಲ್ಲದಿರೆ ಅವರನ್ಯರಲ್ಲ, ಎಮ್ಮವರೆಂಬರು. ಅದು ತನ್ನ ಗುಣ. ಅನ್ಯವಲ್ಲವೆಂಬುದನರಿದಲ್ಲಿ, ತನ್ನೊಪ್ಪ ದರ್ಪಣದಲ್ಲಿ ತೋರುವಂತೆ. ಇದಕ್ಕೆ ಸಂದೇಹವಿಲ್ಲ ದಸರೇಶ್ವರಲಿಂಗವನರಿವುದಕ್ಕೆ.

ಭಾವಃ--- ಶಿವಾನುಭವವನ್ನು ಹೊಂದಬೇಕು. ಅದನ್ನು ಹೊಂದಿದಲ್ಲಿ ಭಿನ್ನಭಾವವು ಅಳಿದುಹೋಗುವದು. ಆಗ ಇದಿರು ತಾನು ಎಂಬುದು ಹೋಗಿಬಿಡುವದು. ಆದರೆ ತಾನು ಭಿನ್ನಭಾವವನ್ನಿಟ್ಟುಕೊಂಡು ವರ್ತಿಸಿದಲ್ಲಿ ಅದರ ಪರಿಣಾಮವು ಅನ್ಯರ ಮೇಲೆಯೂ ಆಗುವದು. ಆಗ ಅದು ತನ್ನನ್ನು ವಿಂಗಡಿಸಿ ಬಿಡುವದು. ಅಂದರೆ ಪರಸ್ಪರ ಭಿನ್ನಭಾವವುಂಟಾಗುವದು. ಆದ್ದರಿಂದ ತನ್ನಲ್ಲಿ ಶಾಂತಿ ಎಂಬುದು ಇರಬೇಕು. ಅಂದರೆ ಎಲ್ಲರೂ ಒಂದೇ ಎಂಬ ಭಾವವಿರಬೇಕು. ಹೀಗಿದ್ದರೆ ಆ ಸಮಾನತ್ವಭಾವವು ಅನ್ಯರಲ್ಲಿಯೂ ತೋರುವದು. ಆಗ ಹೆರವರು ತನಗೆ ಹೊರತಾದವರೆಂಬ ಭಾವವು ಅಳಿದುಬಿಡುವದು. ಹೀಗೆ ತನ್ನವರು ಬೇರೆಯವರು ಎಂಬುದು ತನ್ನನ್ನೇ ಅವಲಂಬಿಸಿದೆ. ತಾನು ಯಾವ ರೂಪಾಗಿರುತ್ತಾನೋ ಅದೇ ರೂಪು ಕನ್ನಡಿಯಲ್ಲಿ ತೋರುತ್ತದೆ. ಹಾಗೆಯೇ ಇದು ಇರುತ್ತದೆ. ಈ ಸ್ಥಿತಿಯುಂಟಾದ ಕೂಡಲೆ ಪರಮಾತ್ಮನ ಅರಿವು ಮನುಷ್ಯನಲ್ಲಿ ಆಗುತ್ತದೆ. ಆದ್ದರಿಂದ ವಿಶ್ವವೆಲ್ಲವೂ ಒಂದೇ ಎಂಬ ಭಾವದಿಂದ ಎಲ್ಲರೂ ಆಚರಿಸತಕ್ಕದ್ದು. ಇಂಥ ಆಚರಣೆಯಿಂದ ಪರಮಾತ್ಮನ ಅರಿವು ಉಂಟಾಗುತ್ತದೆ.

ವಚನ ೩ :-- ಸರ್ವಮಯ ನೀನಾದಲ್ಲಿ ಆವುದನಹುದೆಂಬೆ? ಆವುದನಲ್ಲವೆಂಬೆ? ಸರ್ವ ಚೈತನ್ಯ ನಿನ್ನ ತಂತ್ರಗಳಿಂದಾಡುವವಾಗಿ ಇನ್ನಾವುದ ಕಾಯುವೆ? ಇನ್ನಾವುದ ಕೊಲುವೆ? ತರುಲತೆ ಸ್ಥಾವರ ಜೀವಂಗಳೆಲ್ಲ ನಿನ್ನ ಕಾರುಣ್ಯದಿಂದ ಒಗೆದವು. ಅದ ಹರಿದು ಇನ್ನಾರಿಗರ್ಪಿಸುವೆ ತೊಟ್ಟು ಬೀಳುವನ್ನಕ್ಕ?

ಭಾವಃ--- ಪುಷ್ಪಗಳನ್ನು ಹರಿದು ಅರ್ಪಿಸಲಾಗದೆಂಬ ವಿಷಯವನ್ನು ದಸರಯ್ಯನು ಪುನಃ ಈ ವಚನದಲ್ಲಿ ಎತ್ತಿ ಹೇಳಿದ್ದಾನೆ. ಪರಮಾತ್ಮನು ವಿಶ್ವವ್ಯಾಪಿಯಾಗಿದ್ದಾನೆ. ಆದ್ದರಿಂದ ಇಂಥ ವಸ್ತುವು ಅಹುದು, ಇಂಥ ವಸ್ತುವು ಅಲ್ಲವೆಂದು ಹೇಳಲಿಕ್ಕೆ ಬರಲಾರದು. ಎಲ್ಲವೂ ಪರಮಾತ್ಮನ ತಂತ್ರದಿಂದ ವ್ಯವಹರಿಸುತ್ತವೆ. ಆದ್ದರಿಂದ ಅವುಗಳನ್ನು ಕಾಯುವ ಸಾಮರ್ಥ್ಯವು ನನ್ನಲ್ಲಿಲ್ಲ. ಅಥವಾ ನಾಶಮಾಡುವ ಸಾಮರ್ಥ್ಯವೂ ನನ್ನಲ್ಲಿಲ್ಲ. ಜಗತ್ತಿನಲ್ಲಿ ತರುಲತೆಗಳು, ಸ್ಥಾವರ ಜೀವಗಳು (ಅಂದರೆ ಖನಿಜಗಳು, ಉದ್ಭಿಜಗಳು) ಅನೇಕವಿರುತ್ತವೆ. ಅವೆಲ್ಲವೂ ಪರಮಾತ್ಮನ ಕಾರುಣ್ಯದಿಂದ ವಿಶ್ವದಲ್ಲಿ ಉಂಟಾ

ಗಿರುತ್ತವೆ. ಅವುಗಳ ಮೇಲೆ ನನ್ನ ಸ್ವಾಮಿತ್ವವಿಲ್ಲ. ಆದ್ದರಿಂದ ಅವುಗಳನ್ನು ಹರಿಯಲು ನನಗೆ ಸ್ವಾತಂತ್ರ್ಯವಿಲ್ಲ. ಅಥವಾ ಅವುಗಳನ್ನು ಹರಿದು ನಿನಗೆ ಕೊಡಲೂ ನನಗೆ ಸ್ವಾತಂತ್ರ್ಯವಿಲ್ಲ. ಇಂಥವುಗಳನ್ನು ನಿನಗರ್ಪಿಸಲು ನನಗೆ ಬಾಧ್ಯತೆಯು ಇರಲಾರದು. ಆದ್ದರಿಂದ ಪುಷ್ಪ ತಳಿರು ಇವುಗಳನ್ನು ಗಿಡದಿಂದ ಹರಿದುಕೊಡಲು ನನಗೆ ಬಾರದು. ಆದರೆ ಅವುಗಳು ಬಿದ್ದುಹೋದ ಬಳಿಕ ಅವುಗಳನ್ನು ನಾನು ನಿನಗೆ ಅರ್ಪಿಸುವೆ ಎಂದು ಹೇಳುತ್ತಾನೆ.

ವಚನ ೪ :— ಪೃಥ್ವಿಯಂಶಿಕ ಅಂಗವಾಗಿ, ಅಪ್ಪುವಿನಂಶಿಕ ಶುಕ್ಲ, ಶ್ರೋಣಿತವಾಗಿ, ತೇಜದಂಶಿಕ ಕ್ಷುಧೆಯಾಗಿ, ವಾಯುವಿನಂಶಿಕ ಆತ್ಮನಾಗಿ, ಆಕಾಶದಂಶಿಕ ಬ್ರಹ್ಮರಂಧ್ರವಾಗಿ ಇಂತೀ ಐದರ ಗುಣವುಳ್ಳನ್ನಕ್ಕೆಗೆಲ್ಲ, ಸೋಲು ಬಿಡದು. ಇವನಲ್ಲಿಗಲ್ಲಿಗೆ ಇಂಬಿಟ್ಟು ಇಂತೀ ಉಲ್ಲಿಯ ಬಿಡಿಸಯ್ಯ ಎನ್ನಲ್ಲಿ. ನಿಮಗೆ ಖುಲ್ಲತನ ಬೇಡ. ಅದು ಎನ್ನ ಸೋಂಕಲ್ಲ. ಅದು ನಿನ್ನ ಸೋಂಕು ದಸರೇಶ್ವರಲಿಂಗ.

ಭಾವ:— ಜಗತ್ತಿನಲ್ಲಿ ಪಂಚಭೂತಗಳಿವೆ. ಅವುಗಳಿಂದಲೇ ಮನುಷ್ಯನ ದೇಹವು ಉಂಟಾಗಿದೆ. ಪೃಥ್ವಿಯಿಂದ ಶರೀರವು, ಅಪ್ಪುವಿನಿಂದ ಶುಕ್ಲ ಮತ್ತು ರಕ್ತಗಳು, ತೇಜಸ್ಸಿನಿಂದ ಹಸಿವೆಯು, ವಾಯುವಿನಿಂದ ಆತ್ಮನು, ಆಕಾಶದಿಂದ ಬ್ರಹ್ಮರಂಧ್ರ, ಹೀಗೆ ಮನುಷ್ಯನಿಗೆ ಉಂಟಾಗಿರುತ್ತವೆ. ಮನುಷ್ಯನು ಈ ಪಂಚಮಹಾಭೂತಗಳಿಗೆ ಒಳಗಾಗಿ ನಡೆಯುವ ವರೆಗೆ ಅವನಿಗೆ ಜಗತ್ತಿನಲ್ಲಿ ಜಯಾಪಜಯಗಳು ಬಿಡವು. ಆದ್ದರಿಂದ ಇವುಗಳಿಗೆ ಮನುಷ್ಯನು ಒಳಗಾಗಿ ನಡೆಯಕೂಡದು. ಅವುಗಳಿಂದ ಅವನು ದೂರಾಗಿರಬೇಕು. ಈ ಸ್ಥಿತಿಯುಂಟಾಗುವಂತೆ ನನಗೆ ಕರುಣಿಸಬೇಕೆಂದು ವಚನಕಾರನು ಪರಮಾತ್ಮನನ್ನು ಕುರಿತು ಬೇಡಿಕೊಳ್ಳುತ್ತಾನೆ. ಯಾಕಂದರೆ ಈ ಪಂಚಭೂತಗಳು ಉಂಟಾದದ್ದು ಪರಮಾತ್ಮನ ಮೂಲಕ. ಆದ್ದರಿಂದ ಅವುಗಳ ಸೋಂಕನ್ನು ದೂರ ಮಾಡುವದು ಅವನ ಕಡೆಗೆ ಇರುವದೇ ಹೊರತು ಅದು ನನ್ನ ಕಡೆಗೆ ಇಲ್ಲ ಎಂದು ಹೇಳುತ್ತಾನೆ.

ವಚನ ೫ :— ಎಲು, ನರ, ಚರ್ಮ, ಮಜ್ಜೆ, ಮಾಂಸದೊಳಗಾದ ಕ್ರಿಮಿ ಎನ್ನಂಗದೊಳು ಹುಟ್ಟಿ ಮಲ, ಹುಣ್ಣು, ಹುಗುಳುಗಳಲ್ಲಿ

ಬೀಳುವುದ ಕಂಡು ಅವನು ನಾ ರಕ್ಷಿಸಿದೆನೇ? ಅವು ಬೀಳಬೇಕೆಂದು ನಾ ಶಿಕ್ಷಿಸಿದೆನೇ? ಇಂತೀ ಜೀವದ ದೃಷ್ಟವ ಕಂಡು ಎನಗಿದೆತ್ತಣ ಸರ್ವಜೀವ ದಯೆ? ಇದರ ಲೇಪವ ಬಿಡಿಸಾ ಚನ್ನದಸರೇಶ್ವರ ಲಿಂಗಾ.

ಭಾವಃ— ಜಗತ್ತಿನಲ್ಲಿ ಅನೇಕ ಕ್ರಿಮಿಕೀಟಗಳು ಇವೆ. ಅವು ನನ್ನ ಎಲವು, ನರ, ಚರ್ಮ, ಮಜ್ಜೆ, ಮಾಂಸಗಳಲ್ಲಿ ಇವೆ. ಅವು ಅಲ್ಲಿಯೇ ಹುಟ್ಟುತ್ತವೆ. ಮತ್ತು ಅವು ಅಲ್ಲಿಯೇ ಹುಟ್ಟಿ ನನ್ನ ಮಲ ದೊಳಗಿಂದಲೂ ಹುಣ್ಣುಹುಗುಳುಗಳ ಮೂಲಕವೂ ಹೊರಬಿದ್ದು ಸಾಯು ತ್ತವೆ. ಇದನ್ನು ನಾನು ನೋಡುತ್ತೇನೆ. ಆದರೆ ಅವುಗಳನ್ನು ಅಲ್ಲಿ ಕಾಪಾಡಿ ದವರು ಯಾರು? ಅಥವಾ ಅವುಗಳನ್ನು ಹೊರಗೆ ಹಾಕಿ ಅವು ಸಾಯು ವಂತೆ ಮಾಡಿ ಶಿಕ್ಷಿಸಿದವರು ಯಾರು? ಜೀವಜಂತುಗಳು ಹೀಗೆ ಹುಟ್ಟುವದು ಸಾಯುವದು ಕಂಡುಬರುತ್ತದೆ. ಇದನ್ನು ನೋಡಿ ಸರ್ವ ಜೀವ ದಯೆ ಎಂಬುದು ಎಲ್ಲಿ ಉಳಿಯಿತು, ಎಂದು ವಚನಕಾರನು ಕೇಳುತ್ತಾನೆ. ಇದೊಂದು ದೊಡ್ಡ ತೊಂದರೆ ಎಂದು ಹೇಳಿ ಈ ತೊಂದರೆ ಯಿಂದ ನನ್ನನ್ನು ಬಿಡಿಸೆಂದು ಪರಮಾತ್ಮನನ್ನೇ ವಚನಕಾರನು ಪ್ರಾರ್ಥಿ ಸಿಕೊಳ್ಳುತ್ತಾನೆ. ಬುದ್ಧಿಪೂರ್ವಕವಾಗಿ ಹಿಂಸೆಮಾಡಿದ್ದು ಹಿಂಸೆ ಎಂದೆ ನಿಸುತ್ತದೆ, ಆದರೆ ತಾನಾಗಿಯೇ ಸತ್ತು ಹೋದುದು ಹಿಂಸೆ ಎನಿಸಲಾರ ದೆಂಬ ಭಾವವು ಇದರಲ್ಲಿದೆ.

ವಚನ ೬ :— ಸರ್ವಜೀವ ನಿನ್ನ ಹಾಹೆ ಎಂಬೆನೇ? ಅದು ಭಿನ್ನ ಭಾವ. ತ್ರಿಗುಣಾತ್ಮಕರುಂಟು. ಅವರು ನಿನಗನ್ಯರೆಂಬೆನೇ? ಆ ತ್ರಿಗುಣಾತ್ಮ ಕರು ನಿನ್ನ ತಿಲಾಂಶ. ಇಂತೀ ಸರ್ವಭೂತಕ್ಕೆ ನಿನ್ನದಯೆ. ಎನಗೇಕೆ? ಗೆಲ್ಲ ಸೋಲವೆಂಬ ಖುಲ್ಲತನ ಎಲ್ಲ ಜೀವಕ್ಕು ಸರಿ. ಅದು ಅರು ಹೋದಯದಂತೆ. ಎನ್ನ ಚಿತ್ತದಲ್ಲಿ ಸರ್ವಜೀವಕ್ಕೆಲ್ಲಕ್ಕೂ ದಯೆಯು ಮಾಡು ಚನ್ನದಸರೇಶ್ವರಲಿಂಗಾ.

ಭಾವಃ— ಜನರು ಜಗತ್ತಿನಲ್ಲಿ ಹುಟ್ಟಿದ ಪ್ರಾಣಿಗಳೆಲ್ಲವೂ ನಿನ್ನ 'ಹಾಹೆ' ಎಂದರೆ ಪ್ರತಿರೂಪು ಎಂದು ಹೇಳುತ್ತಾರೆ. ಇದು ತಪ್ಪು. ಇದರಿಂದ ದೇವರು ಬೇರೆ, ಜಗತ್ತು ಬೇರೆ ಎಂದು ಹೇಳಿದಂತಾಗು ತ್ತದೆ. ಹೀಗೆ ತಿಳಿಯುವದು ತಪ್ಪಾದದ್ದು. ಯಾಕಂದರೆ ಅವು ಯಾವತ್ತು ಒಂದೇ ಸ್ವರೂಪು ಎಂದು ತಿಳಿಯಬೇಕು. ಬೇರೆ ಕೆಲವರು ಉತ್ಪತ್ತಿ

ಸ್ಥಿತಿಲಯುಗಳಿಗೆ ಕಾರಣರಾದ ಬ್ರಹ್ಮ ವಿಷ್ಣು ರುದ್ರರೆಂಬವರಿದ್ದಾರೆ. ಅವರಿಂದ ಜಗತ್ತು ಉಂಟಾಗಿದೆ ಎಂದು ಹೇಳುತ್ತಾರೆ. ಹೀಗೆ ಹೇಳುವದೂ ತಪ್ಪು. ಯಾಕಂದರೆ ಈ ಮೂವರನ್ನು ಪರಮಾತ್ಮನಿಗೆ ಹೋಲಿಸಿ ನೋಡಿದರೆ ಆವರು ಅತ್ಯಂತ ಸಣ್ಣವರು ಎಂದು ತಿಳಿಯಬೇಕಾಗುತ್ತದೆ. ಆದರೆ ಜಗತ್ತಿನಲ್ಲಿಯ ಎಲ್ಲ ಜೀವಿಗಳಿಗೆ ಆಧಾರವಾಗಿರುವದು ಪರಮಾತ್ಮನ ದಯೆಯು ಒಂದು ಮಾತ್ರ. ಇದೇ ಹೆಚ್ಚಿನದು. ಅದರ ಮೇಲೆಯೇ ಜಗತ್ತು ನಡಿಯುತ್ತದೆ. ಜಗತ್ತಿನಲ್ಲಿ ಕಾಣುವ ಗೆಲವುಗಳು ಸೋಲುಗಳು ಎಲ್ಲ ಜೀವಿಗಳಿಗಿದ್ದು ಈ ಜೀವಿಗಳು ಪರಮಾತ್ಮನ ದಯೆಯ ಮೇಲೆಯೇ ಅವಲಂಬಿಸಿರುತ್ತವೆ. ಅವನ ಈ ದಯೆಯು ಎಲ್ಲರ ಮೇಲೆಯೂ ಇರುತ್ತದೆ. ಸೂರ್ಯನ ಮುಂಜಾವಿನ ಪ್ರಕಾಶವು ಹೇಗೆ ಜಗತ್ತಿನಲ್ಲಿರುವ ಸಣ್ಣ ದೊಡ್ಡ ವಸ್ತುಗಳ ಮೇಲೆಲ್ಲ ಸರಿಯಾಗಿ ಬೀಳುತ್ತಿದೆಯೋ ಹಾಗೆಯೇ ಪರಮಾತ್ಮನ ಈ ದಯೆಯು ಎಲ್ಲ ವಸ್ತುಗಳ ಮೇಲೆಯೂ ಪಸರಿಸಿರುತ್ತದೆ. ಈ ವಿಧದ ಭಾವವು ನನ್ನ ಚಿತ್ತದಲ್ಲಿ ಇರಬೇಕು, ಇಷ್ಟೇ ಅಲ್ಲ, ಸರ್ವಜೀವಿಗಳ ಮೇಲೂ ಇರಬೇಕು. ಎಲೋ ಪರಮಾತ್ಮನೇ ಇಂಥ ನಿನ್ನ ದಯೆಯು ನನ್ನಲ್ಲಿ ಇರಲೆಂದು ವಚನಕಾರನು ಪರಮಾತ್ಮನನ್ನು ಕುರಿತು ಬೇಡಿಕೊಳ್ಳುತ್ತಾನೆ.

ಕೆಲವು ವಚನಕಾರರು ಜಗತ್ತಿನಲ್ಲಿರುವ ಶಕ್ತಿ, ಭಕ್ತಿ, ತತ್ವಗಳಿಗೆ ಮಹತ್ವಕೊಟ್ಟಿದ್ದಾರೆ. ಆದರೆ ದಸರಯ್ಯನು ಹೀಗೆ ಭಾವಿಸದೆ ಪರಮಾತ್ಮನ ದಯೆಗೆ ಅಷ್ಟೇ ಮಹತ್ವಕೊಟ್ಟಿರುತ್ತಾನೆ. ಇದು ಆತನ ವೈಶಿಷ್ಟ್ಯವಾಗಿದೆ.

ವಚನ ೭ :— ನುಡಿಯಲ್ಲಿ ಕಿಂಕರತ್ವವನರಿದು, ಕರವ ಬೀಸುವಲ್ಲಿ ತುಷಾರ ಕೀಟವನರಿದು, ಅಡಿ ಇಡುವಲ್ಲಿ ಪೊಡವಿಯಲ್ಲಿ ಹೊರಹೊಮ್ಮಿದ ಜೀವನ ಚೇತನಾದಿಗಳನರಿದು, ಮತ್ತೆ ಗಿಡನ ಹಿಡಿವಲ್ಲಿ ಮತ್ತೊಂದ ಒಡಗೂಡುವಲ್ಲಿ ಒಡಗೂಡಿ ಬಿಡುವಲ್ಲಿ ಸರ್ವದಯಕ್ಕೆ ಮುದಿಮುಚ್ಚುವಿಲ್ಲದಿರಬೇಕು. ಇಂತೀ ಸಡಗರದ ಚಿತ್ತ ದಸರೇಶ್ವರ ಲಿಂಗವ ನೊಡಗೂಡುವ ಭಕ್ತಿ.

ಭಾವ:— ಹಿಂಸೆ ಎಂಬುದು ನುಡಿಯುಲ್ಲಿಯೂ ಉಂಟು. ಆದರೆ ಆ ಹಿಂಸೆಯನ್ನು ಸೇವಾಭಾವದಿಂದ ದೂರಮಾಡಬೇಕೆಂದು ವಚನಕಾ

ರನು ಹೇಳುತ್ತಾನೆ. ನಾವು ಅತ್ತಿತ್ತ ಅಡ್ಡಾಡುವಾಗ ಕರಗಳನ್ನು ಬೀಸುತ್ತೇವೆ. ಆಗ ಹವೆಯಲ್ಲಿ ಅತ್ಯಂತ ಸೂಕ್ಷ್ಮವಾದ ಕ್ರಿಮಿಗಳಿದ್ದು ಅವುಗಳ ಹಿಂಸೆಯಾಗಕೂಡದು. ದಾರಿ ನಡಿಯುವಲ್ಲಿ ಭೂಮಿಯಿಂದ ಹೊರಬೀಳುವಂಥ ಕ್ರಿಮಿಕೀಟಕಗಳನ್ನು ನಾವು ತುಳಿಯಬಹುದು. ಇದನ್ನು ತಿಳಿದುಕೊಂಡು ಅವುಗಳ ಹಿಂಸೆಯಾಗದಂತೆ ನಾವು ನಡೆಯಬೇಕು. ಹಾಗೆಯೇ ಗಿಡಗಳ ಟೊಂಗೆಗಳನ್ನು ಹಿಡಿಯುವಲ್ಲಿ ಅವುಗಳ ಟೊಂಗೆಗಳನ್ನು ಬಗ್ಗಿಸಿ ಎರಡನೆಯ ಟೊಂಗೆಗಳಿಗೆ ಅವುಗಳನ್ನು ಹಚ್ಚುವಲ್ಲಿ, ಹೀಗೆ ಹಚ್ಚಿ ಅವುಗಳನ್ನು ಪುನಃ ಬಿಡುವಲ್ಲಿ ಅವುಗಳನ್ನು ಮೆಲ್ಲನೆ ಹಿಡಿದುಬಿಡಬೇಕು. ಅವುಗಳು ನೊಂದಾವೆಂಬ ತಿಳುವಳಿಕೆಯಿಂದ ಇರಬೇಕು. ಈ ತರದ ದಯಾಭಾವದಿಂದ ಚಿತ್ತವು ತುಂಬಿಕೊಂಡಿರಬೇಕು. ಈ ತೆರದ ವರ್ತನೆಯಿಂದ ಪರಮಾತ್ಮನೊಡನೆ ಸಾಮರಸ್ಯ ಸ್ಥಿತಿಯು ಪ್ರಾಪ್ತವಾಗುತ್ತದೆಂದು ವಚನಕಾರನು ಹೇಳುತ್ತಾನೆ.

ವಚನ ೮ :— ಎಲ್ಲವನರಿವಲ್ಲಿ ಕಡೆಯಲ್ಲಿ ಕೊಲ್ಲಬೇಕೆಂಬುದೊಂದು ಭೇದ ಉಂಟೇ? ಶಾಸ್ತ್ರವನೆಲ್ಲ ಕಲಿತಲ್ಲಿ ಗೆಲ್ಲ ಸೋಲಕ್ಕೆ ಹೋರಬೇಕೆಂಬುದು ಕಡೆಯಲ್ಲಿ ಒಂದು ಸೊಲ್ಲುಂಟೇ? ಪುರಾಣವನೆಲ್ಲವ ನೋದಿದಲ್ಲಿ ಸರ್ವ ಜೀವವ ಕೊಲ್ಲು, ಕೊರೆ ಎಂಬುದೊಂದು ದಳ್ಳುರಿಯುಂಟೇ? ಶ್ರುತಿಯು ಕೇಳುವಲ್ಲಿ, ಸ್ಮೃತಿಯುನಂಗೀಕರಿಸುವಲ್ಲಿ ಸರ್ವ ಹತವ ಮಾಡಬೇಕೆಂಬುದೊಂದು ಗತಿಯುಂಟೇ? ಇಂತೀ ಆತ್ಮನಲ್ಲಿ ಸರ್ವಭೂತ ಹಿತವುಳ್ಳವಂಗೆ ಆತ ಅತೀತ ಸ್ವಯುವಸ್ತು ದಸರೇಶ್ವರ ಲಿಂಗವು.

ಭಾವಃ— ಧರ್ಮಗ್ರಂಥಗಳನ್ನೆಲ್ಲ ಜನರು ಓದುತ್ತಾರೆ. ಯಾವ ಗ್ರಂಥ ಓದಿದರೂ ಅವುಗಳಲ್ಲಿ ಜೀವ ಹಿಂಸೆ ಮಾಡಬೇಕೆಂದು ಎಲ್ಲಾದರೂ ಹೇಳಿದ್ದುಂಟೇ? ಹೇಳಿಲ್ಲವೆಂದು ವಚನಕಾರನ ಅಭಿಪ್ರಾಯವು. ಹಾಗೆಯೇ ಅನೇಕ ತರ್ಕಶಾಸ್ತ್ರಗಳನ್ನು ಜನರು ಕಲಿಯುತ್ತಾರೆ. ಹೀಗೆ ಕಲಿತುಕೊಂಡು ಜನರೊಡನೆ ವಾಗ್ವಾದ ಮಾಡಿ ಅವರನ್ನು ಗೆಲ್ಲಬೇಕು, ಹೋರಾಡಬೇಕು ಎಂದು ಎಲ್ಲಾದರೂ ಅವುಗಳಲ್ಲಿ ಒಂದು ನುಡಿಯಾದರೂ ಇದೆಯೇ ಹೇಗೆ? ಇಲ್ಲವೆಂದು ವಚನಕಾರನು ಹೇಳುತ್ತಾನೆ. ಯಾಕಂದರೆ ಇದು ಸಹ ಜೀವ ಹಿಂಸೆಯಾಗುವದೆಂದು ಅವನ ಅಭಿ

ಪ್ರಾಯವು. ಜನರು ಪುರಾಣಗಳನ್ನು ಓದುತ್ತಾರೆ. ಆದರೆ ಅವುಗಳಲ್ಲಿ ಎಲ್ಲಾದರೂ ಜೀವಿಗಳನ್ನು ಕೊಲ್ಲಬೇಕು, ಕೊರೆಯಬೇಕು ಎಂಬ ಬಹು ಕಠೋರವಾದಂಥ ಮತ್ತು ಹೃದಯವನ್ನು ಸುಟ್ಟುಬಿಡುವಂಥ ವಿಚಾರಗಳಿರುತ್ತವೆಯೋ ಹೇಗೆ? ಇಲ್ಲವೆಂದು ವಚನಕಾರನ ಅಭಿಪ್ರಾಯವು. ಶ್ರುತಿ ಸ್ಮೃತಿಗಳನ್ನು ಕೇಳುವಲ್ಲಿ ಅವುಗಳ ತತ್ವಗಳಂತೆ ನಡೆಯುವಲ್ಲಿ ಜೀವ ಹಿಂಸೆ ಮಾಡಬೇಕೆಂದು ಎಲ್ಲಾದರೂ ಹೇಳಿದುದುಂಟೇ? ಇಲ್ಲವೆಂಬ ಭಾವವು ಇದರಲ್ಲಿದೆ. ಮನುಷ್ಯನು ಈ ವೃತ್ತಿಯುಳ್ಳವನಾಗಿ ಜೀವಮಯವಾದ ಈ ಜಗತ್ತಿನ ಸಲುವಾಗಿ ದಯಾಭಾವವುಳ್ಳವನಾಗಿ ವರ್ತಿಸಬೇಕೆಂದು ವಚನಕಾರನು ಹೇಳಿದ್ದಾನೆ. ಹೀಗೆ ನಡೆಯುವವನು ಅತೀತನು, ಸ್ವಯವಸ್ತುವು. ಇಷ್ಟೇಅಲ್ಲ, ಅವನು ಪ್ರತ್ಯಕ್ಷ ಪರಮಾತ್ಮನು ಎಂದು ವಚನಕಾರನು ಇಲ್ಲಿ ಹೇಳುತ್ತಾನೆ.

ವಚನ ೯ :— ಒಂದನಹುದೆನಬೇಡ. ಒಂದನಲ್ಲವೆನಬೇಡ. ಉಭಯವುಳ್ಳನ್ನಕ್ಕ ಬಹು ದುಃಖದೊಡಲು. ಅಮೃತವ ಕುಡಿಯಕೊಟ್ಟು ವಿಷವ ಕುಡಿದನೆನಬೇಡ. ವಿಷವ ಕುಡಿಯ ಕೊಟ್ಟು ಅಮೃತವ ಕುಡಿದನೆನಬೇಡ. ಆಗುಣ ತಮ್ಮಲ್ಲಿಯೇ ದೃಷ್ಟ. ಇಂತೀ ಗುಣವ ನಿಸ್ಸೀ ಕೇಳಿ ತಿಳಿದಡೆ ನಿನಗದು ಅನ್ಯ ಭಿನ್ನವಿಲ್ಲ. ಅದು ತನ್ಮಯ ಮೂರ್ತಿದಪರೇಶ್ವರ ಲಿಂಗವು.

ಭಾವ:— ಒಂದು ವಸ್ತುವು ಆಹುದು, ಒಂದು ವಸ್ತುವು ಅಲ್ಲ ಎಂದೆನಬೇಡ. ಅದು ಅಸತ್ಯವು. ಅದು ಭಿನ್ನಭಾವವು. ಈ ತೆರದ ಭಿನ್ನ ಭಾವವಿದ್ದರೆ ಅಲ್ಲಿ ದುಃಖವಿರುತ್ತದೆ. ಆದ್ದರಿಂದ ನೀನು ಅಮೃತವನ್ನು ಕುಡಿಯಕೊಟ್ಟು, ವಿಷವನ್ನು ಕುಡಿದನೆಂದು ಮತ್ತು ವಿಷವನ್ನು ಕುಡಿಯ ಕೊಟ್ಟು ಅಮೃತವನ್ನು ಕುಡಿದನೆಂದು ಹೇಳಬೇಡ. ಈಪ್ರಕಾರದ ಸತ್ಯ ಮತ್ತು ಅಸತ್ಯ ಇವುಗಳು ನಿನ್ನ ಮೇಲೆಯೇ ಅವಲಂಬಿಸಿವೆ. ಈ ವಿಪರೀತ ಭಾವವು ನಿನ್ನಲ್ಲಿಯೇ ಇರುತ್ತದೆ. ಇದನ್ನು ನೀನು ಕೇಳಿ ತಿಳಿದಲ್ಲಿ ಎಲ್ಲ ವಸ್ತುಗಳು ಒಂದೇ ಎಂಬ ಭಾವವು ನಿನ್ನಲ್ಲಿ ಒಡಮೂಡಹತ್ತುತ್ತದೆ. ಈ ಭಾವವು ನಿನ್ನಲ್ಲಿ ಒಡಮೂಡಿದ ಕೂಡಲೆ ನೀನೇ ಪರಬ್ರಹ್ಮವಸ್ತುವಾಗುವಿ ಎಂದು ವಚನಕಾರನು ಹೇಳುತ್ತಾನೆ.

೧೦ನೇ ವಚನವು ಬಹು ಅಶುದ್ಧವಿದೆ. ಆದ್ದರಿಂದ ಅದನ್ನು ಇಲ್ಲಿ ಉದಹರಿಸಿಲ್ಲ.

ಹಿಂಸೆ, ಮತ್ತು ಅಹಿಂಸೆ ಇವುಗಳ ತಾತ್ವಿಕ ವಿವೇಚನೆಯು ಮೇಲಿನ ವಚನಗಳಲ್ಲಿ ಇರುತ್ತದೆ. ಪ್ರತಿಯೊಂದು ವಚನವು ಅತ್ಯಂತ ಮಹತ್ವದ್ದಿರುವದರಿಂದ ನಮಗೆ ದೊರೆದ ಎಲ್ಲ ವಚನಗಳನ್ನು ಇಲ್ಲಿ ಉದಹರಿಸಿದ್ದೇವೆ.

---

## ಹಾವಿನಹಾಳ ಕಲ್ಲಯ್ಯ

ವಿಜಾಪುರ ಪಟ್ಟಣದ ವಾಯುವ್ಯ ದಿಕ್ಕಿಗೆ ೩೬ ಮೈಲುಗಳ ಮೇಲೆ ಹಾವಿನಹಾಳ ಎಂಬ ಹೆಸರಿನ ಗ್ರಾಮವಿದೆ. ಅಲ್ಲಿ ಶಿವನಯ್ಯನೆಂಬ ಅಕ್ಕಸಾಲಿಗನೂ ಅವನ ಹೆಂಡತಿ ಸೋಮವ್ವೆ ಎಂಬವಳೂ ವಾಸ ಮಾಡುತ್ತಿದ್ದರು. ಅವರು ಅಕ್ಕಸಾಲೆಯ ಕಾಯಕವನ್ನು ಮಾಡುತ್ತ ಉಪಜೀವಿಸುವವರಾಗಿದ್ದರು. ಅವರಿದ್ದ ಗ್ರಾಮದಲ್ಲಿ ಕಲ್ಲಿನಾಥನ ದೇವಾಲಯವಿದ್ದು ತಮಗೊಬ್ಬ ಮಗನನ್ನು ಕೊಡಬೇಕೆಂದು ದೇವರಿಗೆ ಬೇಡಿಕೊಳ್ಳಲು ಒಬ್ಬ ಪುತ್ರನು ಜನಿಸಿದನು. ಅವನಿಗೆ ಕಲ್ಲಯ್ಯನೆಂದು ಕಲ್ಲಿನಾಥನ ಹೆಸರನ್ನೇ ಇಟ್ಟು ಅವನನ್ನು ಪ್ರೀತಿಯಿಂದ ಬೆಳೆಯಿಸುತ್ತ ಬಂದರು. ಅವನು ದೊಡ್ಡವನಾದ ಬಳಿಕ ಅವನಿಗೆ ತಮ್ಮ ಕುಲದ ಉದ್ಯೋಗವಾದ ಚಿನ್ನಗಾಯಕವನ್ನು ಚನ್ನಾಗಿ ಅರುಹಿ ಅದರಲ್ಲಿ ಅವನನ್ನು ನಿಷ್ಣಾತನನ್ನಾಗಿ ಮಾಡಿದರು. ಆದರೆ ಕಲ್ಲಯ್ಯನು ಕಲ್ಲಿನಾಥನ ಬಗ್ಗೆ ಅತ್ಯಂತ ಭಕ್ತಿಭಾವವನ್ನು ತಾಳಿದವನಾಗಿ ದಿನಾಲು ಶಿವಾರ್ಚನೆಯನ್ನು ಮಾಡಿ ದೇವರನ್ನು ಸ್ತುತಿಸುವದರಲ್ಲಿಯೇ ತನ್ನ ವೇಳೆಯನ್ನೆಲ್ಲ ಕಳೆಯುವನು. ಅವನಲ್ಲಿ ಪರಮಾತ್ಮನ ಬಗ್ಗೆ ಹೆಚ್ಚು ಹೆಚ್ಚು ಅನುರಾಗವು ಉಂಟಾಗಿ, ಅವನ ಧ್ಯಾನದಲ್ಲಿಯೇ ಯಾವಾಗಲೂ ಉಳಿದು ಬಿಡುವನು.

ಹೀಗಿರುವಲ್ಲಿ ಹಾವಿನಹಾಳ ಗ್ರಾಮದಿಂದ ೧೪ ಮೈಲುಗಳ ಮೇಲಿರುವ ಮಂಗಳವಾಡದಲ್ಲಿ ಬಿಜ್ಜಳ ನೃಪನು ರಾಜ್ಯವಾಳುತ್ತಿರಲು ಅವನು

ಅಕ್ಕಸಾಲಿಗ ಕೆಲಸದಲ್ಲಿ ಶಿವನಯ್ಯನ ಮತ್ತು ಅವನ ಮಗ ಕಲ್ಲಯ್ಯನ ಜಾಣ್ಮೆಯನ್ನು ಕೇಳಿದವನಾಗಿ ಚಿನ್ನದ ಒಂದು ಸಾವಿರದ ಗಟ್ಟಿಯನ್ನು ತನ್ನ ಮನೆಯ ನಾಯಕನಾದ ಕಸಿಕಿಲ ನಾರಣನೆಂಬವನ ಕಡೆಗೆ ಕೊಟ್ಟು ಈ ಚಿನ್ನದಿಂದ ಒಂದು ಸುಂದರವಾದ ಉತ್ತರೀಗೆಯನ್ನು ಅವರಿಂದ ಮಾಡಿಸಬೇಕೆಂದು ಹೇಳಿಕಳುಹಿದನು. ಅದರಂತೆ ಆ ಗಟ್ಟಿಯನ್ನು ಶಿವನಯ್ಯನ ಕಡೆಗೆ ಕೊಟ್ಟು ನಾರಣನು ರಾಜಧಾನಿಗೆ ತಿರುಗಿ ಹೋದನು.

ಶಿವನಯ್ಯನು ಆ ಗಟ್ಟಿಯನ್ನು ಆನಂದದಿಂದ ಸ್ವೀಕರಿಸಿ ತಾನು ಕೈಕೊಂಡ ಕೆಲಸವನ್ನು ಮಾಡಹತ್ತಲು ಅದು ತನ್ನ ವಶವಲ್ಲವೆಂದು ತೋರಹತ್ತಿತು. ಅದು ತನ್ನ ಮಗನಿಗೆ ಮಾತ್ರ ಸಾಧ್ಯವೆಂದು ತಿಳಿದವನಾಗಿ ತನ್ನ ಮನದಲ್ಲಿ—ನನ್ನ ಮಗನು ಯಾವ ಕೆಲಸವನ್ನೂ ಮಾಡುವದಿಲ್ಲ, ಅವನಿಗೆ ಶಿವನ ಹುಚ್ಚು ಹಿಡಿದಿದೆ, ಅವನು ಮನೆವಾರ್ತೆಯನ್ನು ಲಕ್ಷಿಸನು, ಎಂದು ಚಿಂತಿಸುತ್ತಿರಲು, ಮರುದಿನ ಮಧ್ಯರಾತ್ರಿಯಲ್ಲಿ ತನ್ನ ಮಗನನ್ನೆಬ್ಬಿಸಿ ಅವನಿಗೆ— ಎಲೋ ಮಗನೇ ಹೀಗೆ ಜಗದೊಳಗೆ ಅನುದ್ಯೋಗಿಯಾಗಿರುವದು ಸರಿಯೇ? ಅಕಟಕಟಾ! ನೀನು ಹೀಗೆ ಎಂದಾದರೂ ಕಾಲಕಳೆಯಬೇಕೇ? ನೀನು ಕಲ್ಲಿನಾಥನ ದೇವಾಲಯವೆಂದರೆ ಅಲ್ಲಿಗೆ ಹೋಗಿಬಿಡುತ್ತೀ. ಹೀಗಾದರೆ ನೀನು ಹೇಗೆ ಧನವನ್ನು ಗಳಿಸುವಿ? ಉದ್ಯೋಗ ಮಾಡದೆ ಹೋದರೆ ಪರಮಾತ್ಮನು ಎಂದಿಗಾದರೂ ತಾನಾಗಿ ನಿನಗೆ ಕೊಡುವನೇ? ಜಗತ್ತಿನಲ್ಲಿ ನಿನ್ನ ಹಸ್ತಕೌಶಲ್ಯಕ್ಕೆ ಯಾರೂ ಎಣೆ ಇಲ್ಲ. ಪ್ರಾಯದಲ್ಲಿ ನೀನು ಹಣಗಳಿಸದಿದ್ದರೆ ಮುಪ್ಪಿನ ಕಾಲದಲ್ಲಿ ಅದನ್ನು ಗಳಿಸುವದು ಹೇಗೆ? ನೀನು ಕಲ್ಲಿನಾಥನ ದೇವಾಲಯಕ್ಕೆ ಹೋಗುವದನ್ನು ನಾನು ನಿಲ್ಲಿಸಿ ಬಿಡುವೆನು ಎಂದು ತಂದೆಯು ನಿಷ್ಠುರವಾಗಿ ಹೇಳಿದನು.

ಆಗ ಕಲ್ಲಯ್ಯನು ಅತ್ಯಂತ ಮನಸ್ಸಿನಲ್ಲಿ ನೊಂದು ಬಹಳ ಶೋಕವನ್ನು ತಾಳಿ ಕಡುಗೋಪದಿಂದ ತಂದೆಗೆ— ನೀನು ನನ್ನನ್ನು ಕೊಂದರೂ, ಕಡಿದರೂ, ಸೀಳಿದರೂ, ಹೋಳಿದರೂ, ನಾನು ಕಲ್ಲಿನಾಥನ ಪಾದವನ್ನು ಬಿಡೆನು. ಫಡ! ಫಡ!! ನೀನೆಲ್ಲಿಯ ತಂದೆ? ನಾನೆಲ್ಲಿಯ ನಿನ್ನ ಮಗ? ನನಗೆ ಮೃಡನೇ ತಾಯಿತಂದೆ. ಸತ್ತು ಹೋಗುವ

ನಿನ್ನಂಥ ತಂದೆ ತಾಯಿಗಳು ನನಗೆ ಬೇಡ. ನನಗೆ ಈ ಪ್ರಪಂಚವು ಬೇಡ, ಎಂದೆನ್ನಲು, ಶಿವನಯ್ಯನು ಅತ್ಯಂತ ಉಗ್ರ ಕೋಪವನ್ನು ತಾಳಿ ತನ್ನ ಮಗನನ್ನು ಒಳಿತಾಗಿ ತಳಿಸಿದನು.

ಆಗ ಕಲ್ಲಯ್ಯನು ಮತ್ತಿಷ್ಟು ಕೆರಳಿದವನಾಗಿ, ಕೋಪದಿಂದ ಅವನ ಮೈಯ್ಯ ನಡುಗುತ್ತಿರಲು— ನಾನು ಇನ್ನುಮೇಲೆ ಈ ಲೋಕದಲ್ಲಿ ಇರಲಾರೆನು ಎಂದು ನುಡಿದು ಕಠಾರಿಯೊಂದನ್ನು ತೆಗೆದುಕೊಂಡು ಕಲ್ಲಿನಾಥನ ದೇವಾಲಯಕ್ಕೆ ಬಂದು ದೇವರೆದುರಿಗೆ ನಿಂತು— ಎಲೋ ದೇವರೇ, ನೀನಿರಲು ತಂದೆಯು ನನಗೆ ಹೇಗೆ ಬಡಿಯಬೇಕೇ? ಅವನು ತಂದೆಯಲ್ಲ. ನೀನೇ ನನಗೆ ತಂದೆಯು, ಎಂದೆನ್ನುತ್ತ, ತನ್ನ ಕೈಯಲ್ಲಿದ್ದ ಕಠಾರಿಯಿಂದ ತನ್ನ ಹೊಟ್ಟೆಯನ್ನು ಇರಿದುಕೊಂಡನು. ಆಗ ಅವನ ಕರುಳುಗಳು ಹೊರಬಿದ್ದವು. ನೆತ್ತರು ಸುತ್ತಲೂ ಹರಿಯತೊಡಗಿತು. ಆಗ ಕಲ್ಲಯ್ಯನು ಕಲ್ಲಿನಾಥನನ್ನು ಬಿಗಿದಪ್ಪಿ ಅವನ ಧ್ಯಾನದಲ್ಲಿರಲು ಪರಮಾತ್ಮನು ಅವನಿಗೆ — ಎಲೋ ಕಲ್ಲಯ್ಯನೇ, ಹೀಗೆ ಮಾಡದಿರು. ನೀನು ಮುಂದೆ ವೇದಬೋಧಕರನ್ನು ಗೆಲ್ಲಬೇಕಾಗಿದೆ. ನಿನ್ನಿಂದ ಅನೇಕ ಮಹತ್ವದ ಕಾರ್ಯಗಳಾಗಬೇಕಾಗಿವೆ. ರೇವಣಸಿದ್ಧನ ಮಗನಾದ ರುದ್ರಮುನಿಯು ಅತ್ಯಂತ ಜ್ಞಾನಿಯು. ಅವನು ನಿನಗೆ ಗುರುವಾಗಿ ಬರುವವನಾಗಿದ್ದಾನೆ. ಅವನನ್ನು ನೀನು ಕಾಣು. ಅಂಜದಿರು ಎಂದು ಪ್ರತ್ಯಕ್ಷವಾಗಿ ಬುದ್ಧಿ ಹೇಳಿದಂತೆ ಕೇಳಿಸಿತು.

ಅಷ್ಟರಲ್ಲಿ ಪೂಜಾರಿಯು ಬಂದು ದೇವಾಲಯದ ಬಾಗಿಲನ್ನು ತೆರೆದುನೋಡಲು ಸುತ್ತಲೂ ನೆತ್ತರು ಚೆಲ್ಲಿತ್ತು, ಕಲ್ಲಯ್ಯನು ದೇವರ ಪಾದದೆಡೆಯಲ್ಲಿ ತಲೆ ಇಟ್ಟು ಮೂರ್ಛೆಹೋಗಿದ್ದನು. ಅದನ್ನು ಅವನು ಕಂಡು ಅಲ್ಲಿ ನಿಲ್ಲಲಂಜಿ, ಊರ ಜನರಿಗೆ ಅದನ್ನು ತಿಳಿಸಲು ತಾಯಿ ತಂದೆಗಳೂ ಊರವರೂ ಅಲ್ಲಿಗೆ ಬಂದು ಕಲ್ಲಯ್ಯನನ್ನು ಮೇಲಕ್ಕೆಬ್ಬಿಸಿ, ಹೊರಗೆ ಬಿದ್ದ ಕರುಳುಗಳನ್ನು ಹೊಟ್ಟೆಯಲ್ಲಿ ಸೇರಿಸಿ ದೇವರ ಪ್ರಸಾದವನ್ನು ಮೇಲೆ ಹಚ್ಚಿ, ವಿಭೂತಿಯನ್ನು ಮೆಯ್ಯಲ್ಲಿ ಉದ್ಧೂಳಿಸಿ ಉಪಚರಿಸುತ್ತಿರಲು ಕಲ್ಲಯ್ಯನು ಮೂರ್ಛೆ ತಿಳಿದು ಎಚ್ಚತ್ತನು. ಅವನು ಜೀವಂತನಾದನೆಂಬುದನ್ನು ಪುರಜನರೆಲ್ಲರೂ ನೋಡಿ ಹರುಷಿತರಾಗಿ ಅವನನ್ನು ಮನೆಗೆ ಕಳಿಸಿಕೊಟ್ಟರು.

ಆಮೇಲೆ ಕೆಲವು ದಿನಗಳು ಹೋಗಲು ರೇವಣಸಿದ್ಧೇಶ್ವರನು ಹಾವಿನಹಾಳ ಗ್ರಾಮಕ್ಕೆ ಬರುವವನಾದನು. ಆಗ ಕಲ್ಲಯ್ಯನು ಅವನನ್ನು ಕಂಡು ಅವನ ಪಾದದಲ್ಲಿ ಬಿದ್ದು—ಎಲೇ ಗುರುವೇ ನೀನು ನನಗೆ ಕರುಣಿಸು ಎಂದು ಹೇಳಲು, ರೇವಣಸಿದ್ಧನು ತನ್ನ ಮುಂದೆ ನಿಂತಿದ್ದ ತನ್ನ ಮಗನಾದ ರುದ್ರಮುನಿಗೆ—ನೀನು ಈ ಕಲ್ಲಯ್ಯನಿಗೆ ದೀಕ್ಷೆಯನ್ನು ಕೊಡು, ಎಂದು ಹೇಳಲು ರುದ್ರಮುನಿಯು ಅವನಿಗೆ ತಾನು ಗುರುವಾಗಿ ಶ್ರೇಷ್ಠತರವಾದ ಶಿವಜ್ಞಾನವನ್ನು ಬೋಧಿಸಿ ದೀಕ್ಷೆಯನ್ನು ಮಾಡುವವನಾದನು.

ಅಂದಿನಿಂದ ಕಲ್ಲಯ್ಯನು ಶಿವಾನುಭವ ಶಾಸ್ತ್ರವನ್ನು ಅಭ್ಯಸಿಸುವವನಾದನು. ಪರಮಾತ್ಮನ ಕೇವಲ ಭಕ್ತನಾಗಿ ಶಿವಾನುಭವದಲ್ಲಿರಹತ್ತಿದನು. ಯಾವಾಗಲೂ ಪರಶರಣರೊಡನೆ ಇರುವನು. ಪುರಾತನರ ವಚನಗಳನ್ನು ಹಾಡುವನು. ಆಗ ದೇಶದಲ್ಲಿದ್ದ ಲೋಕಾಯುತರನ್ನೂ, ಬೌದ್ಧರನ್ನೂ, ವಿಪ್ರರನ್ನೂ, ಚಾರ್ವಾಕರನ್ನೂ ಶಾಸ್ತ್ರಮುಖದಿಂದ ಸೋಲಿಸಿ, ಲೋಕದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದನು.

ಹೀಗಿರುವಲ್ಲಿ ಅವನು ಒಂದು ದಿವಸ ಕಲ್ಲಿನಾಥನನ್ನು ಪೂಜಿಸುತ್ತಿರಲು ಒಂದು ಸರ್ಪವು ಅವನ ಹಿಂಬದಿಗೆ ಬಂದು ಅವನನ್ನು ಕಚ್ಚಿತು. ಆದರೆ ಅದರ ವಿಷವು ಅವನಿಗೆ ಏನೂ ಬಾಧೆಮಾಡಲಿಲ್ಲ, ಇಷ್ಟೇ ಅಲ್ಲ, ಆ ಸರ್ಪವೇ ಅವನ ಹಿಂದೆ ಸತ್ತು ಬಿದ್ದಿತು. ಕಲ್ಲಯ್ಯನಿಗೆ ಅದು ಗೊತ್ತಾಗಲು ಅವನು ಮನಸ್ಸು ನೊಂದವನಾಗಿ—ಎಲೋ ದೇವನೇ, ನಾನು ಎಷ್ಟು ನಿಷ್ಠುರನು! ನಾನು ವಿಷಕ್ಕೆ ವಿಷವಾಗಿ ನಿಂದೆನೇ? ಈ ಹಾವು ನನ್ನಿಂದ ಸತ್ತಿತೇ? ಎಂದು ಶೋಕಿಸುತ್ತ, ಈ ಹಾವು ಬದುಕಲಿ ಎಂದೆನ್ನಲು ಅದಕ್ಕೆ ಕೂಡಲೆ ಜೀವವು ಬಂದಿತು ಮತ್ತು ಅದು ಅತ್ತಿತ್ತ ಹರಿದಾಡಹತ್ತಿತು. ಆಗ ನೆರೆದ ಜನರು ಕಲ್ಲಯ್ಯನ ಮೇಲಿನ ಪರಮಾತ್ಮನ ಕೃಪೆಯು ಎಷ್ಟು ಘನತರವಾದದ್ದು, ಎಂದು ಕೌತುಕಬಡುತ್ತ ಪರಮಾತ್ಮನನ್ನು ಸ್ತುತಿಸುವವರಾದರು. ಹೀಗೆ ಕಲ್ಲಯ್ಯನು ಹಾವಿನಹಾಳದಲ್ಲಿ ಅತ್ಯಂತ ಭಕ್ತಿಯಿಂದ ಕಾಲಕಳೆಯುತ್ತ ಬಂದನು.

ಹೀಗಿರುವಲ್ಲಿ ಸೊನ್ನಲಿಗೆ ಎಂದರೆ ಈಗಿನ ಸೋಲ್ಲಾಪುರದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ ಅತ್ಯಂತ ಪ್ರಸಿದ್ಧ ದೇವಾಲಯವಿದ್ದು

ಅಲ್ಲಿದ್ದ ಮಲ್ಲಿಕಾರ್ಜುನನ ಪ್ರಕಾಶದಂತೆಯೇ ಉನ್ನತವಾದ ಪ್ರಕಾಶವನ್ನು ಸಿದ್ಧರಾಮನೆಂಬ ಶಿವಯೋಗಿಯು ತಾಳಿದವನಾಗಿ ಲೋಕದಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದನು. ಆಗ ಕಲ್ಲಿನಾಥನು ಅವನ ಸ್ನೇಹವನ್ನು ಸಂಪಾದಿಸಬೇಕೆಂದು ಬಯಸಿ ಸೊನ್ನಲಾಪುರಕ್ಕೆ ಬಂದು ಅಲ್ಲಿಯೇ ಶಿವಾನುಭವದಲ್ಲಿ ಹಲವು ದಿನ ಕಾಲಕಳೆಯುವವನಾದನು. ಹೀಗಿರುವಲ್ಲಿ ಅಲ್ಲಿ ಒಬ್ಬ ಭಕ್ತೆಯು ಶಿವನಲ್ಲಿ ಅತ್ಯಂತ ಭಕ್ತಿಭಾವವುಳ್ಳವಳಾಗಿ ಪುರಾತನರ ಸ್ತುತಿಗಳನ್ನು ಮಾಡುತ್ತಾ ಅವುಗಳಲ್ಲಿ ತಲ್ಲೀನಳಾಗಿರುವದನ್ನು ಕಲ್ಲಯ್ಯನು ದಿನಾಲು ನೋಡುತ್ತಿದ್ದನು. ಆಗ ಅವನು ಅವಳಲ್ಲಿ ಅನುರಾಗವನ್ನು ಹೊಂದಿ ಅವಳನ್ನು ಲಗ್ನವಾದನು. ಮುಂದೆ ಅವಳು ಗರ್ಭಿಣಿಯಾಗಿ ಒಬ್ಬ ಹೆಣ್ಣು ಮಗುವನ್ನು ಹೆತ್ತಳು. ಅದಳಿಗೆ ಕಲ್ಲಿನಾಥನ ಹೆಸರನ್ನೇ ಅಂದರೆ 'ಕಲ್ಲವ್ವೆ' ಎಂಬ ಹೆಸರಿಟ್ಟು ನಾಮಕರಣ ಮಾಡಿದನು. ಕಲ್ಲವ್ವೆಯು ತನ್ನ ತಂದೆಯಂತೆಯೇ ಶಿವಭಕ್ತಿಯಲ್ಲಿ ಬೆಳೆಯುವವಳಾದಳು.

ಕಲ್ಲಯ್ಯನು ಮಹಾಶಿವಜ್ಞಾನಿಯು. ಅವನು ತನ್ನ ಶಿವಾನುಭವವನ್ನು ವಚನಗಳ ಮೂಲಕ ಬೋಧಿಸಹತ್ತಿದನು. ಅವನ ವಚನಗಳಲ್ಲಿ ೬೦ ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ವಚನವಾಙ್ಮಯದಲ್ಲಿ ಅವನ ವಚನಗಳಿಗೆ ಉಚ್ಚಸ್ಥಾನವಿದೆ. ಅವು ಅತ್ಯಂತ ಮನೋಹರವೂ ಉಚ್ಚವಿಚಾರವುಳ್ಳವೂ ಇರುತ್ತವೆ. ಯಾವ ವಚನ ಸಂಗ್ರಹಕಾರನೂ ಕೂಡ ಅವುಗಳನ್ನು ತನ್ನ ಗ್ರಂಥದಲ್ಲಿ ಉದಹರಿಸದೆ ಬಿಟ್ಟಿಲ್ಲ. ಹಾಗೆಯೇ ಕಲ್ಲಯ್ಯನು ಬೋಧಕನೂ ಆಗಿದ್ದಾನೆ. ಅವನ ಹೆಸರಿನ ಸ್ಥಾನಗಳು ಕಲಬುರ್ಗಿ ಜಿಲ್ಲೆಯಲ್ಲಿ ಸುರಪುರದ ದಕ್ಷಿಣಕ್ಕೆ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿಗೆ ಸಮೀಪವಿದ್ದು ಅವುಗಳಲ್ಲಿ ಅವನ ಪ್ರಸಿದ್ಧಿಯು ಇದೆ. ಇದರಿಂದ ಅವನು ಶಿವಾನುಭವವನ್ನು ಬೋಧಿಸುತ್ತ ದೇಶದಲ್ಲಿ ಸಂಚಾರ ಮಾಡಿದ್ದು ಕಂಡುಬರುತ್ತಿದೆ. ಮಹಾಪುರುಷರು ಹಲವು ದಿನ ವಾಸವಾಗಿದ್ದ ಗ್ರಾಮಗಳಿಗೆ ಅವರ ಮೂಲ ಗ್ರಾಮಗಳ ಹೆಸರುಗಳನ್ನು ಇಟ್ಟಿದ್ದು ಅನೇಕ ಕಡೆಗೆ ಕಂಡುಬರುತ್ತದೆ. ಆದ್ದರಿಂದ ಈ ಎರಡು ಗ್ರಾಮಗಳಿಗೂ 'ಹಾವಿನಹಾಳ' ಎಂಬ ಹೆಸರುಗಳು ಬಂದಿರಬಹುದು.

ಹೀಗೆ ಹಾವಿನಹಾಳ ಕಲ್ಲಯ್ಯನು ತನ್ನ ಗ್ರಾಮದಲ್ಲಿರುತ್ತಿರಲು ಒಂದು ದಿನ ಅವನ ಮಗಳು ಅವನ ಲಿಂಗಾರ್ಚನೆಗೆಂದು ಹೊಳೆ ಯಿಂದ ನೀರು ತರುತ್ತಿರಲು ದಾರಿಯಲ್ಲಿ ಸೋಮಯಾಜಿ ಎಂಬ ಬ್ರಾಹ್ಮಣನು ಅವಳನ್ನು ಅಕಸ್ಮಾತ್ತಾಗಿ ಮುಟ್ಟಲು ಆ ಬಾಲಿಕೆಯು ಭವಿಯು ಮುಟ್ಟಿದ ಉದಕವನ್ನು ತರಬಹುದೇ ಎಂದು ಹರಿವೆಯನ್ನು ಅಲ್ಲಿಯೇ ಒಡೆದುಬಿಟ್ಟಳು. ಆಗ ಆ ಬ್ರಾಹ್ಮಣನು ಕೋಪದಿಂದ ಅವಳು ಹೀಗೆ ಮಾಡಿದ್ದನ್ನು ಉಳಿದ ಬ್ರಾಹ್ಮಣರಿಗೆ ತಿಳಿಸಲು ಅವರೆಲ್ಲರು ನೆರೆದು ಕಲ್ಲಯ್ಯನ ಕಡೆಗೆ ಬಂದು— ನಿನ್ನ ಮಗಳನ್ನು ಸೋಮಯಾಜಿ ಗಳು ಮುಟ್ಟಿದ ಕೂಡಲೆ ಅವಳು ಹರಿವೆಯನ್ನು ಒಡೆದುಬಿಟ್ಟಳು. ಬ್ರಾಹ್ಮಣರನ್ನು ಮುಟ್ಟಿದರೆ ದೋಷವುಂಟೇ? ಅಷ್ಟಾದಶವರ್ಣಗಳಲ್ಲಿ ಬ್ರಾಹ್ಮಣರು ಶ್ರೇಷ್ಠರು. ಇಂಥವರನ್ನು ನೀವು ಮುಟ್ಟಲಾರದೇ? ಎಂದು ಕೇಳಿದರು.

ಕಲ್ಲಯ್ಯನು ಅವರ ಜಾತ್ಯಂಧತೆಯನ್ನು ತಿಳಿದವನಾಗಿ— ನನ್ನ ಮಗಳು ಮಾಡಿದ್ದು ಯೋಗ್ಯವು. ಶಿವನ ಭಕ್ತರ ಮನೆಯಲ್ಲಿದ್ದ ನಾಯಿ ಸಹ ಬ್ರಾಹ್ಮಣರನ್ನು ಮುಟ್ಟುವದಿಲ್ಲ. ಅಂದಬಳಿಕ ಪರಮಾತ್ಮನ ಭಕ್ತರು ನಿಮ್ಮಂಥವರನ್ನು ಎಂದಾದರೂ ಮುಟ್ಟಬಹುದೇ? ಎಂದೆ ನ್ನಲು ಬ್ರಾಹ್ಮಣರು— ನಾವು ನಾಯಿಗಿಂತ ಕಡೆಯಾದೆವೇ? ನಾವು ವೇದಗಳನ್ನು ಚನ್ನಾಗಿ ಪಠಿಸಬಲ್ಲವರು. ನೀನು ನಿನ್ನ ನಾಯಿಯಿಂದ ಆ ವೇದಗಳನ್ನು ಓದಿಸಿದರೆ ಮಾತ್ರ ನಾವು ಕಡಿಮೆ ಎಂದು ಒಪ್ಪು ತ್ತೇವೆ ಎಂದು ಹೇಳಿದರು.

ಆಗ ಕಲ್ಲಯ್ಯನು—ಹಾಗೆಯೇ ಆಗಲಿ. ನಾಯಿಯಿಂದಲೇ ವೇದ ವನ್ನು ಓದಿಸುವೆನು ಎಂದಂದು ತನ್ನ ಮನೆಯಲ್ಲಿ 'ಗಂಭೀರನಾದ' ಎಂಬ ಹೆಸರಿನ ಕಪ್ಪುಬಣ್ಣದ ನಾಯೊಂದಿತ್ತು, ಅದನ್ನು ಅವನು ಕರೆ ಯಲು ಅದು ಇದಿರಿಗೆ ಬಂದುನಿಂತಿತು. ಆಗ ಕಲ್ಲಯ್ಯನು ತನ್ನ ಮನದಲ್ಲಿ ಧ್ಯಾನಿಸುತ್ತ ಆ ನಾಯಿಗೆ—ಲಿಂಗೋಚ್ಛಿಷ್ಟವನ್ನು ದಿನಾಲು ನೀನು ಭುಂಜಿ ಸುತ್ತಿರುವಿ. ಗಂಭೀರನಾದನೇ, ವೇದವನ್ನು ಉಚ್ಚರಿಸಲು ಸಿದ್ಧನಾಗು ಎಂದು ಅದಕ್ಕೆ ಆಜ್ಞಾಪಿಸಿ ಆ ಬ್ರಾಹ್ಮಣರಿಗೆ— ನೀವು ಯಾವ ವೇದದ ಭಾಗವನ್ನು ಈ ನಾಯಿಯು ಓದಬೇಕೆಂದು ಅಪೇಕ್ಷಿಸುತ್ತೀರಿ ಎಂದು ಕೇಳಲು ಅವರು—ಯಜುರ್ವೇದವೆನಲು, ಆ ನಾಯಿಯು ತನ್ನ ಹೃದಯ

ಕಮಲದಲ್ಲಿ ಲಿಂಗಮೂರ್ತಿಯನ್ನು ನೆಲೆಗೊಳಿಸಿ ಆದಿಶಕ್ತಿಯನ್ನು ಪ್ರಸ್ಥಾಪಿಸಿ, ನಾಸಾಗ್ರದಲ್ಲಿ ಶಶಿ ರವಿಗಳನ್ನು ವೇಧಿಸುತ್ತ ಅಕ್ಷರತ್ರಯದ ಮೂಲಕ ಬಿಂದುನಾದ ಕಳೆಗಳನ್ನು ಸಮಗೊಳಿಸಿ ಉದಾತ್ತಾನುದಾತ್ತಗಳಿಂದ ಕೂಡಿಕೊಂಡು ಸುಸ್ವರದಿಂದ ವೇದ ಭಾಗವನ್ನು ನುಡಿಯಹತ್ತಿತು. ಅದನ್ನು ಕೇಳಿ ಎಲ್ಲರೂ ಅಚ್ಚರಿಗೊಂಡರು. ನೆರೆದ ವಿಪ್ರರು ಕಲ್ಲಯ್ಯನನ್ನು ಸ್ತೋತ್ರ ಮಾಡಿ ಅವನಿಗೆ ಸಾಷ್ಟಾಂಗವೆರಗಿದರು. ಆಗ ಕಲ್ಲಯ್ಯನು ಅವರನ್ನು ಕ್ಷಮಿಸಿ ಮನೆಗೆ ಕಳಿಸಿ ತನ್ನ ನಿತ್ಯದ ಲಿಂಗಾರ್ಚನೆಯನ್ನು ಮುಗಿಸಿದನು.

ಕಲ್ಲಯ್ಯನು ಶ್ರೀ ಸಿದ್ಧರಾಮನ ಭೆಟ್ಟಿಗೆಂದು ಆಗಿಂದಾಗ್ಗೆ ಸೊಲ್ಲಾಪುರಕ್ಕೆ ಹೋಗುತ್ತಿದ್ದನು. ಹಾವಿನಹಾಳು ಸೊಲ್ಲಾಪುರದಿಂದ ೧೮ ಮೈಲು ಮಾತ್ರ ದೂರವಿದೆ. ಸಿದ್ಧರಾಮನ ಸನ್ನಿಧಿಯಲ್ಲಿ ಅವನೂ ಕೇದಾರ ಗುರುಗಳೂ ಯಾವಾಗಲೂ ಶಿವಗೋಷ್ಠಿಯಲ್ಲಿ ಕಾಲಕಳೆಯುವರು. ಹೀಗಿರಲು ಕಲ್ಲಯ್ಯನಿಗೆ ಅವಸಾನ ಕಾಲವು ಪ್ರಾಪ್ತವಾಯಿತು. ಆಗ ಅವನು ಸೊನ್ನಲಿಗೆಯಲ್ಲಿಯೇ ಸಮಾಧಿಸ್ಥನಾದನು. ಅವನ ಸಮಾಧಿಯು ಸಿದ್ಧರಾಮೇಶ್ವರ ದೇವಾಲಯದ ಪ್ರಾಕಾರದಲ್ಲಿ ಈಗಲೂ ಕಾಣಬರುತ್ತಿದೆ. ಈ ಪ್ರಕಾರ ಹಾವಿನಹಾಳ ಕಲ್ಲಯ್ಯನು ಶಿವಾನುಭವಿಯಾಗಿ ವೀರಶೈವ ಧರ್ಮದ ವಿಶಾಲ ತತ್ವಗಳನ್ನು ವಚನಗಳ ಮೂಲಕ ಜನರಲ್ಲಿ ಬೋಧಿಸುತ್ತ ವೀರಶೈವ ಶರಣರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದಾನೆ. ಅವನು ಸಂಸ್ಕೃತ ಬಲ್ಲವನೂ, ವೇದಶಾಸ್ತ್ರಾಗಮಗಳನ್ನು ಚನ್ನಾಗಿ ತಿಳಿದವನೂ ಆಗಿದ್ದನೆಂಬುದಕ್ಕೆ ಅವನ ವಚನಗಳೇ ಸಾಕ್ಷಿಯಾಗಿವೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಆದ್ದರಿಂದ ಅವನು ವೀರಶೈವರಿಗೆ ಅತ್ಯಂತ ಪೂಜ್ಯನಾಗಿದ್ದಾನೆ.

ಹಾವಿನಹಾಳ ಗ್ರಾಮದಲ್ಲಿ ಕಲ್ಲಿನಾಥನ ದೇವಾಲಯವು ಈಗಲೂ ಇದೆ. ಈ ಗ್ರಾಮದ ಪಕ್ಕದಲ್ಲಿ ಬೋರೀ ಹಳ್ಳವೆಂಬ ದೊಡ್ಡ ಹಳ್ಳವು ಹರಿಯುತ್ತಿದೆ. ಅದರ ದಂಡೆಗೆ ಸಮೀಪವಾಗಿಯೇ ಈ ಗುಡಿಯು ಇದೆ. ಪ್ರತಿ ವರ್ಷ ಈ ದೇವಾಲಯದ ಜಾತ್ರೆಯಾಗುತ್ತದೆ. ಆ ಕಾಲದಲ್ಲಿ ಜನರು ಕಲ್ಲಯ್ಯನ ಮಹಿಮೆಯನ್ನು ವರ್ಣಿಸುವ ಅವನ ಚರಿತ್ರೆಯನ್ನು ಕೇಳುವ ಸಾಂಪ್ರದಾಯವಿದೆ. ಈ ಗ್ರಾಮವಿದ್ದ ಪ್ರದೇಶದಲ್ಲಿಯೇ ರೇವ

ಣಸಿದ್ಧ, ರುದ್ರಮುನಿಗಳು ಒಂದು ಕಾಲದಲ್ಲಿ ವಾಸವಾಡಿಕೊಂಡಿದ್ದ ಮಂಗಳವಾಡ, ಸಿದ್ಧನಕೆರೆ, ಮಸನೂರು ಈ ಸ್ಥಳಗಳು ೧೫ ರಿಂದ ೧೮ ಮೈಲು ದೂರವಿವೆ.

ಹಾವಿನಹಾಳ ಕಲ್ಲಯ್ಯನ ಚರಿತ್ರೆಯಲ್ಲಿ ಬಸವೇಶ್ವರನ ಸಂಬಂಧವು ಬರುವದಿಲ್ಲ. ಅವನು ಕಲ್ಯಾಣಕ್ಕೆ ಹೋದದ್ದರ ಉಲ್ಲೇಖವು ಯಾವ ಗ್ರಂಥದಲ್ಲಿಯೂ ಇರುವದಿಲ್ಲ. ಆದ್ದರಿಂದ ಅವನು ಬಸವೇಶ್ವರನಕಿಂತಲೂ ಸ್ವಲ್ಪ ಹಿಂದಿನವನಾಗಿರಬೇಕು. (ಬಿಜ್ಜಳನು ಮಂಗಳವಾಡದಲ್ಲಿ ಮೊದಲು ಮಂಡಲಾಧೀಶ್ವರನಾಗಿ ರಾಜ್ಯವಾಳಿದನು.) ಆಗ ರೇವಣಸಿದ್ಧೇಶ್ವನು ಅಲ್ಲಿಗೆ ಬಂದು ತನ್ನ ಮಹಾತ್ಮ್ಯವನ್ನು ಪ್ರಕಟಮಾಡಿದ್ದಾನೆ. ಇದೇ ಕಾಲಕ್ಕೆಯೇ ಹಾವಿನಹಾಳ ಕಲ್ಲಯ್ಯನೂ ಪ್ರಸಿದ್ಧಿಗೆ ಬಂದಿರಬಹುದು ಮುಂದೆ ಬಿಜ್ಜಳನು ಕಲ್ಯಾಣದ ಚಾಲುಕ್ಯರ ರಾಜ್ಯವನ್ನು ಆಕ್ರಮಿಸಿ ಚಕ್ರಾಧಿಪತಿಯಾದನು. ಆದರೆ ಆ ವರೆಗೆ ರೇವಣಸಿದ್ಧ ಮತ್ತು ಹಾವಿನಹಾಳ ಕಲ್ಲಯ್ಯಗಳು ಜೀವಿಸಿದ ಹಾಗೆ ತೋರುವದಿಲ್ಲ. ಆದರೆ ರುದ್ರಮುನಿಯು ಮಾತ್ರ ಕಲ್ಯಾಣದಲ್ಲಿದ್ದದ್ದರ ಉಲ್ಲೇಖಗಳಿರುತ್ತವೆ. ಆದ್ದರಿಂದ ಬಸವ ಮತ್ತು ರುದ್ರಮುನಿ ಇವರಕಿಂತಲೂ ಸ್ವಲ್ಪ ಮೊದಲು ಹಾವಿನಹಾಳ ಕಲ್ಲಯ್ಯನು ಪ್ರಸಿದ್ಧಿಗೆ ಬಂದು ಶಿವಾನುಭವದ ಕಾರ್ಯಗಳನ್ನು ಮಾಡಿ, ನೊನ್ನಲಿಗೆಯಲ್ಲಿ ಅವಸಾನವನ್ನು ಹೊಂದಿರಬೇಕೆಂದು ತೋರುತ್ತದೆ.

---

## ಜಂಬೂರು ಮಹಾಕಾಳಯ್ಯ.

ವರ್ಣಾಶ್ರಮ ಧರ್ಮಗಳು ವೇದಾಧಿಕಾರವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಾತ್ರವಿದ್ದು ಬೇರೆ ಯಾವ ಸಮಾಜದವರಿಗೂ ಇಲ್ಲೆಂದು ಭಾವಿಸಿದ್ದಾರೆ. ಆದ್ದರಿಂದ ಅವರು ವೇದಗಳನ್ನು ಗುಪ್ತವಾಗಿಟ್ಟುಕೊಂಡು ಅವುಗಳ ಅಭ್ಯಾಸವನ್ನೂ ಪಠನವನ್ನೂ ಇತರರಿಗೆ ಹೇಳುವದಿಲ್ಲ. ಈ ಪ್ರಕಾರ ಅವರು ಹಿಂದೂಸಮಾಜದಲ್ಲಿ ಶ್ರೇಷ್ಠವರ್ಣದವರೆಂದೂ ಕೀಳುವರ್ಣದವರೆಂದೂ ಎರಡು ವಿಭಾಗಗಳನ್ನು ಕಲ್ಪಿಸಿದ್ದಾರೆ. ಅವರು ಬ್ರಾಹ್ಮಣ ಸ್ತ್ರೀಯು ಸಹ ಶೂದ್ರಳೆಂದು ಭಾವಿಸಿ ಅವಳಿಗೂ ವೇದಾ

ಧಿಕಾರವನ್ನು ಕೊಟ್ಟಿರುವದಿಲ್ಲ. ಆದರೆ ಹಿಂದೂ ಸಮಾಜದಲ್ಲಿ ಕೆಲವು ಧರ್ಮಗಳಿದ್ದು ಅವು ಈ ತತ್ವವನ್ನು ನಿರಾಕರಿಸಿ ಎಲ್ಲರಿಗೂ ಸಮಾನಾಧಿಕಾರವನ್ನು ಕೊಟ್ಟಿರುತ್ತವೆ. ಇಂಥ ಧರ್ಮಗಳಲ್ಲಿ ವೀರಶೈವ ಧರ್ಮವು ಒಂದಾಗಿರುತ್ತದೆ. ಆದ್ದರಿಂದ ಅದರಲ್ಲಿ ಆಗಿಹೋಗಿರುವ ಶಿವಶರಣರು ವೇದಗಳ ಬಗ್ಗೆ ಇಂಥ ಅಕುಂಚಿತ ವೃತ್ತಿಯನ್ನು ತಾಳಿರುವದಿಲ್ಲ. ಇದಕ್ಕೆ ಉದಾಹರಣೆಯಾಗಿ ಹಾವಿನಹಾಳ ಕಲ್ಲಯ್ಯನು ನಾಯಿಯಿಂದ ವೇದವನ್ನು ಓದಿಸಿದ್ದು ಇರುತ್ತದೆ. ಇದನ್ನು ಹಿಂದಿನ ಚರಿತ್ರೆಯಲ್ಲಿ ಹೇಳಿದೆ. ಅವನಂತೆಯೇ ಜಂಬೂರು ಮಹಾಕಾಳಯ್ಯನೆಂಬ ಇನ್ನೊಬ್ಬ ಶರಣನು ಆಚರಿಸಿದ್ದಾನೆ.

ಮಲೆಯ ದೇಶದಲ್ಲಿ ಹಿರಿಯಜಂಬೂರು ಎಂಬ ಹೆಸರಿನ ಗ್ರಾಮವಿದೆ. ಈ ಗ್ರಾಮವು ಈಗ ಶಿವಮೊಗ್ಗೆ ಜಿಲ್ಲೆಯಲ್ಲಿರುವ ಶಿರಾಳಕೊಪ್ಪಕ್ಕೆ ಪೂರ್ವದಿಕ್ಕಿನಲ್ಲಿ ನಾಲ್ಕು ಮೈಲು ದೂರವಿದೆ. ಇದಕ್ಕೆ ಸಮೀಪವಾಗಿಯೇ ಬಳ್ಳಿಗಾವಿ, ಅನಿಮಿಷಾರ್ಯಕ್ಷೇತ್ರ, ಉಡುಗಣಿ (ಉಡುತಡಿ) ಇವೇ ಮೊದಲಾದ ಶಿವಶರಣರ ಸ್ಥಾನಗಳಿವೆ. ಈ ಜಂಬೂರು ಗ್ರಾಮದಲ್ಲಿ ಮಹಾಕಾಳಯ್ಯನೆಂಬ ಒಬ್ಬ ಶ್ರೇಷ್ಠ ಶಿವಭಕ್ತನು ವಾಸಮಾಡಿಕೊಂಡಿದ್ದನು. ಅವನು ಶಿವಾನುಭವಿಯಾಗಿ ಅತ್ಯಂತ ಭಕ್ತಿಭಾವದಿಂದ ಲಿಂಗಾರ್ಚನೆಯನ್ನು ಮಾಡುತ್ತ ಲಿಂಗಾನುಸಂಧಾನಿಯಾಗಿ ಆಚರಿಸುತ್ತಲಿದ್ದನು. ಅವನ ಆಚರಣೆಯ ಮೂಲಕ ಅವನ ಪ್ರಾಣವು ಅವನ ಆಧೀನದಲ್ಲಿಯೇ ಉಳಿದು ಅವನು ತನ್ನ ಶಿರವನ್ನು ಲಿಂಗಕ್ಕೆ ಅರ್ಪಿಸಿದರೂ ಕೂಡ ಅದನ್ನು ಪುನಃ ಪಡೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿದನು. ಇದರಿಂದ ಅವನು ಶ್ರೇಷ್ಠ ಶಿವಭಕ್ತನು, ಮಹಿಮನು ಎಂದು ಖ್ಯಾತಿಯನ್ನು ಜನರಲ್ಲಿ ಪಡೆದವನಾದನು.

ಹೀಗಿರುವಲ್ಲಿ ಮಹಾಕಾಳಯ್ಯನಿದ್ದ ಗ್ರಾಮವು ಬ್ರಾಹ್ಮಣರ ಮಹತ್ವದ ಒಂದು ಅಗ್ರಹಾರವಾಗಿತ್ತು. ಅಲ್ಲಿ ಒಂದು ದಿನ ಬ್ರಾಹ್ಮಣರು ವೇದಪಠನವನ್ನು ಮಾಡುತ್ತ ಇದ್ದರು. ಆಗ ಮಹಾಕಾಳಯ್ಯನು ಅಲ್ಲಿಗೆ ಬರುವದನ್ನು ಬ್ರಾಹ್ಮಣರು ಕಂಡು ಅವನಿಗೆ–ಇಲ್ಲಿ ವೇದಪಠನವು ನಡಿದಿದೆ. ಇತ್ತ ಕಡೆಗೆ ನೀನು ಬರಬೇಡ ಎಂದೆನಲು ಅವನು ಅದೇಕೆಂದು ಕೇಳಲು ಅವರು––ಇಲ್ಲಿ ಹೋಮುಪನಿಕ್ಕಿದ್ದೇವೆ. ವೇದವನೋದುವದನ್ನು ಶಿವಭಕ್ತರು ಕೇಳಲಾಗದು. ಅದಕ್ಕೆ ಮಹಾಕಾಳಯ್ಯನು––ವೇದಜ್ಞನು

ಶಿವದೀಕ್ಷೆ ಹೀನವಾದರೆ ಅವನು ಚಾಂಡಾಲನು, ಶೂದ್ರನು. ಶ್ವಪಚನಾದ ಶಿವಭಕ್ತನೇ ಸದ್ಬ್ರಾಹ್ಮಣನು, ಕುಲಜನು ಎಂದೆನಲು ಆ ವೇದಾಢ್ಯರು—ವೇದವನ್ನು ಹೆತ್ತಾತ ಬ್ರಹ್ಮ. ವೇದದಿಂದ ಬಿಟ್ಟು ದೈವವಿಲ್ಲ. ವೇದವೇ ಶಿವ, ಹರಿ, ಎಂದು ಹೇಳಿರುವದಾಗಿ ವೇದ ಬಲ್ಲಾತನೇ ಕುಲದಲ್ಲಿ ಅಧಿಕನು. ವೇದಾರ್ಥ ಪಾಠವಿಲ್ಲದಾತನು ಶಿವಭಕ್ತನಾದರೂ ಕುಲಹೀನನು ಎಂದು ನುಡಿದರು. ಆಗ ಮಹಾಕಾಳಯ್ಯನು—ವೇದವನ್ನು ಕಲಿತ ವಿಪ್ರನಾದರೂ ಅವನಿಗೆ ಶಿವಭಕ್ತಿ ಇಲ್ಲದಿದ್ದರೆ ಅವನು ಹೊಲೆಯನೆಂದು ವೇದವಾಕ್ಯ ಉಂಟು. ವೇದವಧಿಕವಾದರೆ ಅದು ಶಿವನ ಪಾದದಲ್ಲಿ ಧ್ವನಿಯಾಗಿಯಾದರೂ ಇರಬಲ್ಲುದೇ, ಎಂದೆನಲು ವಿಪ್ರರು—ವೇದವನ್ನು ಶ್ವಾನನಗಿಂತಲೂ ಕೀಳೆಂದನಬಹುದೇ? ಶಿವಭಕ್ತರು ವೇದಗಳಿಗಿಂತಲೂ ಅಧಿಕರೆಂದು ಸಿದ್ಧಪಡಿಸಲು ಶ್ವಾನನಿಂದ ವೇದ ಭಾಗವನ್ನು ನುಡಿಸು ಎಂದೆನಲು, ಅದಕ್ಕೆ ಅವನು ಒಪ್ಪಿ, ಎಲ್ಲರೂ ನೋಡುವಂತೆ ಮಹಾಕಾಳಯ್ಯನು ಹೊಲೆಗೇರಿಯಿಂದ ಒಂದು ಶ್ವಾನನನ್ನು ಕರೆತಂದು ಅದಕ್ಕೆ—ವೇದಕ್ಕಿಂತಲೂ ಭಕ್ತನು ಘನವೆಂಬುದನ್ನು ಓದು ಎಂದೆನಲು ಅದು—ಚತುಃಶ್ರುತಿಯುನೆತ್ತಿ—ಶಿವಭಕ್ತಿಯುಳ್ಳ ಅನಾಮಿಕನು ಅಧಿಕನು. ವೇದಪಾಠಕನಾದರೂ ಭಕ್ತಿ ಹೀನ ದ್ವಿಜನು ಹೊಲೆಯನು ಎಂಬ ಶ್ರುತಿಯ ಭಾಗವನ್ನು ಓದಿ ಹೇಳಲು, ವಿಪ್ರರು ನಾಚಿ ಮಹಾಕಾಳಯ್ಯನಿಗೆ ಎರಗಿ, ಶ್ವಾನನಿಗೆ ತಲೆವಾಗಿ ವಂದಿಸಿ ಹೋದರು.

ಹೀಗೆ ಮಹಾಕಾಳಯ್ಯನು ಶಿವಸಮಯಕ್ಕೆ ಗೆಲವನ್ನು ತಂದು ಶಿವಲಿಂಗಾರ್ಚನೆಯನ್ನು ಮಾಡುತ್ತ, ಭಕ್ತಿಯಿಂದ ನಡೆಯುತ್ತ ಲಿಂಗಾಂಗ ಸಮರಸ್ಯಪದವನ್ನು ಹೊಂದಿದನು.

ಜಂಬೂರು ಗ್ರಾಮದಲ್ಲಿ ಈಗಲೂ ಕಾಳಯ್ಯನ ವಿಗ್ರಹವಿದೆ. ಅದರ ಬದಿಯಲ್ಲಿ ವೇದವನ್ನು ಹೇಳುವಂತಿರುವ ಕಲ್ಲಿನ ನಾಯಿವಿಗ್ರಹವೂ ಕೂಡ ಉಂಟು.



# ವೀರಮ್ಮ.

ವಚನಕಾರರಾದ ಶಿವಶರಣರ ಪತ್ನಿಯರಲ್ಲನೇಕರು ತಮ್ಮ ಗಂಡಂದಿರಂತೆ ಜ್ಞಾನಿಗಳಾಗಿ ವಚನಗಳನ್ನು ರಚಿಸಿದ್ದು ಕಂಡುಬರುತ್ತದೆ. ವೀರಶೈವರಲ್ಲಿ ಸ್ತ್ರೀಪುರುಷ ಭೇದವಿಲ್ಲ. ಸ್ತ್ರೀಯರು ಪುರುಷರಂತೆಯೇ ಶಿವಾನುಭವವನ್ನು ಹೊಂದಿ ಲಿಂಗಾಂಗ ಸಾಮರಸ್ಯವನ್ನು ಹೊಂದಲು ಅಧಿಕೃತರಾಗಿದ್ದಾರೆ. ಶಿವಾನುಭವವನ್ನು ಬಲ್ಲ ವೀರಶೈವ ಸ್ತ್ರೀಯರಲ್ಲಿ ವೀರಮ್ಮನೂ ಒಬ್ಬಳಿದ್ದಾಳೆ. ಅವಳು ನಾವು ಹಿಂದೆ ವಿವರಿಸಿದ ದಸರಯ್ಯನ ಪತ್ನಿಯು. ಅವಳು ವಚನಕಾರಳು. ಅವಳ ವಚನಗಳಲ್ಲಿ ನಮಗೆ ಮೂರು ವಚನಗಳು ಮಾತ್ರ ದೊರೆತಿರುತ್ತವೆ. ಅವುಗಳಲ್ಲಿ ಅವಳು ಪಾದೋದಕ ಪ್ರಸಾದದ ವಿವರಗಳನ್ನು ಸವಿಸ್ತಾರವಾಗಿ ವಿವರಿಸಿದ್ದಾಳೆ. ಅವುಗಳನ್ನು ನಾವು ಇಲ್ಲಿ ಸಮಗ್ರವಾಗಿ ಕೊಟ್ಟಿದ್ದೇವೆ.

## ವಚನಗಳು.

(೧) ಗುರುಮುಖದಿಂದ ಬಂದುದೇ ಗುರುಪ್ರಸಾದ. ಆ ಪ್ರಸಾದವನು ಲಿಂಗಕ್ಕೆ ಅರ್ಪಿಸಿದಲ್ಲಿ ಲಿಂಗಪ್ರಸಾದ. ಭೋಜ್ಯ ಕಟ್ಟಿ ಲಿಂಗಕ್ಕೆ ಕೊಟ್ಟು ಸಲಿಸುವುದೇ ಜಂಗಮಪ್ರಸಾದ. ತತ್ ಪ್ರಸಾದಿಗಳಲ್ಲಿ ಯಾಚಿಸಿ ಅವರ ಪ್ರಸಾದವ ಕೊಂಬುದೇ ಪ್ರಸಾದಿಯ ಪ್ರಸಾದ. ಅಪೇಕ್ಷೆಯಿಂದ ಸಲಿಸುವುದೇ ಆಪ್ಯಾಯನ ಪ್ರಸಾದ. ಗುರು ಲಿಂಗ ಜಂಗಮವ ಕಂಡು ಆ ಸಮಯದಲ್ಲಿ ತೆಗೆದುಕೊಂಬುದೇ ಸಮಯ ಪ್ರಸಾದ. ಪಂಚೇಂದ್ರಿಯಗಳಲ್ಲಿ ಬರಲ್ಪಟ್ಟ ಪಂಚವಿಷಯ ಪದಾರ್ಥಂಗಳನು ಪಂಚವಿಧಲಿಂಗಕ್ಕೆ ಸಮರ್ಪಣ ಮಾಡುವುದೇ ಪಂಚೇಂದ್ರಿಯವಿರಹಿತಪ್ರಸಾದ. ಮನವೇ ಲಿಂಗ, ಬುದ್ಧಿಯೇ ಶಿವಜ್ಞಾನ, ಚಿತ್ತವೇ ಶಿವದಾಸೋಹ, ಅಹಂಕಾರದಲ್ಲಿ ಶಿವಚಿಂತನೆಯುಳ್ಳವನಾಗಿ ಸಲಿಸಿದ್ದೇ ಅಂತಃಕರಣವಿರಹಿತ ಪ್ರಸಾದ. ತ್ರಿವಿಧಾಂಗದಲ್ಲಿ ತ್ರಿವಿಧಲಿಂಗವ ಸಂಬಂಧಿಸಿ ಆ ಚಿಜ್ಞಾನಲಿಂಗ ತಾನೆಂದರಿದು ಆ ತ್ರಿವಿಧಲಿಂಗಕ್ಕೆ ಕೊಡುವುದೇ ಸದ್ಭಾವ ಪ್ರಸಾದ. ಬಹಿರಂಗದ ಪ್ರಪಂಚವ ನಷ್ಟಮಾಡಿ ಅರಿವುವಿಡಿದು ಸಲಿಸುವುದೇ ಸಮತೆಪ್ರಸಾದ. ಶ್ರೀಗುರುವಿನ ಪ್ರಸನ್ನತ್ವವೇ ಜ್ಞಾನಪ್ರಸಾದ. ಇಂತೀ ಏಕಾದಶ ಪ್ರಸಾದವನು ಒಳಹೊರಗೆ ಪರಿಪೂರ್ಣವಾಗಿ ತಿಳಿಯುವುದೇ ಶಿವತಂತ್ರ ಗುರುಶಾಂತೇಶ್ವರಾ.

(೨) .. ಪಾದದಲ್ಲಿ ಪಾದೋದಕ. ಆ ಪಾದತೀರ್ಥವನು ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ. ಮಜ್ಜನಕ್ಕೆರೆವಲ್ಲಿ ಮಜ್ಜನೋದಕ. ಜಿಹ್ವೆಯಲ್ಲಿ ಪಂಚಾಂಗುಲದಿ ಸ್ವೀಕರಿಸಿದ್ದೇ ಸ್ಪರ್ಶನೋದಕ. ಎಚ್ಚರಿಕೆ ಸಾವಧಾನದಿಂದ ಸೇವಿಸಿದ್ದೇ ಅವಧಾನೋದಕ. ಸಲಿಸಿ ಸಂತೋಷವಾದರೆ ಆಪ್ಯಾಯನೋದಕ. ಹಸ್ತದೊಳಗಿರ್ದ ತೀರ್ಥವನು ಸಲಿಸಿದ್ದೇ ಹಸ್ತೋದಕ. ಆ ಬಟ್ಟಲಲ್ಲಿದ್ದ ತೀರ್ಥವನು ಮೂರು ಸಲ ಸ್ವೀಕರಿಸಿದ್ದೇ ಪರಿಣಾಮೋದಕ. ಆ ಪಾದೋದಕವನು ಅಂತಿಂತೆಂದು ಹೆಸರಿಡಲಿಲ್ಲವಾಗಿ ನಿರ್ನಾಮೋದಕ. ಬ್ರಹ್ಮರಂಧ್ರದಲ್ಲಿರ್ದ ಚಿದಮೃತವೆಂದು ಭಾವಿಸುವುದೇ ಸತ್ಯೋದಕ. ಇಂತೀ ದಶವಿಧಪಾದೋದಕವನು ಎನ್ನಂತರಂಗದಲ್ಲಿ ತಿಳಿದು ನಾನು ಸದ್ಯೋನ್ಮುಕ್ತನಾದೆನಯ್ಯ ಗುರುಶಾಂತೇಶ್ವರಾ.

(೩) ಚರಣಾಯುಧ ವೇಳೆಯನರಿವುದಯ್ಯ. ಭಕ್ತ ವ್ರತಹೀನನರಿದು ನೆರೆಯನಯ್ಯ. ನೆರೆದರೆ ನರಕ ಗುರುಶಾಂತೇಶ್ವರಾ.

---

## ನಾವದಿಗೆಯ ಗುಡ್ಡವ್ವ.

ಬಸವೇಶ್ವರನ ಕಾಲದಲ್ಲಿ ಶಿವಾನುಭವದ ತತ್ವಗಳು ಜನತೆಯಲ್ಲಿ ಪ್ರಸಾರ ಹೊಂದುತ್ತ ಹೋದ ಹಾಗೆ ಅಂತ್ಯಜ ಮೊದಲ್ಗೊಂಡು ಎಲ್ಲ ಪಂಗಡಗಳ ಜನರಲ್ಲಿ ಶಿವಭಕ್ತಿಯು ಹೆಚ್ಚುತ್ತ ಹೋಯಿತು. ಈ ಭಕ್ತಿಯು ಹೆಚ್ಚಿದ ಹಾಗೆ ಅವರಲ್ಲಿ ಉಚ್ಚ ನೀಚ ಭಾವಗಳು ಅಳಿದು ಹೋಗ ಹತ್ತಿದವು. ಈ ಉದಾರ ವೃತ್ತಿಯು ಸ್ತ್ರೀಯರಲ್ಲಿಯೂ ಕೂಡ ಉಂಟಾಗ ಹತ್ತಿತು. ಇದರಿಂದ ಆಗಿನ ಕಾಲದಲ್ಲಿ ಒಂದು ಮಹತ್ತರವಾದ ಸಮಾಜ ಕ್ರಾಂತಿಯು ತಲೆದೋರಿತು. ಈ ಸಂಗತಿಯು ಹೊಲೆಯಳಾದ ನಾವದಿಗೆಯ ಗುಡ್ಡವ್ವೆಯ ಚರಿತ್ರೆಯಿಂದ ತಿಳಿದು ಬರುತ್ತದೆ.

ವಿಜಾಪುರಜಿಲ್ಲೆಯ ಮುದ್ದೇಬಿಹಾಳ ತಾಲೂಕಿನಲ್ಲಿ ತಾಳೀಕೋಟೆಯಿಂದ ಈಶಾನ್ಯ ದಿಕ್ಕಿಗೆ ೭ ಮೈಲುಗಳ ಮೇಲೆ ಕಾರಗನೂರು, ಕೋಡಗನೂರು, ನಾವದಿಗೆ ಎಂಬ ಗ್ರಾಮಗಳಿವೆ. ಇಲ್ಲಿ ಪುರಾತನ ಕಾಲದ ಅವಶೇಷಗಳು ಇನ್ನೂ ಇರುತ್ತವೆ. ಇವುಗಳಲ್ಲಿ ನಾವದಿಗೆ ಎಂಬ ಗ್ರಾಮವು ಪುರಾತನ ಕಾಲದಲ್ಲಿ ಬ್ರಾಹ್ಮಣರ ಒಂದು ಮಹತ್ವದ ಅಗ್ರಹಾರವಾ

ಗಿತ್ತು. ಅಂದರೆ ಅಲ್ಲಿ ಬ್ರಾಹ್ಮಣ ಪಂಡಿತರೂ ಜ್ಞಾನಿಗಳೂ ಬಹು ಸಂಖ್ಯಾಕರಾಗಿ ವಾಸಿಸುವ ಸ್ಥಳವಾಗಿತ್ತು. ಇಲ್ಲಿ ಗುಡ್ಡವ್ವೆ ಎಂಬ ಹೆಸರಿನ ಹೊಲೆಯಳು ವಾಸಿಸುತ್ತಿದ್ದಳು. ಅವಳು ಕೇವಲ ಶಿವಭಕ್ತೆಯು. ಸೌರಾಷ್ಟ್ರ ಸೋಮೇಶ್ವರನಲ್ಲಿ ಅತ್ಯಂತ ಭಕ್ತಿಯುಳ್ಳವಳು. ಅವಳಲ್ಲಿದ್ದ ಭಕ್ತಿಯ ಮೂಲಕ ಗ್ರಾಮದಲ್ಲಿಯ ಜನರು ಅವಳನ್ನು ಬಹಳ ಆದರಿಸುತ್ತಿದ್ದರು. ಹೀಗಿರಲು ಅವಳಿಗೆ ತೊನ್ನು ಬೇನೆಯು ಬಂದು ಅದು ದಿನ ದಿನಕ್ಕೆ ಅವಳಲ್ಲಿ ಹೆಚ್ಚುತ್ತಲೇ ಹೋಯಿತು.

ಹೀಗಿರಲು ಅವಳು ಒಂದು ದಿನ ಬ್ರಾಹ್ಮಣ ಕೇರಿಯಲ್ಲಿ ಹೋಗುತ್ತಿರುವಾಗ ಅಲ್ಲಿಯ ಬ್ರಾಹ್ಮಣರು ಅವಳಿಗೆ--ನೀನು ಹೊಲತಿಯು, ಮೈ ಕೆಟ್ಟವಳು. ದ್ವಿಜರಿರುವ ಈ ಅಗ್ರಹಾರದಲ್ಲಿ ನಿನ್ನಂಥ ನೀಚಕುಲದವರು ಬರಕೂಡದು, ಎಂದು ಅವಳನ್ನು ತಡೆದು ನಿಂದಿಸಿ ಕೇರಿಯಿಂದ ಹೊರಗೆ ಹಾಕಿಸಿದರು. ಆಗ ಅವಳು ಮನಸ್ಸಿನಲ್ಲಿ ಬಹಳ ನೊಂದುಕೊಂಡು--ನಾನು ಇಲ್ಲಿಗೆ ಸೌರಾಷ್ಟ್ರ ಸೋಮೇಶ್ವರನನ್ನು ಬರಮಾಡಿಕೊಂಡು ನಾನು ಬ್ರಾಹ್ಮಣರ ಗರ್ವವನ್ನು ಮುರಿಯುವೆನೆಂದು ಪ್ರತಿಜ್ಞೆಯನ್ನು ಮಾಡಿ, ಸೌರಾಷ್ಟ್ರ ಎಂದರೆ ಈಗಿನ ಗುಜರಾಥ ದೇಶಕ್ಕೆ ಹೊರಟಳು. ಅವಳು ಸೋಮೇಶ್ವರನನ್ನು ಧ್ಯಾನಿಸುತ್ತ ದಾರಿನಡೆಯುತ್ತ ಹೋಗುವವಳಾದಳು. ಅವಳು ಮಾರ್ಗದಲ್ಲಿ ಅನೇಕ ಕಷ್ಟಗಳನ್ನು ಸಹಿಸಿದಳು. ಚಳಿ ಗಾಳಿ ಬಿಸಿಲೆನ್ನದೆ ಮಾರ್ಗಕ್ರಮಣ ಮಾಡಹತ್ತಿದಳು. ಆಗ ಸೌರಾಷ್ಟ್ರ ಸೋಮೇಶ್ವರನು ಅವಳ ಭಕ್ತಿಗೆ ಮೆಚ್ಚಿ ಅವಳು ಅತ್ಯಂತ ಆಯಾಸ ಬಟ್ಟು ಬಳಲಿ ಭೂಮಿಯಲ್ಲಿ ಒರಗಿರಲು ಆಗ ಅವನು ಅವಳಿಗೆ ಪ್ರತ್ಯಕ್ಷನಾಗಿ-- ಮಗಳೇ, ನೀನೇಕೆ ಹೀಗೆ ಬಳಲಿ ಬಂದೆ? ನಾನೇ ನಿನ್ನಲ್ಲಿಗೆ ಬರುತ್ತಿದ್ದೆ. ನೀನು ಹಿಂದಿರುಗು. ನಾನೇ ನಿನ್ನ ಗ್ರಾಮಕ್ಕೆ ಬರುವೆನು ಎಂದು ನುಡಿದು, ಆಕೆಯ ಮೈದಡವಿ ಅವಳ ಬಳಲಿಕೆಯನ್ನು ಹೋಗಲಾಡಿಸಿ ಅಂತರ್ಧಾನವಾದನು. ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆ. ನಿಶ್ಚಲ ಭಕ್ತಿಯಿಂದ ನೆನೆದಲ್ಲಿಯೇ ಅವನು ತೋರುತ್ತಾನೆಂಬುದನ್ನು ಇಲ್ಲಿ ಕಾಣಬಹುದಾಗಿದೆ. ಆಗ ಗುಡ್ಡವ್ವೆಯು ಪರಮಾತ್ಮನ ಆಜ್ಞೆಯ ಪ್ರಕಾರ ಹಿಂದಿರುಗಿ ನಾವದಿಗೆಗೆ ಮರಳಿ ಬಂದಳು. ಅವಳು ಅಲ್ಲಿಗೆ ಬರುವಷ್ಟರಲ್ಲಿಯೇ ಶಿವನು ಆ ಗ್ರಾಮದಲ್ಲಿಯ ಶಿವಾಲಯದಲ್ಲಿ ಸೌರಾಷ್ಟ್ರ ಸೋಮೇಶ್ವರನ ರೂಪದಲ್ಲಿ

ಸ್ಥಾಸ್ಥ್ಯವಾಗಿರುವದನ್ನು ಕಂಡಳು. ಇಷ್ಟೇ ಅಲ್ಲ, ಅವಳ ತೊನ್ನು ಬೇನೆಯೂ ಕೂಡ ಹೊರಟು ಹೋಗಿ, ಅವಳು ದಿವ್ಯದೇಹಿಯಾಗಿದ್ದಳು. ಅವಳ ತೊನ್ನು ಗ್ರಾಮದಲ್ಲಿ ಅವಳನ್ನು ಮೊದಲು ನಿಂದಿಸಿ ಪೀಡಿಸಿದ ವರಿಗೆ ಉತ್ಪನ್ನವಾಗಿತ್ತು. ಅದರಿಂದ ಅವರು ಅತ್ಯಂತ ಸಂಕಟದಿಂದ ಬಳಲಹತ್ತಿದ್ದರು. ಆಗ ಅವರು ತಾವು ಒಬ್ಬ ಶಿವಭಕ್ತೆಗೆ ನಿಂದಿಸಿದ್ದರ ಮೂಲಕ ತಮಗೆ ಹೀಗಾಯಿತೆಂದು ತಿಳಿದು ಅವರು ಗುಡ್ಡವ್ವೆಗೆ ಶರಣು ಹೊಕ್ಕು ಸಾಷ್ಟಾಂಗವೆರಗಲು ಅವರ ಕುಷ್ಠರೋಗವು ಪರಿಹಾರ ವಾಯಿತು. ಇದು ಗುಡ್ಡವ್ವೆಯು ಶಿವಾನುಭವದ ಮಹತ್ವವು ಎಂದು ಗ್ರಾಮದಲ್ಲಿಯವರು ತಿಳಿದು ಅಂದಿನಿಂದ ಅವರು ಅವಳನ್ನು ಅತ್ಯಂತ ವಾಗಿ ಆದರಿಸುವವರಾದರು. ಅವಳು ಅದೇ ಗ್ರಾಮದಲ್ಲಿ ವಾಸಿಸುತ್ತ, ಅಲ್ಲಿಯ ಸೋಮೇಶ್ವರಲಿಂಗದಲ್ಲಿಯೇ ಬಯಲಾದಳು. ಬಸವೇಶ್ವರನ ಕಾಲದಲ್ಲಿ ಅಂತ್ಯಜ ಮೊದಲ್ಗೊಂಡು ಬ್ರಾಹ್ಮಣ ವರ್ಣದವರ ವರೆಗೂ ಎಲ್ಲರಲ್ಲಿ ಶಿವಾನುಭವದ ಉದಾರ ತತ್ವಗಳು ಹೇಗೆ ಪ್ರಸಾರವಾಗುತ್ತ ನಡೆದಿದ್ದವೆಂಬುದನ್ನು ಗುಡ್ಡವ್ವೆಯ ಚರಿತ್ರೆಯಿಂದ ತಿಳಿದು ಬರುತ್ತದೆ.

ಒಂದು ಕಾಲದಲ್ಲಿ ಗುಜರಾಥ ದೇಶಕ್ಕೂ ಕರ್ನಾಟಕಕ್ಕೂ ಬಹಳ ಸಂಬಂಧವಿತ್ತು. ಆದ್ದರಿಂದ ಅನೇಕ ಶಿವಶರಣರು ಸೋಮನಾಥನ ಭಕ್ತರಾಗಿ ಅಲ್ಲಿಗೆ ಅವರು ಆಗಿಂದಾಗ್ಗೆ ಪ್ರವಾಸ ಮಾಡುತ್ತಿದ್ದುದು ಕಂಡು ಬರುತ್ತದೆ. ಇದು ಆದಯ್ಯ, ಸೊಡ್ಡಳ ಬಾಚರಸ, ಮುಂತಾದ ಶಿವ ಶರಣರ ಚರಿತ್ರೆಗಳಿಂದ ತಿಳಿದು ಬರುತ್ತಿದೆ. ಇದರಿಂದ ಕರ್ನಾಟಕ ದಲ್ಲಿ ಅನೇಕ ಕಡೆಗೆ ಸೌರಾಷ್ಟ್ರ ಸೋಮನಾಥನ ಹೆಸರಿನಿಂದ ಅನೇಕ ಸೋಮನಾಥನ ದೇವಾಲಯುಗಳು ಉಂಟಾಗಿವೆ.

---

## ಅಮುಗಿದೇವ.

ಸೊನ್ನಲಿಗೆಯಲ್ಲಿ ಅಮುಗಿದೇವನೆಂಬ ಶಿವಶರಣನು[೧] ಕುರುಹಿನ ಶೆಟ್ಟಿಯ ಪಂಗಡದವನಾಗಿ ನೇಗಿಯ ಕಾಯಕವನ್ನು ಮಾಡುತ್ತ ಶಿವಾ ನುಭವಿ ಎಂದು ಹೆಸರಾಗಿದ್ದನು. ಸೊನ್ನಲಿಗೆಯು ಈಗಿನ ಸೊಲ್ಲಾ ಪುರ ಪಟ್ಟಣವಾಗಿದೆ. ಅಮುಗಿದೇವನ ಹೆಂಡತಿಯ ಹೆಸರು ವರದಾನಿ

---

(೧) ಮೂಲ ಬಸವಪುರಾಣ. ( ಲಿಂಗಸುಗೂರಿನಲ್ಲಿ ನಮಗೆ ದೊರೆತ ಹಸ್ತಲಿಖಿತ ಗ್ರಂಥ. )

ಯಮ್ಮನು. ಉಭಯತರು ವೀರಶೈವಾಚಾರನಿರತರೂ ಇಷ್ಟಲಿಂಗದಲ್ಲಿ ಪೂರ್ಣ ಭಕ್ತಿಯುಳ್ಳವರೂ' ಆಗಿ ಇಷ್ಟಲಿಂಗಧಾರಕರನಲ್ಲದೆ ಇತರರನ್ನು ಅವರು ಸೇವಿಸರು. ಅಮುಗಿದೇವನ ಇಷ್ಟದೇವತೆಯು ಸಿದ್ಧಸೋಮ ನಾಥಲಿಂಗವು. ಈ ಲಿಂಗದ ದೇವಾಲಯವು ಭೀಮಾತೀರದಲ್ಲಿರುವ ಈಗಿನ ಪುಳೂಜ ಗ್ರಾಮವಾಗಿತ್ತು. ಇದು ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧ ದೇವಾಲಯವು. ಈ ಪುಳುಜ ಗ್ರಾಮವು ವಿಜಾಪುರ ಪಟ್ಟಣ ದಿಂದ ಉತ್ತರಕ್ಕೆ ೪೫ ಮೈಲು ಮತ್ತು ಸೊಲ್ಲಾಪುರದ ಪಶ್ಚಿಮಕ್ಕೆ ೨೮ ಮೈಲುಗಳ ಮೇಲೆ ಇದೆ.

ಹೀಗೆ ಅಮುಗಿದೇವನು ಶಿವಾನುಭವಿಯಾಗಿ ಸೊನ್ನಲಿಗೆಯಲ್ಲಿ ವಾಸಮಾಡುತ್ತಿರಲು ಅದೇ ಗ್ರಾಮದಲ್ಲಿ ಸಿದ್ಧರಾಮೇಶ್ವರನು ಕಪಿಲ ಸಿದ್ಧಮಲ್ಲಿಕಾರ್ಜುನನ ಭಕ್ತನಾಗಿ ತನ್ನ ಯೋಗಬಲದಿಂದ ಅನೇಕ ಸಿದ್ಧಿ ಗಳನ್ನು ಸಂಪಾದಿಸಿಕೊಂಡು ಅತ್ಯಂತ ಘನತೆಯನ್ನು ಹೊಂದಿದವನಾಗಿ ದ್ದನು. ಅವನು ಒಂದು ದಿವಸ ಮಲ್ಲಿಕಾರ್ಜುನನ ಪರ್ವವನ್ನು ಮಾಡ ಬೇಕೆಂದೆಣಿಸಿ ಈ ಕಾರ್ಯಕ್ಕೋಸ್ಕರ ವಿಶೇಷ ಸನ್ನಾಹಗಳನ್ನು ಸಂಗ್ರಹಿಸಿ, ಅವನು ಅವುಗಳನ್ನು, ತಾನು ಗ್ರಾಮದ ಅಧಿಪತಿಯಾದದ್ದರಿಂದ, ಗ್ರಾಮ ದಲ್ಲಿಯ ಜನರ ಕಡೆಗೆ ಸರಿಯಾಗಿ ಸಿದ್ಧಪಡಿಸಲು ತನ್ನ ಸೇವ ಕರ ಕಡೆಯಿಂದ ಹೇಳಿ ಕಳಿಸಹತ್ತಿದನು. ಅವನ ಹೇಳಿಕೆಯಂತೆ ಅವನ ಸೇವಕರು ಹತ್ತು ಕೊಳಗ ಬತ್ತವನ್ನು ಅಮುಗಿದೇವನ ನಿಳಯದ ಮುಂದೆ ಕುಟ್ಟುವದಕ್ಕೆಂದು ಬಿಟ್ಟಿಯ ಕೊಟ್ಟಣವಾಗಿ ತಂದಿಟ್ಟರು. ಆದರೆ ಅಮುಗಿದೇವನು ಅವರಿಗೆ—ಸಿದ್ಧರಾಮೇಶ್ವರನು ಇಷ್ಟಲಿಂಗಧಾರಕನಲ್ಲ. ಅವನು ಭವಿಯು. ಅವನ ಸೇವೆಯನ್ನು ನಾನು ಮಾಡುವದಿಲ್ಲ. ಈ ಬತ್ತವನ್ನು ನೀವು ಹಿಂದಿರುಗಿ ತೆಗೆದುಕೊಂಡು ಹೋಗಿರಿ, ಎಂದು ಹೇಳಲು ಅವರು ಅದನ್ನು ಕೇಳದೆ ಬಲುಮೆಯಿಂದ ಅದನ್ನು ಅವನ ಮನೆಯ ಮುಂದೆ ಸುರುವಿದರು. ಆಗ ಅಮುಗಿದೇವನು ಅವರ ಇದಿರಿನಲ್ಲಿಯೇ ಅದನ್ನೆಲ್ಲ ತಿಪ್ಪೆಗೆ ಹಾಕಿಸಿ ಬಿಟ್ಟನು.

ಆಗ ಸೇವಕರು ಅಮುಗಿದೇವನು ಹೀಗೆ ಮಾಡಿದ್ದನ್ನು ಸಿದ್ಧ ರಾಮನಿಗೆ ಹೇಳಲು ಅವನು ಅತ್ಯಂತ ಕೋಪಗೊಂಡು— ನಾನು ಸರ್ವಾಂಗಲಿಂಗಿ. ನನ್ನ ರೋಮಗಳೆಲ್ಲವೂ ಲಿಂಗಾಂಗಗಳಾಗಿವೆ. ನನ್ನಂಥ

ವನಿಗೆ ಇಷ್ಟಲಿಂಗವೆಂಬುದೊಂದು ಬೇರೊಂದು ಲಿಂಗವೇ? ನನಗೆ ಇವನು ಹೀಗೆ ನುಡಿಯಬೇಕೇ? ಎಂದೆಂದು ಸೇವಕರಿಗೆ— ನಮ್ಮ ಊರೊಳಗೆ ನೀನು ಇರಬೇಡವೆಂದು, ಅಮುಗಿದೇವನಿಗೆ ಹೇಳಿಬನ್ನಿರೆಂದು ಅವರನ್ನು ಕಳುಹಿದನು. ಅವರು ಅದೇ ಮೇರೆಗೆ ಅವನಲ್ಲಿಗೆ ಬಂದು ತಿಳುಹಿದರು. ಆಗ ಶಿವಶರಣನಾದ ಅಮುಗಿದೇವನು— ನಾನು ಇನ್ನುಮೇಲೆ ಈ ಗ್ರಾಮದಲ್ಲಿ ಇರಕೂಡದು, ಕಲ್ಯಾಣಕ್ಕೆ ಹೋಗಬೇಕೆಂದು ನಿಶ್ಚಯಿಸಿ ತನ್ನ ಮನೆಯಲ್ಲಿದ್ದ ನೇಗೆಯ ಮುಟ್ಟುಗಳನ್ನೂ ಭಾಂಡ ಭಾಜನಗಳನ್ನೂ ಗೃಹಸಾಧನೆಗಳನ್ನೂ ಕೂಡಿಸಿ ಕಟ್ಟಿದನು. ಅವು ಮೂರು ಹೊರೆಗಳಾದವು. ಅವುಗಳಲ್ಲಿ ಒಂದನ್ನು ತಾನು, ಮತ್ತೊಂದನ್ನು ತನ್ನ ಹೆಂಡತಿ, ಹೀಗೆ ಹೊತ್ತುಕೊಂಡು ಹೊರಡಲನುವಾದರು. ಆದರೆ ಮೂರನೆಯ ಹೊರೆಯು ಅಲ್ಲಿಯೇ ಉಳಿಯಿತು. ಆಗ ಅವನ ಸತಿಯು ಗಂಡನಿಗೆ— ಈ ಮೂರನೆಯದನ್ನು ಯಾರು ಹೊತ್ತುತರುವರು ಎಂದು ಕೇಳಲು, ಅಮುಗಿದೇವನು— ಶಿವನು ತಾನೇ ಹೊತ್ತುಕೊಂಡು ಬರುವನು. ಬಾರದಿದ್ದರೆ, ಅವನ ಹೊರೆ ಅವನಲ್ಲಿಯೇ ಇರಲಿ, ಎಂದು ಹೇಳಿ ಕಲ್ಯಾಣಕ್ಕೆ ಉಭಯತರು ಕಾಲುನಡಿಗೆಯಿಂದಲೇ ಹೊರಟರು. ಕಲ್ಯಾಣವು ಸೊನ್ನಲಿಗೆಯಿಂದ ಪೂರ್ವಕ್ಕೆ ಸರಳರೇಷೆಯಲ್ಲಿ ೮೦ ಮೈಲು ದೂರವಿದೆ. ಅವರು ಕಲ್ಯಾಣಕ್ಕೆ ಸಮೀಪವಿದ್ದ ಶಿವಪುರವೆಂಬ ಗ್ರಾಮಕ್ಕೆ ಬಂದು ಮುಟ್ಟಿದರು. ಆಗ ಅಲ್ಲಿ ಅವರು ಬಂದು ನೋಡುತ್ತಾರೆಯೇ, ಅಲ್ಲಿ ಅವರ ಮೂರನೆಯ ಗಂಟು ಬಂದು ಬಿದ್ದಿತ್ತು! ಇದು ಪರಮಾತ್ಮನ ಅನುಗ್ರಹವು, ಆದ್ದರಿಂದ ಕೆಲವು ದಿನ ಇಲ್ಲಿಯೇ ಇರಬೇಕೆಂದು ಬಯಸಿ ಅವರು ತಮ್ಮ ಗಂಟುಗಳನ್ನು ಅದೇ ಗ್ರಾಮದಲ್ಲಿ ಇಳಿಸಿದರು. ಮತ್ತು ಅಲ್ಲಿಯೇ ಅವರು ತಮ್ಮ ಕಾಯಕವನ್ನು ನಡಿಸುತ್ತ ದಾಸೋಹದಲ್ಲಿ ಇರಹತ್ತಿದರು.

ಹೀಗಿರಲು ಅಮುಗಿ ದೇವನು ಸೊನ್ನಲಿಗೆಯನ್ನು ಬಿಟ್ಟ ಮರುದಿನ ಸಿದ್ಧರಾಮೇಶ್ವರನು ಕಪಿಲ ಸಿದ್ಧಮಲ್ಲಿಕಾರ್ಜುನನ ಪರ್ವ ಮಾಡಬೇಕೆಂದು ದೇವರ ಎಣ್ಣೆ ಮಜ್ಜನವನ್ನು ಆರಂಭಿಸಿದನು. ಆಗ ದೇವರ ಮೂರ್ತಿಯೊಳಗಿಂದ—ನನ್ನ ತಲೆಯನ್ನು ಮುಟ್ಟಬೇಡ, ನೋವುತ್ತಿದೆ ಸಿದ್ಧರಾಮಯ್ಯ, ಎಂಬ ಶಬ್ದಗಳು ಹೊರಟವು. ಅವುಗಳನ್ನು ಸಿದ್ಧರಾಮೇಶ್ವರನು ಕೇಳಿ ಚಕಿತನಾಗಿ, ಇದಕ್ಕೆ ಕಾರಣವೇನೆಂದು ಕೇಳಲು,

ಅದಕ್ಕೆ ಕಪಿಲ ಸಿದ್ಧಮಲ್ಲಿಕಾರ್ಜುನನು––ನಾನು ಅಮುಗಿ ದೇವನ ಹೊರೆಯನ್ನು ಹೊತ್ತುಕೊಂಡು ಹೋಗುವಲ್ಲಿ ಅದರ ಭಾರವು ನನಗೆ ಬಿಟ್ಟಿದಂತಾಯಿತ್ತು. ಅವನು ಊರನ್ನು ಬಿಟ್ಟು ಹೋಗುವಾಗ ಆ ಹೊರೆಯನ್ನು ನನ್ನ ವಶಕ್ಕೆ ಕೊಟ್ಟು ಹೋದನು. ಭಕ್ತನ ಸಂಸಾರವು ನನಗೆ ಬಹಳ ಭಾರವಾಗಿ ನನ್ನ ಗೋಣು ಈಗ ನೋಯುತ್ತಿದೆ. ಈ ನೋವಿಗೆ ನೀನೇ ಕಾರಣ, ಎಂದು ಸಿದ್ಧರಾಮನಿಗೆ ಹೇಳಿದನು. ಆಗ ಸಿದ್ಧರಾಮನು–– ನಿಮ್ಮ ಶಿರದಲ್ಲಿ ಚಂದ್ರ, ಗಂಗೆ, ಮಹಾಶೇಷ ಇಂಥವರು ಇದ್ದು ಅವರು ನಿಮಗೆ ಭಾರವಾಗಲಿಲ್ಲ. ಪಿಟ್ಟವ್ವೆಗೆ ಆಳಾಗಿ ನೀವು ಅವಳಿಗಾಗಿ ಕಟ್ಟಿಗೆ ಮಣ್ಣು ಹೊತ್ತಿರಿ, ಅದರಿಂದಲೂ ನಿಮಗೆ ನೋವಾಗಲಿಲ್ಲ. ಆದರೆ ಈಗ ನೋವಾಯಿತೇ? ಎಂದು ಮರುಗಿ, ಅಮುಗಿದೇವಯ್ಯನು ಮಹಾ ಶಿವಶರಣನು, ಅವನಿಗೆ ನಾನು ಅಪರಾಧವನ್ನು ಮಾಡಿದೆನು ಎಂಬ ಅರಿವು ಅವನಲ್ಲಿ ಉಂಟಾಗಿ ಅವನು–– ನನ್ನಿಂದ ಬಹಳ ತಪ್ಪಾಯಿತು. ಅಮುಗಿದೇವನನ್ನು ಕರೆತರುವೆ ಎಂದು ಅವನಿದ್ದಲ್ಲಿಗೆ ಹೊರಟನು. ಅಮುಗಿದೇವನು ಇನ್ನೂ ಶಿವಪುರದಲ್ಲಿದ್ದನು. ಸಿದ್ಧರಾಮೇಶ್ವನು ಅವನನ್ನು ಅಲ್ಲಿ ಕಂಡು––ನನ್ನಿಂದ ತಪ್ಪಾಯಿತು. ಸೊನ್ನಲಿಗೆಗೆ ಬರಬೇಕೆಂದು ಕೇಳಿಕೊಂಡನು. ಆದರೆ ಅಮುಗಿದೇವನು–– ನೀನು ಲಿಂಗಿಯಲ್ಲ. ಆದ್ದರಿಂದ ನಾನು ಹಿಂದಕ್ಕೆ ನಿನ್ನ ಊರಿಗೆ ಬರುವವನಲ್ಲ ಎಂದು ನುಡಿದನು. ಆಗ ಸಿದ್ಧರಾಮನು ತಿರುಗಿ ಸೊನ್ನಲಾಪುರಕ್ಕೆ ಬಂದು ಕಪಿಲ ಸಿದ್ಧಮಲ್ಲಿಕಾರ್ಜುನನಲ್ಲಿ ಅಮುಗಿದೇವಯ್ಯನು ನುಡಿದದ್ದನ್ನು ನಿವೇದಿಸಿಕೊಂಡನು. ಆಗ ಕಪಿಲ ಸಿದ್ಧಮಲ್ಲಿಕಾರ್ಜುನನು ಜಂಗಮ ರೂಪತಾಳಿ ಸಿದ್ಧರಾಮನಿಗೆ ಲಿಂಗಧಾರಣೆಯನ್ನು ಮಾಡಿದನು. ಆ ಮೇಲೆ ಸಿದ್ಧರಾಮನು ಅಮುಗಿದೇವನನ್ನು ಕರೆತರಲಿಕ್ಕೆ ಹೋದನು. ಅಮುಗಿದೇವನು ಸಿದ್ಧರಾಮನನ್ನು ಕಂಡು ಅವನನ್ನು ಅತ್ಯಂತ ಪ್ರೀತಿಯಿಂದ ಸತ್ಕರಿಸಿದನು. ಆಮೇಲೆ ಅವನಿಗೆ––ಸಿದ್ಧರಾಮನೇ ನಾನು ನಿನಗೆ ಪ್ರೀತನಾದೆನು. ಆದರೆ ನಾನು ಕಲ್ಯಾಣಕ್ಕೆ ಹೋಗುವೆನು. ಅಲ್ಲಿ ಬಸವಾದಿ ಪ್ರಮಥರಿದ್ದಾರೆ. ಅವರ ಶಿವಾನುಭವ ಗೋಷ್ಠಿಯಲ್ಲಿರುವೆನು. ನನ್ನಂತೆಯೇ ನೀನೂ ಕಾಲ ಕಾಲಕ್ಕೆ ಅಲ್ಲಿಗೆ ಬಂದು ಶಿವಾನುಭವದ ತಿಳಿವನ್ನು ಹೊಂದು. ಇಷ್ಟಲಿಂಗಾರ್ಚನೆಯಲ್ಲಿ ತ್ರಿಲಿಂಗಗಳ ರೀತಿಯನ್ನು ಬಸವಾದಿ ಪ್ರಮಥರಿಂದರಿ ಎಂದು ಹೇಳಿ ಅವನನ್ನು ಸಂತವಿಸಿ ಸೊನ್ನಲಿಗೆಗೆ ತಿರುಗಿ ಕಳಿಸಿದನು.

ಆನೇಲೆ ಅಮುಗಿದೇವನು ಶಿವಪುರವನ್ನು ಬಿಟ್ಟು ಕಲ್ಯಾಣಕ್ಕೆ ಬಂದು ಅಲ್ಲಿ ತನ್ನ ನೆಯ್ಗೆಯ ಕಾಯಕವನ್ನು ಮಾಡುತ್ತ ತನ್ನ ದಾಸೋಹ ಕಾರ್ಯದಲ್ಲಿರಹತ್ತಿದನು. ಅವನು ಶಿವಶರಣರಲ್ಲಿ ಅತ್ಯಂತ ಜ್ಞಾನಿಯು. ಅವನು ಬಸವೇಶ್ವರನ ಶಿವಾನುಭವಮಂಟಪದಲ್ಲಿದ್ದು ಕೊಂಡು ಶಿವಾನುಭವ ಗೋಷ್ಠಿಯಲ್ಲಿ ಕಾಲಕಳೆಯಹತ್ತಿದನು. ಶಿವಾನುಭವ ಮಂಟಪದ ಚರ್ಚೆಗಳಲ್ಲಿ ಅವನ ಹೆಸರಿಲ್ಲದಂಥ ಯಾವ ಚರ್ಚೆಯೂ ಶಿವಾನುಭವವಾದ ವಿವಾದ ಗ್ರಂಥಗಳಲ್ಲಿ ದೊರಕಲಾರದು. ಶಿವಶರಣರಲ್ಲಿ ಅವನ ಮಹತ್ವವು ಬಹಳವಿದೆ.

ಅಮುಗಿದೇವನು ಉಚ್ಚ ತರಗತಿಯ ವಚನಕಾರನಿದ್ದಾನೆ. ನಮಗೆ ದೊರೆತ ಅವನ ೧೭ ವಚನಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಮಾದಿರಿಗಾಗಿ ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಹೀಗೆ ಅವನು ವೀರಶೈವರಲ್ಲಿ ಅತ್ಯಂತ ಪೂಜ್ಯಸ್ಥಾನವನ್ನು ಹೊಂದಿದ್ದಾನೆ.

ಮುಂದೆ ಅಮುಗಿದೇವನು ಹರಳಯ್ಯ ಮಧುವಯ್ಯಗಳ ವಧೆಯ ವರೆಗೂ ಅಂದರೆ ಕ್ರಿ॥ ಶ. ೧೧೬೮ ರ ವರೆಗೆ ಕಲ್ಯಾಣ ಪಟ್ಟಣದಲ್ಲಿ ಕಾಲಕಳೆದನು.

ಹರಳಯ್ಯ ಮಧುವಯ್ಯಗಳು ಬಿಜ್ಜಳನಿಂದ ವಧಿಸಲ್ಪಟ್ಟಿದ್ದರಿಂದ ಕಲ್ಯಾಣದಲ್ಲಿ ಒಂದು ಮಹತ್ತರವಾದ ಕ್ಷೋಭವು ಉಂಟಾಯಿತು. ಅದರಿಂದ ಪಟ್ಟಣವು ಹಾಳಾಯಿತು. ಆಗ ಅಮುಗಿದೇವನು ಪಟ್ಟಣವನ್ನು ಬಿಟ್ಟು ತನ್ನ ಇಷ್ಟ ದೇವತೆಯಾದ ಸಿದ್ಧ ಸೋಮನಾಥನ ದೇವಾಲಯವಿದ್ದ ಪುಳುಜ ಗ್ರಾಮಕ್ಕೆ ಬಂದು ಅಲ್ಲಿಯೇ ಶಿವಾನುಭವದಲ್ಲಿ ಕಾಲ ಕಳೆಯಹತ್ತಿದನು.

ಈ ಪುಳುಜ ಗ್ರಾಮದಲ್ಲಿ ಅಮುಗಿದೇವನು ಸುಮಾರು ೩೦ ವರ್ಷಗಳನ್ನು ಕಳೆದಿರಬಹುದು. ಈ ಅವಧಿಯಲ್ಲಿ ಕಲಚೂರ್ಯ ಬಿಜ್ಜಳನ ವಂಶವು ೧೧೮೩ ರ ವರೆಗೆ ನಡೆದು ಅದು ನಷ್ಟವಾಯಿತು. ಆ ಮೇಲೆ ಪುನಃ ಚಾಲುಕ್ಯರ ರಾಜ್ಯವು ಸ್ಥಾಪಿತವಾಗಿ ಅದು ಆರು ವರ್ಷ ಮಾತ್ರ ನಡೆಯಿತು. ೧೧೮೭ ರಿಂದ ೧೧೯೧ ವರೆಗೆ ರಾಜ್ಯವಾಳಿದಂಥ ದೇವಗಿರಿಯ ಯಾದವರಾಜನಾದ ಭಿಲ್ಲಮನು ಕರ್ನಾಟಕವನ್ನು ಅಭಿಯೋ

ಗಿಸಿ ವಿಜಾಪುರ ಪ್ರಾಂತವನ್ನು ಕೈವಶಮಾಡಿಕೊಂಡನು. ಅವನ ತರುವಾಯ ಅವನ ಮಗನಾದ ಜೈತುಗಿಯು ೧೧೯೧ ರಿಂದ ೧೨೧೦ ರ ವರೆಗೆ ರಾಜ್ಯವಾಳಿದನು. ಅವನ ಕಾಲದಲ್ಲಿ ಅವನ ಅತ್ಯಂತ ಸಮರ್ಥನೂ ಶೂರನೂ ಆದ ಅವನ ಮಗ ಸಿಂಘಣನು ಇಡೀ ಉತ್ತರ ಕರ್ನಾಟಕ ಪ್ರಾಂತವನ್ನು ತನ್ನ ಕೈವಶಮಾಡಿಕೊಂಡನು. ಅವನು ೧೧೯೯ ರಲ್ಲಿ ವಿಜಾಪುರ ಪ್ರಾಂತದಲ್ಲಿ ಬಂದಾಗ್ಗೆ ಮುಳುಜ ಗ್ರಾಮದಲ್ಲಿ ವಾಸವಾಗಿದ್ದ ಅಮುಗಿದೇವನ ಖ್ಯಾತಿಯನ್ನು ಕೇಳಿ ಅವನನ್ನು ಕಾಣಬೇಕೆಂದು ತನ್ನ ಸೈನ್ಯದೊಂದಿಗೆ ಅವನಲ್ಲಿಗೆ ಬಂದನು. ಅವನನ್ನು ಕಂಡು ಅತ್ಯಂತ ಪ್ರೀತನಾಗಿ ಸಿದ್ಧಾರ್ಥಿಸಂವತ್ಸರದ ಮಾಘ ಶು|| ೧೧ ನೇ ದಿವಸ ದೇವತಾರ್ಚನೆಯ ಸಮಯದಲ್ಲಿ "ಶ್ರೀ ಸ್ವಯಂಭು ಸಿದ್ಧ ಸೋಮನಾಥದೇವರ್ಗೆಂದಾ ಯಿಥ್ಥಿಯುವನು ಸರ್ವನಮಸ್ಯವಾಗಿ ಅಮುಗಿದೇವರಸರ್ಗೆ ಅಕರ ಪರಿಹಾರವಾಗಿ ಧಾರಾಪೂರ್ವಕಂ ಮಾಡಿಕೊಟ್ಟರು" ಎಂದು ಅಲ್ಲಿಯ ಶಿಲಾಶಾಸನದಲ್ಲಿ ಹೇಳಿದೆ. ಹೀಗೆ ಅಮುಗಿದೇವಯ್ಯನಿಗೆ ಅರಸನು ಇಥ್ಥಿ ಗ್ರಾಮವನ್ನು ಉಂಬಳಿ ಹಾಕಿಕೊಟ್ಟನು. ಅಲ್ಲದೆ ಅವನು ದೇವಾಲಯಕ್ಕೂ ಬಹಳ ಭೂದಾನವನ್ನು ಮಾಡಿದನು. ಹಾಗೆಯೇ ಸಿಂಘಣನ ಕೈಕೆಳಗಿನ ಅಧಿಕಾರಿಗಳಾದ ಸಾಹಣಿ ಕುಮಾರ, ಸೋಯಿದೇವ, ಗಂಗಿದೇವ, ಸಂಕಮದೇವ, ಬಿಜ್ಜನಾಣ, ರವಿಯದೇವ, ಜೋಯಿದೇವ ಇವರೂ ಸಹ ದೇವಾಲಯಕ್ಕೆ ದಾನಕೊಟ್ಟರು. ಇದು ಅಲ್ಲಿದ್ದ ಶಿಲಾಶಾಸನದಿಂದಲೇ ತಿಳಿದು ಬರುತ್ತದೆ.(೧) ಈ ಶಾಸನದ ವರ್ಷ ಕ್ರಿ|| ಶ|| ೧೧೯೯ ಇರುತ್ತದೆ.

ಅಮುಗಿದೇವನಿಗೆ ಕೊಟ್ಟ ಇಥ್ಥಿ ಗ್ರಾಮವು ಮುಳುಜ ಗ್ರಾಮದ ಪಶ್ಚಿಮಕ್ಕೆ ೨ ಮೈಲುಗಳ ಮೇಲೆ ಈಗಿನ 'ಇಟಿ' ಎಂಬ ಹೆಸರಿನ ಗ್ರಾಮವಿರುತ್ತದೆ. ಈಗ ಮುಳೂಜ ಎಂಬ ಹೆಸರಿದ್ದ ಗ್ರಾಮವು ಶಿಲಾಶಾಸನದ ಸಂಸ್ಕೃತ ಭಾಗದಲ್ಲಿ 'ಮೂರ್ಗಜಾ' ಎಂತಲೂ ಕನ್ನಡ ಭಾಗದಲ್ಲಿ 'ಹೂಳಜೆ' ಎಂತಲೂ ಕರೆಯಲ್ಪಟ್ಟಿದೆ.

ಈ ಶಾಸನದಲ್ಲಿ ಅಮುಗಿದೇವನು 'ಶಿವಾಚಾರೈಕನಿರತ, ಲಿಂಗೈಕ್ಯ, ಲಿಂಗಸೇವಕ' ಎಂತಲೂ 'ಮಾಹೇಶ್ವರಗಣ ಕುಲಾನ್ವಯದಿವಾಕರ'

(೧) ಇದು ಶಿವಾನುಭವ ಪತ್ರಿಕೆ ೯—೬—೪೦೧ ಇದರಲ್ಲಿ ಪ್ರಕಟವಾಗಿದೆ.

ಎಂತಲೂ ' ಭಕ್ತಜನ ಚಿಂತಾಮಣಿ ' ಎಂತಲೂ ' ಶ್ರೀ ಸಿದ್ಧ ಸೋಮನಾಥದೇವ ಶ್ರೀಪಾದಪಂಕಜ ಭ್ರಮರ ಲಿಂಗೈಕದೇಹಿ ' ಎಂತಲೂ, ' ಶರಣ ಸಂತಾನ ' ಎಂತಲೂ ಉಲ್ಲೇಖಿಸಲ್ಪಟ್ಟಿದ್ದಾನೆ. ಈ ಪ್ರಕಾರ ಈ ಶಿಲಾಶಾಸನದಲ್ಲಿ ಅಮುಗಿದೇವನು ಸಿಂಘಣನಿಂದ ಅನೇಕ ರೀತಿಯಿಂದ ಹೊಗಳಿಸಿಕೊಂಡಿದ್ದಾನೆ. ಈ ಶಾಸನದಿಂದ ಅಮುಗಿದೇವನು ಕೇವಲ ಕಾಲ್ಪನಿಕ ಮನುಷ್ಯನಿರದೆ ಬಸವೇಶ್ವರನ ಕಾಲದಲ್ಲಿ ನಿಜವಾಗಿ ಆಗಿ ಹೋದ ಅತ್ಯಂತ ಖ್ಯಾತಿಯನ್ನು ಹೊಂದಿದ ಶಿವಶರಣನೆಂಬುದು ತಿಳಿದು ಬರುತ್ತಿದೆ.

## ವಚನಗಳು.

(೧) ಶಿವನ ನೆನೆದರೆ ಭವ ಹರಿವುದೆಂಬ ವಿವರಗೇಡಿಗಳ ಮಾತ ಕೇಳಲಾಗದು. ಅದೇನು ಕಾರಣವೆಂದರೆ, ಜ್ಯೋತಿಯ ನೆನೆದರೆ ಕತ್ತಲೆ ಹರಿವುದೇ ? ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೇ ? ರಂಭೆಯ ನೆನೆದರೆ ಕಾಮದ ಕಳವಳ ಹಿಂಗುವದೇ ? ನೆನೆದರಾಗದು. ನಿಜದಲ್ಲಿ ನಿಂದು ನಿರ್ಧರಿಸದನ್ನಕ್ಕ ಸದ್ಗುರು ಸಿದ್ಧ ಸೋಮನಾಥನೆಂಬ ಲಿಂಗವ ನೆನೆಯಬಾರದು.

(೨) ಅಲಗಿನ ಮೊನೆಯನೇರಬಹುದು. ಹುಲಿಯ ಬಿಲವ ಹೊಗಬಹುದು. ಸಿಂಗದ ಕೊರಳಿಗೆ ಹಾಯಬಹುದು. ಸಿದ್ಧ ಸೋಮನಾಥ ನಿಮ್ಮ ಮುಂದೆ ಮನ ಸಹಿತ ನಿಮಿಷ ಕುಳ್ಳಿರಲಾಗದು.

(೩) ಮಂಗಳ ಮಣ್ಣ ಬೆರಸಿದಂತೆ, ಗಾಳಿಯ ಧೂಳು ಹತ್ತದಂತೆ, ಬಿಸಿಲು ಮಳೆಯಲ್ಲಿ ನೆನೆಯದಂತೆ, ಬಯಲು ಮೂರ್ತಿಗೊಳ್ಳದಂತೆ ಸಿದ್ಧ ಸೋಮನಾಥ ನಿಮ್ಮ ಶರಣನಲ್ಲಿಯೂ ಬಳಸಿ ಬಳಸದಂತಿಪ್ಪನು.

(೪) ಇಹಪರನಲ್ಲ. ಪರಾಪರನಲ್ಲ. ಕಾಮಿಸಿ ಕಾಮಿಯಲ್ಲ. ಭಾವಿಸಿ ಭಾವಿಯಲ್ಲ. ಅನಾಯಾಸ ನಿರಂಜನನು. ಸಿದ್ಧ ಸೋಮನಾಥಲಿಂಗ ನಿಮ್ಮ ಶರಣ ಬಳಸಿಯೂ ಬಳಸುವವನಲ್ಲ.

(೫) ಹುಡಿ ಹತ್ತದ ಗಾಳಿಯಂತೆ, ಕಾಡಿಗೆ ಹತ್ತದ ಆಲಿಯಂತೆ, ನೆಯಿ ಹತ್ತದ ನಾಲಿಗೆಯಂತೆ, ಮಂಗಲ ಮಣ್ಣ ಬೆರಸದಂತೆ ಸಿದ್ಧ ಸೋಮನಾಥ ನಿಮ್ಮ ಶರಣನು ಸಕಲ ಸುಖಂಗಳ ಸುಖಿಯಿಸಿ ಬೇರಿಪ್ಪನು.

(೬) ಆಲಿಕಲ್ಲ ಕಡಿದು ಪುಥ್ಥಳಿಯ ಖಂಡಿಸುವಂತೆ, ಉಪ್ಪಿನ ಪಟ್ಟಣವನುದಕದಲ್ಲಿ ಅದ್ದುವಂತೆ, ಕರ್ಪೂರದ ಪ್ರಣಾತೆಯಲ್ಲಿ ಜ್ಯೋತಿಯು ಬೆಳಗುವಂತೆ ಸಿದ್ಧ ಸೋಮನಾಥ ಲಿಂಗಗ್ರಾಹಿಯುವಗ್ರಾಹಿಯಾಗಿ.

---

## ರಾಯಮ್ಮ.

ರಾಯಮ್ಮನು ರಾಯಸದ ಮಂಚಣ್ಣನ ಪತ್ನಿಯು. ಈ ಉಭಯತರೂ ವಚನಕಾರರಿದ್ದಾರೆ. ರಾಯಮ್ಮನು ಬಸವೇಶ್ವರನ ಸಮಯದಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳನ್ನು ಆಲಿಸುತ್ತ ಶಿವಶರಣೆ ಎಂದು ಹೆಸರಾದಳು. ಆ ಕಾಲದಲ್ಲಿ ಅನೇಕ ಶಿವಶರಣರು ಒತ್ತಟ್ಟಿಗೆ ನೆರೆದು ಧರ್ಮಚರ್ಚೆ ಮಾಡುತ್ತಿರುವಾಗ ಕೆಲವೊಬ್ಬ ಶರಣನು ಅಥವಾ ಶರಣೆಯು ಇನ್ನೊಬ್ಬ ಶಿವಶರಣನ ವಿಚಾರಗಳನ್ನು ಕೇಳಿ ಅವನಿಗೆ ಭಕ್ತಿಯನ್ನು ತಾಳಿ ಅವನಿಗೆ ಶಿಷ್ಯತ್ವವನ್ನು ವಹಿಸಿ ಅವನೇ ತನ್ನ ಗುರುವು ಅಥವಾ ಇಷ್ಟಲಿಂಗವು ಎಂದು ಭಾವಿಸಿ ಅವನ ಹೆಸರನ್ನೇ ತನ್ನ ಮುದ್ರಿಕೆಯನ್ನಾಗಿ ಇಟ್ಟುಕೊಂಡು ವಚನಗಳನ್ನು ರಚಿಸಿದ್ದು ಕಂಡು ಬರುತ್ತದೆ. ಎಡೆಮಠದ ನಾಗಿದೇವನ ಹೆಂಡತಿಯಾದ ಮಸಣ್ಣಮ್ಮನು ನಿಜಗುಣನ ಹೆಸರಿನಿಂದ ಮತ್ತು ಕಾಳವ್ವೆಯು ತನ್ನ ಗಂಡನಾದ ಉರಿಲಿಂಗ ಪೆದ್ದಿಯ ಹೆಸರಿನಿಂದ ವಚನಗಳನ್ನು ರಚಿಸಿದ್ದಾರೆ. ಹಾಗೆಯೇ ರಾಯಮ್ಮನು ಅಮುಗಿದೇವನ ಹೆಸರಿನಿಂದ ವಚನಗಳನ್ನು ರಚಿಸಿದ್ದಾಳೆ. ಅವಳ ಮೂರು ವಚನಗಳು ಮಾತ್ರ ನಮಗೆ ಉಪಲಬ್ಧವಿದ್ದು ಅವುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

(೧) ವಿಶ್ವಮಯರೂಪಾಗಿ ಬಂದೆಯಯ್ಯಾ. ಭಕ್ತಿಗೆ ಎನ್ನ ಮನಕೆ ಸಲೆಸಂದ ನಿಲವು, ಅಮುಗೇಶ್ವರ ಲಿಂಗಕ್ಕೆ ಮಾಟವಾಯಿತ್ತು.

ಟೀಪು:--- ಶಿವಶರಣನಾದ ಅಮುಗಿದೇವಯ್ಯನಿಗೆ ಉದ್ದೇಶಿಸಿಯೇ ರಾಯಮ್ಮನು ನುಡಿದ ವಚನವು ಇದಾಗಿದೆಂದು ತೋರುತ್ತದೆ. 'ಭಕ್ತಿಗೆ ಎನ್ನ ಮನಕ್ಕೆ ಸಲೆಸಂದ ನಿಲವು' ಮತ್ತು ಈ ನಿಲವು 'ಅಮುಗೇಶ್ವರ ಲಿಂಗಕ್ಕೆ ಮಾಟವಾಯಿತ್ತು' ಎಂದು ಹೇಳಿಕೊಂಡಿದ್ದರಿಂದ ಅಮುಗಿದೇವನಿಂದ ಈಕೆಯು ದೀಕ್ಷೆಯನ್ನು ಹೊಂದಿರಬೇಕೆಂದು ಊಹಿಸಬಹುದಾಗಿದೆ. ದೀಕ್ಷೆ ಎಂದರೇನು, ದೀಕ್ಷಾಕಾಲದಲ್ಲಿ ಗುರು ಮತ್ತು

ಶಿಷ್ಯ ಇವರಲ್ಲಿರತಕ್ಕ ನಿಕಟ ಸಂಬಂಧ ಇವುಗಳನ್ನು ಅತ್ಯಂತ ಭಾವ ಗರ್ಭಿತವಾಗಿ ಈ ವಚನದಲ್ಲಿ ರಾಯಮ್ಮನು ವಿವರಿಸಿದ್ದಾಳೆ.

(೨) ಜ್ಞಾನವೆಂಬುದು ಬೀದಿಯ ಪಸಾರವೇ? ಬೊಕ್ಕಣ ತುಂಬುವ ಹರುಳಿಯೋ? ಚೀಲದೊಳಗಣ ಜೀರಿಗೆಯೋ? ಗಾಣದೊಳ ಗಣ ಹಿಂಡಿಯೋ? ಜ್ಞಾನವೆಂಬುದು ಎಲ್ಲರೊಡನೆ ಬೀರದಿರಬೇಕು. ಗಲ್ಲ ಸೋಲಿನ ಮಾತ ಬಂದಡೆ ಗೆಲವ ನುಡಿಯದಿರಬೇಕು. ಹೀಗಿರಬ ಲ್ಲರೆ ಶರಣನೆಂಬೆನು, ಅಮುಗೇಶ್ವರ ಲಿಂಗವೆಂಬೆನು.

ಭಾವ:— ಭಾವವು ಸ್ಪಷ್ಟವಿದೆ. ತಿಳಿದವನ ವರ್ತನೆಯು ಹೇಗಿ ರಬೇಕೆಂಬುದನ್ನು ಬಹು ಸ್ವಾರಸ್ಯವಾಗಿ ನುಡಿದಿದ್ದಾಳೆ.

(೩) ಅಂಗಕ್ಕಾಚಾರ, ಮನಕ್ಕೆ ಜ್ಞಾನ, ಸಮರಸಾದ್ವೈತವಾದ ಮತ್ತೆ ಪುನರ್ದೀಕ್ಷೆಯುಂಟೇ? ಗರುಡಿಯಲ್ಲಿ ಕೋಲಲ್ಲದೆ ಕಾಳಗದಲ್ಲಿ ಉಂಟೇ ಕೋಲು? ಭವಿಗೆ ಮೇಲುವ್ರತ ಪುನರ್ದೀಕ್ಷೆಯಲ್ಲದೆ ಶರಣ ರಿಗುಂಟೇ? ವ್ರತತಪ್ಪಿ ಅನುಗ್ರಹವಿಡಿದ ನರಕಿಗಳಿಗೆ ಮುಕ್ತಿ ಇಲ್ಲ ಎಂದೆ ಅಮುಗೇಶ್ವರಲಿಂಗದಲ್ಲಿ.

ಟೀಪ್ಪು:— ಇಲ್ಲಿ ರಾಯಮ್ಮನು ಲಿಂಗಧಾರಿಯಾದ ಬಳಿಕ ಪುನ ರ್ದೀಕ್ಷೆ ಇಲ್ಲವೆಂತಲೂ ಭವಿಗಳಿಗೆ ಮಾತ್ರ ಪುನರ್ದೀಕ್ಷೆಯುಂಟೆಂತಲೂ ಹೇಳಿದ್ದಾಳೆ. ದೀಕ್ಷೆ ಎಂದರೆ ಗರುಡಿಯಲ್ಲಿ ಕೋಲನ್ನು ಕೊಟ್ಟು ಅವ ನಿಗೆ ಯುದ್ಧಕಾಲದಲ್ಲಿ ಶಸ್ತ್ರವನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ತಿಳಿಸಿಕೊಟ್ಟಂತೆ ಇರುತ್ತದೆ. ಆದ್ದರಿಂದ ಸರಿಯಾದ ವೀರಶೈವತ್ವದ ವರ್ತನೆಯು ಇರುವ ವರೆಗೆ ಪುನಃ ದೀಕ್ಷೆಯನ್ನು ಮಾಡುವದು ಅವ ಶ್ಯವಿಲ್ಲೆಂದು ರಾಯಮ್ಮನ ಅಭಿಪ್ರಾಯವಿದೆ.

ರಾಯಮ್ಮನ ಮುದ್ರಿಕೆಯು 'ಅಮುಗೇಶ್ವರ' ಎಂತಲೂ ಆಕೆಯ ಗಂಡನಾದ ರಾಯಸದ ಮಂಚಣ್ಣನ ಮುದ್ರಿಕೆಯು 'ಜಾಂಬೇಶ್ವರಾ' ಎಂತಲೂ ಇವೆ. ವೀರಶೈವ ಧರ್ಮದ ಪ್ರಕಾರ ಸ್ತ್ರೀಪುರುಷರು ಸ್ವತಂತ್ರರಿದ್ದಾರೆ. ಆದ್ದರಿಂದ ಗಂಡನ ಇಷ್ಟದೇವತೆಯನ್ನೇ ಅವನ ಹೆಂಡತಿಯೂ ಸ್ವೀಕರಿಸಬೇಕೆಂದು ನಿಯಮವಿಲ್ಲ. ಅವರವರ ಭಕ್ತಿಯು ಮತ್ತು ವಿಶ್ವಾಸವು ಯಾರಲ್ಲಿರುತ್ತದೋ ಅವರನ್ನೇ ಅವರು ಮನ್ನಿಸಲು ಅವರು ಸ್ವತಂತ್ರರಿದ್ದಾರೆಂಬುದು ಈ ಮುದ್ರಿಕೆಗಳಿಂದ ತಿಳಿದುಬರುತ್ತಿದೆ.

---

# ರಾಯಸದ ಮಂಚಣ್ಣ.

ರಾಯಸದ ಮಂಚಣ್ಣನು ಬಸವೇಶ್ವರನು ಎರಡನೆಯವರಿಗೆ ತಾನು ಹೇಳಿಕಳಿಸುತ್ತಿದ್ದ ಅಭಿಪ್ರಾಯಗಳನ್ನೂ ತನ್ನ ಆಲೋಚನೆಗಳನ್ನೂ ವಿಚಾರಗಳನ್ನೂ ಅವರವರಿಗೆ ತಿಳಿಸುತ್ತ ತನ್ನ ಪರವಾಗಿ ಕಾರ್ಯ ಮಾಡಲು ನಿಯಮಿಸಲ್ಪಟ್ಟ ನಿಯೋಗಿಯಾಗಿದ್ದನು. ಅವನು ವಹಿಸಿಕೊಂಡ ಈ ಕಾರ್ಯವು ಅತ್ಯಂತ ಮಹತ್ವವಾದದ್ದು. ಇವನೂ ಕೂಡ ಒಬ್ಬ ಶ್ರೇಷ್ಠ ವಚನಕಾರನೂ ಶಿವಾನುಭವಿಯೂ ಆಗಿದ್ದಾನೆ. ಬಸವೇಶ್ವರನ ಪ್ರಭಾವದಿಂದ ಅವನ ಸಮೀಪದಲ್ಲಿದ್ದವರೆಲ್ಲರೂ, ಅವರು ಪರಿಚಾರಕರಿರಲಿ ಮಡಿವಳರಿರಲಿ, ಸೇನಾಪತಿಗಳಿರಲಿ, ಯಾರಿದ್ದರೂ ಎಲ್ಲರೂ ಧರ್ಮಿಷ್ಠರಾಗಿ ಶಿವಾನುಭವದ ಕಾರ್ಯಗಳನ್ನು ಮಾಡುತ್ತಿದ್ದುದು ಕಂಡುಬರುತ್ತಿದೆ. ಹೀಗೆ ಅವನ ಸುತ್ತಲೂ ಒಂದು ಉಚ್ಚತಮ ವಾತಾವರಣವು ಉಂಟಾಗಿತ್ತೆಂದು ಊಹಿಸಬಹುದಾಗಿದೆ.

ರಾಯಸದ ಮಂಚಣ್ಣನು ಬಸವೇಶ್ವರನ ನಿಯೋಗಿಯಾಗಿದ್ದರಿಂದ ಅವನು ನುಡಿಯಲ್ಲಿ ಚಾಣಾಕ್ಷನೂ, ಮೃದುಭಾಷೆಯುಳ್ಳವನೂ ಆಕರ್ಷಕ ಶಕ್ತಿಯುಳ್ಳವನೂ ಆಗಿದ್ದನೆಂದು ಅವನ ವಚನಗಳಿಂದ ತಿಳಿದು ಬರುತ್ತದೆ. ನಮಗೆ ಅವನ ೭ ವಚನಗಳು ಮಾತ್ರ ದೊರೆತಿದ್ದು ಅವುಗಳನ್ನೆಲ್ಲ ನಾವು ಇಲ್ಲಿ ಕೊಟ್ಟಿದ್ದೇವೆ. ಅವು ಅತ್ಯಂತ ಸ್ವಾರಸ್ಯವುಳ್ಳವೂ ಅರ್ಥಪೂರ್ಣವೂ ಇರುತ್ತವೆ. ಈ ವಚನಗಳ ಅರ್ಥಮಾಡುವಲ್ಲಿ ಅವು ಅಲ್ಲಲ್ಲಿ ಅಶುದ್ಧವಾಗಿವೆಂಬವನ್ನು ವಾಚಕರು ಲಕ್ಷಿಸಬೇಕೆಂದು ನಮ್ಮ ನಮ್ರ ಸೂಚನೆ ಇದೆ.

## ವಚನಗಳು.

ಇಷ್ಟಲಿಂಗದ ಸ್ವರೂಪು—

(೧) ಉಂಬಡೆ ಬಂದು ಬಾಯ ಮರೆದನೆಂದು ಮೊರೆಯಿಡುತಿಪ್ಪ ಅರಿಕೆಹೀನನ ತೆರನಂತಾಯಿತ್ತು. ಅರಿವನರಿ ಎಂದು ಕುರುಹ ಕೊಟ್ಟಲ್ಲಿ ಈ ಕುರುಹ ಮರೆದು ಅರಿದೆನೆಂಬ ಕುರುಬನ ನೋಡಾ ಚಾಂಬೇಶ್ವರಾ.

ಇಷ್ಟಲಿಂಗದ ಧ್ಯಾನ—

(೨) ಗೊಟ್ಟಿಯನೊಡ್ಡಿ ಆಡುವಲ್ಲಿ ಗೊತ್ತ ಮೀರಿದಡೆ ಮತ್ತೆ ಆಟವ ಕೊಂಡೆನೆಂಬವರಂತೆ, ದೃಷ್ಟದಲ್ಲಿ ಕೊಟ್ಟ ಲಿಂಗವ ಮನಮುಟ್ಟಿ ಮನ ಘನದಲ್ಲಿ ಮುಚ್ಚಿ ಮನ ಆ ಘನವೇ ತಾನಾಗಿ ನೆನೆಯುಲಿಲ್ಲದ ಮತ್ತೆ ತಾನು ತಾನೇ ಜಾಂಬೇಶ್ವರಾ.

ವಿಷಯ ಲೋಲುಪತೆಯನ್ನು ದೂರ ಮಾಡುವದು—

(೩) ಕೈದು ಮೊನೆ ದೋರುವದಕ್ಕೆ ಮೊದಲೆ ಕಟ್ಟಬಲ್ಲಡೆ ಕೈದು ವೇನ ಮಾಡುವದು? ಹಾವ ಬಾಯುಬಿಡುವುದಕೆ ಮೊದಲೆ ಹಿಡಿದ ಮತ್ತೆ ವಿಷವೇನ ಮಾಡುವದು? ಮನವಿಕಾರಿಸುವುದಕ್ಕೆ ಮೊದಲೆ ಮಹದಲ್ಲಿ ನಿಂದ ಮತ್ತೆ ಇಂದ್ರಿಯಂಗಳೇನ ಮಾಡಲಾಪವು ಜಾಂಬೇಶ್ವರಾ?

ಇಷ್ಟ ಪ್ರಾಣಲಿಂಗಗಳ ಪರಸ್ಪರ ಸಂಬಂಧ—

(೪) ಬೆಂಕಿಗೆ ಉರಿ ಮೊದಲೋ, ಹೊಗೆ ಮೊದಲೋ ಎಂಬುದ ನರಿತಲ್ಲಿ ಇಷ್ಟಲಿಂಗಸಂಬಂಧಿ. ಈ ಉಭಯವನಳಿದಲ್ಲಿ ಪ್ರಾಣಲಿಂಗ ಸಂಬಂಧಿ. ಆ ಉಭಯ ನಷ್ಟವಾದಲ್ಲಿ ಏನೂ ಎನಲಿಲ್ಲ ಜಾಂಬೇಶ್ವರಾ.

ಜ್ಞಾನದ ಸ್ವರೂಪ—

(೫) ಮರಾಳಂಗೆ ಹಾಲು ನೀರನೆರೆದಲ್ಲಿ, ನೀರನುಗುಳಿ ಹಾಲು ಕೊಂಬ ಭೇದವ ನೋಡಾ. ಎಣ್ಣೆ ನೀರ ಕೂಡಿದಲ್ಲಿ ಎಣ್ಣೆ ತನ್ನಿಂದಲೆ ಬೆಳೆದು ತನ್ನ ತಪ್ಪಿಸಿಕೊಂಡು ಉರಿಯುದ ಭೇದವ ನೋಡಾ. ಹೊನ್ನು ಮಣ್ಣಿನಲ್ಲಿ ಬೆಳೆದು ತನ್ನ ತಪ್ಪಿಸಿಕೊಂಡು ಹೊನ್ನು ಬೆಲೆಯಾದ ಪರಿಯ ನೋಡಾ. ತನ್ನೊಳಗೆ ತಾನಿರ್ದು ತನ್ನನರಿಯದೆ ತೊಳಲುವ ಬಿನ್ನಾಣವ ನೋಡಾ. ಚೆನ್ನಾಗಿ ನುಡಿವ ಅಣ್ಣಗಳೆಲ್ಲರೂ ಹೆಣ್ಣು ಹೊನ್ನು ಮಣ್ಣೆಂಬ ಬಲೆಗೆ ಸಿಲ್ಕಿ ಜಗವುಳ್ಳ ಅಣ್ಣಗಳ ಬಾಗಿಲಲ್ಲಿ ನಿಂದು ಬಣ್ಣಗೆಟ್ಟ ಅಣ್ಣಗಳ ಕಂಡು ಚುನ್ನವಾಡಿ ನಗುತಿರ್ದೆ ಜಾಂಬೇಶ್ವರಾ.

(೬) ಅರವಿನ ಪ್ರಸಂಗಕ್ಕೆ ಮತ್ಸರವೇಕೆ? ಮಹಾನುಭಾವಿಗೆ ಮನ್ನಣೆ ಮಾಡರೆಂಬ ಭೀಷ್ಮತೆ ಏಕೆ? ತನ್ಮಯ ತಾನಾದ ಮತ್ತೆ ತನಗನ್ಯವಿಲ್ಲ ಎಂದೆ ಜಾಂಬೇಶ್ವರಾ.

(೭) ತೊಳೆದಡೆ ಮಡಿ. ಮಾಸಿದಡೆ ಮೈಲಿಗೆ. ಅರಿದಡೆ ತಾನು, ಮರೆದಡೆ ಜಗದೊಳಗು, ಎಂಬುದನರಿ. ಹಿಡಿದು ಬಿಟ್ಟ ಕೈ ಮೀರಿದಡೆ ಮತ್ತೆ ಮರುಗಿದಡಿಲ್ಲ ಜಾಂಬೇಶ್ವರಾ.

# ಆದಯ್ಯ.

ಈಗಿನ ಗುಜರಾಥ ದೇಶಕ್ಕೆ ಸೌರಾಷ್ಟ್ರ ಮಂಡಲವೆಂಬ ಹೆಸರಿದೆ. ಈ ಮಂಡಲದಲ್ಲಿ ಶಿವಪುರವೆಂಬ ಗ್ರಾಮವು. ಆ ಗ್ರಾಮದಲ್ಲಿ ಘೋರದತ್ತನೆಂಬ ಹೆಸರಿನ ಭಕ್ತನೂ ಅವನ ಹೆಂಡತಿ ಪುಣ್ಯವತಿ ಎಂಬವಳೂ ವಾಸವಾಗಿದ್ದರು. ಈ ನಾಡಿನಲ್ಲಿ ಸೋಮನಾಥನ ದೇವಾಲಯವಿದೆ. ಅದು ದೇಶಮಧ್ಯದಲ್ಲೆಲ್ಲ ಅತ್ಯಂತ ಪ್ರಸಿದ್ಧವಾದದ್ದು. ಉಭಯ ದಂಪತಿಗಳು ಸೋಮನಾಥನಲ್ಲಿಯೇ ಅವಿರಳ ಭಕ್ತಿಯುಳ್ಳವರಾಗಿದ್ದರು. ಘೋರದತ್ತನು ವ್ಯಾಪಾರಸ್ಥನು. ಅವನು ವ್ಯಾಪಾರ ಮಾಡುವಲ್ಲಿ ಬಲ್ಲಿದನಾಗಿ ದೇಶಾಂತರಕ್ಕೆ ಹೋಗಿ ಘನವಾದ ವ್ಯಾಪಾರ ನಡಿಸುತ್ತಿದ್ದನು. ಅವನಿಗೆ ಆದಯ್ಯನೆಂಬ ಪುತ್ರನು ಜನಿಸಿದನು.

ಆದಯ್ಯನು ದೊಡ್ಡವನಾದ ಬಳಿಕ ಅವನ ತಂದೆಯು ಅವನಿಗೆ ತನ್ನ ವ್ಯವಹಾರದ ರೀತಿಯನ್ನೂ ದೇಶಾಟನ ಮಾಡುವ ತೆರವನ್ನೂ ಸರಕುಗಳ ಮೇಲೆ ಹೇಗೆ ಗಳಿಸಬೇಕೆಂಬುದನ್ನೂ, ಲೆಕ್ಕದ ಪರಿಚಯವನ್ನೂ ಚನ್ನಾಗಿ ತಿಳುಹುವವನಾದನು. ಇದಲ್ಲದೆ ಅವನು ಆದಯ್ಯನಿಗೆ ಶಿವಮತದ ರೀತಿಯನ್ನೂ ಶಿವಲಿಂಗದ ಜ್ಞಾನದ ಬಗೆಯನ್ನೂ ಸಹ ಅರುಹಿದನು. ಆದಯ್ಯನಾದರೂ ಅತ್ಯಂತ ಭಕ್ತಿಯುಳ್ಳವನಾಗಿ ಗುರುಕರುಣವನ್ನು ಹೊಂದಿ ಅತ್ಯಂತ ಭಕ್ತಿಭಾವದಿಂದ ನಡೆಯುತ್ತಾ ಬಂದನು. ಅವನಲ್ಲಿ 'ಸೋಮಯ್ಯ' ಅಥವಾ 'ಸೋಮನಾಥನ' ವಿಷಯವಾಗಿ ಗಾಢವಾದ ಭಕ್ತಿಯು ಕ್ರಮೇಣ ಬೆಳೆಯುತ್ತ ಬಂದಿತು. ಹೀಗೆ ಆದಯ್ಯನು ಆದಿಶೆಟ್ಟಿ ಎಂಬ ಹೆಸರಿನಿಂದ ತನ್ನ ವರ್ತಕ ಮಂಡಲಿಯಲ್ಲಿ ಬಹು ಪ್ರಖ್ಯಾತನಾದನು.

ಹೀಗಿರಲು ಒಂದು ದಿನ ಅವನ ತಂದೆಯು ಅವನನ್ನು ಹತ್ತಿರ ಕರೆದು— ನೀನು ಇನ್ನುಮೇಲೆ ವ್ಯಾಪಾರಕ್ಕೋಸ್ಕರ ದೇಶಾಂತರಕ್ಕೆ ಹೋಗು, ಮೊದಲು ೧೦ ಸಾವಿರ ಹೊನ್ನುಗಳನ್ನು ತೆಗೆದುಕೊಂಡು ವ್ಯವಹಾರವನ್ನು ಮಾಡು ಎಂದು ಹೇಳಿ ಅವನಿಗೆ— ನೀನು ಪುಲಿಗೆರಿಯಣ್ಣೀಗೆರೆ ಪ್ರಾಂತದ ಕಡೆಗೆ ಹೋಗಬೇಕು. ಅಲ್ಲಿ ಅನೇಕ ಪಟ್ಟಣಗಳಿವೆ. ಅಲ್ಲಿ ಲಾಭಬರುವಂತೆ ವ್ಯವಹಾರ ಮಾಡು. ಹಾಗೆಯೇ ನೀನು ಸೋಮಯ್ಯನನ್ನು ಮರೆಯದೆ ಅವನ ಧ್ಯಾನದಲ್ಲಿರು. ಅವನನ್ನು

ಮರೆಯಬೇಡ ಎಂದು ಹಿತಬೋಧೆ ಮಾಡಿದನು. ಅದಕ್ಕೆ ಆದಯ್ಯನು ನಸುನಕ್ಕು— ನನಗೆ ಮೊದಲು ಸೋಮಯ್ಯನ ಭಕ್ತಿಯು. ಅದೇ ನನಗೆ ಲಾಭವು. ಆಮೇಲೆ ಇನ್ನಿತರ ವಿಷಯಗಳ ಮೇಲೆ ಪ್ರೀತಿಯು ಎಂದು ಹೇಳಿ ತನ್ನ ತಂದೆತಾಯಿಗಳಿಗೆ ನಮಸ್ಕರಿಸಿ ಕರ್ನಾಟಕ ದೇಶಕ್ಕೆ ಹೊರಟನು.

ಆದಿಶೆಟ್ಟಿಯು ಅಥವಾ ಆದಯ್ಯನು ಮೊದಲು ಅಣ್ಣೀಗೆರೆಗೆ ಬಂದನು. ಇದು ಧಾರವಾಡ ಜಿಲ್ಲೆ ನವಲಗುಂದ ತಾಲೂಕಿನಲ್ಲಿದೆ. ಅಲ್ಲಿ ತನ್ನ ವ್ಯವಹಾರವನ್ನು ಕೆಲವು ದಿವಸ ನಡಿಸಿ ಮುಂದೆ ಅಲ್ಲಿಂದ ದಕ್ಷಿಣಕ್ಕೆ ೨೨ ಮೈಲು ದೂರವಿರುವ ಪುಲಿಗೆರೆ ಅಂದರೆ ಈಗಿನ ಲಕ್ಷ್ಮೇಶ್ವರಕ್ಕೆ ಬಂದನು. ಪುಲಿಗೆರೆಯು ಈ ಕಾಲದಲ್ಲಿ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧವಾದ ಪಟ್ಟಣವಾಗಿತ್ತು. ಅಲ್ಲಿ ಚಂದ್ರಾದಿತ್ಯನೆಂಬ ರಾಜನು ಆಳುತ್ತಿದ್ದನು. ಪಟ್ಟಣದಲ್ಲಿ ಅನೇಕ ಸುಂದರವಾದ ಚೈತ್ಯಾಲಯಗಳೂ ಪೇಟೆ ಬಾಜಾರಗಳೂ ವಿಸ್ತಾರವಾಗಿ ಹಬ್ಬಿದ್ದವು. ಆದಯ್ಯನು ತನ್ನ ಪಸಾರದೊಂದಿಗೆ ನಗರವನ್ನು ಪ್ರವೇಶಿಸಿ ಬೀದಿಯಿಂದ ಗಮಿಸುವಾಗ ಬತ್ತಲೆ ಇದ್ದ ಗೊಂಬೆಗಳುಳ್ಳ ಜಿನಾಲಯಗಳೇ ಅವನ ಕಣ್ಣಿಗೆ ಬೀಳ ಹತ್ತಿದವು. ಅವನು ಅವುಗಳಲ್ಲಿ ಇರದೆ ಒಂದು ಶಿವಾಲಯವನ್ನು ಹುಡುಕುತ್ತ ಹೋದನು. ಮುಂದೆ ಹೋಜೇಶ್ವರನೆಂಬ ಶಿವಾಲಯವು ಅವನ ದೃಷ್ಟಿಗೆ ಬಿತ್ತು. ಆಗ ಅವನು ಅಲ್ಲಿಯೇ ತನ್ನ ಪಸಾರವನ್ನು ಇಟ್ಟು ಪಟ್ಟಣವನ್ನು ನೋಡಬೇಕೆಂದು ಬೀದಿಗಳನ್ನು ಸುತ್ತುತ್ತ ಹೋದನು.

ಈ ಪುಲಿಗೆರೆ ಪಟ್ಟಣದಲ್ಲಿ 'ಸುರಹೊನ್ನೆ ಬಸದಿ' ಎಂಬ ಹೆಸರಿನ ಜಿನಾಲಯವು ದೇಶದಲ್ಲೆಲ್ಲ ಅತ್ಯಂತ ಪ್ರಸಿದ್ಧವಾಗಿತ್ತು. ಅದರಲ್ಲಿಯ ಹಸ್ತಕೌಶಲ್ಯಗಳ ಕೆಲಸದಿಂದ ಅದು ಕಣ್ಣಿಗೆ ಬಹು ಮನೋಹರವಾಗಿ ಕಂಗೊಳಿಸುತ್ತಿತ್ತು. ಅದರ ಪೂಜಾರಿಯು ಪಾರಿಸಪಂಡಿತನೆಂಬುವನು. ಅವನಿಗೆ ಪದ್ಮಾವತಿ ಎಂಬ ಹೆಸರಿನ ಮಗಳಿದ್ದಳು. ಅವಳು ಯೌವ್ವನಾವಸ್ಥೆಯನ್ನು ಹೊಂದಿದ್ದರೂ ಇನ್ನೂ ಅವಿವಾಹಿತಳಾಗಿ ಉಳಿದಿದ್ದಳು. ಅವಳು ತನ್ನ ಗೃಹದ ಮೊಗಸಾಲೆಯಲ್ಲಿ ನಿಂತಿರುವಾಗ ಆದಯ್ಯನು ತನ್ನ ಇದಿರಿನಲ್ಲಿ ದಾರಿಯಿಂದ ಬರುವದನ್ನು ಕಂಡಳು. ಆದಯ್ಯನೂ ಕೂಡ ಅವಳನ್ನು ಅದೇ ಕಾಲದಲ್ಲಿ ಕಾಣಲಾಗಿ ಉಭಯತರು ಪರಸ್ಪರ ಅನುರಾಗವನ್ನು ಹೊಂದಿದವರಾದರು. ಪದ್ಮಾವತಿಯು

ಆವನಾರೆಂಬುವನ್ನು ತಿಳಿದುಕೊಂಡು ಅವನನ್ನು ಮದುವೆಯಾಗುವೆನೆಂದು ತಂದೆಗೆ ಹೇಳಲು ಅವನು ಒಪ್ಪಲಾಗಿ ಉಭಯತರು ಲಗ್ನವಾದರು. ಆಮೇಲೆ ಅವರು ಪಾರಿಸನ ಮನೆಯ ನೆರೆಯಲ್ಲಿ ಇದ್ದ ಒಂದು ಗೃಹದಲ್ಲಿ ನಿಂತುಕೊಂಡು ಸುಖವಾಗಿ ತಮ್ಮ ಪ್ರಪಂಚವನ್ನು ಸಾಗಿಸಹತ್ತಿದರು. ಪದ್ಮಾವತಿಯು ತನ್ನ ಜೈನಮತವನ್ನು ಬಿಟ್ಟು ಆದಯ್ಯನಂತೆಯೇ ಶಿವಭಕ್ತಿಯುಳ್ಳವಳಾಗಿ ಆಚರಿಸಹತ್ತಿದಳು. ಹೀಗೆ ಅವರು ಅನೇಕ ವರ್ಷಗಳ ವರೆಗೆ ಪುಲಿಗೆರೆಯಲ್ಲಿ ಕಾಲಕಳೆದರು.

ಈ ಕಾಲದಲ್ಲಿ ಶಿವಾನುಭವದ ತತ್ವಗಳು ದೇಶದಲ್ಲೆಲ್ಲ ಪ್ರಸಾರವಾಗಹತ್ತಿದ್ದವು. ಅವುಗಳಿಗೆ ಆದಯ್ಯನು ಒಲಿದವನಾಗಿ ಅವನೂ ಶಿವಾನುಭವಿಯಾಗಿ ವಚನಗಳನ್ನು ರಚಿಸತೊಡಗಿದನು. 'ಸೌರಾಷ್ಟ್ರ ಸೋಮೇಶ್ವರಾ' ಎಂಬುದೇ ಅವನ ಮುದ್ರಿಕೆಯು. ಅವನ ೧೫೧ ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ಅವುಗಳಲ್ಲಿ ಷಟ್‌ಸ್ಥಲ ಶಾಸ್ತ್ರದ ತತ್ವಗಳು ಬಹು ಸ್ಫುಟವಾಗಿ ಮತ್ತು ವ್ಯವಸ್ಥಿತವಾಗಿ ನಿರೂಪಿತವಾಗಿರುತ್ತವೆ. ಅವನ ಭಾಷೆಯು ಅತ್ಯಂತ ಗಾಂಭೀರ್ಯವುಳ್ಳದ್ದು ಮತ್ತು ಮನೋಹರವಾದದ್ದು. ಅವನು ಸಂಸ್ಕೃತವನ್ನು ಚನ್ನಾಗಿ ಬಲ್ಲವನಾದ್ದರಿಂದ ಅವನ ವಚನಗಳಲ್ಲಿಯು ಸಂಸ್ಕೃತ ಅವತರಣಗಳು ಕಂಡುಬರುತ್ತವೆ. ಹೀಗೆ ಅವನು ವಾಸ ಮಾಡುತ್ತಿರಲಾಗಿ ಪಟ್ಟಣದಲ್ಲಿ ಕೆಳಗಿನಂತೆ ಒಂದು ಘಟನೆಯು ಉಂಟಾಯಿತು.

ಒಂದು ದಿನ ಆದಯ್ಯನು ಪದ್ಮಾವತಿಯು ಕೂಡ ಪಟ್ಟಣದ ಪೂರ್ವದಿಕ್ಕಿನಲ್ಲಿದ್ದ ಒಂದು ತೋಟದಲ್ಲಿ ವಿಹಾರಕ್ಕೋಸ್ಕರ ಹೋಗಿದ್ದನು. ಆಗ ಅಲ್ಲಿ ಕೆಲವು ಜಂಗಮರು ಇದ್ದದ್ದನ್ನು ಕಂಡು ಅವರೀರ್ವರು ಅವರನ್ನು ನಮಸ್ಕರಿಸಲಾಗಿ ಆ ಜಂಗಮರು— ನಾವು ಈ ಪಟ್ಟಣವನ್ನು ಪ್ರವೇಶಿಸಲಾಗಿ ಯಾವ ದೇವಾಲಯವಿದ್ದರೂ ಅದರಲ್ಲಿ ಬತ್ತಲೆ ಇದ್ದ ಬೊಂಬೆಗಳೇ ಕಾಣುತ್ತಿವೆ. ಶಿವಭಕ್ತರು ನಮಗೆ ಎಲ್ಲಿಯೂ ಗೋಚರವಾಗಲಿಲ್ಲ. ಆದ್ದರಿಂದ ನಾವು ಈ ಉದ್ಯಾನ ವನಕ್ಕೆ ಬಂದಿದ್ದೇವೆ. ನಿಮ್ಮನ್ನು ಕಂಡು ನಮಗೆ ಬಹಳ ಹರುಷವಾಯಿತು. ನಾವು ಇನ್ನೂ ಉಪವಾಸವಿದ್ದೇವೆ ಎಂದು ಹೇಳಲು ಆದಯ್ಯನು— ನೀವು ನಮ್ಮಲ್ಲಿ ಭೋಜನಕ್ಕೆ ಬರಬೇಕು. ನಾನು ನಿಮ್ಮನ್ನು ಕರೆಯಲಿಕ್ಕೆ ಬರುತ್ತೇನೆ.

ಆ ವರೆಗೆ ನೀವು ಇಲ್ಲಿಯೇ ಇರಬೇಕು ಎಂದು ಹೇಳಿ ತನ್ನ ಹೆಂಡತಿಯೊಡನೆ ಮನೆಗೆ ಬಂದನು. ಪದ್ಮಾವತಿಯು ಅತಿಥಿಗಳಿಗೋಸ್ಕರ ಪಾಕವನ್ನು ಮಾಡಿ ಅವರನ್ನು ಕರೆತರಲು ಆದಯ್ಯನನ್ನು ಉದ್ಯಾನ ವನಕ್ಕೆ ಕಳಿಸಿದಳು.

ಆಗ ಆದಯ್ಯನು ಹೊರಗೆ ಹೋದ ಸ್ವಲ್ಪ ಹೊತ್ತಿನಲ್ಲಿಯೇ ಕೋಪಣ (ಕೊಪ್ಪಳ) ದ ಕಡೆಯಿಂದ ಕೆಲವು ಶ್ರಾವಕರು ಪಾರಿಸಶೆಟ್ಟಿಯ ಮನೆಗೆ ಬರಲಾಗಿ ಅವನು ಅವರಿಗೆ ಪರ್ವವನ್ನು ಮಾಡಿಸುತ್ತಿರಲು ಅದಕ್ಕೆ ಬೋನವು ಸಾಲದೆ ಹೋಯಿತು. ಆಗ ಪಾರಿಸನ ಹೆಂಡತಿಯು ತನ್ನ ಮಗಳ ಮನೆಗೆ ಬಂದು ಅವಳಿಗೆ— ನಮ್ಮ ಮನೆಗೆ ಶ್ರಾವಕರು ಬಂದಿದ್ದಾರೆ. ಅವರಿಗೆ ಅನ್ನವು ಕಡಿಮೆಯಾಗಿದೆ. ನೀನು ಈಗ ಸಿದ್ಧಪಡಿಸಿದ ಬೋನವನ್ನು ಕೊಡು ಎಂದು ಕೇಳಿದಳು. ಅದಕ್ಕೆ ಪದ್ಮಾವತಿಯು— ಜಂಗಮರಿಗೋಸ್ಕರ ಅನ್ನವನ್ನು ಸಿದ್ಧಪಡಿಸಿದ್ದೇನೆ. ಅದನ್ನು ನಾನು ಕೊಡಲಾರೆನೆಂದು ಹೇಳಲು ಅವಳ ತಾಯಿಯು— ಅನ್ನವನ್ನು ಕಡವಾಗಿಯಾದರೂ ಕೊಡು ಎಂದು ಒತ್ತಿ ಹೇಳಲು ಅವಳು— ಜಂಗಮರು ಹಸಿದುಬಂದಿದ್ದಾರೆ. ಅವರಿಗೆ ಈ ಪಟ್ಟಣದಲ್ಲಿ ಎಲ್ಲಿಯೂ ಆಹಾರ ದೊರಕಿಲ್ಲ. ಈಗಲೇ ನನ್ನ ಪತಿಯು ಅವರನ್ನು ಕರೆತರಲು ಹೋಗಿದ್ದಾನೆ ಎಂದು ಹೇಳಲು ಅವಳ ತಾಯಿಯು ಅವಳನ್ನು ಧಿಕ್ಕರಿಸಿ, ಅವಳ ಕಯ್ಯನ್ನು ಹಿಡಿದು ಅವಳು ಮಾಡಿದ ಬೋನವನ್ನು ಬಲಾತ್ಕಾರದಿಂದ ಕಸಿದುಕೊಂಡು ಹೋಗಿ ಬಿಟ್ಟಳು. ಆಗ ಪದ್ಮಾವತಿಯು ಕಂದಿ ಕುಂದಿ ಚಿಂತಿಸುತ್ತ ಕುಳಿತಳು. ಅಷ್ಟರಲ್ಲಿ ಆದಯ್ಯನು ಜಂಗಮರೊಡನೆ ಮನೆಗೆ ಬರಲು, ಅವನು ನಡೆದ ಸಂಗತಿಗಳನ್ನು ಕೇಳಿಕೊಂಡು, ಮನೆಯಲ್ಲಿ ಆಹಾರವಿಲ್ಲದ್ದರಿಂದ ಬಂದ ಆ ಜಂಗಮರಿಗೆ ತೆಂಗು, ಬಾಳೆ, ದ್ರಾಕ್ಷ ಇವುಗಳನ್ನು ತಂದು ಅವರನ್ನು ಸಂತವಿಸಿ ಅವರನ್ನು ಕಳಿಸಿಕೊಟ್ಟನು.

ಆಮೇಲೆ ಆದಯ್ಯನು ಅತ್ಯಂತ ಮನಸ್ಸು ನೊಂದವನಾಗಿ ತನ್ನ ಮಾವನಾದ ಪಾರಿಸಶೆಟ್ಟಿಯ ಮನೆಗೆ ಬಂದು ಅವನಿಗೆ— ಜೈನರು ಭಕ್ತರ ಅನ್ನವನ್ನು ಹೀಗೆ ತೆಗೆದುಕೊಂಡು ಹೋಗಬೇಕೇ? ಎಂದು ಕೇಳಲು, ಅವನು— ನೀನೇತರ ಭಕ್ತ? ಅವರೆಲ್ಲಿಯ ಜಂಗಮರು? ಪುಲಿಗೆರೆಯಲ್ಲಿ ಭಕ್ತರೆಂಬುವರು ಎಲ್ಲಿದ್ದಾರೆ? ಎಂದು ನಿಂದಿಸಿ ನುಡಿ

ಯುತ್ತ ಅವನಿಗೆ— ನೀನು ನಿನ್ನ ಸೋಮೇಶ್ವರನನ್ನು ಪುಲಿಗೆರೆಗೆ ತಂದರೆ ಮಾತ್ರ ನೀನು ಭಕ್ತನು, ಇಲ್ಲದಿದ್ದರೆ ಅಲ್ಲ, ಎಂದು ಅನ್ನಲು, ಆದಯ್ಯನು ಅತ್ಯಂತ ಖತಿಗೊಂಡು— ಪಾರಿಸನೇ, ನೀನು ಹೇಳಿದಂತೆಯೇ ನಾನು ಮಾಡಿಬಿಡುತ್ತೇನೆ. ಈ ಪುಲಿಗೆರಿಯ ಸುರಹೊನ್ನೆಯ ಬಸದಿಯಲ್ಲಿ ನನ್ನ ಇಷ್ಟದೇವತೆಯಾದ ಸೌರಾಷ್ಟ್ರ ಸೋಮೇಶನನ್ನು ತಂದು ನಿಲ್ಲಿಸಿಯೇ ಬಿಡುವೆನು ಎಂದೆನ್ನಲು ಅದಕ್ಕೆ ಪಾರಿಸಶೆಟ್ಟಿಯು ನಗುತ್ತ— ಇದು ನಿನಗೆ ಅಳವಡದ ಭಾಷೆಯು. ನೀನು ಯುಕ್ತಿಗೆಟ್ಟು ನುಡಿಯುತ್ತೀ ಸೋಮೇಶ್ವರನನ್ನು ಇಲ್ಲಿ ಸ್ಥಾಪಿಸುವದು ನಿಶ್ಚಿಚ್ಚೆಯೋ? ಎಂದು ನುಡಿಯುಲು ಆದಯ್ಯನು— ಹೌದು, ಹೌದು. ನಾನು ಒಂದು ತಿಂಗಳಿನಲ್ಲಿ ಸೌರಾಷ್ಟ್ರ ಸೋಮನಾಥನನ್ನು ಇಲ್ಲಿಗೆ ತಂದು ನಿಲ್ಲಿಸುವೆನು. ಅವನನ್ನು ತಾರದೆ ಉಣ್ಣೆನು, ಎಂದು ಪ್ರತಿಜ್ಞೆ ಮಾಡಿ ಮನೆಗೆ ಹೋದನು. ಅವನು ನಡೆದ ಸಂಗತಿಗಳನ್ನೆಲ್ಲ ಪದ್ಮಾವತಿಗೆ ತಿಳಿಸಿಹೇಳಿ ನಾನು ಈಗಳೇ ಸೌರಾಷ್ಟ್ರಕ್ಕೆ ಹೊರಡುವೆನು ಎಂದು ಅನ್ನಲು ಅದಕ್ಕೆ ಪದ್ಮಾವತಿಯು— ನಾನು ನಿಮಗೆ ಹೋಗಬೇಡವೆಂದು ಹೇಳಲಾರೆನು. ದಾರಿಯಲ್ಲಿ ಎಂಥ ಕಷ್ಟಗಳು ಬಂದರೂ ಅವುಗಳಿಗೆ ನೀವು ಅಂಜದಿರಿ, ತಲೆವಾಗದಿರಿ. ಸೋಮಯ್ಯನನ್ನು ಕರೆತರದೆ, ನೀವು ಪುಲಿಗೆರೆಗೆ ಮರಳಬೇಡಿರಿ. ಆ ವರೆಗೆ ನಾನು ನನ್ನ ಕೂದಲನ್ನು ಹಿಕ್ಕಿ ಬಾಚಿಕೊಳ್ಳುವದಿಲ್ಲ. ನೀವು ತಿರುಗಿ ಬರುವ ವರೆಗೂ ನಾನೂ ಉಪವಾಸವಿರುವೆನು, ಎಂದು ಪ್ರತಿಜ್ಞೆ ಮಾಡಿ ತನ್ನ ಪತಿಯನ್ನು ಬೀಳ್ಕೊಟ್ಟಳು.

ಮುಂದೆ ಆದಯ್ಯನು ಉತ್ತರಾಭಿಮುಖನಾಗಿ ಸೌರಾಷ್ಟ್ರ ದೇಶಕ್ಕೆ ಹೊರಟನು. ಅವನು ದಾರಿ ನಡಿಯುವಾಗ ಅನೇಕ ಪರ್ವತ ಪ್ರದೇಶಗಳೂ ಗಟ್ಟ ಬೆಟ್ಟಗಳೂ ಹತ್ತಿದವು. ಅವನು ಅವುಗಳನ್ನು ಲೆಕ್ಕಿಸದೆ ಕಲ್ಲು ಮುಳ್ಳುಗಳನ್ನು ತುಳಿಯುತ್ತ ಮುಂದುವರಿದನು. ದಾರಿಯಲ್ಲಿ ಹುಲಿ, ಕರಡಿಗಳು ಅಡ್ಡಗಟ್ಟಿದವು. ಆದರೆ ಅವನು ಭೀತಿಗೊಳ್ಳಲಿಲ್ಲ. ಸೋಮೇಶ್ವರನ ಧ್ಯಾನಮಾಡುತ್ತ ಮುಂದೆ ಸಾಗಿದನು. ಮಳೆ ಬಿಸಿಲು ಗಾಳಿ, ಹಸಿವೆ ನೀರಡಿಕೆ, ಎನ್ನದೆ ಸೋಮನಾಥನನ್ನು ಎಂದು ಕಾಣುವೆನೋ ಎಂಬ ತವಕದಲ್ಲಿ ಎಲ್ಲ ಶ್ರಮವನ್ನು ಮರೆತನು. ಹೀಗೆ ಅವನು ೨೮ ದಿವಸಗಳ ವರೆಗೆ ಪಯಣ ಮಾಡಿದನು. ಮುಂದೆ ಅವನಿಗೆ ಅಡಿ ಇಡುವಷ್ಟು ಸಹ ಶಕ್ತಿಯು ಉಳಿಯಲಿಲ್ಲ. ಆದ್ದರಿಂದ ಅವನು ಕುಳಿತು

ಕೊಂಡೇ ಮುಂದೆ ಹೋಗಹತ್ತಿದನು. ನಿಶ್ಶಕ್ತನಾದ್ದರಿಂದ ಅದೂ ಕೂಡ ಸಾಧ್ಯವಾಗದೆ ಹೋಯಿತು. ಆಗ ಅವನು ಉರುಳುತ್ತ ಉರುಳುತ್ತ ಹೋಗ ಹತ್ತಿದನು. ಹೀಗೆ ಹೋಗುವಾಗ ಅವನ ಧ್ಯಾನವೆಲ್ಲ ಸೋಮನಾಥನ ಕಡೆಗೆಯೇ ಇತ್ತು. ಅವನನ್ನೇ ಅವನು ಯಾವಾಗಲೂ ಧ್ಯಾನಿಸುವನು. ಈ ಸ್ಥಿತಿಯಲ್ಲಿ ಅವನು ಒಂದು ಬಿಲ್ವವೃಕ್ಷದಡಿಯಲ್ಲಿ ಮಾರ್ಗಾಯಾಸದಿಂದ ಮೂರ್ಛಿತನಾಗಿ ಬಿದ್ದುಬಿಟ್ಟನು. ಆಗ ಅವನ ಭಕ್ತಿಯು ಸೌರಾಷ್ಟ್ರ ದೊಡೆಯನಾದ ಸೋಮನಾಥನಿಗೆ ತಲ್ಪಿತು. ಅವನಲ್ಲಿ ಕರುಣೆಯುಂ ಟಾಯಿತು. ಆದಯ್ಯನನ್ನು ರಕ್ಷಿಸಬೇಕೆಂಬ ಇಚ್ಛೆಯು ಉಂಟಾಗಲು ಅವನು ವೃದ್ಧ ಜಂಗಮವೇಷವನ್ನು ಧಾರಣಮಾಡಿ ಅವನ ಇದಿರಿಗೆ ಬಂದು ನಿಂತು ಅವನಿಗೆ— ಎಲೇ ಮಗನೇ, ನೀನೆಲ್ಲಿಗೆ ಈಗ ಹೊರ ಟಿರುವೆ? ನೀನು ಅತ್ಯಂತ ಆಯಾಸದಿಂದ ಬಳಲಿರುವಿ. ಸಮೀಪದಲ್ಲಿ ಒಂದು ಗ್ರಾಮವಿದೆ. ಅಲ್ಲಿಗೆ ಹೋಗು, ಎಂಬ ವಾಕ್ಯವು ಅವನ ಕಿವಿಗೆ ಬಿದ್ದ ಕೂಡಲೆ ಅವನಿಗೆ ಏನೋ ಒಂದು ಚೈತನ್ಯವು ಬಂದಂತಾಗಲು ಅವನು ಕೂಡಲೆ ಎದ್ದು ನಿಂತನು. ಆದರೆ ಅವನು ಆ ವೃದ್ಧ ಜಂಗ ಮನ ಕೂಡ ಮಾತನಾಡುವದರಲ್ಲಿ ವೇಳೆಗಳೆಯಲಿಲ್ಲ. ಅವನು ಸೋಮ ನಾಥನಲ್ಲಿಗೆ ಹೋಗುವೆನೆಂದು ಹಾಗೆಯೇ ಮುಂದುವರಿದನು. ಆ ಜಂಗ ಮನು ಅದನ್ನು ನೋಡಿ ಅವನ ನಿಷ್ಠೆಗೆ ಮೆಚ್ಚಿ ಅವನಿಗೆ ಅಡ್ಡಬಂದು ಅವನ ಕಯ್ಯನ್ನು ಹಿಡಿದು ನೀನೆಲ್ಲಿಗೆ ಹೊರಟಿರುವಿ ಎನ್ನಲು, ಆದಯ್ಯನು— ಸೌರಾಷ್ಟ್ರಪತಿಯನ್ನು ಪುಲಿಗೆರೆಗೆ ತರಲು ಹೊರಟಿದ್ದೇನೆ. ನನ್ನಲ್ಲಿ ಉಸಿರು ಇರುವ ವರೆಗೂ ಅವನಿದ್ದ ಸ್ಥಳಕ್ಕೆ ಹೋಗುವೆನು ಎಂದು ನುಡಿಯಲು ಅವನ ನಿಶ್ಚಲವಾದ ಭಕ್ತಿಗೆ ಆ ಜಂಗಮನು ಮೆಚ್ಚಿ— ಹೀಗಾದರೆ ಇಗೋ, ನಾನೇ ಆ ಸೋಮನಾಥನು. ನಿನ್ನ ನಿಷ್ಠೆಗೆ ಮೆಚ್ಚಿ ಬಂದಿದ್ದೇನೆ. ನಾನೇ ಪುಲಿಗೆರೆಗೆ ಬರುವವನು. ಬಳಲದಿರು ಎಂದು ನುಡಿಯಲು, ಸೋಮನಾಥನು ಅವನ ಜಂಗಮ ವೇಷವನ್ನು ನೋಡಿ ಶಂಕಿಸುತ್ತ— ಪರಮಾತ್ಮನು ಹೀಗೆ ಮನುಷ್ಯನ ಆಕೃತಿಯುಳ್ಳ ವನಲ್ಲ. ನನ್ನ ಶಂಕೆಯನ್ನು ದೂರಮಾಡು ಎಂದೆನ್ನಲು, ಸೋಮ ನಾಥನು ಜಂಗಮ ವೇಷವನ್ನು ಬಿಟ್ಟು ತಲೆಯಲ್ಲಿ ಚಂದ್ರನ ಕಳೆ, ದಶಭುಜ, ಕೆಂಜೆಡೆ, ಲಲಾಟ ಲೋಚನವುಳ್ಳವನಾಗಿ ಅವನಿಗೆ ಪ್ರತ್ಯ ಕ್ಷನಾದನು. ಆಗ ಆದಯ್ಯನು ಆ ರೂಪನ್ನು ನೋಡಿ ಪರಮಾತ್ಮನಿಗೆ

ನಮಸ್ಕರಿಸಿ ಅವನೆದುರಿಗೆ ಕೈಮುಗಿದುಕೊಂಡು ನಿಂತನು. ಆಗ ನೋಡ ನೋಡುತ್ತಿರುವಲ್ಲಿಯೇ ಪರಮಾತ್ಮನು ತನ್ನ ನಿಜರೂಪವನ್ನು ಬಿಟ್ಟು ಪುನಃ ಜಂಗಮರೂಪವನ್ನು ಧಾರಣ ಮಾಡಿದನು.

ಹೀಗೆ ಪರಮಾತ್ಮನು ಜಂಗಮರೂಪವನ್ನು ಧಾರಣ ಮಾಡಿದ ಬಳಿಕ ಅವನೊಡನೆ ಮಾತನಾಡಲು ಆದಯ್ಯನಿಗೆ ಶಕ್ಯವಾಯಿತು. ಆಗ ಅವನು— ನಾನು ೩೦ ದಿನಗಳಲ್ಲಿ ಸೋಮೇಶನನ್ನು ಪುಲಿಗೆರೆಗೆ ತರುವೆನೆಂದು ಪ್ರತಿಜ್ಞೆ ಮಾಡಿದ್ದೇನೆ. ಅದಕ್ಕೆ ೨ ದಿನಗಳು ಮಾತ್ರ ಉಳಿದವು. ಇಷ್ಟರಲ್ಲಿ ನೀನು ಪುಲಿಗೆರೆಗೆ ಹೇಗೆ ಬರುವಿ? ನಾನಾದರೂ ಈ ಅವಧಿಯಲ್ಲಿ ಪುಲಿಗೆರೆಗೆ ಹೇಗೆ ಹೋಗುವೆನು? ಈ ಪ್ರಸಂಗದಲ್ಲಿ ನನ್ನನ್ನು ರಕ್ಷಿಸು ಎಂದು ನುಡಿಯಲು ಆ ಜಂಗಮನು ಅವನಿಗೆ— ನೀನು ಚಿಂತೆಮಾಡಬೇಡ. ನೀನು ಈ ಬಿಲ್ವವೃಕ್ಷದಡಿಯಲ್ಲಿ ಕೆಲ ಹೊತ್ತು ವಿಶ್ರಮಿಸು. ಕೂಡಲೆ ನಿನ್ನನ್ನು ಪುಲಿಗೆರೆಯ ಬಡಗಣ ತಟಾಕದ ಏರಿಯಲ್ಲಿ ತಂದು ಬಿಡುವೆನು. ನಾಳೆ ಸೋಮವಾರ ಚೈತ್ರ ಶುದ್ಧ ಚತುರ್ದಶಿಯು. ಅದರ ಮಧ್ಯರಾತ್ರಿಯಲ್ಲಿ ನಾನು ಸುರಹೊನ್ನೆ ಬಸದಿಯಲ್ಲಿ ನೆಲಿಸುವೆನು ಎಂದು ಹೇಳಿದನು. ಅದಕ್ಕೆ ಆದಯ್ಯನು ನೀನು ಹೀಗೆ ನೆಲಿಸಿದ್ದಕ್ಕೆ ಏನು ಗುರುತು ಎಂದು ಕೇಳಲು ಆ ಜಂಗಮನು ಅದಕ್ಕೆ— ಆ ಸುರಹೊನ್ನೆ ಬಸದಿಯಲ್ಲಿ ಇರುವ ಹೆಳವನಿಗೆ ಕಾಲುಗಳು, ಕುರುಡನಿಗೆ ಕಣ್ಣುಗಳು ಬರುವವು ಮತ್ತು ಬಸದಿಯ ಬಾಗಿಲುಗಳು ನಿನ್ನ ಹೊರ್ತು ತೆರೆಯಲಿಕ್ಕೆ ಯಾರಿಗೂ ಬರಲಾರದು. ಹೀಗಾದದ್ದು ಕಂಡಲ್ಲಿ ನಾನು ಅಲ್ಲಿ ನೆಲಿಸಿದೆನೆಂದು ತಿಳಿಯಬೇಕು ಎಂದು ನುಡಿದು ಆ ಸ್ಥಳದಲ್ಲಿಯೇ ಅಂತರ್ಧಾನನಾದನು.

ಆಗ ಆದಯ್ಯನು ಆ ಜಂಗಮನು ಹೇಳಿದಂತೆ ಆ ಸ್ಥಳದಲ್ಲಿ ವಿಶ್ರಮಿಸಲು ಅವನಿಗೆ ಕೂಡಲೆ ನಿದ್ರೆಹತ್ತಿತು. ಮುಂದೆ ಕಣ್ಣು ತೆರೆದು ನೋಡುತ್ತಾನೆಯೇ ಅವನು ಆ ವೃದ್ಧ ಜಂಗಮನು ಹೇಳಿದಂತೆ ಪುಲಿಗೆರೆಯ ಕೆರೆಯ ಏರಿಯ ಮೇಲೆ ಮಲಗಿದ್ದನ್ನು ಕಂಡನು. ಆಗ ಅವನು ಪರಮಾತ್ಮನನ್ನು ಧ್ಯಾನಿಸುತ್ತ ಮನೆಗೆ ಬಂದು ಪದ್ಮಾವತಿಯನ್ನು ಕಂಡು ಆದ ಎಲ್ಲ ಸಂಗತಿಗಳನ್ನು ಅವಳಿಗೆ ತಿಳಿಸಿದನು. ಅವಳು ಹರುಷಿತಳಾಗಿ ಪತಿಗೆ— ನೀವು ಹಸಿದಿರುವಿರಿ, ನಿಮಗೆ ಬೋನವನ್ನು ಮಾಡುವೆನೆಂದು ಹೇಳಲು ಆದಯ್ಯನು— ಈಗ ಬೇಡ. ನಾಳೆ ಸೋಮ

ಯ್ಯನು ಬಸದಿಯಲ್ಲಿ ಪ್ರಕಟವಾಗುವನು. ಆಮೇಲೆ ಭೋಜನವನ್ನು ಮಾಡು ಎಂದು ಹೇಳಿದನು. ಆಮೇಲೆ ಅವಳು ತನ್ನ ತಂದೆ ಪಾರಿಸ ಪಂಡಿತನ ಮನೆಗೆ ಒಳ್ಳೇ ಉತ್ಸಾಹದಿಂದ ಹೋಗಿ ತನ್ನ ಪತಿಯು ಪಟ್ಟಣಕ್ಕೆ ಮರಳಿ ಬಂದದ್ದನ್ನು ಅವನಿಗೆ ಅರುಹಿದಳು. ಅದಕ್ಕೆ ಅವನು ಪರಿಹಾಸವನ್ನು ಮಾಡುತ್ತ— ಏನು ? ಆದಯ್ಯನು ತಿರುಗಿ ಬಂದನೇ? ಇನ್ನೇನು, ಅಭವನು ಬಸದಿಯಲ್ಲಿ ಬರತಕ್ಕವನೇ? ಎಂದು ಮಗಳಿಗೆ ಹೀಯಾಳಿಸಿ ನುಡಿಯಲು, ಅವಳು ಖಿನ್ನಮನಸ್ಕಳಾಗಿ ತಿರುಗಿ ಮನೆಗೆ ಬಂದಳು.

ಆ ಕಾಲದಲ್ಲಿ ಅಸ್ತಮಯವಾಗಿತ್ತು. ಆದಯ್ಯನು ಸೋಮಯ್ಯನನ್ನು ಚಿಂತಿಸುತ್ತ ನಿದ್ದೆ ಹೋದನು. ಅರುಣೋದಯವಾಯಿತು. ಆಗ ಪಾರಿಸ ಪಂಡಿತನು ಸುರಹೊನ್ನೆ ಬಸ್ತಿಗೆ ಹೋಗಿ ಅದರ ಕವಾಟವನ್ನು ತೆರೆಯಲು ಯತ್ನಿಸಿದನು. ಆದರೆ ಅದು ತೆರೆಯಲಿಲ್ಲ. ಎಷ್ಟು ನೂಕಿದರೂ ಅದು ಇತ್ತಿತ್ತ ಅಲುಗಾಡಲಿಲ್ಲ. ಆಗ ಬಹು ಜನರು ಅಲ್ಲಿ ನೆರೆದು ಎಲ್ಲರೂ ಕೂಡಿಕೊಂಡು ಬಲವಾಗಿ ಬಾಗಿಲನ್ನು ತೆರೆಯಲು ಪ್ರಯತ್ನಿಸಿದರು. ಆದರೆ ಏನು ಮಾಡಿದರೂ ಕದವು ತೆರೆಯಲಿಲ್ಲ. ಅಷ್ಟರಲ್ಲಿ ಆದಯ್ಯನು ಅಲ್ಲಿಗೆ ಬಂದನು. ಅವನು ಬಂದು ನಿಲ್ಲುವಷ್ಟರಲ್ಲಿ ಬಸದಿಯ ಮುಂದೆ ಯಾವಾಗಲೂ ಕುಳ್ಳಿರುತ್ತಿದ್ದ ಹೆಳವನಿಗೆ ಕಾಲುಗಳು ಬಂದು ಅವನು ಅತ್ತಿತ್ತ ಅಡ್ಡಾಡಹತ್ತಿದ್ದನು. ಅಲ್ಲಿ ಒಬ್ಬ ಕುರುಡನು ಇದ್ದು ಅವನಿಗೆ ಕಣ್ಣುಗಳು ಬಂದಿದ್ದವು. ಅವರಿಬ್ಬರು ತಮ್ಮೆದುರಿಗೆ ಬಂದು ನಿಂತ ಆದಯ್ಯನನ್ನು ಕಂಡು ಅವನಿಗೆ ನಮಸ್ಕರಿಸಿದರು. ನೆರೆದ ಜನರು ಅವರನ್ನು ನೋಡಿ ಅತ್ಯಾಶ್ಚರ್ಯ ಬಟ್ಟರು. ಅವರು ಬಾಗಿಲುಗಳು ತೆರೆಯದೆ ಇದ್ದುದು ಆದಯ್ಯನ ಕೃತಕವಿರಬಹುದೆಂದು ನೆನಿಸಿ, ಅವುಗಳನ್ನು ತೆರೆಯಲು ಅವರು ಅವನಿಗೆ ಹೇಳಿಕೊಂಡರು. ಆಗ ಆದಯ್ಯನು ಬಾಗಿಲಿನ ಮುಂದೆ ನಿಂತುಕೊಂಡು ಸೋಮಯ್ಯನನ್ನು ಸ್ತೋತ್ರಮಾಡಿ ಬಾಗಿಲುಗಳನ್ನು ಹಸ್ತದಿಂದ ಮುಟ್ಟಿದ ಕೂಡಲೆ ಅವು ತಾವಾಗಿಯೇ ಘಟ್ಟನೆ ತೆರೆದವು. ನೆರೆದ ಜನರು ಕುತೂಹಲದಿಂದ ಒಳಗೆ ನೋಡುತ್ತಾರೆಯೇ, ಮೊದಲಿನ ಅರುಹನ ಮೂರ್ತಿಯು ಒಡೆದು ಇಬ್ಭಾಗವಾಗಿತ್ತು. ಅದರ ಸ್ಥಳದಲ್ಲಿ ವೃಷಭನ ಮೇಲೇರಿ ಕುಳಿತ ಶಿವನ ಮೂರ್ತಿಯು ನಿಂತಿತ್ತು. ಅಲ್ಲಲ್ಲಿ ನಿಂತಿದ್ದ

ಬತ್ತಲೆ ಬೊಂಬೆಗಳು ಭಗ್ನವಾಗಿದ್ದವು. ಆಗ ಆದಯ್ಯನು ದೇವಾಲಯವನ್ನು ಪ್ರವೇಶಿಸಿ ಅಲ್ಲಿ ನೆಲೆಗೊಂಡ ಈಶ್ವರನ ಇದಿರಿಗೆ ಹೋಗಿ ನಮಸ್ಕರಿಸಿದನು.

ಅಷ್ಟರಲ್ಲಿ ದೇವಾಲಯದ ಇದಿರಿಗೆ ಅಸಂಖ್ಯಾತ ಶ್ರವಣರು ನೆರೆದಿದ್ದರು. ಅವರು ಪಟ್ಟಣದಲ್ಲಿಯ ಒಂದು ಮಹತ್ವದ ಜಿನಾಲಯವು ಹೀಗೆ ಭಗ್ನವಾದದ್ದನ್ನು ನೋಡಿ ಖತಿಗೊಂಡರು. ಇದು ಆದಯ್ಯನ ಕೃತಕವೆಂದು ಅತ್ಯಂತ ರೋಷವುಳ್ಳವರಾಗಿ ಗರ್ಜಿಸಹತ್ತಿದರು. ಅವನನ್ನು ಕೊಂದುಹಾಕಬೇಕೆಂದು ಯೋಚಿಸಹತ್ತಿದರು. ಅವರು ಕೂಡಲೆ ಅವನ ಮೇಲೇರಿ ಹೋಗಹತ್ತಿದರು. ಆದರೆ ಆದಯ್ಯನು ಅದಕ್ಕೆ ಹಿಂಜರಿಯಲಿಲ್ಲ. ಎಷ್ಟುಮಾತ್ರವೂ ಭೀತಿ ಹೊಂದಲಿಲ್ಲ. ಆಗ ದೇವಾಲಯದಲ್ಲಿ ಒಂದು ಅದ್ಭುತವಾಯಿತು. ಈಶ್ವರನ ಮೂರ್ತಿಯೊಳಗಿಂದ ಒಂದು ಸುರಿಗೆಯು ಹೊರಗೆ ಬರಲು ಆದಯ್ಯನು ಅದನ್ನು ತೆಗೆದುಕೊಂಡು ತನ್ನ ಮೇಲೇರಿ ಬರುತ್ತಿದ್ದ ಜೈನರನ್ನು ಬಾಗಿಲಲ್ಲಿ ತಡೆದು ನಿಲ್ಲಿಸಿದನು. ಜೈನರು ಆಯುಧಪಾಣಿಗಳಾಗಿ ತಂಡತಂಡವಾಗಿ ಅವನ ಮೇಲೇರಿ ಬರಲಿಕ್ಕೆ ಹತ್ತಿದರು. ಉಭಯತರಲ್ಲಿ ಸಂಗಡಲೇ ತುಮುಲ ಯುದ್ಧವೆಸಗಿತು. ಅಷ್ಟರಲ್ಲಿ ಇಬ್ಬರು ಗಣಾಧೀಶ್ವರರು ದೇವಾಲಯದೊಳಗಿಂದ ಹೊರಟುಬಂದು ಆದಯ್ಯನ ಸಹಾಯಕ್ಕೆ ನಿಂತರು. ಹೀಗೆ ಈ ಮೂವರು ಶಸ್ತ್ರಗಳನ್ನು ಝಳಪಿಸುತ್ತ ಇದಿರಾಳಿಗಳನ್ನು ಸದೆಬಡಿಯಹತ್ತಿದರು. ಆಗ ಎರಡು ಸಾವಿರ ಜೈನರು ದೇವಾಲಯದ ಮುಂದೆ ಮಡಿದರು. ಒಪಟಗೆ ಈ ಪಾಡು ಆದದ್ದು ನೋಡಿ ಉಳಿದವರೆಲ್ಲರೂ ದೇವಾಲಯವನ್ನು ಬಿಟ್ಟು ಓಡಿಹೋದರು.

ಆಗ ಆದಯ್ಯನೊಡನೆ ಕಾಳಗ ಮಾಡುತ್ತಿದ್ದ ಉಭಯ ಗಣಾಧೀಶ್ವರರು ದೇವಾಲಯದಲ್ಲಿ ಅದೃಶ್ಯವಾದರು. ಆಮೇಲೆ ಆದಯ್ಯನು ಸೋಮಧರನ ಇದಿರಿಗೆ ನಿಂತುಕೊಂಡು ತನ್ನ ಖಡ್ಗವನ್ನು ಅಲ್ಲಿ ಇಟ್ಟು ಅವನಿಗೆ ಸಾಷ್ಟಾಂಗವೆರಗಿದನು. ಆಗ ಅವನು ಈ ಖಡ್ಗವನ್ನು ನಾನೆಲ್ಲಿ ಇಡಲಿ ಎಂದು ಪರಮಾತ್ಮನಿಗೆ ಕೇಳಲು ಈ ದೇವಾಲಯದ ಬದಿಯಲ್ಲಿದ್ದ ಕೊಳದಲ್ಲಿಡಲು ಹೇಳಲು ಹಾಗೆಯೇ ಅದನ್ನು ಅದರಲ್ಲಿ ಇಟ್ಟನು. ಆಗ ಆ ತೀರ್ಥಕ್ಕೆ 'ಖಡ್ಗತೀರ್ಥ'ವೆಂಬ ಹೆಸರಾಯಿತು.

ಈಪ್ರಕಾರ ಆದಯ್ಯನು ಸೌರಾಷ್ಟ್ರ ಸೋಮೇಶನನ್ನು ಪುಲಿಗೆರಿಯ ಮುಖ್ಯ ಬಸದಿಯಲ್ಲಿ ಸ್ಥಾಪಿಸಿದ ಬಳಿಕ ಪಟ್ಟಣದಲ್ಲಿ ಜೈನರ ಬಲವು ಕುಗ್ಗಿತು. ಬಹುಜನ ಶಿವಶರಣರು ಪುಲಿಗೆರಿಗೆ ಬಂದು ಅಲ್ಲಿ ನೆಲಿಸಹತ್ತಿದರು.

ಮುಂದೆ ಆದಯ್ಯನು ಪುಲಿಗೆರೆಯಲ್ಲಿಯೇ ವಾಸಿಸುತ್ತ ಸೋಮೇಶಲಿಂಗದಲ್ಲಿಯೇ ಅಡಗಿದನು.

ಆದಯ್ಯನು ತನ್ನ ಕಯ್ಯಖಡ್ಗವನ್ನು ಇಟ್ಟು ಕೊಳವು ದೇವಾಲಯದ ಪಶ್ಚಿಮದಿಕ್ಕಿಗಿದ್ದು ಅದಕ್ಕೆ ಖಡ್ಗತೀರ್ಥ ಅಥವಾ ಧಾರಾತೀರ್ಥವೆಂಬ ಹೆಸರಾಯಿತು.[೧] ಸೋಮೇಶ್ವರನ ಪಲ್ಲಕ್ಕಿಯ ಉತ್ಸವವು ಪ್ರತಿವರ್ಷ ಚೈತ್ರಶುದ್ಧ ಚತುರ್ದಶಿಯ ಮರುದಿನ ಈಗಲೂ ನಡಿಯುತ್ತಾ ಇದೆ. ಸೋಮೇಶ್ವರನ ಈ ದೇವಾಲಯವು ಅತ್ಯಂತ ಪವಿತ್ರ ಸ್ಥಾನವೆಂದು ಯಾವಾಗಲೂ ತಿಳಿಯಲ್ಪಡುತ್ತಾ ಬಂದಿರುತ್ತದೆ. ಆದಕ್ಕೆ ಬಹುಜನ ಅರಸರೂ ಮಾಂಡಲಿಕರೂ ಉಂಬಳಿಯನ್ನು ಹಾಕಿಕೊಡುತ್ತ ಬಂದಿದ್ದಾರೆ.

ಆದಯ್ಯನ ವಚನಗಳಲ್ಲಿ ಷಟ್‌ಸ್ಥಲಶಾಸ್ತ್ರದ ತತ್ವಗಳು ಬಹು ವಿಶದವಾಗಿ ವಿವರಿಸಲ್ಪಟ್ಟಿವೆ. ವಾಚಕರು ಅವನ ಮೂಲ ವಚನ ಗ್ರಂಥವನ್ನೇ ಓದತಕ್ಕದ್ದು. ಆದಯ್ಯನು ಬಸವೇಶ್ವರನಕಿಂತಲೂ ಸ್ವಲ್ಪ ಈಚಿನವನಿದ್ದಾನೆಂದು ತೋರುತ್ತದೆ. ಈ ಸಂಗತಿಯನ್ನು ಸಮರ್ಥಿಸುವ ಕೆಳಗಿನ ವಚನಗಳನ್ನು ವಾಚಕರು ಅವಲೋಕಿಸಬೇಕು.

## ವಚನಗಳು.

(೧) ಬಸವಣ್ಣನ ಭಕ್ತಿಸ್ಥಲ, ಮಡಿವಾಳ **ಮಾಚಣ್ಣನ** ಮಹೇಶ್ವರಸ್ಥಲ, ಘಟ್ಟಿವಾಳಯ್ಯ ಮುದ್ದಣ್ಣನ ಪ್ರಸಾದಿಸ್ಥಲ, ಚನ್ನಬಸವಣ್ಣನ ಪ್ರಾಣಲಿಂಗಿಸ್ಥಲ, ಪ್ರಭುವಿನ ಶರಣಸ್ಥಲ, ಸೊಡ್ಡಳ ಬಾಚರಸರ ಐಕ್ಯಸ್ಥಲ, ಅಜಗಣ್ಣನ ಆರೂಢ, ನಿಜಗುಣನ ನಿಷ್ಠೆರಗು, ಅನುಮಿಷನ ನಿಶ್ಚಲ, ಮಹಾದೇವಿಯಕ್ಕನ ಜ್ಞಾನ, ನಿಂಬಿಯಕ್ಕನ ಜ್ಞಾನ ನಿಶ್ಚಯ, ಮುಕ್ತಾಯಕ್ಕನ ಅಕ್ಕರು, ಸತ್ಯಕ್ಕನ ಯುಕ್ತಿ, ಅಲ್ಲಾಳಿಯಕ್ಕನ ಸಮತೆ, ರೇವಣಸಿದ್ಧಯ್ಯದೇವರ ನಿಷ್ಠೆ, ಸಿದ್ಧರಾಮತಂದೆಗಳ ಮಹಿಮೆ, ಮರುಳ

**೧. ಈ ಸ್ಥಾನವನ್ನು ಲಕ್ಷ್ಮೇಶ್ವರವನ್ನು ಆಳುತ್ತಿದ್ದ ಈಗಿನ ಪ್ರಭುಗಳು ಕೆಲವು ವರ್ಷಗಳ ಹಿಂದೆ ಮುಚ್ಚಿಸಿಬಿಟ್ಟಿದ್ದಾರೆಂದು ತಿಳಿಯುತ್ತದೆ. —ಸಂಪಾದಕ.**

ಸಿದ್ಧಯ್ಯದೇವರ ಅಸ್ಪೃಷ್ಟ ಪ್ರಸಾದ ನಿಷ್ಠೆ, ಏಕೋರಾಮಯ್ಯಗಳ ಆಚಾರ ನಿಷ್ಠೆ, ಪಂಡಿತಾರಾಧ್ಯರ ಸ್ವಯಂಪಾಕ, ಮುಗ್ಧಸಂಗಯ್ಯ, ಮೈದುನ ರಾಮಣ್ಣ, ಬೇಡರ ಕನ್ನಪ್ಪ, ಕೋಳೂರು ಕೊಡಗೂಸು, ತಿರುನೀಲ ನಕ್ಕರು, ರುದ್ರಪಶುಪತಿಗಳು, ದೀಪದ ಕಲಿಯುರು, ಇವರ ಮುಗ್ಧಭಕ್ತಿ ಎನ್ನೊಳಗೆಂದಿಪ್ಪುದೋ ಸೌರಾಷ್ಟ್ರ ಸೋಮೇಶ್ವರಾ?

೨. ಬಸವಣ್ಣನೆನ್ನಂಗ, ಮಡಿವಾಳನೆನ್ನಮನ, ಪ್ರಭುವು ಎನ್ನ ಪ್ರಾಣ, ಚನ್ನಬಸವಣ್ಣನೆನ್ನ ಕರಸ್ಥಲದ ಲಿಂಗ. ಘಟ್ಟಿವಾಳನೆನ್ನ ಭಾವ, ಸೊಡ್ಡಳಬಾಚರಸರೆನ್ನ ಅರಿವು, ಮಹಾದೇವಿಯಕ್ಕನೆನ್ನ ಜ್ಞಾನ, ಮುಕ್ತಾಯಕ್ಕನೆನ್ನ ಅಕ್ಕರು, ಸತ್ಯಕ್ಕನೆನ್ನ ಮುಕ್ತಿ, ನಿಂಬಿಯಕ್ಕನೆನ್ನ ನಿಶ್ಚಯ, ಅಲ್ಲಾಳಿಯಕ್ಕನೆನ್ನ ಸಮತೆ, ಅನುಮಿಷನೆನ್ನ ನಿಷ್ಕಲ, ನಿಜಗುಣನೆನ್ನ ಕ್ಷಮೆ, ರೇವಣಸಿದ್ಧೇಶ್ವರನೆನ್ನ ನೇತ್ರ, ಸಿದ್ಧರಾಮತಂದೆಗಳೆನ್ನ ನೇತ್ರದ ದೃಕ್ಕು, ಮರುಳಸಿದ್ಧೇಶ್ವರದೇವರೆನ್ನ ಶ್ರೋತ್ರ, ಪಂಡಿತಾರಾಧ್ಯರೆನ್ನ ಜಿಹ್ವೆ, ಏಕೋರಾಮತಂದೆಗಳೆನ್ನ ನಾಸಿಕ, ಅಸಂಖ್ಯಾತರೆನ್ನ ಅವಯವ, ಪುರಾತರೆನ್ನ ಪುಣ್ಯದ ಪುಂಜ, ಏಳುನೂರೆಪ್ಪತ್ತು ಅಮರಗಣಂಗಳೆನ್ನ ಗತಿ ಮತಿ. ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರ ಪಡಿದೊತ್ತಯ್ಯ.

ಈ ವಚನಗಳಲ್ಲಿ ಉಲ್ಲೇಖವಾದ ಶಿವಶರಣರ ತರುವಾಯ ಆದಯ್ಯನು ಪ್ರಸಿದ್ಧಿಗೆ ಬಂದಿದ್ದಾನೆಂದು ತೋರುತ್ತದೆ. ಆದಯ್ಯನು ಬಸವೇಶ್ವರನಲ್ಲಿಗೆ ಹೋಗಿ ಶಿವಾನುಭವ ಮಂಟಪದಲ್ಲಿದ್ದುದರ ಉಲ್ಲೇಖವು ಎಲ್ಲಿಯೂ ಇಲ್ಲ. ಆದುದರಿಂದ ಬಸವೇಶ್ವರನ ತರುವಾಯ ಇವನು ಪ್ರಸಿದ್ಧಿಗೆ ಬಂದಿದ್ದಾನೆಂದು ತಿಳಿಯಬೇಕಾಗುತ್ತದೆ. ಆದರೆ ಇವನ ಚರಿತ್ರೆಯನ್ನು ಹರಿಹರ ಮತ್ತು ರಾಘವಾಂಕರು ಬರೆದಿದ್ದಾರೆ. ಈ ಕವಿಗಳು ಇದ್ದುದು ೧೩ನೇ ಶತಮಾನದ ಆರಂಭದಲ್ಲಿ. ಆದ್ದರಿಂದ ಅವರಕಿಂತಲೂ ಪೂರ್ವದಲ್ಲಿ ಆದಯ್ಯನು ಇರಬೇಕು. ಅಲ್ಲದೆ ಅವನ ಕಾಲದಲ್ಲಿ ಲಕ್ಷ್ಮೇಶ್ವರವು ಇನ್ನೂ ವೀರಶೈವರಿಂದ ತುಂಬಿರದೆ ಜೈನ ಸಂಸ್ಕೃತಿಯುಳ್ಳದ್ದಾಗಿತ್ತು. ಆದ್ದರಿಂದ ಆದಯ್ಯನು ಬಸವೇಶ್ವರನಕಿಂತ ಬಹಳ ಈಚಿನವನಲ್ಲ. ಅವನು ೧೧೭೦ ರ ತರುವಾಯ ೧೦-೨೦ ವರ್ಷಗಳಲ್ಲಿಯೇ ಪ್ರಸಿದ್ಧಿಗೆ ಬಂದಿರಬಹುದೆಂದು ನಾವು ಊಹಿಸಬಹುದು.

---

# ನನ್ನಯ್ಯ.

ಒಡ್ಡದೇಶ (ಓಡಿಸಾಪ್ರಾಂತ) ದಲ್ಲಿ ಕರ್ಣಿಕಾಪುರವೆಂಬ ಗ್ರಾಮವು. ಅಲ್ಲಿ ಸುಜ್ಞಾನಿದೇವರೆಂಬ ಹೆಸರಿನ ದಾಸೋಹಿಗಳು ವಾಸಮಾಡುತ್ತಿದ್ದರು. ಅವರು ಕೇವಲ ಶಿವಾಚಾರನಿಷ್ಠರು, ಶಿವಜ್ಞಾನಿಗಳು. ಅವರು ವೀರಶೈವೋಪದೇಶವನ್ನು ಮಾಡುತ್ತ ದೀಕ್ಷಾದಿ ಕಾರ್ಯಗಳನ್ನು ನೆರವೇರಿಸುತ್ತಾ ಇದ್ದರು. ಅವರು ಕಲ್ಯಾಣಪಟ್ಟಣದಲ್ಲಿ ಬಸವಾದಿ ಪ್ರಮುಖರು ಶಿವಾನುಭವಿಗಳಾಗಿರುವರೆಂಬುದನ್ನು ತಿಳಿದು ಆ ಪಟ್ಟಣಕ್ಕೆ ತಮ್ಮ ಸೇವಕರನ್ನೊಡಗೊಂಡು ಹೊರಡುವವರಾದರು. ಕಲ್ಯಾಣವು ತಮ್ಮ ಗ್ರಾಮದಿಂದ ಬಹು ದೂರವು. ಅವರು ಅನೇಕ ಅರಣ್ಯಗಳೊಳಗಿಂದ ಹಾಯ್ದು ಹೋಗಬೇಕಾಗುತ್ತಿತ್ತು. ಅವರು ಹೋಗುವಾಗ ದಾರಿಯಲ್ಲಿ ಮಾತಂಗ ಪರ್ವತವೆಂಬ ಪರ್ವತದೊಳಗಿಂದ ಹಾಯ್ದು ಹೋಗುತ್ತಿರಲು ಹಲವರು ಮೈಮೇಲೆಲ್ಲ ಗಾಯಹೊಂದಿ ನೆತ್ತರು ಮುಳುಗಿದವರಾಗಿ ಇದಿರಿಗೆ ಬರುತ್ತಾ ಇದ್ದುದನ್ನು ಕಂಡರು. ಆ ಜನರು ಸುಜ್ಞಾನಿಗಳನ್ನು ಕಂಡು ಅವರಿಗೆ— ನೀವೆಲ್ಲಿಗೆ ಪಯಣಮಾಡುತ್ತೀರೆಂದು ಕೇಳಲು, ಅವರು ಕಲ್ಯಾಣಕ್ಕೆಂದೆನಲು ಅವರಂದದ್ದು— ನೀವು ಈ ದಾರಿಯಿಂದ ಹೋಗಬೇಡಿರಿ, ನಾವು ಎಂಟು ಜನರು ಇದ್ದು ಈ ದಾರಿಯಿಂದ ಹೋಗುವಾಗ ಮಾತಂಗತಮ್ಮನೆಂಬ ಬೇಡನು ನಮ್ಮನ್ನು ಅಡ್ಡಗಟ್ಟಿ ನಮ್ಮಲ್ಲಿ ಆರು ಜನರನ್ನು ಕೊಂದುಹಾಕಿ ನಮ್ಮನ್ನು ಹೀಗೆ ಗಾಯಗೊಳಿಸಿ ಸುಲಿದುಬಿಟ್ಟಿದ್ದಾನೆ. ನಿಮಗೆಲ್ಲಿಯ ಪಯಣ? ಮುಂದೆ ಹೋಗುವದು ಉಚಿತವಲ್ಲ, ಎಂದು ಹೇಳಲು ಸುಜ್ಞಾನಿಗಳ ಸೇವಕರೆಲ್ಲರು ಅಂಜಿ— ಈ ಮಾರ್ಗದಲ್ಲಿ ನಿಮ್ಮ ಕೂಡ ನಾವು ಬರಲಾರೆವು ಎಂದು ನುಡಿಯಲು, ಸುಜ್ಞಾನಿದೇವರು ಅವರಿಗೆ— ನಿಮ್ಮಲ್ಲಿ ಭೀತಿಯುಂಟಾಗಿದ್ದರೆ, ನೀವು ತಿರುಗಿ ಹೋಗಬಹುದು ಎಂದು ಅಪ್ಪಣೆ ಕೊಡಲು ಅವರೆಲ್ಲರೂ ತಿರುಗಿ ತಮ್ಮ ಊರಿಗೆ ಹಿಂದಿರುಗಿ ಹೋದರು.

ಆದರೆ ಸುಜ್ಞಾನಿದೇವರು ಮುಂದೆ ಹೋಗಲು ಅಂಜಲಿಲ್ಲ. ಅವರು ತಮ್ಮ ಯಾವತ್ತು ಪೂಜೋಪಕರಣಗಳಿದ್ದ ಹಸಿಬೆಯನ್ನು ತಾವೇ ಹೊತ್ತುಕೊಂಡು ಎರಡು ಗಾವುದ ದಾರಿ ನಡೆದು ಬರುವಷ್ಟರಲ್ಲಿ ದಾರಿಯಲ್ಲಿ ಮಾತಂಗತಮ್ಮನು ಇದಿರಿಗೆ ಅಡ್ಡ ನಿಂತದ್ದನ್ನು ಕಂಡರು. ಆಗ

ಅವರು ನಿರ್ಭೀತಿಯಿಂದ ಮುಂದಕ್ಕೆ ಸಾಗಿ ಅವನಿದಿರಿಗೆ ಬಂದು ನಿಂತು ಕೊಂಡರು. ಮಾತಂಗತಮ್ಮನು— ಹೀಗೆ ಯಾರೂ ಅಂಜದೆ ನನ್ನ ಕಡೆಗೆ ಬಂದವರಿಲ್ಲ. ಈತನು ಮಾತ್ರ ಸ್ಥಿರಪ್ರವೃತ್ತಿಯನು ಎಂದು ಆಶ್ಚರ್ಯಪಟ್ಟನು. ಆದರೆ ಕೂಡಲೆ ಅವನು ಅವರಿಗೆ— ನಾನು ನಿಮ್ಮನ್ನು ಸುಲಿಯಲಿಕ್ಕೆ ನಿಂತಿದ್ದೇನೆ. ನೀವಾರು, ಸೀವೆಲ್ಲಿಯವರು ಎಂದು ಕೇಳಲು, ಅವರು ತಮ್ಮ ಹೆಸರನ್ನೂ ವಾಸಿಸುವ ಗ್ರಾಮವನ್ನೂ ತಮ್ಮ ಮುಂದಿನ ಕಾರ್ಯ ವನ್ನೂ ಹೇಳಿದರು. ಅದನ್ನು ಕೇಳಿ ಆ ಬೇಡನು— ಆದರೇನಾಯಿತು? ನಿಮ್ಮ ಬೆನ್ನಮೇಲಿನ ಆ ಹಸಿಬೆಯನ್ನು ತೋರಿಸಿರಿ. ಅದರೊಳಗೆ ನನಗೆ ಬೇಕಾದಷ್ಟನ್ನು ತೆಗೆದುಕೊಂಡು ಉಳಿದಷ್ಟನ್ನು ನಿಮಗೆ ಕೊಟ್ಟೇನು ಎಂದು ಅಂದು ಅವನು ಸುಜ್ಞಾನಿದೇವರನ್ನು ಒತ್ತಟ್ಟಿಗೆ ಕರೆದುಕೊಂಡು ಹೋಗಿ ಒಂದು ಗಿಡದ ಕೆಳಗೆ ಕುಳ್ಳಿರಿಸಿ, ಅವರ ಹೆಗಲಮೇಲಿನ ಹಡಪವನ್ನು ಕೆಳಗಿಡಿಸಿ, ಇದರೊಳಗೇನಿದೆ ಎಂದು ಕೇಳಿದನು. ಅವರು ಅದನ್ನು ತೆರೆದು ತೋರಿಸಲು, ಅದರಲ್ಲಿ ಬರೇ ಲಿಂಗಗಳೇ ಇದ್ದವು. ಅವುಗಳನ್ನು ನೋಡಿ ಇವೇನೆಂದು ಕೇಳಲು, ಅವು ಲಿಂಗಗಳೆನಲು, ಇವೇನ ಕೊಡುವವು ಎನಲು, ಇವು ಹೆಣ್ಣು, ಹೊನ್ನು, ರಾಜಭೋಗ ಗಳನ್ನು ಕೊಡುವವು ಎಂದು ಹೇಳಿದರು.

ಆಗ ಆ ಮಾತಂಗನಿಗೆ ಆಶೆಯುಂಟಾಗಿ ಆ ಲಿಂಗಗಳಲ್ಲೊಂದನ್ನು ಕಯ್ಯಲ್ಲಿ ಹಿಡಿದುಕೊಂಡು, ಇದನ್ನು ನನಗೆ ಕೊಡು ಎಂದು ಎನ್ನಲು ಸುಜ್ಞಾನಿದೇವರು ಇದನ್ನು ಗುರುವಿನಿಂದ ತೆಗೆದುಕೊಳ್ಳಬೇಕು, ಬಲು ಹಿನಿಂದ ಹೀಗೆ ಸೆಳೆದರೆ ಸುಖವಾಗದು ಎಂದೆನಲು, ಆಗ ಬೇಡನು— ಗುರುವೆನ್ನುವವನು ಯಾವನು? ಅವನೆಲ್ಲಿದ್ದಾನೆ? ಆತನನ್ನು ಕರೆತಂದರೆ ನಿನ್ನನ್ನು ಬಿಟ್ಟುಬಿಡುವೆನು ಎಂದು ಎನಲು, ನೀ ಕೇಳಿದ ಗುರುವು ದೂರವಿಲ್ಲ. ನಿನ್ನೆದುರಿಗೆಯೇ ನಿಂತಿದ್ದಾನೆ ಎಂದು ಹೇಳಿ, ಸುಜ್ಞಾನಿ ದೇವರು ಅವನಿಗೆ— ನಿನಗೆ ಈ ಲಿಂಗವು ಬೇಕಾಗಿದೆಯಷ್ಟೇ. ಕೊಡು ವೆನು—ಆದರೆ ನಿನ್ನ ಹಿಂದೆ ಯಾರಾದರೂ ಇದ್ದಾರೆಯೋ ಎಂದು ಕೇಳಲು ಅವನು— ಹೌದು. ನನ್ನ ಹೆಂಡತಿಯೊಬ್ಬಳು ಇದ್ದಾಳೆ ಎನಲು, ಸುಜ್ಞಾ ನಿಯು—ಅವಳು ಇಲ್ಲಿ ಬೇಕು. ಆದ್ದರಿಂದ ಅವಳನ್ನು ಕರೆಯಲಿಕ್ಕೆ ನಿನ್ನ ಜೋಡಿಗನೊಬ್ಬನನ್ನು ಕಳಿಸು. ಅವನು ಸುತ್ತಲೂ ನೋಡಿ— ಇಲ್ಲಿ ಯಾರೂ ಇಲ್ಲವಲ್ಲಾ, ನೀನು ಒಬ್ಬನನ್ನು ಕರೆದುಕೊಂಡುಬಾ ಎಂದೆನ್ನಲು

ಆ ಬೇಡನು— ಭಪ್ಪರೇ, ನೀನು ಒಳ್ಳೇ ಬುದ್ಧಿವಂತ. ನನ್ನನ್ನು ಹೀಗೆ ಬೇರೆ ಕಡೆಗೆ ಕಳಿಸಿ, ನೀನು ನನ್ನನ್ನು ವಂಚಿಸಿ ಓಡಿಹೋಗಬೇಕೆನ್ನುತ್ತೀಯಾ? ಎಂದೆನ್ನಲು, ಸುಜ್ಞಾನಿದೇವರು— ಇಲ್ಲ, ಇಲ್ಲ. ನಾನು ವಂಚಿಸುವದಿಲ್ಲ. ನಿನಗೆ ಸಂಬಂಗೆ ಕೊಡುತ್ತೇನೆ ಎಂದೆನ್ನಲು, ಆ ಬೇಡನು ಅಲ್ಲಿಂದ ಹೋಗಿ ತನ್ನ ಕಾವಲರಲ್ಲೊಬ್ಬನಾದ ಕನ್ನುಗನೆಂಬುವನನ್ನು ಅಲ್ಲಿಗೆ ಕರೆದು ಕೊಂಡುಬಂದನು. ತಾಪಿಲ್ಲದಾಗ ಸುಜ್ಞಾನಿದೇವರು ಓಡಿಹೋಗದೆ ಅಲ್ಲಿಯೇ ಇದ್ದದ್ದನ್ನು ಕಂಡು ಅವರ ಮಾತಿನಲ್ಲಿ ಹೆಚ್ಚಿಗೆ ವಿಶ್ವಾಸ ವನ್ನು ತಾಳಿ ಅವರನ್ನು ಮತ್ತಿಷ್ಟು ಆದರಿಸುವವನಾದನು.

ಆಗ ಸುಜ್ಞಾನಿದೇವರು ಅವನಿಗೆ— ಇನ್ನುಮೇಲೆ ನಿನ್ನ ಹೆಂಡತಿ ಯನ್ನು ಕರಿಸು, ನಿನಗೆ ಲಿಂಗವನ್ನು ಕೊಡುತ್ತೇನೆ ಎಂದು ಹೇಳಲು, ಆ ಬೇಡನು ಅವಳನ್ನು ಕರೆತರಲು ಕನ್ನುಗನನ್ನು ಊರ ಕಡೆಗೆ ಕಳಿ ಸಿದನು.

ದೀಕ್ಷೆಯನ್ನು ಪಡೆಯುವಂಥವನ ಮನೆಯವರೆಲ್ಲರೂ ಸದಾಚಾರಿಗ ಳಿರಬೇಕೆಂದು ಶಿವಾನುಭವದ ತತ್ವವಿದೆ. ವಿಶೇಷವಾಗಿ ಅವರಲ್ಲಿ ಸತಿಯು ಸುಶೀಲೆಯಾಗಿರಬೇಕು. ‘ಸತಿಪತಿಗಳೊಂದಾಗದ ಭಕ್ತಿ ಅಮೃತ ದೊಳು ವಿಷ ಬೆರಸಿದಂತೆ’ ಮತ್ತು ‘ಭಾಂಡ ಭಾಜನ ಶುದ್ಧಿ ಇಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ’ ಎಂದು ಶಿವಶರಣರ ವಾಕ್ಯಗಳುಂಟು. ಆದ್ದರಿಂದ ಬೇಡನ ಸತಿಯು ಗುಣಗಳನ್ನು ಪರೀಕ್ಷಿಸಬೇಕೆಂದು ಸುಜ್ಞಾನಿದೇವರು ಯೋಚಿಸಿ ಕನ್ನುಗನನ್ನು ಬೇರೆ ಕಡೆಗೆ ಕರೆದು— ಪರರಾಯರು ಬೇಟೆಗೆ ಬಂದಾಗ ಅವರಿಗೂ ಮಾತಂಗತಮ್ಮನಿಗೂ ಜಗಳವಾಯಿತು. ಅದರಲ್ಲಿ ಅವರು ಅವನನ್ನು ಕೊಂದುಹಾಕಿದರು ಎಂದು ಬೇಡನ ಸತಿಗೆ ಹೇಳು, ಎಂದೆ ನ್ನಲು, ಅವನು ಹಾಗೆಯೇ ಆಗಲೆಂದು ಅವನು ಅವಳಿದ್ದಲ್ಲಿಗೆ ಹೋಗಿ ಅದರಂತೆಯೇ ಹೇಳಿ, ಅವಳಿಗೆ— ನೀನು ನಿನ್ನ ಗಂಡನ ಹೆಣವನ್ನು ನೋಡಲಿಕ್ಕೆ ಬರಬೇಕೆಂದು ನುಡಿದನು. ಅದಕ್ಕೆ ಅವಳು— ನಾ ಬಂದೇನು ಮಾಡುವದು? ನನ್ನ ಗಂಡನ ಅನ್ಯಾಯಕ್ಕೆ ಅವನನ್ನು ಪರರಾಯರು ಕೊಂದಿರಬಹುದು. ಇಷ್ಟುದಿನ ಅವನು ತನ್ನ ಬಲುಮೆಯಿಂದ ನನ್ನನ್ನು ಆಳಿದನು. ಅವನು ಸತ್ತದ್ದು ಒಳಿತಾಯಿತು ಎಂದು ಅಂದು, ಮುತ್ತುಗ

ನೆಂಬ ಇನ್ನೊಬ್ಬ ಬೇಡನನ್ನು ಕರೆದುಕೊಂಡು ಮನೆಯನ್ನು ಬಿಟ್ಟು ಅವನೊಡನೆ ಹೊರಟುಹೋದಳು. ಆಗ ಕನ್ನಗನು ತಿರುಗಿ ಬಂದು ನಡೆದ ಸಂಗತಿಯನ್ನು ಮಾತಂಗತಮ್ಮನಿಗೆ ಹೇಳಲು, ಸುಜ್ಞಾನಿಗಳು ಅವನಿಗೆ— ನೀನೇ ಊರಿಗೆ ಹೋಗಿ ನಿನ್ನ ಹೆಂಡತಿಯನ್ನು ನೋಡಿಕೊಂಡು ಬಾ ಎಂದು ಕಳುಹಲು ಅವನು ತನ್ನ ಗೃಹಕ್ಕೆ ಬಂದು ನೋಡುತ್ತಾನೆಯೇ ಅಲ್ಲಿ ಯಾರೂ ಇಲ್ಲದಿರಲು ಅವನು ಸುಜ್ಞಾನಿಗಳ ಕಡೆಗೆ ಮರಳಿ ಬಂದು ಅವರಿಗೆ ಅತ್ಯಂತ ಕ್ರೋಧಾವೇಶದಿಂದ· ಅಂದದ್ದು— ನನ್ನ ಹೆಂಡತಿಯನ್ನು ಎತ್ತಿಕೊಂಡು ಹೋಗಿದ್ದಾರೆ. ಆಕೆಯನ್ನು ತೆಗೆದುಕೊಂಡು ಹೋದ ಮುತ್ತಗನನ್ನು ಕೊಂದುಹಾಕದೆ ಬಿಡೆನು ಎಂದು ಹೊರಡಲು ಉದ್ಯುಕ್ತನಾದನು. ಅದಕ್ಕೆ ಸುಜ್ಞಾನಿಗಳು ಅವನಿಗೆ— ಮಾತಂಗನೇ, ನಿನ್ನ ಕಂಡವರು, ಕೇಳಿದವರು ಇಂಥ ಸಮರ್ಥನ ಹೆಂಡತಿಯು ಓಡಿಹೋದಳಂತೆ, ಅವಳನ್ನು ಹುಡುಕಲಿಕ್ಕೆ ಇವನು ಬಂದಾನಂತೆ, ಅಂಥವಳನ್ನು ಈವನು ಆಳುವವನಂತೆ! ಇವನೆಂಥ ಸಮರ್ಥನು!! ಎಂದು ನಿನ್ನನ್ನು ನೋಡಿ ಜನರು ನಕ್ಕಾರಲ್ಲವೇ? ಎಂದು ನುಡಿದು ಭಾವಕೀ, ಪುಷ್ಕಳೆಯರ ಕಥೆಗಳನ್ನು ಹೇಳಿದನು. ಆಗ ಬೇಡನು— ಹೌದು ನೀವನ್ನುವದು ನಿಜವಾದದ್ದು. ಅವನನ್ನು ಹುಡುಕುತ್ತ ಹೋಗುವದು ನನಗೆ ಅಪಮಾನಕಾರಕವು, ಎಂದು ಅಂದು ಅವನ ಬೆನ್ನು ಹತ್ತಿ ಹೋಗುವದನ್ನು ಬಿಟ್ಟುಬಿಟ್ಟನು.

ಆದರೆ ಮಾತಂಗತಮ್ಮನು ಅಷ್ಟಕ್ಕೆ ಸಮಾಧಾನ ಹೊಂದಲಿಲ್ಲ. ಅವನು— ಆ ಎತ್ತಿಕೊಂಡು ಹೋದವನನ್ನು ನಾನು ಬಿಡುವೆನು. ಆದರೆ ನನ್ನ ಸತಿ ಇದ್ದಲ್ಲಿಗೆ ಹೋಗಿ ಅವಳನ್ನು ಕೊಂದುಹಾಕಿಬಿಡುವೆನೆಂದು ನುಡಿಯಲು ಸುಜ್ಞಾನಿದೇವರು— ಹಾಗೆ ಮಾತ್ರ ಮಾಡಬೇಡ. ನೋಡು, ಹಿಂದೆ ಆಗಿಹೋದ ಮಹಾಪುರುಷರು—ಮಹಾಬಲರಾಯ, ಯಶೋಧರಭೂಪ, ಧನಸೇನಸೆಟ್ಟಿ— ಇಂಥ ಶಿವಶರಣರು ತಮ್ಮ ಸ್ತ್ರೀಯರು ಜಾರತನ ಮಾಡಿದ್ದನ್ನು ನೋಡಿ ಅವರು ಅವರನ್ನು ಕೊಲ್ಲಲಿಲ್ಲ. ಅವರಿಗೆ ಸಂಸಾರದಲ್ಲಿ ಹೇಯಬುದ್ಧಿಯು ಉಂಟಾಗಿ ಅವರು ತಮ್ಮ ರಾಜ್ಯವನ್ನೂ ಮನೆಯನ್ನೂ ಬಿಟ್ಟುಕೊಟ್ಟು ತಪಕ್ಕೆ ಹೋದರು, ಎಂದು ಅವರ ಕಥೆಗಳನ್ನು ಹೇಳಲು ಬೇಡನ ಕೋಪವು ಅಡಗಿತು.

ಆಮೇಲೆ ಸುಜ್ಞಾನಿದೇವರು—ಮಾತಂಗನೇ ಇಂಥ ಕೆಟ್ಟ ಸ್ತ್ರೀಯರ ಕಥೆಗಳನ್ನು ಬಿಡು. ಸೀತೆ, ದ್ರೌಪದಿಯರಂಥ ಸದಾಚಾರಿಗಳಾದ ಸ್ತ್ರೀಯರ ಚರಿತ್ರೆಗಳನ್ನು ಕೇಳು ಎಂದು ಆ ಬೇಡನಿಗೆ ಅವರ ಕಥೆಗಳನ್ನು ಹೇಳಿದನು. ಅವರಿಂದ ರಾವಣ ಕೀಚಕರಂಥ ದುಷ್ಟರು ಹೇಗೆ ಹತರಾದರೆಂಬುದನ್ನು ತಿಳಿಸಿಹೇಳಿ ಸ್ತ್ರೀಯರಿಂದ ಲೋಕೋದ್ಧಾರವಾಗುತ್ತದೆ, ಸ್ತ್ರೀಹತ್ಯ ಮಾಡಬಾರದು ಎಂದು ಬೋಧಿಸಿದನು. ಆಗ ಮಾತಂಗ ತಮ್ಮನು ಸುಜ್ಞಾನಿದೇವರ ಮಾತು ಸರಿಯಾದದ್ದೆಂದು ಒಡಂಬಟ್ಟು—ನನ್ನ ಆ ಕೆಟ್ಟ ಸತಿಯನ್ನು ಇಂದು ಬಿಟ್ಟುಬಿಟ್ಟೆನು, ಹಿಂಸಿಸುವದಿಲ್ಲೆಂದು ಹೇಳಿದನು.

ಆಮೇಲೆ ಸುಜ್ಞಾನಿದೇವರು ಅವನಿಗೆ—ನಿನ್ನ ಪಿತಮಾತೆಯರುಂಟೇ ಎಂದು ಕೇಳಲು, ಅವನು-ನನ್ನ ಪಿತನು ಸರ್ಪ ಕಚ್ಚಿ ಸತ್ತನು, ಮಾತೆಯು ಮಹಾರೋಗದಿಂದ ಸತ್ತಳು ಎನ್ನಲು ನಿನ್ನಂಥ ಸಮರ್ಥ ಮಗನಿದ್ದು, ನಿನ್ನ ತಾಯಿತಂದೆಗಳು ಹೀಗೆ ಸಾಯಬೇಕೇ? ಅವರ ಸಾವನ್ನು ನೀನು ಏಕೆ ನಿಲ್ಲಿಸಲಿಲ್ಲ? ಎಂದು ಕೇಳಿದನು. ಅದಕ್ಕೆ ಮಾತಂಗತಮ್ಮನು—ಅದು ನನ್ನ ಕಯ್ಯೊಳಗಿಲ್ಲ ಎಂದು ಹೇಳಿದನು. ಆಗ ಸುಜ್ಞಾನಿದೇವರು—ನೀನು ದಿನಾಲು ಅರಣ್ಯದಲ್ಲಿ ತಿರುಗಾಡುತ್ತೀ. ನಿನಗೆ ಸರ್ಪ ಕಚ್ಚಿರುವದಿಲ್ಲ. ನಿನ್ನ ತಂದೆಗೇಕೆ ಕಚ್ಚಬೇಕು? ನಿನ್ನ ತಾಯಿಗೆ ಮಹಾರೋಗದಂಥ ಕೆಟ್ಟ ಬೇನೆಯು ಬಂದು ಆಕೆ ಏಕೆ ಬಳಲಿ ಸಾಯಬೇಕು? ಎಂದು ಕೇಳಲು—ಅದು ನನಗೆ ತಿಳಿಯದು. ನಿನಗೆ ಗೊತ್ತಿದೆಯೋ? ಎಂದು ಕೇಳಿದನು.

ಅದಕ್ಕೆ ಸುಜ್ಞಾನಿದೇವರು— ನಿನ್ನ ತಂದೆ ತಾಯಿಗಳು ಹಿಂದಣ ಜನ್ಮನಲ್ಲಿ ಮಾಡಿದ್ದನ್ನು ಅವರು ಅನುಭವಿಸಿದರು. ಅವರು ತಮ್ಮ ಪಾಪದ ಫಲವನ್ನು ಉಂಡರು. ಆದ್ದರಿಂದ ಅವರನ್ನು ಕಾಯಲಿಕ್ಕೆ ನಿನಗೆ ಆಗಲಿಲ್ಲ. ನೀನು ಮಾಡಿದ ಪುಣ್ಯಪಾಪಗಳ ಫಲವನ್ನು ನೀನು ಅನುಭವಿಸುತ್ತೀ. ಜಗತ್ತಿನಲ್ಲಿ ನಿನಗೆ ಸಹಾಯಕರಾರೂ ಇಲ್ಲ ಮಗನೇ. ನೀನು ಪುಣ್ಯ ಮಾಡಿದಲ್ಲಿ ನೀನು ಸುಖಿಯಾಗಿ ಬಾಳುವಿ. ಪಾಪ ಮಾಡಿದರೆ ಕಷ್ಟವನ್ನು ಅನುಭವಿಸುವಿ. ಜಗತ್ತಿನಲ್ಲಿ ಯಾರಿಗೂ ಯಾರು ಇಲ್ಲ, ಎಂದು ಹೇಳಿದರು.

ಈ ನುಡಿಗಳು ಮಾತಂಗತಮ್ಮನ ಮನಸ್ಸನ್ನು ಬಲವಾಗಿ ತಾಗಿದವು ಆಗ ಅವನಲ್ಲಿ ಪಾಪ ಪುಣ್ಯಗಳೆಂಬವು ಇವೆ ಎಂಬ ಕಲ್ಪನೆಯುಂಟಾಗಿ ಅವನು— ನಾನು ಮಾಡಬೇಕಾದ ಪುಣ್ಯಕಾರ್ಯಗಳಾವವು? ಎಂದು ಕೇಳಿದನು. ಆಗ ಸುಜ್ಞಾನಿದೇವರು— ನೀನು ಜೀವ ಹಿಂಸೆ ಮಾಡುತ್ತೀ. ಇದು ಪಾಪವು. ಹೀಗೆ ಮಾಡಬೇಡ. ಸರ್ವ ಜೀವಿಗಳನ್ನು ನಿನ್ನಂತೆ ಭಾವಿಸು. ಇದೇ ಪುಣ್ಯವು ಎಂದು ಹೇಳಿ, ನರಮಾಂಸವನ್ನು ಭಕ್ಷಿಸುತ್ತಿದ್ದ ಮಹಾರಾಜನು ತನ್ನ ಮಗನ ಮಾಂಸವನ್ನು ತಿಂದು ಹೇಗೆ ದುರ್ಗತಿಗಿಳಿದನೆಂಬ ಕಥೆಯನ್ನು ಹೇಳಿದನು. ನೀನು ತಿನ್ನುವ ಮಾಂಸವು ಹೇಯವಾದದ್ದು. ಒಂದು ದಿವಸ ಇಟ್ಟರೆ ಅದು ಕೊಳೆತು ದುರ್ಗಂಧದಿಂದ ನಾರಹತ್ತುತ್ತದೆ. ಅದನ್ನು ಸೇವಿಸ ಬೇಡ ಎಂದು ಬೋಧಿಸಿದನು. ಆಮೇಲೆ ಅವನು ಅಹಿಂಸೆಯನ್ನು ಪಾಲಿಸಿದ ಅನೇಕ ಶಿವಶರಣರ ಚರಿತ್ರೆಗಳನ್ನು ಹೇಳಿ ಅವರ ಈ ವರ್ತನೆಯೇ ಪುಣ್ಯವೆಂದು ತಿಳಿ ಎಂದು ಸತ್ಯವ್ರತನ ಕಥೆಯನ್ನು ಹೇಳಿದನು. ಕೆಲವು ವ್ಯಾಧರು ದಾರಿಕಾರರನ್ನು ಅಡವಿಯಲ್ಲಿ ಅಟ್ಟಿಕೊಂಡು ಬರುತ್ತಿರಲು ಈ ದಾರಿಕಾರರು ಕೊಂಪೆಗಳಲ್ಲಿ ಬೇರೆ ಬೇರೆ ಕಡೆಗೆ ಅಡಗಿದರು. ಅವರಿಗೆ ಸಮೀಪವಾಗಿ ಸತ್ಯವ್ರತನೆಂಬ ಮುನಿಯು ತಪಸ್ಸು ಮಾಡುತ್ತಿದ್ದನು. ಆ ವ್ಯಾಧರು ಅವನಲ್ಲಿಗೆ ಬಂದು—ಓಡಿಹೋದವರು ಎಲ್ಲಿ ಅಡಗಿದ್ದಾರೆಂದು ಅವನನ್ನು ಕೇಳಿದರು. ಸತ್ಯವ್ರತನು ಯಾವಾಗಲೂ ಸತ್ಯವನ್ನು ನುಡಿಯುವವನು. ಆದ್ದರಿಂದ ಅವರು ಅಡಗಿದ ಸ್ಥಳವನ್ನು ಅವನು ತೋರಿಸಲು ವ್ಯಾಧರು ಅಲ್ಲಿದ್ದವರನ್ನೆಲ್ಲ ಸುಲಿದು ಕೊಂದುಹಾಕಿದರು. ಅವರೆ ಸ್ವಲ್ಪ ದೂರದಲ್ಲಿ ಒಬ್ಬ ಶ್ವಪಚನಿರಲು ಅವನನ್ನೂ ಅವರು ಕೇಳಲು ಅವನಿಗೆ ಅಡಗಿದ ಸ್ಥಳವು ಗೊತ್ತಿದ್ದರೂ ಅವನು ತನಗೆ ಗೊತ್ತಿಲ್ಲವೆಂದು ಸುಳ್ಳು ಹೇಳಿದನು. ಇದರಿಂದ ಅಲ್ಲಿ ಅಡಗಿದವರು ಪಾರಾಗಿ ಹೋದರು. ಇದರಿಂದ ತಪಸ್ಸು ಮಾಡುತ್ತಿದ್ದರೂ ಸತ್ಯವ್ರತನು ನರಕಕ್ಕೆ ಮತ್ತು ಶ್ವಪಚನು ಸುಳ್ಳು ಹೇಳಿದರೂ ಸ್ವರ್ಗಕ್ಕೆ ಹೋದರೆಂದು ಹೇಳಿ ಅಹಿಂಸಾಧರ್ಮವು ಎಷ್ಟು ಶ್ರೇಷ್ಠವಾದದ್ದೆಂಬುದನ್ನು ತಿಳಿಸಿ, ಇದೇ ಪುಣ್ಯವೆಂದು ಸುಜ್ಞಾನಿಗಳು ಹೇಳಿದರು.

ಈ ಕಥೆಗಳು ಮಾತಂಗತಮ್ಮನ ಮನದಲ್ಲಿ ಪರಿಣಾಮಮಾಡಿದ್ದನ್ನು ಸುಜ್ಞಾನಿದೇವರು ತಿಳಿದು— ನೀನು ಜೀವ ಹಿಂಸೆಯನ್ನು ಮಾಡಬೇಡ,

ದಾನಗುಣವುಳ್ಳವನಾಗಿರು, ಎಂದು ಬೋಧಿಸಿದರು. ಇದಕ್ಕೆ ಉದಾಹರಣೆಯಾಗಿ ಒಂದು ಗಿಡಗವು ಕಪೋತ ಪಕ್ಷಿಯನ್ನು ಬೆನ್ನಟ್ಟಲು ಆ ಪಕ್ಷಿಯು ಶಿಬಿಚಕ್ರವರ್ತಿಯು ಮೊರೆಹೊಗಲು ಅವನು ತನ್ನ ಮಾಂಸವನ್ನು ಕೊಟ್ಟು ಅದನ್ನು ಉಳಿಸಿದನು. ಆದ್ದರಿಂದ ಅವನಿಗೆ ಸದ್ಗತಿಯಾಯಿತು ಎಂದು ಹೇಳಿ ಅನ್ನದಾನ, ಗೋದಾನ ಮೊದಲಾದ ಷೋಡಶ ದಾನಗಳ ಕಥೆಗಳನ್ನು ಸುಜ್ಞಾನಿದೇವರು ಅವನಿಗೆ ವಿಸ್ತರಿಸಿ ಹೇಳಿದರು. ಈಪ್ರಕಾರ ಅವರು ಅವನಲ್ಲಿ ದಯಾಗುಣವನ್ನೂ ಧರ್ಮಬುದ್ಧಿಯನ್ನೂ ಹುಟ್ಟಿಸಿದರು.

ಸುಜ್ಞಾನಿದೇವರು ಮಾಡಿದ ಈ ಬೋಧೆಯಿಂದ ಆ ಬೇಡನ ಮನಸ್ಸು ತಿರುಗಿತು. ಅದನ್ನು ಅವರು ಕಂಡು, ಅವರು ಕೆಲವೊಬ್ಬ ಬೇಡನು ತನ್ನ ಇಬ್ಬರು ಮಕ್ಕಳಿಗೆ ಹರ, ಶ್ರಹರ ಎಂಬ ಹೆಸರನ್ನಿಟ್ಟು ತನ್ನ ಮರಣ ಕಾಲದಲ್ಲಿ ಅವರ ಹೆಸರುಗಳಿಂದ ಅವರನ್ನು ಕರೆಯಲು ಅವನು ಹರನಾಮವನ್ನು ಉಚ್ಚರಿಸಿದ್ದರಿಂದ ಅವನಿಗೆ ಹೇಗೆ ಮುಕ್ತಿಯಾಯಿತೆಂಬುದನ್ನು ಹೇಳಿ, ದೇವರ ನಾಮಸ್ಮರಣೆಯ ಮಹತ್ವವನ್ನು ವಿವರಿಸಿದರು. ಹೀಗೆ ನೀನು ಯಾವಾಗಲೂ ಶಿವನ ನಾಮಸ್ಮರಣೆಯನ್ನು ಮಾಡು ಎಂದು ತಿಳಿಸಿದರು. ಆ ಮೇಲೆ ಅವರು--ವ್ಯಾಧನೇ ನೀನು ಪುಣ್ಯವಾವುದೆಂಬುದನ್ನು ಕೇಳಿದೆಯಲ್ಲವೇ? ಹೀಗೆ ಆಚರಿಸುವದೇ ಪುಣ್ಯವು. ಹೀಗೆ ಆಚರಿಸಿದ್ದಾದರೆ ನಿನಗೆ ಸುಖವಾಗುವದು ಎಂದು ಹೇಳಿದರು.

ಆ ಮೇಲೆ ಸುಜ್ಞಾನಿದೇವರು ಅವನಿಗೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಇವುಗಳ ಮಹತ್ವವನ್ನು ವಿವರಿಸುವ ಅನೇಕ ಅಷ್ಟಾವರಣದ ಕಥೆಗಳನ್ನೂ ಪಂಚಾಚಾರಗಳ ರೀತಿಯನ್ನೂ ಹೇಳಿ, ಹೀಗೆ ಆಚರಿಸಿದ ಮಹಾನುಭಾವರಂತೆ ಆಚರಿಸು, ಎಂದು ಬೋಧಿಸಲಾಗಿ ಅವನು ಅವರಿಗೆ--ಇಂಥ ಆಚರಣೆಗಳ ಪ್ರಯೋಜನವೇನು? ಎಂದು ಕೇಳಲು, ಆದಕ್ಕೆ ಅವರು--ನೀನು ನನ್ನನ್ನು ಮೊದಲು ಕಂಡಾಗ ನನ್ನ ಹಸುಬೆಯಲ್ಲಿದ್ದ ಲಿಂಗವನ್ನು ಕೊಡಲು ಬೇಡಿದೆಯಲ್ಲವೇ? ನೀನು ಹೀಗೆ ಸದಾಚಾರಿಯಾಗಿ ನಡೆದರೆ, ಆ ಲಿಂಗವನ್ನು ಹೊಂದಲಿಕ್ಕೆ ನೀನು ಅರ್ಹನಾಗುವಿ. ಆ ಲಿಂಗವನ್ನು ನೀನು ಧರಿಸಿ ಪುಣ್ಯಕಾರ್ಯಗಳನ್ನು ಮಾಡಿದಲ್ಲಿ ನೀನು ಸುಖಿಯಾಗುವಿ ಎಂದು ಹೇಳಲು,

ಆಗನು ಆ ಲಿಂಗವನ್ನು ನನಗೆ ಕೊಡಿರಿ, ಹಾಗೆ ಆಚರಿಸುತ್ತೇನೆ, ಅದನ್ನು ನಾನು ಹೇಗೆ ಹೊಂದಬೇಕು? ಎಂದು ಕೇಳಲು ಸುಜ್ಞಾನಿದೇವರು—ಅದು ಗುರುವಿನಿಂದಾಗಬೇಕು. ತ್ರಿಶಂಕುವು ಗುರುವನ್ನು ಬಿಟ್ಟಿದ್ದರಿಂದ ಅವನು ಹೇಗೆ ದುರ್ಗತಿಗಿಳಿದನೆಂಬುದರ ಕಥೆಯನ್ನು ಹೇಳಿದರು. ಆಗ ಮಾತಂಗತಮ್ಮನು ಸಂತೋಷಬಟ್ಟು ನಾನು ಇನ್ನು ಮೇಲೆ ಲಿಂಗವನ್ನು ಪೂಜಿಸುತ್ತ, ಲಿಂಗಭಕ್ತಿಯನ್ನು ಮಾಡುತ್ತ, ಸುಖದಿಂದಿರುವ ಪದವನ್ನು ನೀವು ಕರುಣಿಸಬೇಕು ಸ್ವಾಮಿಾ, ಎಂದು ಬಿನ್ನವಿಸಿ ಅವರಿಗೆ ನಮಸ್ಕರಿಸಿದನು. ಆಗ ಸುಜ್ಞಾನಿತಂದೆಗಳು ಅವನಿಗೆ ಮಂತ್ರೋಪದೇಶವನ್ನು ಮಾಡಿ, ಕರಕ್ಕೆ ಲಿಂಗವನ್ನಿತ್ತು—ಸದ್ಧರ್ಮ ಮಾರ್ಗದಿಂದಲೂ ಭಕ್ತಿಯಿಂದಲೂ ಆಚರಿಸು, ನನ್ನಯ್ಯಾ, ಎಂದು ಪ್ರೀತಿಯಿಂದ ನುಡಿದರು. ಅವರು ಮುಂದೆ ಅವನನ್ನು ಮಾತಂಗ ತಮ್ಮನೆಂದು ಕರೆಯದೆ 'ನನ್ನಯ್ಯಾ, ನನ್ನಯ್ಯಾ' ಎಂದು ಕರೆಯುತ್ತಿದರು. ಅದರಿಂದ ಅವನಿಗೆ ಮುಂದೆ 'ನನ್ನಯ್ಯನೆ'ಂಬ ಹೆಸರು ಪ್ರಾಪ್ತವಾಯಿತು. ಹೀಗೆ ಉಭಯತರು ಗುರುಶಿಷ್ಯರಾದರು. ಆಗ ನನ್ನಯ್ಯನು ನಿಜವಾದ ಲಿಂಗಧಾರಣೆಯನ್ನು ಹೊಂದಿದನು. ಅಂದಿನಿಂದ ಅವನ ಮನಸ್ಸು ಬದಲಾಯಿತು ಮತ್ತು ಮೊದಲಿನ ಕಾಡು ಸ್ವಭಾವವನ್ನು ಬಿಟ್ಟುಬಿಟ್ಟನು.

ಆಗ ನನ್ನಯ್ಯನು—ನೀವೆಲ್ಲಿಗೆ ಈಗ ಹೋಗುತ್ತೀರಿ? ಎಂದು ಕೇಳಲು ಸುಜ್ಞಾನಿಗಳು—ಕಲ್ಯಾಣದಲ್ಲಿ ಬಸವಾದಿ ಪ್ರಮಥರಿದ್ದಾರೆ, ಅವರನ್ನು ಕಾಣಲಿಕ್ಕೆಂದು ಹೇಳಿದರು. ಅದಕ್ಕೆ ನನ್ನಯ್ಯನು—ಬಸವೇಶ್ವರನಾರು? ಎಂದು ಕೇಳಲು ಅವನು ಅಷ್ಟಾವರಣ, ಪಂಚಾಚಾರಗಳನ್ನು ಬೋಧಿಸುವ ಮಹಾತ್ಮನು, ಎಂದು ಹೇಳಲು, ಅದಕ್ಕೆ ಅವನು—ನಾನು ನಿಮ್ಮ ಸೇವೆ ಮಾಡುತ್ತ ನಿಮ್ಮೊಡನೆ ಬರುವೆನು, ಅವನನ್ನು ಕಾಣಲು ಅಪ್ಪಣೆಯನ್ನು ಕೊಡಿರಿ, ಎಂದು ಕೇಳಲು ಸುಜ್ಞಾನಿದೇವರು ಆವಶ್ಯವಾಗಿ ಬರಬೇಕು ಎಂದು ಅವನನ್ನೊಡಗೊಂಡು ಅವರು ಕಲ್ಯಾಣದ ಮಾರ್ಗವನ್ನು ಹಿಡಿದರು.

ದಾರಿಯಲ್ಲಿ ನನ್ನಯ್ಯನೂ ಸುಜ್ಞಾನಿದೇವರೂ ಕೇವಲ ಗುರುಶಿಷ್ಯರಂತೆ ವರ್ತಿಸುತ್ತ ಬಂದರು. ನನ್ನಯ್ಯನು ಆಗ ತನ್ನ ಮೊದಲಿನ ಕ್ರೂರ ಸ್ವಭಾವವನ್ನು ಬಿಟ್ಟುಕೊಟ್ಟು ಹೊಸದಾದ ವೃತ್ತಿಯುವನಾದನು. ಅವನು

ಗುರುವಿನ ಸೇವೆಯಲ್ಲಿ ಯಾವಾಗಲೂ ತತ್ಪರನಾಗಿರುವನು. ಹೀಗೆ ಉಭಯತರು ದೇಹ ಬೇರಿದ್ದರೂ ಪ್ರಾಣ ಒಂದೇ ಎಂಬಂತೆ ಆಚರಿಸುತ್ತ ಬಂದರು. ನನ್ನಯ್ಯನು ಕ್ರಮೇಣ ಸುಜ್ಞಾನಿದೇವರಿಂದ ಲಿಂಗದ ನೆಲೆಕಲೆಗಳನ್ನು ತಿಳಿದುಕೊಂಡು ಲಿಂಗಾನುಭವವನ್ನು ಹೊಂದುವವನಾದನು. ಹೀಗೆ ಉಭಯತರು ಕಲ್ಯಾಣದ ಹಾದಿಯನ್ನು ಹಿಡಿದು ಹೋಗಹತ್ತಿದರು.

ಹೀಗೆ ಹೋಗುವಾಗ ಅವರು ಒಂದು ಅರಣ್ಯವನ್ನು ಪ್ರವೇಶಿಸಿದರು. ಆಗ ಮಧ್ಯಾನ ಸಮಯವಾಗಿತ್ತು. ನನ್ನಯ್ಯನು ತನ್ನ ಗುರುವನ್ನು ಒಂದು ಗಿಡದ ತಣ್ಣನ್ನ ನೆರಳಿನಲ್ಲಿ ಕುಳ್ಳಿರಿಸಿ ತಾನು ಕಂದ ಮೂಲ ಫಲಾದಿಗಳನ್ನೂ ಲಿಂಗಾರ್ಚನೆಗೆ ಪುಷ್ಪಗಳನ್ನೂ ತರಲು ಹೋದನು. ಇತ್ತ ಸುಜ್ಞಾನಿ ದೇವರು ಆ ವೃಕ್ಷದಡಿಯಲ್ಲಿ ಕುಳಿತವರಾದರು. ಆಗ ಅವರಿಗೆ ಮಾರ್ಗಾಯಾಸದಿಂದ ನಿದ್ರೆಯು ಬಂದು, ಅಲ್ಲಿಯೇ ಅವರು ಮಲಗಿಕೊಂಡರು.

ಅವರಿದ್ದ ಈ ಪ್ರಾಂತವನ್ನು ಅಮರಪುರದ ಅರಸನಾದ ಕೌಶಿಕರಾಯನೆಂಬುವನು ಆಳುತ್ತಿದ್ದನು. ಒಂದು ದಿವಸ ಕಳ್ಳರು ಅವನ ಅರಮನೆಗೆ ಕನ್ನವನಿಕ್ಕಿ ರತ್ನಾಭರಣಗಳನ್ನು ತೆಗೆದುಕೊಂಡು ಓಡಿ ಹೋಗುತ್ತಿರಲು ತಳವಾರರು ಅವರ ಹೆಜ್ಜೆವಿಡಿದು ಬೆನ್ನಟ್ಟಿ ಬಂದರು. ಆಗ ಆ ಕಳ್ಳರು ಪಾರಾಗಿ ಹೋಗಲು ಸಾಧ್ಯವಾಗದ್ದರಿಂದ ಅವರು ಓಡಿ ಹೋಗುತ್ತಿರುವಾಗ ದಾರಿಯಲ್ಲಿ ನಿದ್ರೆ ಹೋಗಿದ್ದ ಆ ಸುಜ್ಞಾನಿ ದೇವರನ್ನು ಕಂಡು, ಅವರ ಮುಂದೆ ಆ ಆಭರಣದ ಪೆಟ್ಟಿಗೆಯನ್ನು ಇಟ್ಟು ತಾವು ಅಡ್ಡ ದಾರಿ ಹಿಡಿದು ಹೋದರು. ಅವರನ್ನು ಬೆನ್ನಟ್ಟಿ ಬರುತ್ತಿದ್ದ ಆ ತಳವಾರರು ಹುಡುಕುತ್ತ ಹುಡುಕುತ್ತ ಬರುತ್ತಿರಲು ಅವರು ಕಳವಾಗಿ ಹೋಗಿದ್ದ ಪೆಟ್ಟಿಗೆಯು ಸುಜ್ಞಾನಿ ದೇವರೆದುರಿಗೆ ಇರುವದನ್ನು ಕಂಡರು. ಆಗ ಈತನೇ ಕಳ್ಳನೆಂದು ಭಾವಿಸಿ, ಅರಸನು ಕಳ್ಳರು ಸಿಕ್ಕ ಕೂಡಲೆ ಅವರನ್ನು ಕಡಿದು ಹಾಕಬೇಕೆಂದು ಅಪ್ಪಣೆಯನ್ನಿತ್ತಿದ್ದರಿಂದ, ಅವರು ಮಲಗಿದ್ದ ಸುಜ್ಞಾನಿದೇವರ ತಲೆಯನ್ನು ಕತ್ತರಿಸಿ ಅದನ್ನು ತಮ್ಮ ಅರಸಿಗೆ ತಂದು ಒಪ್ಪಿಸಿದರು ಮತ್ತು ಆಭರಣಗಳ ಪೆಟ್ಟಿಗೆಯನ್ನೂ ಅವನ ಮುಂದಿಟ್ಟರು. ಅರಸನು ಆ ತಲೆಯನ್ನು ನೋಡಿ, ಅದರ ನೊಸಲಲ್ಲಿ ಭಸಿತ, ಕಂಠ ಕರ್ಣಗಳಲ್ಲಿ ರುದ್ರಾಕ್ಷಿಗಳು ಇರುವದನ್ನು ಕಂಡು

ಇದು ಕಳ್ಳನ ತಲೆಯು ಹಾಗಿಲ್ಲವೆಂದೆನಲು, ಆ ತಳವಾರರು--ಅಹುದು, ಕಳ್ಳರಾದವರು ಹೀಗೆ ವೇಷ ಬದಲುಮಾಡಿಕೊಂಡು ಬರುತ್ತಾರೆ ಎನಲು ಅರಸನು ಅವರನ್ನು ನಂಬಿ, ಈ ತಲೆಯುನ್ನು ದಾರಿಯಲ್ಲಿರುವ ಆಲದ ಮರದ ಟೊಂಗೆಗೆ ಕಟ್ಟಿರಿ ಎನಲು ಅವರು ಹಾಗೆಯೇ ಅದನ್ನು ಕಟ್ಟಿ ಬಿಟ್ಟರು.

ಹೀಗಾಗಲು ಇತ್ತ ನನ್ನಯ್ಯನು ಪುಷ್ಪ, ಪತ್ರೆ, ಕಂದ ಮೂಲಾದಿ ಗಳನ್ನು ಹುಡಿಕಿಕೊಂಡು ಗುರುವಿದ್ದೆಡೆಗೆ ಬಂದು ನೋಡುತ್ತಾನೆಯೇ ಅಲ್ಲಿ ಅವನ ಬರೀ ಧಡವಿದೆ. ಇದನ್ನು ಕಂಡು--ನನ್ನ ಗುರುವಿಗೆ ಹೀಗೆ ಮರಣವಾಯಿತೇ ಎಂದು ಕಡು ದುಃಖಬಟ್ಟು, ಇನ್ನು ಮೇಲೆ ನಾನು ಜೀವದಿಂದಿರಬಾರದು ಎಂದು ತನ್ನ ಶಿರವನ್ನು ಕತ್ತರಿಸಲು ಉದ್ಯು ಕ್ತನಾದನು. ಆಗ ಆಕಾಶದಲ್ಲಿ-- ನನ್ನಯ್ಯನೇ, ಹೀಗೆ ನೀನು ಪ್ರಾಣ ಕೊಡಬೇಡ. ಒಂದು ಮಣ್ಣಿನ ತಲೆಯುನ್ನು ಮಾಡಿ ಅದನ್ನು ಆ ಧಡಕ್ಕೆ ಹತ್ತಿಸು, ಅವಕ್ಕೆ ಪ್ರಾಣ ಬರುವದು ಎಂದು ಶಬ್ದವಾಯಿತು. ಅದನ್ನು ನನ್ನಯ್ಯನು ಕೇಳಿ ಅವರಂತೆ ಮೃತ್ತಿಕೆಯ ಶಿರವನ್ನು ಮಾಡಿ ಧಡಕ್ಕೆ ಹತ್ತಿಸಿ ಅಂದದ್ದು--ಶಿವನೇ ನಿನ್ನ ವಾಕ್ಯದಂತೆ ನಾನು ತಲೆಯುನ್ನು ಹತ್ತಿಸಿದ್ದೇನೆ. ಗುರುವಿಗೆ ಪ್ರಾಣವನ್ನು ಕೊಡು, ಇಲ್ಲದಿದ್ದರೆ ನಾನು ಪ್ರಾಣಕೊಡುವೆನೆನಲು, ಆಗ ದೇಹಕ್ಕೆ ಪ್ರಾಣವು ಬಂದಿತು, ಆ ಮೇಲೆ ಉಭಯುತರು ಅಲ್ಲಿ ಲಿಂಗಾರ್ಚನೆಯುನ್ನು ತೀರಿಸಿಕೊಂಡು ಮುಂದೆ ಸಾಗುವವರಾದರು.

ಉಭಯುತರು ದಾರಿಯುನ್ನು ನಡಿಯುತ್ತ ಅಮರಪುರಕ್ಕೆಯೇ ಬಂದರು. ಅಲ್ಲಿ ನನ್ನಯ್ಯನು ತನ್ನ ಗುರುವನ್ನು ಒಬ್ಬ ಭಕ್ತರ ಮನೆ ಯಲ್ಲಿಳಿಸಿ ತಾನು ಪುಷ್ಪ ಪತ್ರೆಗಳನ್ನು ತರಲು ಹೋದನು. ಅವನು ಹೋಗುತ್ತಿರುವಾಗ ದಾರಿಯುಲ್ಲಿ ಆಲದಮರಕ್ಕೆ ಕಟ್ಟಿದ ತನ್ನ ಗುರುವಿನ ನಿಜವಾದ ತಲೆಯುನ್ನು ನೋಡಿದನು. ಅವನು ಅದನ್ನು ಗುರುತಿಸಿ-- ಅಯ್ಯೋ, ನನ್ನಿಂದ ದೊಡ್ಡ ಪ್ರಮಾದವಾಯಿತು. ಇದು ನನ್ನ ಗುರು ವಿನ ನಿಜವಾದ ತಲೆಯು. ಸುಳ್ಳು ತಲೆಯುನ್ನು ನಾನು ಹಚ್ಚಿದೆನಲ್ಲಾ! ಮುಂದೇನು ಮಾಡಬೇಕು ? ನಾನು ಮಹಾ ಪಾಪಿಯು. ನಾನು ಜಗ ತ್ತಿನಲ್ಲಿ ಇರಬಾರದು ಎಂದು ಆ ಸ್ಥಳವನ್ನು ಬಿಟ್ಟು ಅರಣ್ಯ ಮಧ್ಯಕ್ಕೆ ಹೋಗಿ, ತನ್ನ ಇಷ್ಟಲಿಂಗವನ್ನು ಕರಸ್ಥಲದಲ್ಲಿ ಇರಿಸಿಕೊಂಡು ತನ್ನ

ಶಿರವನ್ನು ಅರಿದು ಕೊಳ್ಳುವಾಗ ಆಗ ಲಿಂಗದಲ್ಲಿ ಶಿವನು ಪ್ರತ್ಯಕ್ಷನಾಗಿ — ನನ್ನಯ್ಯನೇ ನೀನು ಹೀಗೆ ಮಾಡಬೇಡ, ನೀನು ಒಂದು ಮಣ್ಣಿನ ದೇಹವನ್ನು ಮಾಡಿ ಅದಕ್ಕೆ ಗುರುವಿನ ಆ ಶಿರಸ್ಸನ್ನು ಹತ್ತಿಸು, ಎಂದೆನಲು ಅವನು ಹಾಗೆಯೇ ಮಾಡಲು ಅದಕ್ಕೂ ಪ್ರಾಣವು ಬಂದಿತು.

ಅಲ್ಲಿಂದ ಅವರಿಬ್ಬರು ಮೊದಲಿನ ಸುಜ್ಞಾನಿ ದೇವರೆಡ್ಡಿಯೆಡೆಗೆ ಬಂದರು. ಹೀಗೆ ಅವರು ಮೂವರಾದರು. ಅವರೆಲ್ಲರೂ ಕೂಡಿಕೊಂಡು ಕಲ್ಯಾಣಕ್ಕೆ ಹೊರಟರು. ಭೇರುಂಡ ಪಕ್ಷಿಗೆ ಒಂದು ಶರೀರ ಎರಡು ಮುಖಗಳಿರುವವಷ್ಟೇ. ಹಾಗೆಯೇ ನನ್ನಯ್ಯನ ಮೂಲಕ ಇಬ್ಬರೂ ಸುಜ್ಞಾನಿದೇವರಾದರು. ನನ್ನಯ್ಯನು ಎಂಥ ಮಹಾತ್ಮನು, ಎಂದು ಜನರು ಅವನನ್ನು ಸ್ತುತಿಸಹತ್ತಿದರು. ಮೂವರು ಮುಂದೆ ಕಲ್ಯಾಣಕ್ಕೆ ಬಂದು ಬಸವೇಶ್ವರನ ದರ್ಶನವನ್ನು ಹೊಂದಿದರು. ಆಗ ಬಸವೇಶ್ವರನು. ನನ್ನಯ್ಯನಿಗೆ— ನೀನು ಎಂಥ ಪೊಡಮಾಡ ಪುರುಷನು! ನಿನ್ನ ಗುರುಭಕ್ತಿಯು ಮಿಗಿಲಾದದ್ದು. ನಿನ್ನ ಮೂಲಕ ಗುರುವಿನ ಅಂಗಗಳೆಲ್ಲವೂ ಗುರುವಿನ ರೂಪಗಳೇ ಆದವು. ಇದು ಜಗತ್ತಿನಲ್ಲಿ ಹೊಸತಾದದ್ದು ಎಂದು ಕೊಂಡಾಡಿದನು. ಅಲ್ಲಿದ್ದ ಪ್ರಮಥರೆಲ್ಲರೂ ಹಾಗೆಯೇ ನನ್ನಯ್ಯನನ್ನು ಕೀರ್ತಿಸಿದರು. ಈ ಮೂವರು ಅನೇಕ ವರುಷ ಶಿವಾನುಭವ ಮಂಟಪದಲ್ಲಿದ್ದು ಶಿವಾನುಭವ ಗೋಷ್ಠಿಯನ್ನು ಕೇಳುತ್ತ, ಪರಮಾನಂದ ಸುಖದಲ್ಲಿದ್ದರು. ಅವರೆಲ್ಲರೂ ಮುಂದೆ ಕಲ್ಯಾಣದಲ್ಲಿಯೇ ಲಿಂಗಾಂಗ ಸಾಮರಸ್ಯವನ್ನು ಹೊಂದಿದರು.

---

## ನನ್ನಯ್ಯನ ಚರಿತ್ರೆಯ ವಿಮರ್ಶೆ.

ಶಿವಶರಣರ ಚರಿತ್ರೆಗಳಿಂದ ಅವರು ಪುರಾತನ ಕಾಲದಲ್ಲಿ ಹೇಗೆ ಧರ್ಮ ಪ್ರಸಾರ ಕಾರ್ಯ ಮಾಡಿದರೆಂಬುದನ್ನು ನಾವು ತಿಳಿಯಬಹುದಾಗಿದೆ. ಅವರು ತಮ್ಮ ಪ್ರಸಾರ ಕಾರ್ಯದಲ್ಲಿ ಕೆಡುಕರನ್ನೂ ದುರ್ಮಾರ್ಗಗಳನ್ನೂ ಅಜ್ಞಾನಿಗಳನ್ನೂ ತಿದ್ದುವದೇ ಅವರ ಮುಖ್ಯ ಧ್ಯೇಯವಾಗಿತ್ತು. ಇದಕ್ಕೆ ನನ್ನಯ್ಯನ ಚರಿತ್ರೆಯು ಉತ್ತಮ ನಿದರ್ಶನವಾಗಿದೆ.

ಬಸವೇಶ್ವರನ ಕಾಲದಲ್ಲಿ ಶಿವಶರಣರು ಅಜ್ಞಾನಿಗಳನ್ನು ಮೋಸಗೊಳಿಸಿ, ಅಥವಾ ಅವರ ದುರಾಚಾರಕ್ಕೆ ಇಂಬುಗೊಟ್ಟು, ಇಲ್ಲವೆ ಅವರ

ಮೇಲೆ ಬಲಾತ್ಕಾರ ಮಾಡಿ ಧರ್ಮಪ್ರಸಾರ ಮಾಡಿದರೆಂದು ಕೆಲವರು ಪ್ರತಿಪಾದಿಸಿದ್ದಾರೆ. ಇದು ತಪ್ಪೆಂದು ನನ್ನಯ್ಯನ ಚರಿತ್ರೆಯಿಂದ ತಿಳಿದು ಬರುತ್ತದೆ.

ನನ್ನಯ್ಯನು ಬೇಡನು, ಹಿಂಸಾವೃತ್ತಿಯಿಂದ ಜೀವಿಸುವವನು, ದರೋಡೇಖೋರನು, ಜನರನ್ನು ಕೊಂದು ಹಾಕಲು ಹೇಸದವನು, ಅತ್ಯಂತ ಕ್ರೂರನು, ಮತ್ತು ಧರ್ಮಾಧರ್ಮವನ್ನರಿಯದವನು. ಇಂಥ ವನಲ್ಲಿ ಶಿವಶರಣನಾದ ಸುಜ್ಞಾನಿದೇವನು ಹೇಗೆ ನೀತಿ, ದಯೆ, ಧರ್ಮ ಇವುಗಳನ್ನು ನೆಲೆಗೊಳಿಸಿ, ಅವನಿಗೆ ಲಿಂಗಧಾರಣೆಯನ್ನು ಮಾಡಿ ಸನ್ಮಾರ್ಗಕ್ಕೆ ಹಚ್ಚಿದನೆಂಬುದರ ವೃತ್ತಾಂತವು ಈ ಚರಿತ್ರೆಯಲ್ಲಿ ಬಂದಿದೆ. ಈತನ ಚರಿತ್ರೆಯಿಂದ ಗುರುವು ಹೇಗಿರಬೇಕು, ಅವನು ಹೇಗೆ ಬೋಧ ಮಾಡಬೇಕು, ಕೆಡುಕರ ಮನಸ್ಸನ್ನು ಹೇಗೆ ಆಕರ್ಷಿಸಬೇಕು, ಎಂಬು ದನ್ನು ನಾವು ಬಹು ಚನ್ನಾಗಿ ತಿಳಿಯಬಹುದಾಗಿದೆ.

ಸುಜ್ಞಾನಿದೇವನು ಓಡಿಸಾ ಪ್ರಾಂತದವನು. ಅವನು ಬಸವೇ ಶ್ವರನ ವಾರ್ತೆಯನ್ನು ಕೇಳಿ ಅವನಿಂದ ಶಿವಾನುಭವವನ್ನು ಅರಿಯ ಬೇಕೆಂದು ಕಲ್ಯಾಣಕ್ಕೆ ಹೊರಟನು. ದಾರಿಯಲ್ಲಿ ಇಬ್ಬರು ಸುಲಿಗೆ ಕೊಂಡು ಘಾಯಹೊಂದಿದವರು ಅವನಿಗೆ ಭೆಟ್ಟಿಯಾದರು. ಅವರು ಮಾತಂಗತಮ್ಮನೆಂಬ ದರೋಡೆಖೋರನು ದಾರಿಯಲ್ಲಿ ನಿಂತಿದ್ದರ ವೃತ್ತಾಂ ತವನ್ನು ಹೇಳಿದರು. ಅದನ್ನು ಕೇಳಿ ಅವನ ಸೇವಕರೆಲ್ಲರೂ ಅಂಜಿ ಅವನನ್ನು ಬಿಟ್ಟು ಓಡಿಹೋದರು. ಆದರೆ ಸುಜ್ಞಾನಿ ತಂದೆಯು ಅವ ರಂತೆ ಧೈರ್ಯಗೆಡಲಿಲ್ಲ. ಅವನ ಮನಸ್ಸಿನಲ್ಲಿ ಈ ಬೇಡನನ್ನು ಸುಧಾರಿಸ ಬೇಕೆಂಬ ಇಚ್ಛೆಯುಂಟಾಗಿರಬಹುದು. ಆದ್ದರಿಂದ ಅವನು ಅಂಜದೆ ಸರಳವಾಗಿ ಮುಂದೆ ಹೋಗಿ ಆ ದರೋಡೆಖೋರನ ಇದಿರಿಗೆಯೇ ಹೋಗಿ ನಿಂತುಬಿಟ್ಟನು. ಅವನ ಈ ನಿರ್ಭಯ ವೃತ್ತಿಯು ಮಾತಂಗತಮ್ಮನ ಮೇಲೆ ಕೂಡಲೆ ಪರಿಣಾಮಮಾಡಿತು. ಅದನ್ನು ಅವನು ನೋಡಿ ಆಶ್ಚರ್ಯಬಟ್ಟನು. ಜನರನ್ನು ಸುಧಾರಿಸಬೇಕೆಂಬುವವನು ಹೀಗೆಯೇ ಧೈರ್ಯವುಳ್ಳವನಾಗಿರಬೇಕಾಗುತ್ತದೆ. ಇದು ನೈತಿಕ ಧೈರ್ಯವು. ನೈತಿಕ ಧೈರ್ಯವು ಶಾರೀರಿಕ ಧೈರ್ಯಕ್ಕಿಂತಲೂ ಬಹಳ ಮಿಗಿಲಾದದ್ದು.

ಆಮೇಲೆ ಮಾತಂಗತಮ್ಮನು ಸುಜ್ಞಾನಿಯನ್ನು ಸುಲಿಯಲಿಕ್ಕೆ ನಿಂತನು. ಅವನನ್ನು ಮೊದಲು ಒಂದು ಗಿಡದ ಕೆಳಗೆ ಕುಳ್ಳಿರಿಸಿ ಅವನು

ಅವನ ಹಸಿಬೆಯನ್ನು ಬಿಚ್ಚಿಸಿದನು. ಸುಜ್ಞಾನಿತಂದೆಯು ಜನರಿಗೆ ಬೋಧೆ ಮಾಡಿ ಅವರನ್ನು ಇಷ್ಟಲಿಂಗಧಾರಿಗಳನ್ನಾಗಿ ಮಾಡುವದೇ ಅವನ ವೃತ್ತಿಯಾಗಿತ್ತು. ಆದ್ದರಿಂದ ಅವನ ಹಸಿಬೆಯಲ್ಲಿ ಬರೀ ಲಿಂಗಗಳೇ ಇದ್ದವು. ಮಾತಂಗತಮ್ಮನು ಇಂಥ ಲಿಂಗಗಳನ್ನು ಎಂದೂ ಕಂಡವನಲ್ಲ. ಆದ್ದರಿಂದ ಅವನು ಅವೇನೆಂದು ಕೇಳಲು ಸುಜ್ಞಾನಿತಂದೆಯು ಇವು ಲಿಂಗಗಳೆಂದು ಉತ್ತರಕೊಟ್ಟನು. ಈ ಲಿಂಗಗಳು ಏನು ಕೊಡುವವೆಂದು ಬೇಡನು ಕೇಳಲು, ಸುಜ್ಞಾನಿತಂದೆಯು ಅವನಿಗೆ ಲಿಂಗದಿಂದ ಮೋಕ್ಷವನ್ನು ಹೇಗೆ ಪಡೆಯಬೇಕೆಂಬ ತಾತ್ವಿಕ ವಿಚಾರಗಳನ್ನು ಹೇಳಲಿಕ್ಕೆ ಹೋಗಲಿಲ್ಲ. ಹಾಗೆ ಹೇಳಿದ್ದರೆ ಮೋಕ್ಷದ ಕಲ್ಪನೆಯೇ ಇಲ್ಲದ ಆ ಬೇಡನಿಗೆ ಅದು ಹೇಗೆ ತಿಳಿಯಬೇಕು? ಆದ್ದರಿಂದ ಅವನಿಗೆ ತಿಳಿಯುವಂತೆ ಈ ಲಿಂಗಗಳು ಹೆಣ್ಣು, ಹೊನ್ನು, ರಾಜಭೋಗಗಳನ್ನು ಕೊಡುವವೆಂದು ಹೇಳಿದನು. ಆಗ ಆವುಗಳನ್ನು ಪಡೆಯಬೇಕೆಂಬ ಆಶೆಯು ಅವನಲ್ಲಿ ಹುಟ್ಟಿತು. ಆದ್ದರಿಂದ ಆ ಲಿಂಗಗಳಲ್ಲಿ ಒಂದನ್ನು ಅವನು ಕಯ್ಯಲ್ಲಿ ತೆಗೆದುಕೊಂಡು—ಇದನ್ನು ನನಗೆ ಕೊಡು ಎಂದು ಕೇಳಿದನು. ಹೇಗೆ ತಾಯಿತ ಮತ್ತು ದೇವರ ಚೀಟಿಗಳನ್ನು ಅಜ್ಞಾನಿಗಳು ಕಟ್ಟಿಕೊಳ್ಳುತ್ತಾರೋ ಹಾಗೆ ಅದನ್ನು ಧರಿಸಿಕೊಳ್ಳಬೇಕೆಂದು ಅವನು ಬಹುಶಃ ಬಯಸಿರಬಹುದು. ಆದರೆ ಸುಜ್ಞಾನಿದೇವರ ಮನಸ್ಸಿನಲ್ಲಿ ಅವನಿಗೆ ಲಿಂಗದ ನಿಜವಾದ ಕಲ್ಪನೆಯನ್ನು ಮಾಡಿಕೊಡುವದಿತ್ತು. ಆದ್ದರಿಂದ ಅವನು ಅದನ್ನು ಹಾಗೆಯೇ ಅವನಿಗೆ ಕೊಡದೆ ಗುರುವಿನಿಂದ ಅದನ್ನು ಸ್ವೀಕರಿಸಬೇಕೆಂದು ಹೇಳಿ, ಗುರುವಿನ ವಿಚಾರವನ್ನು ಮೊದಲು ಅವನೆದುರಿಗೆ ಇಟ್ಟನು.

ಆ ಮೇಲೆ ಮಾತಂಗತಮ್ಮನು—ಗುರುವೆಲ್ಲಿದ್ದಾನೆ ಎಂದು ಕೇಳಲು ಸುಜ್ಞಾನಿದೇವನು—ಆ ಗುರುವು ನಾನೇ ಎಂದು ಹೇಳಿದನು. ಅಷ್ಟರಲ್ಲಿ ಅವನು ತನ್ನ ವರ್ತನೆಯ ಪ್ರಭಾವದಿಂದ ಮಾತಂಗತಮ್ಮನ ವಿಶ್ವಾಸವನ್ನು ತನ್ನಲ್ಲಿ ಉಂಟು ಮಾಡಿಕೊಂಡಿದ್ದನೆಂದು ತೋರುತ್ತದೆ. ಮಾತಂಗತಮ್ಮನೂ ಅದಕ್ಕೆ ಯಾವ ಇದಿರುತ್ತರವನ್ನು ಕೊಡದೆ ಅವನಿಂದ ಆ ಲಿಂಗವನ್ನು ಹೊಂದಲು ಸಿದ್ಧನಾದನು. ಸುಜ್ಞಾನಿ ದೇವನು ಇದನ್ನು ಕಂಡು ಅವನಿಗೆ ಏನೋ ಒಂದು ಸಮಾಧಾನದ ನುಡಿಯನ್ನು ಹೇಳಿ ಲಿಂಗವನ್ನು ಅವನಿಗೆ ಹೇಗಾದರೂ ಕೊಟ್ಟು ಅವನ ಕಯ್ಯಿಂದ ಪಾರಾಗಿ

ಹೋಗಬಹುದಾಗಿತ್ತು. ಆದರೆ ಅವನು ಗುರುವಿನ ಕಾರ್ಯವು ಹೀಗೆ ಮೋಸಗೊಳಿಸುವದಿರದೆ ಲಿಂಗದ ಜ್ಞಾನ ಮಾಡಿಕೊಡುವದು ಇರುತ್ತದೆಂದು ತಿಳಿದು ಅವನಿಗೆ ಸದುಪದೇಶವನ್ನು ಮಾಡಿ ಆ ಮೇಲೆ ಅವನಿಗೆ ಇಷ್ಟಲಿಂಗವನ್ನು ಕೊಡುವ ಕಾರ್ಯದಲ್ಲಿ ತೊಡಗಿದನು.

ಸದುಪದೇಶವನ್ನು ಮಾಡಿದ ಬಳಿಕ ಅವರಂತೆ ಲಿಂಗಧಾರಿಯು ನಡೆಯುವದು ಅತ್ಯಂತ ಮಹತ್ವದ್ದಿದೆ. ಆದರೆ ಮನೆತನದಲ್ಲಿ ಅನುಕೂಲತೆಗಳಿದ್ದರೆ ಮಾತ್ರ ಮನುಷ್ಯನು ಹೀಗೆ ಆಚರಿಸುವದು ಸಾಧ್ಯವು. ಇಲ್ಲದಿದ್ದರೆ ಅದು ಬಿಕ್ಕಟ್ಟಿನದಾಗುತ್ತದೆ. ಆದರೆ ಮನೆತನದಲ್ಲಿ ಮುಖ್ಯಳಾದವಳು ತನ್ನ ಸ್ತ್ರೀಯಳು. ಆದ್ದರಿಂದ, ಅವಳಿಗೂ ಸದುಪದೇಶವನ್ನು ಮಾಡಿ ಅವಳನ್ನೂ ಸಹ ಲಿಂಗಧಾರಿಯನ್ನಾಗಿ ಮಾಡುವದು ಶಿವಾನುಭವದ ಮಹತ್ವದ ತತ್ವವಾಗಿದೆ. ಆದರೆ ಅವಳಿಗೆ ಲಿಂಗ ಕೊಡಬೇಕಾದಲ್ಲಿ ಅವಳ ಸ್ವಭಾವವು ಹೇಗಿದೆಂಬದನ್ನು ಪರೀಕ್ಷಿಸುವದು ಅವಶ್ಯವು. ಇಂಥ ಪರೀಕ್ಷೆಯಲ್ಲಿ ಸುಜ್ಞಾನಿದೇವನು ತೊಡಗಿ, ಅದಕ್ಕೆ ಅವನು ಒಂದು ಯುಕ್ತಿಯನ್ನು ತೆಗೆದನು. ಇದು ಈ ಚರಿತ್ರೆಯಲ್ಲಿ ಕಾಣಿಸಿದೆ. ಇದರಿಂದ, ಮಾತಂಗತಮ್ಮನೂ ಅವನ ಹೆಂಡತಿಯೂ ಪರಸ್ಪರ ಪ್ರೇಮವುಳ್ಳವರಿದ್ದಿಲ್ಲೆಂಬುದು ಅವನಿಗೆ ಕಂಡುಬಂದಿತು. ಮಾತಂಗತಮ್ಮನು ಅತ್ಯಂತ ಕ್ರೂರನೂ ಬಲಾತ್ಕಾರ ವರ್ತನೆಯವನೂ ಇದ್ದದರಿಂದ ಅವನ ಹೆಂಡತಿಯು ಅವನನ್ನು ಪ್ರೀತಿಸುತ್ತಿರಲಿಲ್ಲ. ಆದ್ದರಿಂದ ಅವನು ಸತ್ತನೆಂಬ ಸದ್ದಿಯನ್ನು ಕೇಳಿದ ಕೂಡಲೆ ಅವಳು ಇನ್ನೊಬ್ಬನ ಕೂಡ ಹೋಗಿಬಿಟ್ಟಳು. ಇದನ್ನು ಮಾತಂಗತಮ್ಮನು ಕೇಳಿ ಅವಳನ್ನೂ ಅವಳೊಡನೆ ಹೋದವನನ್ನೂ ಕೊಂದುಹಾಕಲಿಕ್ಕೆ ಬಗೆದನು. ಆದರೆ ಇದು ಸರಿಯಾದ ವರ್ತನೆಯಲ್ಲವೆಂಬುದನ್ನು ಸುಜ್ಞಾನಿತಂದೆಯು ಅನೇಕ ಕಥೆಗಳ ಮೂಲಕ ಅವನಿಗೆ ತಿಳಿಸಿಹೇಳಲು ಅವನು ಅವರನ್ನು ಕೊಲ್ಲುವದನ್ನು ಬಿಟ್ಟುಕೊಟ್ಟನು. ಆದರೆ ಸುಜ್ಞಾನಿದೇವನು ಇಷ್ಟಕ್ಕೆ ಬಿಡದೆ ಸ್ತ್ರೀಯರ ಸ್ಥಾನವು ಸಮಾಜದಲ್ಲಿ ಎಂಥ ಶ್ರೇಷ್ಠತರದ್ದಿರುತ್ತದೆಂಬುದನ್ನು ಸಹ ಅನೇಕ ಕಥೆಗಳ ಮೂಲಕ ವಿವರಿಸಿ ಸ್ತ್ರೀಹತ್ಯವು ಪಾಪಕರ್ಮವು ಎಂಬುವದನ್ನು ಅಂತ್ಯದಲ್ಲಿ ಅವನಿಗೆ ತಿಳಿಯಪಡಿಸಿದನು. ಈಪ್ರಕಾರ ಸುಜ್ಞಾನಿ ತಂದೆಗಳು ಲಿಂಗಧಾರಿಯು ಸ್ತ್ರೀಯೊಡನೆ ಹೇಗಿರಬೇಕೆಂಬುದನ್ನು ಆ ಬೇಡನಿಗೆ ತಿಳಿಸಿಕೊಟ್ಟನು.

ಆಮೇಲೆ ಸುಜ್ಞಾನಿದೇವನು ಪ್ರಪಂಚದಲ್ಲಿ ಸುಖದುಃಖಗಳು ಹೇಗಾಗುತ್ತವೆಂಬುದನ್ನು ಬೇಡನ ತಾಯಿ ತಂದೆಗಳು ಹೇಗೆ ಮರಣ ಹೊಂದಿದರೆಂಬುದರ ಮೇಲಿಂದ ತಿಳಿಸಿ ಹೇಳುತ್ತ, ಪುಣ್ಯಕಾರ್ಯಗಳನ್ನು ಮಾಡಿದರೆ ಮನುಷ್ಯನಿಗೆ ಸುಖವಾಗುತ್ತದೆ, ಪಾಪಕಾರ್ಯಗಳನ್ನು ಮಾಡಿದರೆ ಅವನಿಗೆ ದುಃಖವಾಗುತ್ತದೆ, ಸತ್ಕರ್ಮದ ಫಲವು ಮಾತ್ರ ತನ್ನೊಡನೆ ಯಾವಾಗಲೂ ಇರುತ್ತದೆ, ಯಾರಿಗೆ ಯಾರೂ ಸಹಾಯಕರಿಲ್ಲ, ಎಂಬ ಮಹತ್ವದ ತತ್ವಗಳನ್ನು ಬಹು ಸುಲಭರೀತಿಯಿಂದ ತಿಳಿಸಿಹೇಳಿದನು. ಆಮೇಲೆ ಆ ಬೇಡನು ಪುಣ್ಯಕರ್ಮಗಳಾವವು ಪಾಪಕರ್ಮಗಳಾವವು ಎಂಬುದನ್ನು ಕೇಳಲಾಗಿ, ಸುಜ್ಞಾನಿದೇವನಿಗೆ ಬೇಡನ ಹಿಂಸಾಚರಣೆಯನ್ನು ನಿಲ್ಲಿಸಬೇಕಾಗಿದ್ದರಿಂದ ಹಿಂಸೆಯನ್ನು ಮಾಡುವದೇ ಪಾಪವು, ದಯೆಯಿಂದಿರುವದೇ ಪುಣ್ಯವು, ಎಂಬ ತತ್ವವನ್ನು ಶಿವಶರಣರ ಅನೇಕ ಕಥೆಗಳನ್ನು ಹೇಳಿ ತಿಳಿಯಪಡಿಸಿದನು. ಮಾತಂಗತಮ್ಮನಂಥ ಅಪಕ್ವ ಮತ್ತು ಅಜ್ಞಾನಿ ಜನರ ಮೇಲೆ ಇಂಥ ಮನೋವೇಧಕ ಕಥೆಗಳು ಬಹಳ ಪರಿಣಾಮ ಮಾಡುತ್ತವೆ. ಕೇವಲ ತಾತ್ವಿಕ ವಿಚಾರಗಳು ಅವರ ತಿಳಿವಳಿಕೆಗೆ ಬರುವದಿಲ್ಲ. ಆದ್ದರಿಂದ ಮಾತಂಗತಮ್ಮನಿಗೆ ಉಪದೇಶ ಮಾಡುವಲ್ಲಿ, ಸುಜ್ಞಾನಿತಂದೆಯು ಇದೇ ರೀತಿಯನ್ನು ಅನುಸರಿಸಿದ್ದಾನೆ. ಅವನು ಹೀಗೆ ಅನೇಕ ಕಥೆಗಳನ್ನು ಹೇಳುತ್ತ ಹಿಂಸೆಯನ್ನು ಬಿಟ್ಟುಕೊಟ್ಟು ದಯಾಬುದ್ಧಿಯುಳ್ಳವನಾಗಿರು, ದಾನಧರ್ಮ ಮಾಡು ಎಂದು ಬೋಧಿಸಿದನು.

ಈ ಮೇರೆಗೆ ಸುಜ್ಞಾನಿದೇವನು ಪುಣ್ಯಪಾಪಗಳೆಂದರೇನು, ಸದಾಚಾರ ಅನಾಚಾರಗಳಾವವು, ಸತ್ಕರ್ಮ ದುಷ್ಕರ್ಮಗಳಾವವು, ಇವೇ ಮೊದಲಾದ ವಿಷಯಗಳನ್ನು ಬೋಧೆ ಮಾಡಿದಬಳಿಕ ಮಾತಂಗತಮ್ಮನ ಮನಸ್ಸಿನ ಮೇಲೆ ಇವು ಬಹಳ ಪರಿಣಾಮ ಮಾಡಿದ್ದನ್ನು ಕಂಡು ಆಮೇಲೆ ಅವನು ಅವನಿಗೆ ವೀರಶೈವ ಧರ್ಮದ ತತ್ವಗಳನ್ನು ತಿಳಿಸಿ ಹೇಳತೊಡಗಿದನು. ಅವನಿಗೆ ಅಷ್ಟಾವರಣಗಳಾದ ಗುರುಲಿಂಗಜಂಗಮಾದಿಗಳ ವಿಚಾರಗಳನ್ನು ಅನೇಕ ಕಥೆಗಳ ಮೂಲಕ ತಿಳಿಸಿ ಹೇಳಿದನು. ಶಿವಶರಣರ ಚರಿತ್ರೆಗಳಲ್ಲಿ ಇಂಥ ಕಥೆಗಳು ಅನೇಕವಿರುತ್ತವೆ. ಹೀಗೆ ಬೋಧಿಸಿದಬಳಿಕ ಮಾತಂಗತಮ್ಮನಲ್ಲಿ ತಾನು ಲಿಂಗಧಾರಣೆ ಹೊಂದಬೇಕೆಂಬ ಅಪೇಕ್ಷೆಯು ಉಂಟಾಗಲು, ಅವನು ಸುಜ್ಞಾನಿತಂದೆಗೆ ಸಾಷ್ಟಾಂಗವೆರಗಿ ತನಗೆ ಉಪದೇಶಮಾಡಬೇಕೆಂದು ಕೇಳ

ಕೊಂಡನು. ಆದರೆ ಲಿಂಗಧಾರಣೆ ಎಂದರೆ ಬರೀ ತಾಯಿತವನ್ನು ಕಟ್ಟಿಕೊಂಡಂತಲ್ಲ, ಅದು ಮನುಷ್ಯನು ಸರಿಯಾಗಿ ಆಚರಿಸುತ್ತಾನೆಂಬುದಕ್ಕೆ ಕುರುಹು ಎಂಬ ತಿಳಿವಳಿಕೆಯು ಬೇಡನಲ್ಲಿ ಆದದ್ದನ್ನು ಕಂಡು ಅವನಿಗೆ ಸುಜ್ಞಾನಿದೇವನು ಸರಿಯಾದ ರೀತಿಯಿಂದ ಲಿಂಗಧಾರಣೆಯನ್ನು ಮಾಡಿ ಅವನನ್ನು ಪ್ರೀತಿಯಿಂದ 'ನನ್ನಯ್ಯ, ನನ್ನಯ್ಯ' ಎಂಬ ಹೆಸರಿನಿಂದ ಕರೆಯಹತ್ತಿದನು. ಈ ಪ್ರಕಾರ ಲಿಂಗಧಾರಣೆಯ ಮರ್ಮಗಳು ಈ ಕಥೆಯಲ್ಲಿ ಬಹು ವಿಶದವಾಗಿ ಹೇಳಲ್ಪಟ್ಟಿರುತ್ತವೆ. ಲಿಂಗಧಾರಣವಾದ ಬಳಿಕ ಮನುಷ್ಯನ ಮುಂಚಿನ ದೋಷಗಳು ಹೊರಟು ಹೋಗಿ ಅವನು ಲಿಂಗ ಶರೀರಿಯಾಗುತ್ತಾನೆ, ಆದರ ಪರಿಣಾಮವಾಗಿ ಲಿಂಗಧಾರಿಯು ಪ್ರತಿಕ್ಷಣ ಪುಣ್ಯಕಾರ್ಯಗಳನ್ನು ಮಾಡಹತ್ತುತ್ತಾನೆ, ಮನುಷ್ಯನಲ್ಲಿ ಈ ಸ್ಥಿತಿಯನ್ನು ಉಂಟುಮಾಡುವದೇ ಗುರುವಿನ ನಿಜವಾದ ಕಾರ್ಯವಾಗಿರಬೇಕು. ಈ ಮೊದಲಾದ ತತ್ವಗಳು ನನ್ನಯ್ಯನ ಚರಿತ್ರೆಯಲ್ಲಿ ಬಹು ಸರಸಾಗಿ ವ್ಯಕ್ತವಾಗುತ್ತವೆ. ಒಬ್ಬ ದುಷ್ಟ ಮನುಷ್ಯನನ್ನು ಹೇಗೆ ಸುಧಾರಿಸಬೇಕೆಂಬುದನ್ನು ತಿಳಿಸಿಹೇಳಿದ ಸುಜ್ಞಾನಿದೇವನು ಆದರ್ಶ ಗುರುವಾಗಿದ್ದಾನೆ. ಈ ಕಾರ್ಯದಲ್ಲಿ ಅವನು ಆ ದುಷ್ಟನ ಕಯ್ಯಿಂದ ಕೊಲೆಹೊಂದುವ ಪ್ರಸಂಗಗಳೂ ಉಂಟಾಗಿದ್ದವು. ಆದರೆ ಅವನು ಅದಕ್ಕೆ ಅಂಜಲಿಲ್ಲ. ಗುರುವಿನ ಕರ್ತವ್ಯವನ್ನು ಅವನು ಅತ್ಯಂತ ದೃಢಮನಸ್ಸಿನಿಂದ ಧೀರತನದಿಂದ ಮಾಡಿದ್ದಾನೆ. ಸಮಾಜ ಸುಧಾರಕರು ಹೀಗೆಯೇ ಆಚರಿಸಿ ಜನಸುಧಾರಣೆಯನ್ನುಮಾಡುತ್ತ ಬಂದಿದ್ದಾರೆ.

ಆಮೇಲೆ ಸುಜ್ಞಾನಿತಂದೆಯು ಕಲ್ಯಾಣಕ್ಕೆ ಹೊರಡಲು ಮಾತಂಗ ತಮ್ಮನೂ ಅವನೊಡನೆ ಹೊರಟನು. ಅವನು ಅವನೊಡನೆ ಗುರು ಭಕ್ತಿಯಿಂದ ಆಚರಿಸಹತ್ತಿದನು. ಇದರಿಂದ ಅವನಲ್ಲಿ ಒಂದು ಅಗಾಧವಾದ ಶಕ್ತಿಯು ಉಂಟಾಯಿತು. ಭಕ್ತಿಯುಳ್ಳವನಾದ ಶಿಷ್ಯನ ಯೋಗ್ಯತೆಯು ಮಿಗಿಲಾದದ್ದೆಂಬುದು ಅದರಲ್ಲಿ ವಿಶದವಾಗಿರುತ್ತದೆ. ಹೀಗೆ ಉಭಯತರು ಅನೇಕ ಪವಾಡಗಳನ್ನು ಮಾಡುತ್ತ ಕಲ್ಯಾಣಕ್ಕೆ ಬಂದು ಬಸವೇಶ್ವರನನ್ನು ಕಂಡರು. ಅಲ್ಲಿ ಇದ್ದಂಥ ಶಿವಶರಣರು ಅವರನ್ನು ಅತ್ಯಂತ ಆದರಿಸುವವರಾದರು. ಸುಜ್ಞಾನಿದೇವ ನನ್ನಯ್ಯ ಉಭಯತರು ಕಲ್ಯಾಣದಲ್ಲಿ ಇದ್ದು ಅಲ್ಲಿಯೇ ಲಿಂಗೈಕ್ಯರಾದರು.

# ಕಲಕೇತಬೊಮ್ಮಯ್ಯ.

ಬಸವೇಶ್ವರನ ಕಾಲದಲ್ಲಿ ಶಿವಾನುಭವದ ತತ್ವಗಳು ಎಲ್ಲ ಸಮಾಜಗಳಲ್ಲಿ ಉಚ್ಚ ಧಾರ್ಮಿಕ ಕ್ರಾಂತಿಯನ್ನುಂಟು ಮಾಡಿದ್ದು ಕಂಡುಬರುತ್ತದೆ. ಈ ತತ್ವಗಳಲ್ಲಿ ಅವರ ಕಾಯಕದ ವಿಚಾರಗಳು ಎಲ್ಲ ತರಗತಿಯ ಉದ್ಯೋಗಸ್ಥರನ್ನು ಶಿವಾನುಭವಕ್ಕೆಳೆದವು. ಶಿವಾನುಭವವು ಉದ್ಯೋಗಗಳಲ್ಲಿ ಉಚ್ಚನೀಚ ಭಾವವನ್ನು ಎಣಿಸುವದಿಲ್ಲ. ದಾಸೋಹ ಭಾವದಿಂದ ಮಾಡಿದ ಎಲ್ಲ ಕಾಯಕಗಳೂ ಉಚ್ಚತರವಾದವುಗಳು. ವಾಡಿಕೆಯಾಗಿ ಕಿಳ್ಳಿಕೆತ್ತರೂ, ಬಹುರೂಪಿಗಳೂ, ಸುಡುಗಾಡಸಿದ್ಧರೂ ಸಮಾಜದಲ್ಲಿ ಕೆಳಗಿನ ವರ್ಗದವರೆಂದು ಜನರು ತಿಳಿದುಕೊಳ್ಳುತ್ತಾರೆ. ಆದರೆ ಅವರಲ್ಲಿಯೂ ಕೂಡ ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರಾಗಿದ್ದಾರೆ. ಕಲಕೇತಬೊಮ್ಮಯ್ಯನು ಇಂಥ ಸಮಾಜಗಳಲ್ಲಿ ಒಂದಕ್ಕೆ ಹೊಂದಿದವನಾಗಿದ್ದು ಅವನ ಕಾಯಕವು ಅನೇಕತರದ ಬಣ್ಣಗಳುಳ್ಳ ಉಡುಪುಗಳನ್ನು ಧರಿಸಿಕೊಂಡು ಭೃಂಗಿಯಾಟವನಾಡುತ್ತ ಜನರ ಮುಂದೆ ಹಾಸ್ಯವಾಡುವದು ಇರುತ್ತದೆ. ಅವನು ಬಸವೇಶ್ವರನ ಸಮಕಾಲೀನನಾಗಿ ಶಿವಾನುಭವ ಮಂಟಪದಲ್ಲಿದ್ದುಕೊಂಡು ವಚನಕಾರನಾಗಿದ್ದಾನೆ. ಅವನ ವಚನಗಳಲ್ಲಿ ನಮಗೆ ೧೧ ಮಾತ್ರ ಉಪಲಬ್ಧವಿದ್ದು ಅವುಗಳಲ್ಲಿ ಅವನು ತನ್ನ ಕಾಯಕದ ವಿವರಣೆಯನ್ನು ಮಾಡಿದ್ದಾನೆ. ಈ ವಿವರಣೆಯಲ್ಲಿ ಅವನು ಷಟ್‌ಸ್ಥಲದ ಸೂಕ್ಷ್ಮ ವಿಚಾರಗಳನ್ನು ಹೊರಗೆಡವಿದ್ದಾನೆ.

ಕಲಕೇತನ ಉಡುಪಿನ ವರ್ಣನೆಯು ಅವನ ವಚನಗಳಲ್ಲಿ ಬಹುಕಡೆಗೆ ಬಂದಿದೆ. ಅವುಗಳಿಂದ ಕಂಡುಬರುವದೇನೆಂದರೆ-- ಅವನ ಮುಂದಲೆಯಲ್ಲಿ ಕೂದಲಿನ ಮುಡಿಯು ಇದ್ದು ಅದು ಯಾವಾಗಲೂ ಅಲುಗಾಡುತ್ತಲೇ ಇರುವಂತಹದು, ನೊಸಲಲ್ಲಿ ವಿಭೂತಿಯು, ಕಿವಿಯಲ್ಲಿ ಕೆಂದಳಿರು, ದೇಹದ ಮೇಲೆ ಕಾವಿಯ ಬಟ್ಟೆ, ಎಡದ ಪಾದದಲ್ಲಿ ಅಂದುಗೆಯು, ಬಲಪಾದದಲ್ಲಿ ಗೆಜ್ಜೆ, ಅವನ ಎಡದ ಕಯ್ಯಲ್ಲಿ ಟಗರಿನ ದೊಡ್ಡ ಕೊಂಬು ಬಲದ ಕಯ್ಯಲ್ಲಿ ಬೆತ್ತ ಹೀಗೆ ವೇಷವನ್ನು ಧಾರಣಮಾಡಿಕೊಂಡು ಕುಣಿಯುತ್ತ ನಡೆಯುವನು. ಆಗ ಘುಲ್ಘುಲು ಗೆಜ್ಜೆಯ ಸಪ್ಪಳವಾಗುವದು. ಕಯ್ಯಲ್ಲಿಯ ಬೆತ್ತವನ್ನು ತಿರು

ಹುತ್ತ ಮೋರೆಯನ್ನು ಮುರುಕಿಸುತ್ತ ನಡೆಯುವನು. ನಡೆಯುವಾಗ ಶಿವಭಕ್ತರ ಮಹತ್ವವನ್ನು ಹೊಗಳುತ್ತ, ಪರವಾದಿಗಳ ತತ್ವಗಳನ್ನು ಖಂಡಿಸುತ್ತ ಕೋಡಗದಾಟವನಾಡುತ್ತ ಭೃಂಗಿಯ ನಾಂಟ್ಯದಂತೆ ಕುಣಿದಾಡುತ್ತ ಮುಂದು ಸಾಗುವನು. ಹೀಗೆ ಶರಣರ ಕೀರ್ತಿಯನ್ನು ಉಘ್ಘಡಿಸುವದೇ ಅವನ ಕಾಯಕವಾಗಿತ್ತು. ಅದನ್ನು ಕೇಳಿದ ಭಕ್ತರು ಅವನಿಗೆ ಹಣವನ್ನು ಕೊಡಲಾಗಿ ಅವನು ಅದನ್ನು ತೆಗೆದುಕೊಂಡರೂ, ಅವನು ಅದನ್ನು ಇಟ್ಟುಕೊಳ್ಳದೆ ಕಂಡ ಬಡಭಕ್ತರಿಗೆ ಕೊಟ್ಟು ಬಿಡುವನು. ಈ ರೀತಿ ಅವನು ಕಲ್ಯಾಣದಲ್ಲಿ ತನ್ನ ಕಾಯಕವನ್ನು ನಡಿಸುತ್ತಾ ಇದ್ದನು.

ಹೀಗಿರಲು ಒಂದುದಿನ ಒಬ್ಬ ಬಡಭಕ್ತನು ದಾರಿದ್ರ್ಯದಿಂದ ಬಳಲಿ ಕಿನ್ನರೀಬ್ರಹ್ಮಯ್ಯನೆಂಬ ಶಿವಶರಣನು ಪಡಿಯನ್ನು ಕೊಡುತ್ತಾನೆಂದು ಜನರಿಂದ ಕೇಳಿ ಅವನನ್ನು ಕಾಣಲು ಬಯಸಿ ಅವನ ಮನೆಯನ್ನು ಹುಡುಕುತ್ತ ಹೋಗುತ್ತಿರುವಾಗ ಅವನನ್ನು ದಾರಿಯಲ್ಲಿ ಕಲಕೇತಯ್ಯನು ಕಂಡು ಅವನ ಅಭಿಲಾಷೆಯನ್ನು ತಿಳಿದುಕೊಂಡು ಅವನನ್ನು ತನ್ನಲ್ಲಿ ಬರಮಾಡಿಕೊಂಡು, ಕಿನ್ನರಯ್ಯನನ್ನು ಕಾಣಲು ಅಷ್ಟು ದೂರ ಏಕೆ ಹೋಗುತ್ತೀ, ನಿನಗೆ ಬೇಕಾದದ್ದನ್ನು ನಾನು ಕೊಡುತ್ತೇನೆಂದು, ತನ್ನ ಅಡಿಯಿಂದ ಕಲ್ಲುಗಳನ್ನು ತಾಕಿಸುತ್ತ ಮುಂದೆ ನಡೆಯಲು ಅವೆಲ್ಲವೂ ಹೊನ್ನಾದವು. ಅವುಗಳನ್ನು ಆ ಬಡಭಕ್ತನು ಗುಡಿಸಿ ರಾಶಿ ಮಾಡಿ ಅವುಗಳನ್ನು ಹೊತ್ತುಕೊಂಡು ಬಸವ ದಂಡನಾಯಕನ ಅರಮನೆಗೆ ಹೋಗಿ ನಡೆದ ಸಂಗತಿಯನ್ನು ಅವನಿಗೆ ತಿಳಿಸಲು, ಬಸವೇಶ್ವರನು ಕಲಕೇತನು ಮಹಾನುಭಾವನು ಎಂದು ಅವನ ಮಹತ್ವವನ್ನು ಅಲ್ಲಿದ್ದವರಿಗೆ ತಿಳಿಸಿಕೊಟ್ಟು ತನ್ನ ಒಬ್ಬ ಸೇವಕನನ್ನು ಆ ಬಡಭಕ್ತನೊಡನೆ ಕಳಿಸಿ ಆ ಹೊನ್ನನ್ನೆಲ್ಲ ಅವನ ಮನೆಗೆ ಮುಟ್ಟಿಸಿದನು. ಈಪ್ರಕಾರ ಕಲಕೇತಯ್ಯನ ಚಿಕ್ಕ ಕಥೆ ಇದೆ.

ಕಲಕೇತನು ವಚನಕಾರನಿದ್ದು ಅವನ ಮುದ್ರಿಕೆಯು 'ಮೋಖಲೇಶ್ವರ ಲಿಂಗ' ಎಂದಿದೆ. ಅವನು ತನ್ನ ಅನೇಕ ವಚನಗಳಲ್ಲಿ ತನ್ನನ್ನು ಉಲ್ಲೇಖಿಸಿಕೊಂಡಿದ್ದಾನೆ. ಅವುಗಳಲ್ಲಿ ಕೆಲವನ್ನು ಮಾತ್ರ ನಾವು ಇಲ್ಲಿ ಮಾದರಿಗಾಗಿ ಕೊಟ್ಟಿದ್ದೇವೆ. ಅವುಗಳಲ್ಲಿ ಷಟ್‌ಸ್ಥಲಗಳ ಗೂಢತತ್ವಗಳನ್ನು ವಿವೇಚಿಸಿದ್ದಾನೆ.

## ವಚನೆಗಳು.

(೧) ಜಗಕ್ಕೆಹುದಾದುದನಿತ್ತು, ಜಗಕ್ಕಲ್ಲವಾದುದ ತೊಟ್ಟು, ಜಗ ಹಿಡಿದುದ ಬಿಟ್ಟು, ಜಗ ಒಲ್ಲದುದ ತೊಟ್ಟು, ತಾನರಿದುದ ಮರೆದು, ಆ ಮರವೆಗೊಡಲಾದುದ ಮರೆದು, ಉಭಯದ ಕೋಡ ಕಿತ್ತು ನಲಿದೊಲವಿನ ಕೊಂಬಿನ ನಿರಿಗೆಯಲ್ಲಿ ಒಲಿದಾಡುವೆ. ಜಗ ಭಂಡರಂಗಣದಲ್ಲಿ ತುಳಿದಾಡುತ್ತಲಿರಬೇಕು, ಮೋಖಲೇಶ್ವರ ಲಿಂಗವ ನೊಡಗೂಡುತ್ತಲಿರಬೇಕು.

ಭಾವಃ— ಇದು ಭಾವ ಪೂರ್ಣವಾದ ವಚನವಿದೆ. ಅವನ ಭಾವವೇನೆಂದರೆ— ನಾನು ನಾನಾಬಣ್ಣದ ಹರಕು ಬಟ್ಟೆಗಳನ್ನು ಹೊರು ವದರ ಉದ್ದೇಶವು ಜನರಿಗೆ ಬೇಡಾದದ್ದನ್ನು ನಾನು ತೆಗೆದುಕೊಳ್ಳು ವದು, ಮತ್ತು ನನಗೆ ದೊರೆತದ್ದನ್ನು ಅವರಿಗೆ ದಾಸೋಹಭಾವದಿಂದ ಕೊಟ್ಟು ಅವರ ಇಚ್ಛೆಯನ್ನು ಸಲಿಸುವದು ಇದ್ದು ಈ ತರದ ಔದಾ ರ್ಯದಿಂದ ಆಚರಿಸುವದೇ ನನ್ನ ಉದ್ದೇಶವೆಂದು ಇಲ್ಲಿ ಹೇಳುತ್ತಾನೆ. ಜಗ ಹಿಡಿದದ್ದನ್ನು ನಾನು ಬಿಟ್ಟುಬಿಡುತ್ತೇನೆ, ಜಗ ಬಿಟ್ಟದ್ದನ್ನು ನಾನು ತೊಡುತ್ತೇನೆ ಎಂಬ ವಿಚಾರವನ್ನು ಪುನಃ ಮುಂದೆ ಹೇಳು ತ್ತಾನೆ. ಮುಂದೆ ಅವನು ಅನ್ನುವದೇನೆಂದರೆ, ನನಗೊದಗಿದ ಜ್ಞಾನ ದಿಂದ ನಾನು ಅಹಂಕಾರಿಯಾಗಿ ಆಚರಿಸುವದಿಲ್ಲ ಮತ್ತು ನನ್ನ ಅಜ್ಞಾನಕ್ಕೆ ಕಾರಣವಾದಂಥಾದ್ದನ್ನು ಬಿಟ್ಟುಕೊಡುತ್ತೇನೆ. ಇದರಿಂದ ನನಗುಂಟಾದ ಆನಂದದಿಂದ ನನ್ನ ಕೊಂಬಿನಲ್ಲಿ ಸ್ವರಮಾಡುತ್ತ ಕುಣಿ ಯುತ್ತಿದ್ದೇನೆ. ನಾನು ಜಗಭಂಡರಿಗೆ ಅಂಜಿ ಅವರಿಂದ ದೂರ ಇದ್ದು ಕೊಂಡು ಕುಣಿಯುವದಿಲ್ಲ. ಆದರೆ ಅವರ ಅಂಗಣದಲ್ಲಿಯೇ ಇದ್ದು ಕುಣಿದು ಅವರ ಇದಿರಿಗೆ ಶಿವಶರಣರ ಘೋಷಣೆಯನ್ನು ಮಾಡುತ್ತೇನೆ. ಈ ತರದ ನಡೆಯು ನನಗೆ ಲಿಂಗದಲ್ಲಿ ಸಾಮರಸ್ಯವನ್ನು ಕೊಡುತ್ತಿದೆ ಎಂದು ತನ್ನ ಕಾಯಕದ ರೀತಿಯನ್ನು ಹೇಳುತ್ತಾನೆ.

(೨) ಬೇಡಲೇತಕ್ಕೆ ಕಾಯಕವ ಮಾಡಿಹೆನೆಂದು? ಕೊಡದೊಡೆ ಒಡಗೂಡಿ ಬಯ್ಯಲೇತಕ್ಕೆ? ಭಕ್ತರು ಮಾಡಿಹರೆಂದು ಗಡಿತಡಿಗಳಲಿ ಕವಾಟಮಂದಿರ ಮುಂದೆ ಸಂದಿಗೊಂದಿಗಳಲ್ಲಿ ನಿಂದು ಕಾಯಲೇತಕ್ಕೆ? ಈ ಗುಣ ಕಾಯಕದಂದವೇ? ಈ ಗುಣ ಹೊಟ್ಟೆಗೆ ಕಾಣದ ಸಂಸಾ

ರದ ಘಟ್ಟುವನರಿವು. ಉಭಯ ಭ್ರಷ್ಟಂಗೆ ಕೊಟ್ಟ ದ್ರವ್ಯ ಮೇಖ ಲೇಶ್ವರ ಲಿಂಗಕ್ಕೆ ಮುಟ್ಟದೆ ಹೋಯಿತ್ತು.

(೩) ಎನ್ನ ತಗರು ಆರುಸನ್ನೆಗೆ ದೋರದೆ, ಮೂರು ಸನ್ನೆಗೆ ಒಡೆದು ಲೆಕ್ಕವಿಲ್ಲದ ಸನ್ನೆಗೆ ಧಿಕ್ಕರಿಸಿ ನಿಲ್ಲುವದು. ಕುಟಿಲ ಕವಳವ ನೊಲ್ಲದು. ಮದ್ದು ಮೊರಡಿ ಬೆಳುವೆನು. ಗುಣ ಗಾಳಿಯ ಲೆಕ್ಕಿಸದು. ಇಂತೀ ಅರಿ ಗುರಿಯ ಕೋಡ ಕಿತ್ತು ಒಂದ ಹಿಂದಕ್ಕಿರಿಸಿ, ಒಂದ ಹಿಡಿದಾಡ ಬಂದೆ. ಆ ಕೋಡಿನಲ್ಲಿ ನಾನಾ ವರ್ಣದ ಶಬ್ದ ಉಲುಹು ಇಂತಿವೆಲ್ಲವು ಒಂದುಂಗುರದಲ್ಲಿ ಸೇರಿಸಿ ಅಂಗುಲಿಗಳಲ್ಲಿ ಮುಟ್ಟಿ ಆಡುತ್ತ ಬಂದೆ, ಮೇಖಲೇಶ್ವರಲಿಂಗದಲ್ಲಿ ಲೀಯ್ಯವಾದ ಶರಣರ ನೋಡಿಹೆನೆಂದು.

ಭಾವ:— ಇದು ಒಡಪಿನ ವಚನ. ಕಲಕೇತನು ಕೊಂಬನ್ನು ಊದುತ್ತ ನಾನಾಬಗೆಯ ನಾಟ್ಯವನಾಡುವ ತನ್ನ ಉದ್ದೇಶವನ್ನು ಇಲ್ಲಿ ತಿಳಿಸಿದ್ದಾನೆ. ಪರಮಾತ್ಮನಲ್ಲಿ ಲೀನರಾದ ಶರಣರನ್ನು ನೋಡುವ ಉದ್ದಿಶ್ಯವಾಗಿ ನಾನು ಅವರಲ್ಲಿ ಹೋಗುತ್ತೇನೆಂದು ಹೇಳುತ್ತಾನೆ. ಅವ ರನ್ನು ಬೇಡಿ ಹಣ ತೆಗೆದುಕೊಳ್ಳುವ ಉದ್ದೇಶ ತನ್ನದಲ್ಲೆಂದು ಹೇಳು ವದೇ ಅವನ ಮುಖ್ಯ ಭಾವವಿದೆ. ಮಾದಿರಿಗಾಗಿ ಅವನ ಈ ವಚನ ವನ್ನು ನಾವು ಇಲ್ಲಿ ಕೊಟ್ಟಿದ್ದೇವೆ.

ಕಲಕೇತನು ಭಿಕ್ಷುಕನಂತೆ ಆಚರಿಸಿದರೂ, ಅವನು ಭಿಕ್ಷುಕನಲ್ಲ. ಅವನು ಭಿಕ್ಷವನ್ನು ಹೇಗೆ ಮತ್ತು ಏಕೆ ಮಾಡಬೇಕೆಂಬುದನ್ನು ಬಹು ಸರಸಾಗಿ ತನ್ನ ವಚನಗಳಲ್ಲಿ ನುಡಿದಿದ್ದಾನೆ. ಗ್ರಂಥ ವಿಸ್ತಾರಭಯ ಕ್ಕೋಸ್ಕರ ನಮ್ಮಲ್ಲಿದ್ದ ಅವನ ಬೇರೆ ೮ ವಚನಗಳನ್ನು ಕೊಟ್ಟಿಲ್ಲ. ಅವೆಲ್ಲವೂ ಒಡಪಿನ ವಚನಗಳಿದ್ದು ಅವುಗಳಿಗೆ ಪುರಾತನ ಟೀಕೆಗ ಳಿದ್ದು ಅವುಗಳಲ್ಲಿ ಅವನು ಷಟ್‌ಸ್ಥಲ ವಿಷಯಗಳನ್ನು ಬೋಧಿಸಿದ್ದಾನೆ.

ಹುತ್ತ ಮೋರೆಯನ್ನು ಮುರುಕಿಸುತ್ತ ನಡೆಯುವನು. ನಡೆಯುವಾಗ ಶಿವಭಕ್ತರ ಮಹತ್ವವನ್ನು ಹೊಗಳುತ್ತ, ಪರವಾದಿಗಳ ತತ್ವಗಳನ್ನು ಖಂಡಿಸುತ್ತ ಕೋಡಗದಾಟವನಾಡುತ್ತ ಭೃಂಗಿಯ ನಾಂಟ್ಯದಂತೆ ಕುಣಿದಾಡುತ್ತ ಮುಂದು ಸಾಗುವನು. ಹೀಗೆ ಶರಣರ ಕೀರ್ತಿಯನ್ನು ಉಘ್ಘಡಿಸುವದೇ ಅವನ ಕಾಯಕವಾಗಿತ್ತು. ಅದನ್ನು ಕೇಳಿದ ಭಕ್ತರು ಅವನಿಗೆ ಹಣವನ್ನು ಕೊಡಲಾಗಿ ಅವನು ಅದನ್ನು ತೆಗೆದುಕೊಂಡರೂ, ಅವನು ಅದನ್ನು ಇಟ್ಟುಕೊಳ್ಳದೆ ಕಂಡ ಬಡಭಕ್ತರಿಗೆ ಕೊಟ್ಟು ಬಿಡುವನು. ಈ ರೀತಿ ಅವನು ಕಲ್ಯಾಣದಲ್ಲಿ ತನ್ನ ಕಾಯಕವನ್ನು ನಡಿಸುತ್ತಾ ಇದ್ದನು.

ಹೀಗಿರಲು ಒಂದುದಿನ ಒಬ್ಬ ಬಡಭಕ್ತನು ದಾರಿದ್ರ್ಯದಿಂದ ಬಳಲಿ ಕಿನ್ನರೀಬ್ರಹ್ಮಯ್ಯನೆಂಬ ಶಿವಶರಣನು ಪಡಿಯನ್ನು ಕೊಡುತ್ತಾನೆಂದು ಜನರಿಂದ ಕೇಳಿ ಅವನನ್ನು ಕಾಣಲು ಬಯಸಿ ಅವನ ಮನೆಯನ್ನು ಹುಡುಕುತ್ತ ಹೋಗುತ್ತಿರುವಾಗ ಅವನನ್ನು ದಾರಿಯಲ್ಲಿ ಕಲಕೇತಯ್ಯನು ಕಂಡು ಅವನ ಅಭಿಲಾಷೆಯನ್ನು ತಿಳಿದುಕೊಂಡು ಅವನನ್ನು ತನ್ನಲ್ಲಿ ಬರಮಾಡಿಕೊಂಡು, ಕಿನ್ನರಯ್ಯನನ್ನು ಕಾಣಲು ಅಷ್ಟು ದೂರ ಏಕೆ ಹೋಗುತ್ತೀ, ನಿನಗೆ ಬೇಕಾದದ್ದನ್ನು ನಾನು ಕೊಡುತ್ತೇನೆಂದು, ತನ್ನ ಅಡಿಯಿಂದ ಕಲ್ಲುಗಳನ್ನು ತಾಕಿಸುತ್ತ ಮುಂದೆ ನಡೆಯಲು ಅವೆಲ್ಲವೂ ಹೊನ್ನಾದವು. ಅವುಗಳನ್ನು ಆ ಬಡಭಕ್ತನು ಗುಡಿಸಿ ರಾಶಿ ಮಾಡಿ ಅವುಗಳನ್ನು ಹೊತ್ತುಕೊಂಡು ಬಸವ ದಂಡನಾಯಕನ ಅರಮನೆಗೆ ಹೋಗಿ ನಡೆದ ಸಂಗತಿಯನ್ನು ಅವನಿಗೆ ತಿಳಿಸಲು, ಬಸವೇಶ್ವರನು ಕಲಕೇತನು ಮಹಾನುಭಾವನು ಎಂದು ಅವನ ಮಹತ್ವವನ್ನು ಅಲ್ಲಿದ್ದವರಿಗೆ ತಿಳಿಸಿಕೊಟ್ಟು ತನ್ನ ಒಬ್ಬ ಸೇವಕನನ್ನು ಆ ಬಡಭಕ್ತನೊಡನೆ ಕಳಿಸಿ ಆ ಹೊನ್ನನ್ನೆಲ್ಲ ಅವನ ಮನೆಗೆ ಮುಟ್ಟಿಸಿದನು. ಈಪ್ರಕಾರ ಕಲಕೇತಯ್ಯನ ಚಿಕ್ಕ ಕಥೆ ಇದೆ.

ಕಲಕೇತನು ವಚನಕಾರನಿದ್ದು ಅವನ ಮುದ್ರಿಕೆಯು 'ಮೇಖಲೇಶ್ವರ ಲಿಂಗ' ಎಂದಿದೆ. ಅವನು ತನ್ನ ಅನೇಕ ವಚನಗಳಲ್ಲಿ ತನ್ನನ್ನು ಉಲ್ಲೇಖಿಸಿಕೊಂಡಿದ್ದಾನೆ. ಅವುಗಳಲ್ಲಿ ಕೆಲವನ್ನು ಮಾತ್ರ ನಾವು ಇಲ್ಲಿ ಮಾದರಿಗಾಗಿ ಕೊಟ್ಟಿದ್ದೇವೆ. ಅವುಗಳಲ್ಲಿ ಷಟ್‌ಸ್ಥಲಗಳ ಗೂಢತತ್ವಗಳನ್ನು ವಿವೇಚಿಸಿದ್ದಾನೆ.

ಗಳಿರುವಾಗಲೇ ಎದ್ದು ಸಮಸ್ತರಾಗಗಳನ್ನು ಹಾಡುತ್ತ ಪರಮಾತ್ಮನ ಭಜನೆಯಲ್ಲಿ ತೊಡಗಿದನು. ಆ ವಿಧವೆಯ ಮಗನು ಅವುಗಳನ್ನು ಕೇಳುತ್ತ ಕೆಲವು ಹೊತ್ತು ಕುಳ್ಳಿರಲು ಆ ಹಾಡುಗಳು ಅವನ ಮನಸ್ಸಿನ ಮೇಲೆ ಪರಿಣಾಮ ಮಾಡಿದವು. ಅವನಲ್ಲಿ ಆಕ್ಷಣವೇ ಭಕ್ತಿಭಾವವು ಮೂಡಿತು. ಅವನು ಹಾಗೆಯೇ ಮನೆಗೆ ಬಂದು ತಾನು ಕೇಳಿದ ರಾಗಗಳಲ್ಲಿ ಶ್ರೀರಾಗವೆಂಬುದನ್ನು ಅನ್ನುತ್ತ ಪರಮಾತ್ಮನ ಸ್ತೋತ್ರ ಮಾಡಹತ್ತಿದನು. ಮುಂದೆ ಭದ್ರಗಾಯಕನು ಮೊದಲು ಕಳ್ಳತನದಿಂದ ಕಾಲಕಳೆಯುತ್ತಿದ್ದ ಆ ಹುಡುಗನು ಶಿವಭಕ್ತಿಯುಳ್ಳವನಾಗಿ ಅತ್ಯುತ್ತಮ ರೀತಿಯಿಂದ ತನ್ನ ಹಾಡುಗಳನ್ನೇ ಹಾಡುತ್ತಾನೆಂಬ ವಾರ್ತೆಯನ್ನು ಕೇಳಿ ಅವನನ್ನು ತನ್ನಲ್ಲಿ ಬರಮಾಡಿಕೊಂಡು ಅವನನ್ನು ಕೇಳಲು, ಅವನು—ರಾತ್ರಿಯಲ್ಲಿ ನಿನ್ನ ಮನೆಯ ಹಿಂದೆ ಇದ್ದುಕೊಂಡು ನಾನು ನಿನ್ನ ಹಾಡುಗಳನ್ನು ಕಲಿತೆನೆಂದು ತಿಳಿಸಿದನು. ಅದಕ್ಕೆ ಭದ್ರಗಾಯಕನು ಬಹಳ ಪ್ರೀತನಾಗಿ ಆ ವಿಧವೆಯ ಮಗನಿಗೆ ತನ್ನ ಎಲ್ಲ ರಾಗಗಳನ್ನು ಕಲಿಸಲು, ಅವನು ಗ್ರಾಮದಲ್ಲಿ ಗಾನವಿದ್ಯೆಯಲ್ಲಿ ಅತ್ಯಂತ ಪ್ರವೀಣನೆಂದು ಹೆಸರಾದನು.

ಹೀಗಿರಲು ಅದೇ ಊರಲ್ಲಿ ಗಂಧರ್ವಭಾರತಿ ಎಂಬ ಹೆಸರಿನ ಒಬ್ಬ ವೈಷ್ಣವನಿದ್ದನು. ಅವನು ಗಾಯನಕಲೆಯಲ್ಲಿ ಕುಶಲನಾಗಿರಲು, ಅವನು ತನ್ನ ಮಗನಿಗೆ ಗಾನಕಲೆಯನ್ನು ಕಲಿಸಲು ಎಷ್ಟು ಪ್ರಯತ್ನ ಮಾಡಿದರೂ ಅವನಿಗೆ ಗಾನವು ಬರದಿರಲು, ಆ ವೈಷ್ಣವನು ಭದ್ರಗಾಯಕನಿದ್ದೆಡೆಗೆ ಬಂದು—ನನ್ನ ಮಗನಿಗೆ ನೀವು ಗಾನವಿದ್ಯೆಯನ್ನು ಕಲಿಸಬೇಕು. ಅಂದರೆ ನಿಮಗೆ ದಿನಕೊಂದು ಹೊನ್ನನೀಯುವೆನೆಂದು ಹೇಳಲು ಭದ್ರಗಾಯಕನು—ಶಿವಭಕ್ತಿ ಇದ್ದವರಿಗೆ ಮಾತ್ರ ನಾನು ನನ್ನ ಹಾಡುಗಳನ್ನು ಹೇಳುವೆನೇ ಹೊರ್ತು ಇತರರಿಗೆ ಹೇಳೆನು. ಹೀಗೆ ಮಾಡುವದೇ ನನ್ನ ಕಾಯಕದ ರೀತಿಯಾಗಿದೆ ಎಂದೆನ್ನಲು ಅದಕ್ಕೆ ಗಂಧರ್ವಭಾರತಿಯು—ಆ ಮುಂಡೆಯ ಮಗನಿಗೆ ರಾಗವನ್ನು ಕಲಿಸಿದೆ. ನಾನೀಯುವ ಹೊನ್ನನ್ನು ತೆಗೆದುಕೊಂಡು ಕಲಿಸೆಂದರೆ ನೀನು ಕಲಿಸುವದಿಲ್ಲೆಂದೆನ್ನುತ್ತೀ. ನಿನಗೆ ಮಹಾಲಕ್ಷ್ಮಿಯ ಕರುಣವಿಲ್ಲ. ಇದೆಂಥ ನಿನ್ನ ಕಾಯಕವು? ಎಂದು ಕೋಪಿಸಿ ಹೊರಟುಹೋದನು.

ಇತ್ತ ಭದ್ರಗಾಯಕನು ದಿನಾಲು ಭಕ್ತರ ಮನೆಗೆ ಹೋಗಿ ಹಾಡಿ ಬರುತ್ತಿರಲು ಅವರು ಕೊಡುವ ಧನ ಧಾನ್ಯವು ಅವನಿಗೆ ಸಾಲದೆ ಹೋಯಿತು. ಆಗ ಅವನ ಹೆಂಡತಿಯು ಅವನಿಗೆ--ಸಿರಿವಂತರು ನಿನಗೆ ಕೊಟ್ಟರೆ ನೀನು ಒಲ್ಲೆನ್ನುತ್ತೀ. ನಿನ್ನ ಶಿವನು ನಿನಗೇನು ಕೊಡುವನು? ಎಂದೆನ್ನಲು ಅವನು ಶಿವನು ಕೊಟ್ಟದ್ದರಲ್ಲಿಯೇ ನಾನು ತೃಪ್ತನು ಎಂದು ಹೇಳಿದನು. ಹೀಗೆ ಭದ್ರಗಾಯಕನು ಆಚರಿಸುತ್ತ ದಿನಾಲು ಮುಂಜಾವಿನಲ್ಲೆದ್ದು ಶಿವಾಲಯಕ್ಕೆ ಹೋಗಿ ರಾಗವನ್ನು ಮಾಡಿ ಶಿವನನ್ನು ಪ್ರಾರ್ಥಿಸುವದನ್ನು ಎಷ್ಟು ಮಾತ್ರವೂ ಬಿಡುತ್ತಿದ್ದಿಲ್ಲ. ಆದರೆ ಇದರಿಂದ ಅವನ ಹೊಟ್ಟೆಗೆ ಸಾಲುವಷ್ಟು ಬರುತ್ತಿದ್ದಿಲ್ಲ. ಒಮ್ಮೊಮ್ಮೆ ಉಪವಾಸವಿರುವನು. ಆದ್ದರಿಂದ ಅವನ ಹೆಂಡತಿಯು ಒಂದು ದಿವಸ ಬಹಳ ಕೋಪಾವಿಷ್ಟಳಾಗಿ ತನ್ನ ಗಂಡನಿಗೆ--ನೀನು ದಿನಾಲು ಲಿಂಗದ ಗುಡಿಗೆ ಹೋಗಿ ರಾಗವನ್ನು ಮಾಡಿ ಬರುತ್ತೀ. ಆದರೆ ನೀನು ನುಂಗುವ ತುತ್ತಿಗೆ ಏನು ಗತಿ? ಎಂದು ಬಹು ಕಠೋರವಾಗಿ ನುಡಿದಳು. ಅದಕ್ಕೆ ಭದ್ರಗಾಯಕನು ಅತ್ಯಂತ ನೊಂದವನಾಗಿ ಶಿವಾಲಯಕ್ಕೆ ಬಂದು ಲಿಂಗದ ಮುಂದೆ ನಿಂತು ಗಾನವನ್ನು ಮಾಡಿ-ಪರಮಾತ್ಮನೇ, ಸತಿಯ ಬಾಧೆಯು ನನಗೆ ಬಹಳವಾಗಿದೆ. ನನಗೆ ಮುಂದೇನು ಗತಿ? ಎಂದು ಬಿನ್ನವಿಸಿಕೊಳ್ಳಲಾಗಿ, ಆ ಲಿಂಗದೊಳಗಿಂದ—ಎಲೋ ಭದ್ರಗಾಯಕನೇ, ನೀನು ಕೇರಳರಾಜನಾದ ಚಾರಮರಾಯನಲ್ಲಿಗೆ ಹೋಗು, ಅವನಿಂದ ನಿನಗೆ ಬೇಕಾದಷ್ಟು ದ್ರವ್ಯವನ್ನು ತೆಗೆದುಕೊಂಡು ಬಾ, ಎಂಬ ಶಬ್ದವಾಯಿತು. ಅಷ್ಟರಲ್ಲಿಯೇ ಅಲ್ಲಿಯೇ ಒಂದು ಓಲೆಯೂ ಮೇಲಿಂದ ಅವನ ಇದಿರಿಗೆ ಬಿದ್ದಿತು. ಭದ್ರಗಾಯಕನು ಅದನ್ನು ಎತ್ತಿ ಓದಿ ನೋಡಲಾಗಿ ಅದರಲ್ಲಿ ತನಗೆ ಹಣವನ್ನು ಕೊಡಬೇಕೆಂದು ಕೇರಳೇಶ್ವನಿಗೆ ಬರೆದುದನ್ನು ಕಂಡು ಅವನು ಅದನ್ನು ತೆಗೆದುಕೊಂಡು ಅರಸನ ರಾಜಧಾನಿಗೆ ಬಂದನು.

ಭದ್ರಗಾಯಕನು ರಾಜನನ್ನು ಕಂಡು, ಅವನಿಗೆ ಆ ಓಲೆಯನ್ನು ತೋರಿಸಲಾಗಿ, ಅವನು ಅದನ್ನು ಓದಿ ನೋಡಿ—ನಾನು ನಿನಗೆ ನನ್ನ ಭಾಂಡಾರವನ್ನೆಲ್ಲ ತೆರೆದು ತೋರಿಸುವೆನು. ಅಲ್ಲಿಂದ ನಿನಗೆ ಬೇಕಾದಷ್ಟು ದ್ರವ್ಯವನ್ನು ತೆಗೆದುಕೊಂಡು ಹೋಗು ಎಂದು ಹೇಳಿ ತನ್ನ

ಚಾರನೊಡನೆ ಅವನನ್ನು ತನ್ನ ಭಾಂಡಾರದ ಗೃಹಕ್ಕೆ ಕಳಿಸಿದನು. ಭದ್ರಗಾಯಕನು ಅದನ್ನು ಪ್ರವೇಶಿಸಿ ಒಳಗೆ ನೋಡುತ್ತಾನೆಯೋ, ಅಲ್ಲಿ ಅಸಂಖ್ಯ ಮುತ್ತು ಮಾಣಿಕಗಳೂ ಚಿನ್ನದ ಒಡವೆಗಳೂ, ಬೆಳ್ಳಿ ಬಂಗಾರದ ನಾಣ್ಯಗಳೂ ಬಿದ್ದಿದ್ದವು. ಅಲ್ಲದೆ ಪಟ್ಟು ಪಟ್ಟಾವಳಿಗಳೂ ಅನಂತ ನಗಗಳೂ, ಹೊನ್ನಿನ ರಾಶಿಗಳೂ ಅಗಣಿತವಾಗಿ ಹರಿವಿದ್ದವು. ಆದರೆ ಅವುಗಳ ನೆರೆಯಲ್ಲಿಯೇ ವಿಭೂತಿಗಳ ಒಂದು ಮೊಟ್ಟೆಯೂ ಬಿದ್ದಿದ್ದನ್ನು ಕಂಡನು. ಭದ್ರಗಾಯಕನ್ನು ಅದನ್ನು ಕಂಡ ಕೂಡಲೆ ದ್ರವ್ಯವನ್ನು ತೆಗೆದುಕೊಂಡು ಹೋಗಬೇಕೆಂಬ ಅವನ ಅಭಿಲಾಷೆಯು ಹೋರಟು ಹೋಗಿಬಿಟ್ಟಿತು. ಅವನು ತನ್ನೊಳಗೆ--ಈ ವಿಭೂತಿಯು ಭವರೋಗಕ್ಕೆ ಔಷಧವು, ಇದರ ಮುಂದೆ ಆವುದೂ ಅಲ್ಲ, ಎಂದು ಅಂದು ಅವನು ಇತರ ಧನಕನಕ ದ್ರವ್ಯಾದಿಗಳನ್ನು ಬಿಟ್ಟು ಕೊಟ್ಟು ಅತ್ಯಂತ ನೈಷ್ಠೆಯಿಂದ ಆ ವಿಭೂತಿಯ ಮೊಟ್ಟೆಯನ್ನೆತ್ತಿಕೊಂಡು ಬಂದು, ಇದಷ್ಟೇ ನನಗೆ ಸಾಕು ಎಂದು ಚಾರಮರಾಯನಿಗೆ ಹೇಳಿ ತನ್ನ ಗ್ರಾಮಕ್ಕೆ ಬಂದನು ಮತ್ತು ಅದನ್ನು ತನ್ನ ಹೆಂಡತಿಯ ಮುಂದೆ ಇಟ್ಟನು.

ಅವನ ಹೆಂಡತಿಯು ಆ ಮೊಟ್ಟೆಯಲ್ಲಿ ಬರೀ ವಿಭೂತಿಗಳೇ ಇರುವದನ್ನು ನೋಡಿ ಅತ್ಯಂತ ಕೆರಳಿದವಳಾಗಿ ತನ್ನ ಮೊಗವನ್ನು ತಿರುಹಿ-- ಈ ಬೂದಿಯನೇಕೆ ತಂದೆ? ಎಂದು ನುಡಿಯಲು, ಭದ್ರಗಾಯಕನು -- ಅಯ್ಯೋ, ಹೀಗೆನ್ನಬೇಡ. ವಿಭೂತಿಯು ಬಹು ಶ್ರೇಷ್ಠವಾದುದು ಎಂದು ಹೇಳಲು, ಅವಳು--ಇದೆಲ್ಲ ಸಟೆ, ಎಂದು ನುಡಿಯಲು, ಭದ್ರ ಗಾಯಕನು--ಹರ ಹರಾ, ಭಸ್ಮದ ಮಹಿಮೆ ಎಂದಾದರೂ ಸಟೆಯೇ? ಇದರಲ್ಲಿ ನೀನು ಕೈಯಿಕ್ಕಿ ನೋಡು ಎಂದು ಸತಿಗೆ ಅನ್ನಲು ಅವಳು ಆ ಮೊಟ್ಟೆಯೊಳಗೆ ಕೈಹಾಕಿ ನೋಡಲು ಅದರಲ್ಲಿ ಅವಳಿಗೆ ಮುತ್ತು ಚಿನ್ನ ಚಿನ್ನಾಭರಣಗಳೇ ಹತ್ತುತ್ತಿದ್ದವು. ಆಗ ಆ ಸತಿಯು--ನನ್ನಿಂದ ತಪ್ಪಾಯಿತು. ನಾನು ಇನ್ನು ಮುಂದೆ ಶಿವಭಕ್ತಿಯನ್ನೇ ಮಾಡುವೆನು ಎಂದು ಅಂದು ಪತಿಗೆರಗಿ ಹಾಗೆಯೇ ಅವಳು ಮುಂದೆ ನಡೆಯುವವಳಾದಳು.

ಈ ಪ್ರಕಾರ ಭದ್ರಗಾಯಕನು ಲಿಂಗಕ್ಕೆ ರಾಗವನ್ನು ಕೇಳಿಸುತ್ತ ಗಾಯನ ಕಾಯಕವನ್ನು ಮಾಡುತ್ತ ರಾಗದಲ್ಲಿಯೇ ಶಿವನೊಡೆವೆರೆದನು.

ಈ ಚರಿತ್ರೆಯಲ್ಲಿ ಗಾಯನದ ಮಹತ್ವವೆಷ್ಟಿದೆ, ಕಾಯಕವನ್ನು ಹೇಗೆ ಮತ್ತು ಯಾರಲ್ಲಿ ಮಾಡಬೇಕು, ದ್ರವ್ಯಲೋಭಿಯಾಗಬಾರದು, ಕಾಯಕದಲ್ಲಿ ಧನಕನಕಗಳ ಮಹತ್ವವಿಲ್ಲ, ಶಿವಭಕ್ತಿಯ ಮಹತ್ವವೇ ಘನತರವಾದದ್ದು, ವಿಭೂತಿಯ ಮಹತ್ವವೆಷ್ಟಿದೆ ಇವೇ ಮೊದಲಾದ ವಿಷಯಗಳು ನಿರೂಪಿತವಾಗಿರುತ್ತವೆ.

ಬಸವೇಶ್ವರನು ಚಾರಮಯ್ಯನನ್ನು ತನ್ನ ವಚನಗಳಲ್ಲಿ ಬಹಳ ಕಡೆಗೆ ಹೊಗಳಿದ್ದಾನೆ. ಭದ್ರಗಾಯಕ, ನಂಬಿಯಣ್ಣ, ಗೊಗ್ಗವ್ವೆ ಇವರೆಲ್ಲರೂ ಚಾರಮಯ್ಯನಿಗೆ ಸಮಕಾಲೀನರು. ಆದುದ್ದರಿಂದ ಭದ್ರಗಾಯಕನು ಬಸವೇಶ್ವರನಕ್ಕಿಂತಲೂ ಹಿಂದಿನವನಾಗುತ್ತಾನೆ.

---

## ಉಂಡು ಉಪವಾಸಿ ಮತ್ತು ಬಳಸಿ ಬ್ರಹ್ಮಚಾರಿಗಳು.

ಬಸವೇಶ್ವರನ ಕಾಲದಲ್ಲಿ ಕರ್ನಾಟಕವಲ್ಲಿ ಜೈನ ಧರ್ಮವು ಬಹು ಪ್ರಬಲವಾಗಿ ಅದರ ಸಂಸ್ಕೃತಿಯು ಜನತೆಯಲ್ಲಿ ಈಗಿನಗಿಂತಲೂ ಹೆಚ್ಚಾಗಿ ಪ್ರಸಾರ ಹೊಂದಿತ್ತು. ದೇಹವನ್ನು ಕ್ಲೇಶಪಡಿಸುವದೂ ಸಂಸಾರವನ್ನು ತ್ಯಜಿಸಿ ಏಕಾಂತವಾಸಿಯಾಗಿರುವದೂ ಅರಣ್ಯಗಳಲ್ಲಿ ಹೋಗಿ ಗುಹೆಗಳಲ್ಲಿ ವಾಸಮಾಡುವದೂ ದಿಗಂಬರಿಗಳಾಗಿರುವದೂ ಅವರಿಗೆ ವಾಡಿಕೆಯಾಗಿದ್ದವು. ಬ್ರಾಹ್ಮಣ ಸಂಸ್ಕೃತಿಯಲ್ಲಿಯೂ ಕೂಡ ಇದೇ ತರದ ವಿಚಾರಗಳು ಹೆಚ್ಚು ಕಡಿಮೆ ಪ್ರಮಾಣದಿಂದ ಇರುವದು ಕಂಡು ಬರುತ್ತದೆ. ಅವರಲ್ಲಿಯೂ ಕೂಡ ಅನೇಕರು ಸಂಸಾರವನ್ನು ತ್ಯಜಿಸಿ ಅರಣ್ಯಗಳಲ್ಲಿ ಇದ್ದುಕೊಂಡು ತಪಸ್ಸು ಮಾಡಿದ್ದಾರೆ. ಅವರು ವಾನಪ್ರಸ್ಥಾಶ್ರಮಿಗಳಾಗಿದ್ದಾರೆ. ಆದರೆ ಶಿವಾನುಭವದ ತತ್ವಗಳ ಪ್ರಕಾರ ಹೀಗೆ ದೇಹವನ್ನು ಕ್ಲೇಶಪಡಿಸುವದು ಅನಾವಶ್ಯಕವಿರುತ್ತದೆ. ವೀರಶೈವರು ಸಂಸಾರದಲ್ಲಿಯೇ ಇದ್ದುಕೊಂಡು ಲಿಂಗಭೋಗೋಪಭೋಗಿಗಳಾಗಿ ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದಬಹುದು. ಅದರಂತೆ ಆಚರಿಸಿದಲ್ಲಿ ಅವರು ಉಪವಾಸಾದಿ ವ್ರತಗಳನ್ನು ಪಾಲಿಸುವ ಅವಶ್ಯವಿಲ್ಲ. ವಿರಕ್ತರಾಗುವ ಅವಶ್ಯವೂ ಇಲ್ಲ. ಲಿಂಗಾಂಗದ ಈ ರೀತಿಯನ್ನು ತಿಳಿದ ಶಿವಶರಣರು ಹಿಂದಿನ ಕಾಲದಲ್ಲಿ ಅನೇಕ ಮಹಿಮೆಗಳನ್ನು ಮಾಡಿದ್ದು ಕಂಡು ಬರುತ್ತದೆ.

ಕರ್ನಾಟಕದಲ್ಲಿ ಕೆಲವೊಂದು ಪಟ್ಟಣದಲ್ಲಿ ಒಬ್ಬ ವಿರಕ್ತನೂ ಒಬ್ಬ ಭಕ್ತನೂ ವಾಸಮಾಡಿಕೊಂಡಿದ್ದರು. ಉಭಯತರು ಶಿವಾನುಭವದ ಅರ್ಪಣ ಮತ್ತು ಪ್ರಸಾದದ ರೀತಿಯನ್ನು ತಿಳಿದು ಅದರಂತೆ ಆಚರಿಸುವವರಾಗಿದ್ದರು. ಆದ್ದರಿಂದ ಆ ವಿರಕ್ತನು ಉಂಡು ಉಪವಾಸಿ ಎಂತಲೂ ಆ ಭಕ್ತನು ಬಳಸಿ ಬ್ರಹ್ಮಚಾರಿ ಎಂತಲೂ ಪ್ರಸಿದ್ಧರಾದರು.

ಅವರು ಇದ್ದ ಪಟ್ಟಣವು ಒಂದು ನದೀ ತೀರದಲ್ಲಿ ಇತ್ತು. ಅದರ ಒಂದು ದಡದಲ್ಲಿ ಬಳಸಿ ಬ್ರಹ್ಮಚಾರಿಯು ಒಂದು ಮನೆಯನ್ನು ಮಾಡಿಕೊಂಡು ತನ್ನ ಹೆಂಡತಿಯೊಡನೆ ಪ್ರಪಂಚ ಮಾಡಿಕೊಂಡಿದ್ದನು. ಅದರ ಇದಿರಿನ ದಂಡೆಯಲ್ಲಿ ಉಂಡು ಉಪವಾಸಿಯು ವಿರಕ್ತಾಶ್ರಮಿಯಾಗಿ ಒಂದು ಆಶ್ರಮವನ್ನು ಕಟ್ಟಿಕೊಂಡು ಲಗ್ನ ಮಾಡಿಕೊಳ್ಳದೆ ಶಿವಾನುಭವದ ಆಚರಣೆಯನ್ನು ಪಾಲಿಸುತ್ತ ವಾಸಮಾಡಿಕೊಂಡಿದ್ದನು.

ಹೀಗಿರಲು ಒಂದು ದಿನ ಬಳಸಿ ಬ್ರಹ್ಮಚಾರಿಯ ಹೆಂಡತಿಯು ತನ್ನ ಗಂಡನಿಗೆ—ನೀವು ನನ್ನೊಡನೆ ಬಾಳ್ವೆ ಮಾಡುತ್ತಲಿದ್ದರೂ ನೀವು ಬ್ರಹ್ಮಚಾರಿಗಳೆಂದು ಜನರು ನಿಮ್ಮನ್ನು ಕರೆಯುತ್ತಾರೆ. ಇದು ಹೇಗೆ? ಎಂದು ಕೇಳಿದಳು. ಅದಕ್ಕೆ ಆ ಭಕ್ತನು ತನ್ನ ಹೆಂಡತಿಗೆ—ನಿನಗೆ ನನ್ನ ಆಚರಣೆಯ ಮಹಿಮೆಯನ್ನು ಪ್ರತ್ಯಕ್ಷ ಮಾಡಿ ತೋರಿಸುತ್ತೇನೆ. ನೀನು ಹೊಳೆಯ ಆಚೆಗೆ ಇರುವ ಉಂಡು ಉಪವಾಸಿ ವಿರಕ್ತನಿಗೆ ಎಡೆಯನ್ನು ತೆಗೆದುಕೊಂಡು ಹೋಗು, ದಾರಿಯಲ್ಲಿ ನದಿಯು ಕಟ್ಟಿದರೆ ಬಳಸಿ ಬ್ರಹ್ಮಚಾರಿಗಳು ದಾರಿಯ ಬಿಡಹೇಳಿದರು ಎಂದೆನ್ನು, ನದಿಯು ದಾರೀ ಬಿಟ್ಟದ್ದೇ ಆದರೆ ಆಗ ನೀನು ನನಗೆ ಬ್ರಹ್ಮಚಾರಿ ಎಂದೆನ್ನು ಎಂದು ಹೇಳಿದನು. ಹಾಗೆಯೇ ಆಗಲೆಂದು ಆಕೆಯು ಎಡೆತೆಗೆದುಕೊಂಡು ಹೋಗುತ್ತಿರಲು ಹೊಳೆಯು ಅಡ್ಡಗಟ್ಟಿ ಅವಳು ತನ್ನ ಗಂಡನು ಹೇಳಿದಂತೆ ಉಚ್ಚರಿಸಲಾಗಿ, ಹೊಳೆಯು ಇಬ್ಭಾಗವಾಗಿ ಆಕೆಗೆ ದಾರಿ ಬಿಟ್ಟಿತು. ಆಗ ಆಕೆಯು ತನ್ನ ಗಂಡನು ನಿಜವಾಗಿ ಬ್ರಹ್ಮಚಾರಿ ಎಂದು ತಿಳಿದುಕೊಂಡು ನದಿಯನ್ನು ದಾಟಿ ಹೋದಳು.

ಮುಂದೆ ಅವಳು ಉಪವಾಸಿ ದೇವರ ಆಶ್ರಮಕ್ಕೆ ಹೋಗಿ ತಾನು ತಂದ ಅಡಿಗೆಯನ್ನು ಅವರ ಮುಂದಿಟ್ಟು ಅದನ್ನು ಉಣ್ಣ ಹೇಳಿದಳು.

ಅವರಾದರೂ ಅದನ್ನು ಭೋಜನ ಮಾಡಿದ ಬಳಿಕ ಆ ಸತಿಯು ಅವರಿಗೆ—ನಾನು ತಂದ ಅಡಿಗೆಯನ್ನು ನೀವು ಭೋಜನ ಮಾಡಿದಿರಿ. ಆದರೂ ಜನರು ನಿಮಗೆ ಉಪವಾಸಿಗಳೆಂದು ಕರೆಯುತ್ತಾರೆ. ಇದು ಹೇಗೆನಲು ಅವರು ಅವಳಿಗೆ—ನೀನು ನಿನ್ನ ಮನೆಗೆ ತಿರುಗಿ ಹೋಗು, ದಾರಿಯಲ್ಲಿ ಹೊಳೆ ಕಟ್ಟಿದರೆ ನೀನು ಉಪವಾಸಿ ದೇವರು ದಾರಿಯ ಬಿಡಹೇಳಿದರೆನ್ನು, ಆಗ ನದಿಯು ದಾರಿ ಬಿಟ್ಟರೆ ನಾನು ಉಪವಾಸಿ ಎಂದು ತಿಳಿ ಎಂದು ಹೇಳಿದರು. ಹಾಗೆಯೇ ಆಗಲೆಂದು ಆ ಸತಿಯು ತಿರುಗಿಬರುವಾಗ ನದಿಯು ಇನ್ನೂ ದಾರೀ ಕಟ್ಟಿರಲು, ಉಪವಾಸಿ ದೇವರು ಹೇಳಿದಂತೆ ಅವಳು ಉಚ್ಚರಿಲು ನದಿಯು ಕೂಡಲೆ ದಾರೀ ಬಿಟ್ಟಿತು.

ಆಗ ಅವಳು ತನ್ನ ಗಂಡನನ್ನು ಕಂಡು, ಆದ ಸಂಗತಿಗಳನ್ನು ಅರುಹಿ ನಿಮ್ಮಿಬ್ಬರ ಮಹತ್ವವನ್ನು ನಾನು ಈ ದಿನ ಪ್ರತ್ಯಕ್ಷ ಕಂಡೆನು. ಇಂಥ ಅದ್ಭುತ ಶಕ್ತಿಯು ನಿಮಗೆ ಹೇಗೆ ಬಂದಿತು ಎಂದು ಕೇಳಲು ಬಳಿಸಿ ಬ್ರಹ್ಮಚಾರಿಯು ಶಿವಾನುಭವದ ಪ್ರಕಾರ ಲಿಂಗಾರ್ಪಣವೆಂದರೇನು, ಪ್ರಸಾದವೆಂದರೇನು, ಪ್ರಸಾದದಿಂದ ವಿಶ್ವದಲ್ಲಿ ಚಲಿಸುವ ಶಕ್ತಿಯನ್ನು ಹೇಗೆ ಅಂಕಿತ ಮಾಡಿಕೊಳ್ಳಬಹುದು, ಲಿಂಗ ಭೋಗೋಪಭೋಗಿಯಾಗಿರುವ ರೀತಿಯು ಯಾವುದು, ಅದರಂತೆ ಆಚರಿಸಿದಲ್ಲಿ ಉಪವಾಸಾದಿ ವ್ರತಗಳು ಹೇಗೆ ಅನಾವಶ್ಯಕವಾದವುಗಳು, ವಿವಾಹಾದಿಗಳು ವಿರಕ್ತಾಶ್ರಮಕ್ಕೆ ಹೇಗೆ ವಿರೋಧವಲ್ಲ, ಇವೇ ಮೊದಲಾದ ಸಂಗತಿಗಳನ್ನು ತಿಳಿಸಿ ಹೇಳಿದನು. ಆಗ ಆ ಸತಿಯು ಲಿಂಗಾಂಗ ಸಾಮರಸ್ಯದ ರೀತಿಯನ್ನು ತಿಳಿದು ಅದರಂತೆಯೇ ಮುಂದೆ ಆಚರಿಸುವವಳಾದಳು. ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಗಳು ತಮ್ಮ ಶಿವಾನುಭವದ ಆಚರಣೆಯಂತೆ ಆಚರಿಸುತ್ತ ಶಿವಶರಣರಲ್ಲಿ ಉಚ್ಚ ಸ್ಥಾನವನ್ನು ಪಡೆದರು. ಅವರ ನಡೆಯೂ ಹೆಸರುಗಳೂ ಲೋಕದಲ್ಲಿ ಪ್ರಸಿದ್ಧವಾದವು. ಅವರ ಹೆಸರುಗಳು ಶಿವಾನುಭವ ಶಾಸ್ತ್ರದಲ್ಲಿ ಯಾವಾಗಲೂ ಉಲ್ಲೇಖಿಸಲ್ಪಡುತ್ತ ಬಂದಿವೆ. ಚನ್ನಬಸವೇಶ್ವರ, ಅಲ್ಲಮಪ್ರಭು, ಮತ್ತು ಉರಿಲಿಂಗಪೆದ್ದಿಗಳು ಅವರ ನಡೆಯ ರೀತಿಯನ್ನು ತಮ್ಮ ವಚನಗಳಲ್ಲಿ ವಿವರವಾಗಿ ಹೇಳಿದ್ದಾರೆ. ಅದು ಹೇಗೆಂದರೆ—

(೧) ಬೇಕೆನಲಾಗದು ಶರಣಂಗೆ. ಬೇಡೆನಲಾಗದು ಶರಣಂಗೆ. ಬಂದ ಸುಖವನತಿಗಳೆಯಲಾಗದು ಶರಣಂಗೆ. ಇದು ಕಾರಣ ಕೂಡಲ

ಚನ್ನಸಂಗಯ್ಯ ನಿಮ್ಮ ಶರಣರು ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು. (ಚನ್ನಬಸವ)

(೨) ಸತಿಯು ಕಂಡು ಬ್ರತಿಯಾದ ಬಸವಣ್ಣ. ಬ್ರತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ. ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯ ಬಸವಣ್ಣ. ಗುಹೇಶ್ವರಾ ನಿಮ್ಮಲ್ಲಿ ಬಾಲಬ್ರಹ್ಮಚಾರಿಯಾದಾತ ಬಸವಣ್ಣನೊಬ್ಬನೇ. (ಅಲ್ಲಮಪ್ರಭು)

(೩) ಹೊನ್ನ ಬಿಟ್ಟು, ಹೆಣ್ಣ ಬಿಟ್ಟು, ಮಣ್ಣ ಬಿಟ್ಟು, ಬ್ರಹ್ಮಚಾರಿಗಳಾಗಬೇಕೆಂದು ಬಣ್ಣವಿಟ್ಟು ನುಡಿವ ಅಣ್ಣಗಳ ಪರಿಯ ನೋಡಿರೋ. ಹೆಣ್ಣ ಬಿಟ್ಟಡೆಯೂ ಹೊನ್ನ ಬಿಡಿರಿ. ಹೊನ್ನ ಬಿಟ್ಟಡೆಯೂ ಮಣ್ಣ ಬಿಡಿರಿ. ಒಂದು ಬಿಟ್ಟಡೆಯೂ ಒಂದು ಬಿಡಿರಿ. ಬ್ರಹ್ಮಚಾರಿಗಳೆಂತಪ್ಪಿರಿ ಹೇಳಿರಣ್ಣಾ? ಹೆಣ್ಣ ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು ಆವರೆಂತು ಹೇಳಿದರು? ನೀವೆಂತು ಕೇಳಿದಿರಿ? ಹೆಣ್ಣನು ಹೆಣ್ಣೆಂದರಿವಿರಿ. ಹೊನ್ನನು ಹೊನ್ನೆಂದರಿವಿರಿ. ಮಣ್ಣನು ಮಣ್ಣೆಂದರಿವಿರಿ. ಬ್ರಹ್ಮಚಾರಿಗಳೆಂತಪ್ಪಿರಣ್ಣಾ? ಬಿಟ್ಟಡೆ ಹೆಣ್ಣು, ಮಣ್ಣು, ಹೊನ್ನು ಈ ಮೂರನು ಬಿಟ್ಟು ಜ್ಞಾನದಲ್ಲಿ ಸುಳಿಯಬಲ್ಲಡೆ ಭವಂ ನಾಸ್ತಿ ತಪ್ಪದು. ಹಿಡಿದಡೆ ಹೆಣ್ಣು ಮಣ್ಣು ಹೊನ್ನು ಈ ಮೂರನು ಹಿಡಿದು ಸದ್ಭಕ್ತಿಯಿಂದ ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿ ತಪ್ಪದು. ಅದೆಂತೆಂದೊಡೆ, ವೀರಾಗಮೆ-ಮಾತರಃ ಪಿತರಶ್ಚೈವ ಸ್ವಪತ್ನೀನಾಂ ಬಾಲಕಸ್ತಥಾ। ಹೇಮ ಭೂಮಿಶ್ಚ ನ ದುಃಖೀ ಬ್ರಹ್ಮಚಾರಿಣಾಂ॥ ಎಂದುದಾಗಿ ಹೆಣ್ಣು, ಹೊನ್ನು, ಮಣ್ಣು ಈ ಮೂರನು ಹಿಡಿದು ಸದ್ಭಕ್ತಿಯಿಂದ ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿ. ಅಲ್ಲಿ ಇದ್ದರೆಯೂ ನೀರ ತಾವರೆಯಂತಿಪ್ಪರು ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ ನಿಮ್ಮ ಶರಣರು. (ಉರಿಲಿಂಗ ಪೆದ್ದಿ)

ಶಿವಶರಣರಾದ ಬಳಸಿ ಬ್ರಹ್ಮಚಾರಿ ಉಂಡು ಉಪವಾಸಿಗಳು ಆಚರಿಸಿದ ಈ ಶಿವಾನುಭವದ ತತ್ವಗಳು ವೀರಶೈವರ ಸಾಮಾಜಿಕ ನೀತಿಯಲ್ಲಿ ಮಹತ್ವದ ಬದಲಾವಣೆಗಳನ್ನು ಮಾಡಿವೆ. ಆದುದರಿಂದ ಅವರ ಚರಿತ್ರೆಗಳು ಮಹತ್ವವಾದವುಗಳಾಗಿವೆ.

---

# ಅಗ್ಗವಣಿಯ ಹೊನ್ನಯ್ಯ ಮತ್ತು ಓಲೆಯ ಶಾಂತಯ್ಯಗಳು

ಅಗ್ಗವಣಿಯ ಹೊನ್ನಯ್ಯನು ವಿಜಾಪುರ ಜಿಲ್ಲೆಯಲ್ಲಿರುವ ತಾಳೀಕೋಟೆಯಿಂದ ಈಶಾನ್ಯ ದಿಕ್ಕಿಗೆ ೧೦ ಮೈಲುಗಳ ಮೇಲೆ ಕಲಬುರ್ಗಿ ಜಿಲ್ಲೆಯಲ್ಲಿರುವ ಅಗ್ನಿ ಎಂಬ ಗ್ರಾಮದವನು. ಮುದನೂರು ಅಲ್ಲಿಂದ ನಾಲ್ಕು ಮೈಲುಗಳ ಮೇಲೆ ಇದೆ. ಅದೇ ಗ್ರಾಮದಲ್ಲಿ ಓಲೆಯ ಶಾಂತಯ್ಯನೆಂಬ ಶಿವಶರಣನೂ ವಾಸಮಾಡಿಕೊಂಡಿದ್ದನು. ಅಗ್ಗವಣಿಯ ಹೊನ್ನಯ್ಯನು ಕಲ್ಯಾಣದಲ್ಲಿ ಬಸವೇಶ್ವರನ ದಾಸೋಹಕ್ಕೆ ಭೀಮಾನದಿಯ ಉದಕವನ್ನು ಕಂಬಿಯಿಂದ ಹೊತ್ತು ತಂದು ಅವನಿಗೆ ಮುಟ್ಟಿಸುವ ಕಾಯಕವನ್ನು ಕೈಕೊಂಡಿದ್ದನು. ಹೀಗಿರಲು ಒಂದು ದಿನ ಅವನು ಉದಕವನ್ನು ತರುವಾಗ ಮಾರ್ಗದಲ್ಲಿ ಮುಗ್ಗುರಿಸಿ ಬೀಳಲು ಅವನು ನೆಲಕ್ಕೆ ಬಿದ್ದರೂ ಕಾವಡಿಯು ನೆಲಕ್ಕೆ ಬೀಳದಂತೆ ಅಂತರದಲ್ಲಿ ಅದನ್ನು ಹಿಡಿದುಕೊಂಡಿದ್ದನು. ಆಗ ಅವನ ನಡುವು ಮುರಿಯಿತು. ಶಿವನು ಅದನ್ನು ನೋಡಿ ಅವನ ನಿಷ್ಠೆಗೆ ಮೆಚ್ಚಿ ಪ್ರತ್ಯಕ್ಷನಾಗಿ ನಿನಗೇನು ಬೇಕು, ಬೇಡು ಎಂದೆನ್ನಲು ಹೊನ್ನಯ್ಯನು—ನನಗೆ ಶರಣರ ಸಂಗವನ್ನು ಕೊಟ್ಟು ನನ್ನ ಪ್ರಾಣವಿರುವ ವರೆಗೆ ನನ್ನ ವ್ರತವನ್ನು ನಡೆಯಿಸುವಂತೆ ಮಾಡು ಎಂದು ಬೇಡಿಕೊಂಡನು. ಆಗ ಶಿವನು ಅವನು ಹೆಗಲ ಮೇಲೆ ಹೊರುವ ಕಂಬಿಯು ನಾಲ್ಕು ಬೆರಳು ಅಂತರದಲ್ಲಿ ನಿಲ್ಲುವಂತೆ ಕರುಣಿಸಿದನು. ಇದರಿಂದ ಅವನು ಏನೂ ಆಯಾಸವಿಲ್ಲದೆ ಭೀಮಾ ನದಿಯ ಉದಕವನ್ನು ಕಲ್ಯಾಣಕ್ಕೆ ತಂದು ಬಸವೇಶ್ವರನಿಗೆ ಒಪ್ಪಿಸಿದನು. ಈ ಪ್ರಕಾರ ಅವನು ತನ್ನ ಕಾಯಕವನ್ನು ನಡಿಸುತ್ತ ಅನೇಕ ವರ್ಷಗಳನ್ನು ಕಳೆದನು. ಇದರಿಂದ ಅವನು ಅಗ್ಗವಣಿಯ ಹೊನ್ನಯ್ಯನೆಂಬ ಹೆಸರಿನಿಂದ ಪ್ರಸಿದ್ಧವಾದನು.

ಹೀಗಿರುವಲ್ಲಿ ಅದೇ ಅಗ್ನಿ ಗ್ರಾಮದಲ್ಲಿ ವಾಸಿಸುತ್ತಿದ್ದ ಶಿವಶರಣನಾದ ಓಲೆಯ ಶಾಂತಯ್ಯನು ಓಲೆಯ ಗರಿಗಳನ್ನು ಸಂಗ್ರಹಿಸಿ ಅವುಗಳನ್ನು ಪೇಟೆಗಳಲ್ಲಿ ಬರಹಗಾರರಿಗೆ ವಿಕ್ರಯಿಸಿ ಬಂದ ಲಾಭದಿಂದ ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತಾ ಇದ್ದನು. ಒಂದು ದಿನ ಅವನು ಅವುಗಳನ್ನು ಮಾರಲಿಕ್ಕೆ ಸಂತೆಗೆ ಹೋಗಿರುವಾಗ ಅವನು

ಭೀಮಾ ನದೀ ತೀರಕ್ಕೆ ಬಂದು ಅಲ್ಲಿ ತನ್ನ ಪಾದರಕ್ಷೆಗಳನ್ನು ಬೇರೆ ತೆಗೆದಿಡದೆ ತನ್ನ ಲಿಂಗಕ್ಕೆ ಮಜ್ಜನವನ್ನು ನೀಡಹತ್ತಿದನು. ಆಗ ಅಗ್ಗವಣಿಯ ಹೊನ್ನಯ್ಯನು ಅಲ್ಲಿಯೇ ಇದ್ದು ಅದನ್ನು ನೋಡಿ-- ನೀನು ಹೀಗೆ ಕ್ರಿಯೆಯನ್ನುಲ್ಲಂಘಿಸಿ ಎಂದಾದರೂ ನಡೆಯಬಹುದೇ? ಎಂದು ತಿರಸ್ಕರಿಸಿ ನುಡಿದನು. ಹೀಗೆ ನುಡಿದ ಕೂಡಲೆ ಅಂತರದಲ್ಲಿದ್ದ ಅವನ ಉದಕದ ಕಾವಡಿಯು ಜಗ್ಗನೆ ಅವನ ಹೆಗಲ ಮೇಲೆ ಬಂದು ಕುಳಿತಿತು. ಆದರೂ ಅವನು ಆಯಾಸದಿಂದ ಅದನ್ನು ಹೊತ್ತುಕೊಂಡು ಕಲ್ಯಾಣದ ವರೆಗೆ ಬಂದು ಬಸವಣ್ಣನ ದಾಸೋಹದಲ್ಲಿ ಉದಕವನ್ನು ಸುರಿದು ಮನೆಗೆ ಬಂದು ವಿಶ್ರಮಿಸಿಕೊಳ್ಳಹತ್ತಿದನು. ಆಗ ಅವನ ಸತಿಯು ಅದನ್ನು ಕಂಡು ಅವನಿಗೆ-- ನೀವು ಇಂದಿನ ದಿನ ಬಹಳ ಬಸವಳಿದು ಬಂದಿರುವಿರಿ. ಇದೇನು ಕಾರಣ ಎಂದು ಕೇಳಲು ಅದಕ್ಕೆ ಅವನು ಒಬ್ಬ ಶರಣನು ತನ್ನ ಲಿಂಗಕ್ಕೆ ಮಜ್ಜನವನ್ನು ನೀಡುವಾಗ ಅವನು ಕೆರಹನ್ನು ಹೊತ್ತನೆಂದು ಸಂದೇಹವನ್ನು ನಾನು ಮಾಡಿದೆನು. ಅದು ನಿಮಿತ್ತದಿಂದ ಹೀಗಾಗಿರಬಹುದು ಎಂದೆನಲು, ಅವನ ಸತಿಯು-- ಹಾಗೆಯೇ ಇರಬಹುದು, ನೀವು ಅವನಿಗೆ ಶರಣು ಹೊಕ್ಕು ನಿಮ್ಮ ಬಳಲಿಕೆಯನ್ನು ಪರಿಹರಿಸಿಕೊಂಡು ಬನ್ನಿರಿ, ಎಂದು ಹೇಳಿ ಕಳುಹಿಸಿದಳು. ಹೊನ್ನಯ್ಯನು ಅವನನ್ನು ಹುಡುಕಿಕೊಂಡು ಬರುವಾಗ ಪಟ್ಟಣದ ಸಂತೆಯಲ್ಲಿಯೇ ಆ ಶಾಂತಯ್ಯನು ಓಲೆಗಳನ್ನು ಮಾರುತ್ತ ನಿಂತಿದ್ದನ್ನು ಕಂಡು ಅವನ ಬಳಿಗೆ ಹೋಗಿ ಸಾಷ್ಟಾಂಗವೆರಗಿದನು. ಆಗ ಶಾಂತಯ್ಯನು ಇದೇಕೆಂದು ಕೇಳಲು ಹೊನ್ನಯ್ಯನು- ನಿಮ್ಮ ನಿಲುಕಡೆಯನ್ನು ತಿಳಿಯದೆ ನೀವು ಎಕ್ಕಡವನ್ನು ಮೆಟ್ಟಿಕೊಂಡು ಲಿಂಗಕ್ಕೆ ಮಜ್ಜನವನೆರೆಯಬಹುದೇ ಎಂದು ನಾನು ನಿಮ್ಮನ್ನು ದೂಷಿಸಿದೆನು. ಆಗಲೇ ನನ್ನ ಕಂಬಿಯು ಭಾರವಾಯಿತು ಎಂದು ಹೇಳಿ ನನ್ನ ಅಪರಾಧಕ್ಕೋಸ್ಕರ ನನ್ನನ್ನು ಕ್ಷಮಿಸಬೇಕು ಎಂದು ಬಿನ್ನವಿಸಿಕೊಂಡನು. ಆಗ ಆ ಕಂಬಿಯು ಪುನಃ ಮೊದಲಿನಂತೆ ನಾಲ್ಕು ಬೆರಳು ಅಂತರದಲ್ಲಿ ಉಳಿಯಲು ಪ್ರಾರಂಭವಾಯಿತು. ಮತ್ತು ಹೊನ್ನಯ್ಯನು ಭೀಮಾ ನದಿಯಿಂದ ಉದಕವನ್ನು ನಿರಾಯಾಸವಾಗಿ ಹೊತ್ತು ತರುವ ಕಾಯಕವನ್ನು ನಡಿಸಿಕೊಂಡು ಬರಹತ್ತಿದನು. ಹೀಗೆ ಇವರಿಬ್ಬರೂ ತಮ್ಮ ತಮ್ಮ ಕಾಯಕಗಳನ್ನು ನಡಿಸುತ್ತ ಲಿಂಗಾಂಗ ಸಾಮರಸ್ಯಪದವನ್ನು ಹೊಂದಿದರು.

ಈ ಚರಿತ್ರೆಗಳಿಂದ ಕೇವಲ ಕರ್ಮಠತನಕ್ಕಿಂತಲೂ ಭಕ್ತಿಯು ಮಹತ್ವವಾದದ್ದು ಮತ್ತು ಶಿವಶರಣರು ಪರಸ್ಪರ ಮಾತ್ಸರ್ಯವನ್ನು ತಾಳದೆ ತಮ್ಮ ತಮ್ಮ ಕಾಯಕಗಳನ್ನು ನಡಿಸುತ್ತಲಿರಬೇಕು ಎಂಬ ಸಂಗತಿಗಳು ಸಿದ್ಧವಾಗುತ್ತವೆ.

ಅಗ್ಗವಣಿ ಹೊನ್ನಯ್ಯ ಮತ್ತು ಓಲೆಯ ಶಾಂತಯ್ಯಗಳ ಹೆಸರುಗಳು ಗಣಸಹಸ್ರದಲ್ಲಿ ಬಂದಿರುತ್ತವೆ. ಆದ್ದರಿಂದ ಅವರು ಪುರಾತನರು. ಆದರೂ ಅವರು ಬಸವೇಶ್ವರನ ಕಾಲದವರು. ಬನವಾಸಿ ಮಧುಕೇಶ್ವರನ ದೇವಾಲಯದಲ್ಲಿ ಒಂದು ಕಲ್ಲು ಮಂಟಪವಿದ್ದು ಅದರ ಕೆಳಭಾಗದಲ್ಲಿ ಕೆಲವು ಶಿವಶರಣರ ಮೂರ್ತಿಗಳನ್ನು ಕಟೆದು ಅವುಗಳ ಕೆಳಗೆ ಅವರವರ ಹೆಸರುಗಳನ್ನು ಕೊರೆದಿದ್ದಾರೆ. ಅವುಗಳಲ್ಲಿ ಅಗ್ಗವಣಿಯ ಹೊನ್ನಯ್ಯನ ಮೂರ್ತಿಯೂ ಇದೆ. ಅವನ ಹೆಸರಿನ ದೇವಾಲಯವು ಅಗ್ನಿ ಗ್ರಾಮದಲ್ಲಿ ಈಗಲೂ ಇದೆ. ಇದು ಈಗ ಪುಣ್ಯಸ್ಥಾನವೆಂದು ತಿಳಿಯಲ್ಪಟ್ಟಿದೆ.

---

## ಸತ್ಯಕ್ಕ.

ಮೈಸೂರು ಸಂಸ್ಥಾನದಲ್ಲಿ ಶಿವಮೊಗ್ಗೆ ಜಿಲ್ಲೆಯಲ್ಲಿ ಶಿರಾಳಕೊಪ್ಪದಿಂದ ೪ ಮೈಲು ದೂರವಾಗಿ ಹಿರೇಜಂಬೂರು ಎಂಬ ಗ್ರಾಮವಿದೆ. ಇದು ಬಸವೇಶ್ವರನ ಕಾಲದಲ್ಲಿ ಶಿವಶರಣರ ಆವಾಸಸ್ಥಾನವಾಗಿತ್ತು. ಈ ಗ್ರಾಮದಲ್ಲಿ ಸತ್ಯಕ್ಕನೆಂಬ ಶಿವಶರಣೆಯು ವಾಸವಾಗಿದ್ದಳು. ಅವಳು ಕೇವಲ ಶಿವಭಕ್ತೆಯಾಗಿ ಶಿವಭಕ್ತರ ಅಂಗಳವನ್ನು ಉಡಿಗಿ ಅವರ ಮನೆಯ ಸಮ್ಮಾರ್ಜನೆಯನ್ನು ಮಾಡುತ್ತ ಅವರು ಕೊಟ್ಟುದರ ಮೇಲೆ ಉಪಜೀವಿಸುತ್ತಿದ್ದಳು. ಇದೇ ಅವಳ ಕಾಯಕವಾಗಿತ್ತು. ಅವಳು ಶಿವಾನುಭವ ಜ್ಞಾನವನ್ನು ಹೊಂದಿ ಭಸ್ಮ ರುದ್ರಾಕ್ಷಿ ಶಿವಮಂತ್ರಸ್ಮರಣೆಯಿಂದ ತನ್ನ ಕಾಯಕವನ್ನು ನಿಶ್ಚಲ ಬುದ್ಧಿಯಿಂದ ಮಾಡುತ್ತ ಬರುವಳು. ಅವಳು ಶಿವನೊಬ್ಬನೇ ದೇವರೆಂದು ಭಾವಿಸಿ ಅನ್ಯ ಶಬ್ದಗಳನ್ನು ಕೇಳುತ್ತಿದ್ದಿಲ್ಲ. ಅನ್ಯ ದೇವತಾ ಪೂಜೆಯನ್ನು ಎಂದೂ ಮಾಡಳು. ಹೀಗಿರಲು ಒಂದು ದಿನ ಶಿವನು ಅವಳ ಮನ

ಸ್ಸನ್ನು ನೋಡಬೇಕೆಂದು ಅಪೇಕ್ಷಿಸಿ ಕಂಥೆ, ಕಮಂಡಲು, ದಂಡಕೋಲು ಗುಂಡುಗಪ್ಪರವೆರಸಿ ಭಿಕ್ಷುಕ ವೃತ್ತಿಯಿಂದ ಬಂದು ಸತ್ಯಕ್ಕನ ಮನೆಯ ಮುಂದೆ ನಿಂದಿರಲು ಸತ್ಯಕ್ಕನು ಹುಟ್ಟಿಸಿಂದ ಭಿಕ್ಷವನ್ನು ತಂದು ನೀಡ ಲಾಗಿ ಆ ಜಂಗಮನ ಜೋಳಿಗೆಯು ಹರಿದದ್ದರಿಂದ ಅದರೊಳಗಿಂದ ಕಾಳುಗಳು ನೆಲಕ್ಕೆ ಬೀಳಹತ್ತಿದವು. ಅದಕ್ಕೆ ಆ ಜಂಗಮನು—ಅಯ್ಯೋ, ಕಾಳು ಹರಿದ ಹರಿಯಿಂದ ನೆಲಕ್ಕೆ ಬಿದ್ದಿತು, ಜೋಳಿಗೆಯಾಚಿಲಿ ಹರಿ, ಹರಿಯಿಂದೆ ಭಿಕ್ಷೆ ಸೂಸಿತ್ತು ಎಂದೆನಲು ಸತ್ಯಕ್ಕನು ಜಂಗಮನು ಬುದ್ಧಿಪೂರ್ವಕವಾಗಿ ಹೀಗೆ ಹರಿ ಶಬ್ದವನ್ನು ಉಚ್ಚರಿಸುತ್ತ ತನ್ನನ್ನು ನಿಂದಿಸಿ ನುಡಿದನೆಂದು ತಿಳಿದುಕೊಂಡು ಅತ್ಯಂತ ಕುಪಿತಳಾಗಿ ತನ್ನ ಕಯ್ಯಲ್ಲಿದ್ದ ಹುಟ್ಟಿನಿಂದ ಅವನನ್ನು ಒಳಿತಾಗಿ ಹೊಯ್ದಳು. ಆಗ ಅವನ ಹಲ್ಲುಗಳು ಮುರಿದು ಬಿದ್ದವು. ಆದರ ವೇದನೆಯಿಂದ ಅವನು ಮೊರೆ ಇಡುತ್ತ ಬೀದಿಯಲ್ಲಿ ಬಂದು ನಿಲ್ಲಲು ಊರ ಜನರು ನೆರೆದು ನೋಡುತ್ತಿರಲು ಆ ಜಂಗಮನು ಅವರಿಗೆ—ಸತ್ಯಕ್ಕನು ಸತ್ಯೆ ಯುಳ್ಳ ಭಕ್ತೆಯೆಂದು ನಾನು ಭಿಕ್ಷಕ್ಕೆ ಹೋದರೆ ಇವಳು ನನ್ನನ್ನು ಹೀಗೆ ಹಿಂಸೆ ಬಡಿಸಿದಳು ಎಂದು ಹೇಳಿದನು. ಅವರು ಸತ್ಯಕ್ಕನಿಗೆ—ಈ ರೀತಿ ಭಿಕ್ಷುಕನನ್ನು ನೀನು ಹೊಡೆಯಬಹುದೇ ಎಂದು ನುಡಿ ಯಲು, ಆವಳು—ಅನ್ಯ ಶಬ್ದವನ್ನು ಜಂಗಮನು ನುಡಿದದ್ದರಿಂದ ನಾನು ಹೀಗೆ ಹೊಡೆದೆನೆಂದು ಎನ್ನಲು, ಹೀಗೆ ನುಡಿದಪ್ಪೇನೆಂದು ಅವರು ಚರಮೂರ್ತಿಯನ್ನು ಕೇಳಲಾಗಿ ಅವನು – ನನ್ನ ಜೋಳಿಗೆಯ ಹರಿದ ಹರಿಕಿನಲ್ಲಿ ಭಿಕ್ಷದ ಕಾಳು ಚೆಲ್ಲಿದವು ಎಂದು ನುಡಿದನು. ಹೀಗೆ ಅವನು ಮೊದಲಿನಂತೆಯೇ ಶಬ್ದವನ್ನು ಉಚ್ಚರಿಸಿದ್ದರಿಂದ ನೆರೆದ ಜನರು ನೋಡುವಂತೆಯೇ ಸತ್ಯಕ್ಕನು ಅವನನ್ನು ಭರದಿಂದ ಪುನಃ ಹೊಡೆದಳು. ಆಗ ಹರನು ಆಕೆಯ ಏಕದೇವ ನಿಷ್ಠೆಯ ಬಗ್ಗೆ ಇದ್ದ ಗಣಾಚಾರವನ್ನು ನೋಡಿ ಪ್ರೀತನಾಗಿ ತನ್ನ ರೂಪು ದೋರಿ - ಸತ್ಯಕ್ಕನೇ ನಾನು ನಿನಗೆ ಮೆಚ್ಚಿದೆನು. ನಿನಗೆ ಬೇಕಾದುದನ್ನು ಬೇಡು ಎನಲು ಸತ್ಯಕ್ಕನು ಶಿವ ಶಿವಾ, ನನ್ನ ಹುಟ್ಟಿನಲ್ಲಿ ನಿನ್ನನ್ನು ಹೊಡೆದೆನು. ನೀನು ನೊಂದೆ. ಆದ್ದರಿಂದ ನನ್ನನ್ನೇ ಭಿಕ್ಷೆಯನ್ನಾಗಿ ಮಾಡಿ ನಿನ್ನ ಕುಕ್ಷಿಯಲ್ಲಿಟ್ಟುಕೊಳ್ಳು ಎಂದು ಬೇಡಿಕೊಳ್ಳಲು ಪರಮಾತ್ಮನು ಹಾಗೆಯೇ ಆಗಲೆಂದು ಅವಳನ್ನು ತನ್ನ ಕುಕ್ಷಿಯಲ್ಲಿಟ್ಟುಕೊಂಡು ಅವಳಿಗೆ ನಿತ್ಯ

ಪದವನ್ನು ಕೊಟ್ಟನು. ಸತ್ಯಕ್ಕನ ಚರಿತ್ರೆಯಿಂದ ದೇವರು ಒಬ್ಬನೇ ಇದ್ದಾನೆ, ಅವನೊಬ್ಬನನ್ನೇ ಭಜಿಸಬೇಕು ಎಂಬ ಶಿವಾನುಭವದ ತತ್ವವು ಈ ಕಾಲದಲ್ಲಿ ಎಷ್ಟು ದೃಢಪಟ್ಟಿತ್ತೆಂಬುದು ಗೊತ್ತಾಗುತ್ತದೆ.

ಸತ್ಯಕ್ಕನು ವಚನಕಾರಳಿದ್ದಾಳೆ. ಅವಳ ವಚನಗಳನ್ನು ಅನೇಕ ಸಂಗ್ರಹಕಾರರು ತಮ್ಮ ಗ್ರಂಥಗಳಲ್ಲಿ ಉದಹರಿಸಿದ್ದಾರೆ. ಅಷ್ಟು ಅವು ಸುಂದರವೂ ಮೋಹಕವೂ ಆಗಿರುತ್ತವೆ. ನಮಗೆ ದೊರೆದ ೨೦ ವಚನಗಳನ್ನು ನಾವು ಶಿವಾನುಭವ ಗ್ರಂಥ ಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ಅವಳ ಮುದ್ರಿಕೆಯು 'ಶಂಭು ಜಕ್ಕೇಶ್ವರಾ' ಎಂದಿದೆ.

ಅವಳು ತನ್ನ ವಿಚಾರಗಳನ್ನು ಸೊಗಸಾದ ಭಾಷೆಯಲ್ಲಿ ಸ್ವಾರಸ್ಯಪೂರ್ಣವಾಗಿ ನಿರೂಪಿಸಿದ್ದಾಳೆ. ಮಾದರಿಗಾಗಿ ಅವಳ ಕೆಲವು ವಚನಗಳನ್ನು ಇಲ್ಲಿ ಉದಹರಿಸುತ್ತೇವೆ.

## ವಚನಗಳು

(೧) ಆದಿಯಲ್ಲಿ ದೇವಾ ನಿಮ್ಮನಾರು ಬಲ್ಲರು? ವೇದಂಗಳು ಮುನ್ನತ್ತಲರಿಯವು. ವೇದಿಗಳು ಪರಬ್ರಹ್ಮವೆಂಬರು. ನಾದ ಬಿಂದು ಕಳಾತೀತನೆಂದೆಂಬರು. ಸಾಧು ಸಜ್ಜನ ಭಕ್ತರಿಚ್ಛೆಗೆ ಬಂದೆಯಾಗಿ ಈಗೀಗ ದೇವನಾದೆ ಶಂಭುಜಕ್ಕೇಶ್ವರಾ.

(೨) ಏಕೆನ್ನ ಬಾರದ ಭವಂಗಳಲ್ಲಿ ಬರಿಸಿದೆ? ಏಕೆನ್ನ ಘೋರ ಸಂಸಾರದಲ್ಲಿರಿಸಿದೆ. ಏಕೆನಗೆ ಕರುಣಿಸಲೊಲ್ಲದೆ ಕಾಡಿಹೆ ಹೇಳಾ, ಹೇಳಾ ಎಲೆ ಲಿಂಗವೇ? ಆನು ಮಾಡಿದ ತಪ್ಪೇನು? ಸಾಕಲಾದುದೆಂದು ಒತ್ತಿ ನುಡಿವಡೆ ಏಕೆ ನಾ ನಿಮ್ಮ ಬಿಡುವೆ ಶಂಭು ಜಕ್ಕೇಶ್ವರಾ?

(೩) ದೇವನೊಳ್ಳಿದನೆಂದು ಮುಯ್ಯಾನಲು ಬೇಡ. ಕರಕಟ ಕಾಡುವನೊಳ್ಳಿದನೇ? ಆಳಿಸುವ ನಗಿಸುವ ನೊಳ್ಳಿದನೇ? ಬೆದರದೆ ಬೆಚ್ಚದೆ ತೊತ್ತುತನವ ಮಾಡಲು ತನ್ನ ನೀವ ಶಂಭು ಜಕ್ಕೇಶ್ವರಾ.

ಶರಣನು ಪರಮಾತ್ಮನಿಗೆ ತನ್ನನ್ನು ಅರ್ಪಿಸಿ ಕಾರ್ಯ ಮಾಡಬೇಕೇ ಹೊರತು ವಿಧಿವಶನಾಗಿ ಕಾರ್ಯ ಮಾಡಕೂಡದೆಂದು ಶಿವಾ

ನುಭವದ ತತ್ವವಿದೆ. ಇದರಿಂದ ಪೂರ್ವಾರ್ಜಿತವೂ ಭವ ಮಾಲೆಯೂ ತಪ್ಪುವವು. ಈ ವಿಚಾರಗಳನ್ನು ಕುರಿತು ಸತ್ಯಕ್ಕನು ಹೇಳಿದುದೇನಂದರೆ —

(೪) ಶಿವಶರಣೆಂದು ಪೂರ್ವಾರ್ಜಿತವನುಂಡರೆ ಭಂಗ. ಹರಶರಣೆಂದು ಭವಮಾಲೆಗೊಳಗಾದರೆ ಭಂಗ. ಹರವಶವೆನಿಸಿ ವಿಧಿವಶವೆನಿಸಿದರೆ ಅದು ನಿಮ್ಮ ಭಂಗ ಕಾಣಾ ಶಂಭು ಜಕ್ಕೇಶ್ವರ ದೇವ.

ಸ್ತ್ರೀಪುರುಷರು ಸಮಾನರೆಂದು ಸತ್ಯಕ್ಕನು ಕೆಳಗಿನ ವಚನದಲ್ಲಿ ಹೇಳಿದ್ದಾಳೆ. ಸ್ತ್ರೀಯಳಿಗೆ ಮೊಲೆ ಮುಡಿ ಇದ್ದ ಮಾತ್ರಕ್ಕೆ ಅವಳು ಕಡಿಮೆಯವಳಲ್ಲ. ಗಂಡಸು ಕಾಸೆ, ಮೀಸೆ, ಕಠಾರಿ ಹಿಡಿದ ಮಾತ್ರಕ್ಕೆ ಹೆಚ್ಚಿನವನಾಗುವದಿಲ್ಲ. ಆದರೆ ಹೇಗೆ ಮಾಧುರ್ಯದಿಂದ ಹಣ್ಣು, ಸುವಾಸನೆಯಿಂದ ಹೂವು ಜನರಿಗೆ ಪ್ರಿಯಕರವಾಗುತ್ತವೋ ಹಾಗೆ ಸ್ತ್ರೀಪುರುಷರಲ್ಲಿಯ ಸದ್ಗುಣಗಳ ಮೂಲಕ ಅವರ ಶ್ರೇಷ್ಠತೆಯು ಅವಲಂಬಿಸಿರುತ್ತದೆಂಬ ಭಾವವು ಕೆಳಗಿನ ವಚನದಲ್ಲಿ ಬಂದಿದೆ.

(೫) ಮೊಲೆಮುಡಿ ಇದ್ದುದೇ ಹೆಣ್ಣೆಂದು ಪ್ರಮಾಣಿಸಲಿಲ್ಲ. ಕಾಸೆ, ಮೀಸೆ, ಕಠಾರಿ ಇದ್ದುದೇ ಗಂಡೆಂದು ಪ್ರಮಾಣಿಸಲಿಲ್ಲ. ಅದು ಜಗದ ಹೋಹು. ಬಲ್ಲವರ ನೀತಿಯಲ್ಲ. ಏತರ ಹಣ್ಣಾದಡೂ ಮಧುರವೇ ಕಾರಣ. ಚಂದವಿಲ್ಲದ ಕುಸುಮಕ್ಕೆಯೂ ವಾಸನೆಯೇ ಕಾರಣ. ಇದರಂದವ ನೀನೇ ಬಲ್ಲೆ ಶಂಭುಜಕ್ಕೇಶ್ವರಾ.

ಸತಿಪತಿ ಭಾವದ ಕೆಳಗಿನ ವಚನದಲ್ಲಿ ಸತ್ಯಕ್ಕನು ತನ್ನಲ್ಲಿರುವ ಭಕ್ತಿ ಭಾವವನ್ನು ವ್ಯಕ್ತಪಡಿಸಿದ್ದಾಳೆ.

(೬) ಭಾವನೇಕೆ ಬಾರನೆನ್ನ ಮನೆಗೆ? ಹರಿಯ ಮಗನನುರುಹಿದ ಗರ್ವದ ಭಾವನೇಕೆ ಬಾರನೆನ್ನ ಮನೆಗೆ? ಅಸುರರ ಪುರವ ಸುಟ್ಟ ವೀರ ಭಾವನೇಕೆ ಬಾರನೆನ್ನ ಮನೆಗೆ? ದಕ್ಷನ ಶಿರವನರಿದು ಯಾಗವ ಕೆಡಿಸಿ ಕುರಿದಲೆಯ ಹತ್ತಿಸಿ ಬಿನ್ನಾಣದ ಬಲುಹ ಮೆರೆದ ಏಕೋಭಾವನೇಕೆ ಬಾರನೆನ್ನ ಮನೆಗೆ? ಹರಿಯ ನಯನದ ಪೂಜೆ ಚರಣದಲೊಪ್ಪಿತ್ತೆಂಬ ದುರುಳತನವು ತನಗೆ ಬೇಡವ್ವಾ. ಪರವಧುವಿಂಗಳುಪಿದ ವಿಗಡತನದ ದುರುಳುತನ ಬೇಡವ್ವಾ. ಆತನ ಕರೆದು ತಾರವ್ವಾ. ಶಂಭುಜಕ್ಕೇಶ್ವರನ ನೆರೆದು ನೋಡುವೆನು.

'ದೇವಿಯರ ತ್ರಿವಿಧಿ' ಎಂಬ ಗ್ರಂಥದಲ್ಲಿ ಈಕೆಯ ಉಲ್ಲೇಖವಿದೆ. ಅದು ಹೇಗೆಂದರೆ—

ಹರನು ಚರರೂಪಿಂದೆ । ಹರಿ ಎಂಬ ನುಡಿವೇಳೆ
ಕರದ ಹುಟ್ಟಿಂದೆ ತಿವಿದೀಶನೊಲಿಸಿದ
ಗುರುವೆ ಸತ್ಯಕ್ಕ ಶರಣಾಗು.

ಹಿರಿಯ ಜಂಬೂರು ಗ್ರಾಮದಲ್ಲಿ ಸತ್ಯಕ್ಕನ ಪ್ರತಿಮೆಯು ಆಕೆಯ ಹುಟ್ಟುಸಹಿತವಾಗಿ ಈಗಲೂ ಇರುತ್ತದೆ. ಹೀಗೆ ಇರುವ ದೇವಾಲಯಕ್ಕೆ 'ಸತ್ಯಕ್ಕನ ಗುಡಿ' ಎಂದು ಅಲ್ಲಿಯ ಜನರು ಕರೆಯುತ್ತಾರೆ. ಗಣಸಹಸ್ರದಲ್ಲಿ ಈಕೆಯ ಹೆಸರಿದೆ.

ಅವಳು ತನ್ನ ವಚನಗಳಲ್ಲಿ ದೇವರ ದಾಸಿಮಯ್ಯ, ಚನ್ನಯ್ಯ, ನಂಬಿಯಕ್ಕ, ಮುಕ್ತಾಯಕ್ಕ ಇವರನ್ನು ಸ್ಮರಿಸಿದ್ದಾಳೆ. ಇವರಲ್ಲಿ ಮೊದಲನೆಯ ಮೂವರು ಬಸವೇಶ್ವರನಕಿಂತಲೂ ಹಿಂದಿನವರು. ಅವರನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಅನೇಕ ಕಡೆಗೆ ಸ್ಮರಿಸಿದ್ದಾನೆ. ಮುಕ್ತಾಯಕ್ಕನು ಅಲ್ಲಮಪ್ರಭುವಿನ ಸಮಕಾಲೀನಳು. ಅವಳು ಬಸವೇಶ್ವರನಕಿಂತಲೂ ಸ್ವಲ್ಪ ಹಿರಿಯಳಾಗಿರಬೇಕು. ಈ ಸಂಗತಿಗಳಿಂದಲೂ ಸತ್ಯಕ್ಕನು ಬಸವೇಶ್ವರನನ್ನು ತನ್ನ ವಚನಗಳಲ್ಲಿ ಸ್ಮರಿಸದೆ ಇರುವದರಿಂದಲೂ ಅವಳ ಚರಿತ್ರೆಯಲ್ಲಿ ಅವಳು ಕಲ್ಯಾಣಕ್ಕೆ ಹೋಗಿದ್ದರ ಉಲ್ಲೇಖವಿರದ್ದರಿಂದಲೂ ಅವಳು ಬಸವೇಶ್ವರನಕಿಂತಲೂ ಸ್ವಲ್ಪ ಹಿಂದಿನವಳಾಗಿರಬೇಕೆಂದು ತೋರುತ್ತದೆ.

---

## ಕೇಶಿರಾಜ

ವಿಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾದ ಸಿಂದಗಿಗ್ರಾಮದ ಆಗ್ನೇಯ ದಿಕ್ಕಿಗೆ ೧೦ ಮೈಲಿನ ಮೇಲೆ ಗುಲಬುರ್ಗಾ ಜಿಲ್ಲೆಯಲ್ಲಿ ಕೊಂಡಗುಳಿ ಎಂಬ ಗ್ರಾಮವಿದೆ. ಅಲ್ಲಿ ಕೇಶಿರಾಜನೆಂಬ ಸದ್ಭಕ್ತನು ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಗಂಗಾದೇವಿಯು, ಗುರುವು ವಿರೂಪಾಕ್ಷನು, ಇಷ್ಟದೇವತೆಯು ಸೋಮನಾಥನು. ಅವನು ಅತ್ಯಂತ ಬುದ್ಧಿವಂತನೂ ಲಿಂಗಪೂಜಾರತನೂ ಕವಿಯೂ ಆಗಿದ್ದನು.

ಅವನು ಕಂದ ತ್ರಿವಿದಿ ರಗಳೆ ವಚನ ಪದಪದ್ಯ ದಂಡಕ ಅಷ್ಟಕ ಇವು ಮೊದಲಾದ ರಚನೆಗಳಿಂದ ಪದಗಳನ್ನು ದಿನಾಲು ಹೊಸತಾಗಿ ಮಾಡುತ್ತ ಪರಮಾತ್ಮನಿಗೆ ಅವುಗಳನ್ನು ಅರ್ಪಿಸಿ ಭಜಿಸುವನು. ಅವನು ೮೮ ಶ್ಲೋಕಗಳಿಂದ ಷಡಕ್ಷರಿಯು ಮಂತ್ರದ ಮಹಿಮೆಯನ್ನು ಹೊಗಳಿದ್ದಾನೆ. ಈ ಪ್ರಕಾರ ಕೇಶಿರಾಜನು ಪುರಾತನ ಶಿವಶರಣರಲ್ಲಿ ವಿದ್ವಾಂಸನೂ ಬುದ್ಧಿವಂತನೂ ಕವಿಯೂ ಎಂದು ಪ್ರಸಿದ್ಧನಾಗಿದ್ದಾನೆ.

ಅವನು ಮೊದಲು ಸ್ವಗ್ರಾಮವಾದ ಕೊಂಡಗುಳಿಯಲ್ಲಿದ್ದು ಆ ಮೇಲೆ ಅವನು ಕಲ್ಯಾಣ ಪಟ್ಟಣದ ದಕ್ಷಿಣಕ್ಕೆ ೮ ಮೈಲು ದೂರವಿರುವ ಮಂಗಳೂರು ಎಂಬ ಗ್ರಾಮಕ್ಕೆ ಬಂದು ಅಲ್ಲಿಯೂ ಎಂದಿನಂತೆ ಶಿವ ಪೂಜೆಯಲ್ಲಿ ತತ್ಪರನಾಗಿ ವಾಸಮಾಡಹತ್ತಿದನು.

ಅಲ್ಲಿ ಕೆಲವು ಕಾಲ ಕಳೆದ ನಂತರ ಅವನು ಕಲ್ಯಾಣಕ್ಕೆ ಸಮೀಪ ವಿರುವ ಶಿವಪುರಕ್ಕೆ ಬಂದು ಅಲ್ಲಿ ಲಿಂಗಾರ್ಚನೆ ಜಂಗಮ ದಾಸೊಹ ವನ್ನು ಮಾಡುತ್ತ ಒಬ್ಬ ಶ್ರೇಷ್ಠ ಶಿವಾನುಭವಿ ಎಂದು ಜನರಲ್ಲಿ ಪ್ರಸಿದ್ಧನಾದನು.

ಕೇಶಿರಾಜನಿದ್ದ ಈ ಕಾಲದಲ್ಲಿ ಕಲ್ಯಾಣಪಟ್ಟಣದಲ್ಲಿ ಪೆರ್ಮಾಡಿ ದೇವನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವನು ತನಗಿದ್ದ ಮಂತ್ರಿಗಳು ಸರಿಯಾದವರಿಲ್ಲ, ಮಂತ್ರಿಪದದಲ್ಲಿದ್ದು ರಾಜ್ಯಭಾರವನ್ನು ಚನ್ನಾಗಿ ನಡಿಸಬಲ್ಲ ಬುದ್ಧಿವಂತರೊಬ್ಬರು ತನ್ನ ರಾಜ್ಯದಲ್ಲಿ ಯಾರಾದರೂ ಇರುವರೋ ಹೇಗೆಂಬುದನ್ನು ತನ್ನನ್ನು ಕಾಣಲಿಕ್ಕೆ ಬಂದ ಅಗ್ರಹಾರಗಳ ವಿಪ್ರರನ್ನು ಯಾವಾಗಲೂ ವಿಚಾರಿಸುತ್ತಿದ್ದನು. ಹೀಗಿರುವಲ್ಲಿ ಕೊಂಡಗುಳಿಯ ಮಹಾಜನರು ಕೇಶಿರಾಜನೆಂಬುವನು ಸರ್ವಜ್ಞನೂ ಸಜ್ಜನನೂ ನಿಯತಾಚಾರಿಯೂ ಇದ್ದು ಆವನು ತಮ್ಮ ಗ್ರಾಮದವನೆಂದು ತಿಳಿಸಲು ಪೆರ್ಮಾಡಿದೇವನು ಅವನಿದ್ದ ಶಿವಪುರಕ್ಕೆ ಚಾರರನ್ನು ಕಳಿಸಿ ಅವನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ಹಿರಿಯ ಪ್ರಧಾನಿಕೆಯ ಪಟ್ಟವನ್ನು ಕೊಟ್ಟನು ಮತ್ತು ಅವನಿಗೆ 'ಕೇಶಿರಾಜ ದಣ್ಣಾಯಕರೆಂ'ಬ ಬಿರುದನ್ನು ಕೊಟ್ಟನು.

ಕೇಶಿರಾಜನು ಅತ್ಯಂತ ಬುದ್ಧಿವಂತನು. ಆದ್ದರಿಂದ ಅವನು ರಾಜ ಕಾರಣದ ನಿಯೋಗವನ್ನು ತೃಪ್ತಿಕರವಾಗಿ ಸಾಗಿಸುತ್ತ ಬಂದನು. ಅರ

ಸನು ಯಾವಾಗಲೂ ಅವನ ಸಲಹೆಯನ್ನು ಕೇಳುವನು. ಕೇಶಿರಾಜನು ಶಿವಾನುಭವಿಯಾದ್ದರಿಂದ ಶಿವಾನುಭವದ ತತ್ವಗಳನ್ನು ರಾಜ್ಯದಲ್ಲಿ ಪ್ರಸಾರಗೊಳಿಸಹತ್ತಿದನು. ಪರವಾದಿಗಳನ್ನು ಅವನು ವಾದದಲ್ಲಿ ಗೆಲಿದು ದೇವರೊಬ್ಬನೇ ಇದ್ದಾನೆಂಬ ತತ್ವವನ್ನು ನಿರೂಪಿಸಹತ್ತಿದನು. ಲಿಂಗಜಂಗಮಾರ್ಚನೆಗಳನ್ನು ರಾಜ್ಯದಲ್ಲಿ ಹೆಚ್ಚಿಸಿದನು. ಶರಣರಿಗೆ ಮನ್ನಣೆಯನ್ನಿತ್ತು ಶಿವಗೋಷ್ಠಿಯಲ್ಲಿಯೂ ಪುರಾತನರ ಗೀತೆಗಳಲ್ಲಿಯೂ ತಲ್ಲೀನನಾಗಿರುವನು ಶಿವನ ಪದ್ಯಗಳನ್ನೋದಿ ಅವುಗಳಲ್ಲಿ ಬೇಗ ಬೆರೆಯುವನು. ಇದರಿಂದ ರಾಜ್ಯದಲ್ಲಿಯ ಶಿವಭಕ್ತರು ಅತ್ಯಂತ ಹಿಗ್ಗಿದರು. ಆದರೆ ವಿಪ್ರರು ಮಾತ್ರ ಅವನ ವಿಷಯವಾಗಿ ಮತ್ಸರ ಬುದ್ಧಿಯುಳ್ಳವರಾಗಿ ಅವನನ್ನು ಪ್ರಧಾನಿ ಪಟ್ಟದಿಂದ ಹೇಗಾದರೂ ಮಾಡಿ ತಳ್ಳಿ ಹಾಕಬೇಕೆಂದು ಹಂಚಿಕೆಯನ್ನು ಹಾಕಹತ್ತಿದರು.

ಒಂದು ದಿವಸ ಆ ವಿಪ್ರರೆಲ್ಲರೂ ಕೂಡಿಕೊಂಡು ಪೆರ್ಮಾಡಿರಾಯನನ್ನು ಕಂಡು—ನಿಮ್ಮ ದಣ್ಣಾಯಕನು ವಿಷ್ಣು ನಿಂದಕನು. ಅವನಿಗೆ ನೀವು ಪ್ರಧಾನ ಪಟ್ಟವನ್ನು ಕೊಟ್ಟಿದ್ದೀರಿ. ಅದಾಗಲಿ, ಆದರೆ ಅವನು ನಿಮ್ಮನ್ನು ಸಹ ಬಗೆಯುವದಿಲ್ಲ. ನಿಮಗೆ ಎಂದೂ ನಮಸ್ಕರಿಸುವದಿಲ್ಲ. ಒಂದು ವೇಳೆ ನಮಸ್ಕರಿಸಿದರೆ ಅವನು ತನ್ನ ಬೆರಳಲ್ಲಿರುವ ದೇವ ಗುರುಪಾದ ಮುದ್ರಿಕೆಯನ್ನು ಮೊದಲು ಮನದೊಳಗೆ ನಮಸ್ಕರಿಸುತ್ತಾನೆ. ಇದನ್ನು ತಾವು ಪರೀಕ್ಷಿಸಬಹುದು. ಅವನು ಶಿವಭಜನೆಯನ್ನು ಮಾಡುತ್ತ ರಾಜ್ಯಭಾರವನ್ನು ದುರ್ಲಕ್ಷಿಸಹತ್ತಿದ್ದಾನೆ ಎಂದು ಮೊದಲಾಗಿ ಅವರು ರಾಜನಿಗೆ ಕೊಂಡೆಯನ್ನು ಹೇಳಿದರು. ಆಗ ಅರಸನು ಇದನ್ನು ಪರೀಕ್ಷಿಸಬೇಕೆಂದು ಒಬ್ಬ ಚಾರನನ್ನು ಕಳಿಸಿ ಕೇಶಿರಾಜನನ್ನು ಓಲಗಕ್ಕೆ ಬರಮಾಡಿಕೊಂಡನು.

ಕೇಶಿರಾಜನು ಅರಸನ ಓಲಗಕ್ಕೆ ಬಂದು ತನ್ನ ಗದ್ದುಗೆಯಲ್ಲಿ ಕುಳಿತ ಬಳಿಕ ಅರಸನು ಸರಸಸಲ್ಲಾಪಗಳನ್ನು ಮಾಡುತ್ತ ಕೇಶಿರಾಜನ ಬೆರಳಿನಲ್ಲಿದ್ದ ಉಂಗುರವನ್ನು ನೋಡಿ—ಇದರ ಮಾಟವು ಎಷ್ಟು ಚಂದವು! ಇದನ್ನು ನೋಡುವಾ, ಎಂದಂದು ಅದನ್ನು ಇಸಿದುಕೊಂಡು ತನ್ನ ಬೆರಳಿನಲ್ಲಿಟ್ಟುಕೊಂಡನು. ಆ ವೇಳೆ—ನೀವು ಮನೆಗೆ ಹೋಗಬಹುದೆಂದು ಹೇಳಿದನು. ಆಗ ಕೇಶಿರಾಜನು ಅರಸನಿಗೆ ನಮಸ್ಕಾರವನ್ನು ಮಾಡದೆ ಗಳಗಳನೆ ಓಲಗದ ಹೊರಗೆ ಹೋಗಿಬಿಟ್ಟನು. ಅದನ್ನು ಅರಸನು ನೋಡಿ ವಿಪ್ರರು ಆರೋಪಿಸಿದ್ದು ನಿಜವಾದ ಸಂಗತಿ

ಎಂದು ತಿಳಿದವನಾಗಿ ಅತ್ಯಂತ ಮುನಿದು--ಅವನನ್ನು ಕರೆ ಕರೆ ಎಂದು ಚಾರರಿಂದ ಒಳಗೆ ಬರಿಸಿ ಕೋಪಿಸುತ್ತ---ನೀನು ನನ್ನಿಂದ ಸಂಪತ್ತನ್ನು ಹೊಂದಿದೆ. ನಿನ್ನ ದಾರಿದ್ರ್ಯವನ್ನು ತೊಡೆದೆನು. ಆದರೆ ನೀನು ಹೀಗೆ ನನಗೆ ಉದಾಸೀನವನ್ನು ಮಾಡಬಹುದೇ? ಎಂದು ಕೇಳಿದನು. ಆದಕ್ಕೆ ಕೇಶಿ ರಾಜನು ಅರಸನ ಇಂಗಿತವನ್ನರಿತು---ನಿನ್ನ ಸಿರಿಯು ನಿನಗಿರಲಿ. ಶಿವನ ಸಂಗಸಂಪವವು ನನಗಿರಲಿ. ನೀನು ಕೊಟ್ಟ ಪದವು ನನಗೆ ಬೇಡ. ಅದು ಭಕ್ತಿಸಿರಿಗೆ ಸರಿಯಲ್ಲ. ನನಗೆ ಈ ಸೇವಕ ವೃತ್ತಿಯು ಬೇಡ, ಎಂದೆಂದು ಅರಸನು ತನಗೆ ಕೊಟ್ಟಿದ್ದ ಮುದ್ರೆಯುಂಗುರವನ್ನೂ ಹಾರವನ್ನೂ ಅವನ ಮುಂದಿಟ್ಟು ಓಲಗದಿಂದ ಹೊರಟನು. ಅದನ್ನು ಓಲಗದ ಜನರು ಕಂಡು ಬೆರಗಾದರು.

ಆಮೇಲೆ ಕೇಶಿರಾಜನು ತನ್ನ ಮನೆಗೆ ಬಂದು ನಡೆದ ಸಂಗತಿಗಳನ್ನು ತನ್ನ ಹೆಂಡತಿ ಗಂಗಾದೇವಿಗೆ ತಿಳಿಸಿದನು. ಆದಕ್ಕೆ ಅವಳು -- ಇದು ಒಳ್ಳೆಯದಾಯಿತು. ಇನ್ನು ಮೇಲೆ ತಾವು ಜಂಗಮದನುಭಾವ ಸದ್ಗೋಷ್ಠಿಯಲ್ಲಿರಲು ಸ್ವತಂತ್ರರಾದಿರಿ. ನಮ್ಮ ಹರಕೆ ಕೈಗೂಡಿತು ಎಂದು ನುಡಿದು ತನ್ನಲ್ಲಿದ್ದ ಆಭರಣಗಳನ್ನು ತನ್ನ ಸೇವಕ ಸೇವಿಕೆಯರಿಗೆ ಕೊಟ್ಟು ತಾನು ಒಂದು ವಸ್ತ್ರವನ್ನುಟ್ಟು ಕೇಶಿರಾಜನ ಕೂಡ ರಾಜಧಾನಿಯನ್ನು ಬಿಟ್ಟು ಹೊರಡಲು ಸಿದ್ಧಳಾದಳು.

ಆಮೇಲೆ ಉಭಯತರು ಕಲ್ಯಾಣ ಪಟ್ಟಣದಿಂದ ಒಂದು ಯೋಜನದ ಮೇಲೆ ಇದ್ದ ಶಿವಪುರ ಎಂಬ ಪಟ್ಟಣಕ್ಕೆ ಪಾದಚಾರಿಗಳಾಗಿ ಬಂದರು. ಅಲ್ಲಿ ಊರ ಹೊರಗೆ ಒಂದು ಗುಡಿಸಲಿನಲ್ಲಿ ವಂಶವರ್ಧನನೆಂಬ ಹೆಸರಿನ ಒಬ್ಬ ಮೇದರವನು ಬಿದಿರಿನ ಕಾಯಕವನ್ನು ಮಾಡುತ್ತ ಕುಳಿತಿದ್ದನು. ಅವನು ಕೇಶಿರಾಜನನ್ನು ನೋಡಿ ಅವನನ್ನು ಬರಮಾಡಿಕೊಂಡು ಮಾವಿನ ಮರದ ಅಡಿಯಲ್ಲಿ ಬಿದಿರಿನಿಂದ ತಾನು ಮಾಡಿದ ಆಸನದಲ್ಲಿ ಹೊಸ ಹಸೆಯ ಮೇಲೆ ಕುಳ್ಳಿರಿಸಿ ಸತ್ಕರಿಸಿ---ನೀವು ಸೋಮನಾಥನಿಗೆ ಬೋನವನ್ನು ಸವಿಸುತ್ತಾ ನನ್ನಲ್ಲಿಯೇ ಇರಬೇಕೆಂದು ಹೇಳಿಕೊಂಡನು.

ಅಷ್ಟರಲ್ಲಿ ರಾಜಧಾನಿಯಲ್ಲಿ ನಡೆದ ಈ ಸಂಗತಿಗಳನ್ನು ಭಕ್ತ ಜನರು ಕೇಳಿ ಅವರು ತಂಡ ತಂಡವಾಗಿ ಶಿವಪುರಕ್ಕೆ ಬರಲು ಮೇದ

ರವನು ಅವರನ್ನೂ ಕೂಡ ತನ್ನಲ್ಲಿ ಬರಮಾಡಿಕೊಂಡು–ನೀವೆಲ್ಲರೂ ನನ್ನನ್ನು ಕೃತಾರ್ಥನನ್ನಾಗಿ ಮಾಡಿದಿರೆಂದು ಅವರೆಲ್ಲರನ್ನು ಸತ್ಕರಿಸಿದನು.

ಆಗ ಕೇಶಿರಾಜನು ಅಲ್ಲಿ ಎಲ್ಲರೊಡನೆ ಶಿವಾನುಭವ ಸದ್ಗೋಷ್ಠಿಯಲ್ಲಿ ಕಾಲಕಳೆಯ ಹತ್ತಿದನು. ಮಾತು ಮಾತಿಗೆ ಪುರಾತನರ ಗೀತಗಳು ಅವನ ಬಾಯಿಂದ ಹೊರಡುತ್ತಿದ್ದವು. ಹೀಗೆ ಅವನು ಇರುಳು ಹಗಲೆನ್ನದೆ ಎಲ್ಲರೊಡನೆ ಆನಂದದಿಂದ ಕಾಲಕಳೆಯಹತ್ತಿದನು. ಅವನನ್ನು ಕಾಣಲು ಬರುತ್ತಿದ್ದ ಜನರ ಸಂದೋಹವು ಬರಬರುತ್ತ ಬಹಳ ಹೆಚ್ಚಿತು. ಹೀಗೆ ಅವನು ಅಲ್ಲಿ ಏಳು ದಿವಸಗಳ ವರೆಗೆ ಇದ್ದನು. ಆಗ ನೆರೆದ ಭಕ್ತ ಜನರು ಈ ಪೇದರವನ ಮನೆಯಿಂದ ಕಲ್ಯಾಣದ ತ್ರಿಪುರಾಂತಕ ದೇವರ ಮಂಟಪದ ವರೆಗೆ ರಂಗಮಂಟಪಗಳನ್ನು ರಚಿಸಿ ಕೇಶಿರಾಜನನ್ನು ವೈಭವದಿಂದ ಕಲ್ಯಾಣಕ್ಕೆ ಬರಮಾಡಿಕೊಳ್ಳಬೇಕೆಂದು ನಿಶ್ಚಯಿಸಿದರು.

ಆಮೇಲೆ ಅವರು ದಾರಿಯುದ್ದಕ್ಕೆ ತ್ರಿಪುರಾಂತಕ ದೇವರ ಮಂಟಪದ ವರೆಗೆ ಚಿತ್ರತರವಾದ ಮಂಟಪಗಳನ್ನು ರಚಿಸಿದರು. ಶಿವಗೋಷ್ಠಿಯು ಸಲುವಾಗಿ ಮಂತ್ರಿಪದವನ್ನು ತ್ಯಜಿಸಿದ ಕೇಶಿರಾಜನನ್ನು ಸನ್ಮಾನಿಸಬೇಕೆಂದು ಅಸಂಖ್ಯ ಜನರು ನೆರೆದು ವಾದ್ಯ ನರ್ತನ ಮೊದಲಾವುಗಳಿಂದ ಮಹತ್ತರವಾದ ಮೆರವಣಿಗೆಯನ್ನು ತೆಗೆದರು. ಹೀಗೆ ಭಕ್ತ ಜನರು ಮಹಾವೈಭವದಿಂದ ಪಟ್ಟಣವನ್ನು ಪ್ರವೇಶಿಸಿದರು. ಪಟ್ಟಣದ ಬೀದಿಗಳಲ್ಲಿ ಮಹಾಧ್ವನಿಯು ಭೋರೆಂದು ಭೋರ್ಗರೆಯ ಹತ್ತಿತು.

ಮೆರವಣಿಗೆಯ ಮಹಾಧ್ವನಿಯು ಪೆರ್ಮಾಡಿರಾಯನ ಕಿವಿ ಮುಟ್ಟಲು ಅವನು ಇದೇನದ್ಭುತವೆಂದು ಉಪ್ಪರಿಗೆಯಿಂದ ನೋಡಲಾಗಿ ಕೇಶಿರಾಜನ ಸನ್ಮಾನಕ್ಕೋಸ್ಕರ ಈ ವೈಭವವು ಏರ್ಪಟ್ಟದೆ ಎಂಬುದನ್ನು ತಿಳಿದು ಮನದಲ್ಲಿ, ಕೇಶಿರಾಜನು ಶಿವಶರಣನು, ಶಿವಾನುಭವಿಯು, ಅವನನ್ನು ಸನ್ಮಾನಿಸಬೇಕೆಂಬ ಅಪೇಕ್ಷೆಯುಂಟಾಯಿತು. ಆಮೇಲೆ ಅವನು ಕೂಡಲೆ ಉಪ್ಪರಿಗೆಯಿಂದ ಇಳಿದು ಪರಿಮಿತ ಪರಿವಾರದೊಂದಿಗೆ ಕಾಲ್ನಡೆಯಲ್ಲಿ ನಡೆದು ಬರುತ್ತ ಕೇಶಿರಾಜನನ್ನು ನಮಸ್ಕರಿಸಿ–ನಾನು ನಿಮ್ಮ ಅಡಿಗಳ ಸಾಮರ್ಥ್ಯವನ್ನು ತಿಳಿಯದೆ

ಹಾಗೆ ಮಾಡಿದೆನು, ನಾನು ಪುಣ್ಯ ಹೀನನು, ನನ್ನನ್ನು ಕರುಣಿಸ ಬೇಕು ಎಂದು ಹೇಳಿಕೊಂಡನು. ಆಗ ಕೇಶಿರಾಜನು ಅವನನ್ನು ಸನ್ಮಾನಿಸಿ ತ್ರಿಪುರಾಂತಕ ದೇವರ ದರ್ಶನವನ್ನು ಹೊಂದಿ ರಾಜನಲ್ಲಿಗೆ ಬಂದು ಅವನಲ್ಲಿ ಕೆಲಕಾಲ ಶಿವಗೋಷ್ಠಿಯಲ್ಲಿದ್ದು ಅರಮನೆಯಲ್ಲಿ ರಲು ಒಪ್ಪದೆ, ತಿರುಗಿ ಮೇದರನ ಗುಡಿಸಲಿಗೆ ಬಂದನು.

ಮುಂದೆ ಅವನು ಶಿವಪುರವನ್ನು ಬಿಟ್ಟು ಸ್ವಗ್ರಾಮವಾದ ಕೊಂಡ ಗುಳಿಗೆ ಹೊರಟನು. ಆಗ ಅವನ ಮಹಿಮೆಯನ್ನರಿತ ಬಹುಜನ ಭಕ್ತರು ಅವನನ್ನು ಹಿಂಬಾಲಿಸಿದರು. ಅವರು ದಾರಿಯನ್ನು ನಡೆದು ಬರುತ್ತಲಿರುವಾಗ ಒಂದು ಅರಣ್ಯ ಮಧ್ಯಕ್ಕೆ ಬಂದರು. ಅಲ್ಲಿ ಒಂದು ವಿಶಾಲವಾದ ನದಿಯೂ ಹರಿಯುತ್ತಿತ್ತು. ಅಲ್ಲಿದ್ದ ಪ್ರಕೃತಿ ಸೌಂದ ರ್ಯವನ್ನು ಕಂಡು ಕೇಶಿರಾಜನು ಶಿವಧ್ಯಾನದಲ್ಲಿರಬೇಕೆಂದು ಬಯಸಿ ತನ್ನ ಇಷ್ಟಲಿಂಗವನ್ನು ಗಂಧಾಕ್ಷತೆ, ಕೆಂದಾವರೆ, ದಾಸವಾಳ ಪುಷ್ಪಗ ಳಿಂದ ಅರ್ಚಿಸುತ್ತ ಧ್ಯಾನಮಗ್ನನಾದನು. ಆಗ ಒಂದು ಗರುಡ ಪಕ್ಷಿಯು ಮೇಲೆ ಹಾರಾಡುತ್ತಿರುವಾಗ ಆತನ ಲಿಂಗವನ್ನು ನೋಡಿ ಅದು ತನ್ನ ಆಹಾರವೆಂದು ತಿಳಿದು ಪುಷ್ಪಸಹಿತವಾಗಿ ಅದನ್ನು ಮೇಲಕ್ಕೆ ಎತ್ತಿಕೊಂಡು ಹೋಯಿತು. ಆದರೆ ಅಷ್ಟರಲ್ಲಿ ಆ ಲಿಂಗವು ಕೆಳಕ್ಕೆ ಓಸರಿಸಲು ಅದು ನದಿಯಲ್ಲಿಯೇ ಬಿದ್ದು ಬಿಟ್ಟಿತು.

ಅದನ್ನು ಅಲ್ಲಿ ನೆರೆದ ಭಕ್ತ ಮಹೇಶ್ವರರು ಕಂಡು ಹರಿಗೋಲಿನಿಂದ ಅರಸಿಕೊಂಡು ಬರುವೆವೆಂದು ಅದನ್ನು ಹುಡುಕಲು ಉದ್ಯೋಗಿಸಿದರು. ಆದರೆ ಕೇಶಿರಾಜನು ಅವರ ಆಯಾಸವನ್ನು ಕಂಡು—ನೀವು ಇಷ್ಟು ಶ್ರಮವನ್ನು ವಹಿಸುವ ಕಾರಣವಿಲ್ಲ ಎಂದು ಹೇಳಿ ನದಿಯ ದಂಡೆಯಲ್ಲಿ ಕುಳಿತು ಶರಣಸತಿ ಲಿಂಗಪತಿ ಎಂಬ ಭಾವದಿಂದ ದಶಾವಸ್ಥೆಯನ್ನು ಹೊಂದಿ ಲಿಂಗವನ್ನು ಸ್ತುತಿಸಹತ್ತಿದನು. ಲಿಂಗವು ಮಂತ್ರಮಯವಾ ದುದು. ಆದುದರಿಂದ ಶಿವಮಂತ್ರವನ್ನು ನೆನೆಯುತ್ತ ಅದರ ಮಹಿಮೆ ಯನ್ನು ಉಸುರಹತ್ತಿದನು. ಮಂತ್ರದಿಂದಲೇ ಶಿವನು ಮಂತ್ರಸಿದ್ಧನಿದ್ದ ಲ್ಲಿಗೆ ಬರುವನೆಂದು ಆಗಮ ವಾಕ್ಯವಿದೆ. ಅದಕ್ಕನುಸರಿಸಿ ಕೇಶಿರಾಜನು ನದಿಯಲ್ಲಿ ಬಿದ್ದ ಲಿಂಗವನ್ನು ನೆನೆಯಲಾಗಿ ಅದು ತಾನಾಗಿಯೇ ಮೊದ ಲಿನ ಗಂಧಾಕ್ಷತೆ ಕೆಂಪಿನ ದಾಸವಾಳ ಸಹಿತವಾಗಿ ಕೇಶಿರಾಜನ ಕರಸ್ಥಲಕ್ಕೆ

ಬಂದಿತು. ಅದನ್ನು ಅಲ್ಲಿದ್ದ ಭಕ್ತಮಹೇಶ್ವರರು ನೋಡಿ ಲಿಂಗವನನಂತ ಪರಿಯಿಂದ ಸ್ತೋತ್ರಮಾಡಿ ಮುಂದೆ ಹೊರಡಲುದ್ಯುಕ್ತರಾದರು.

ಅವರು ನದಿಯನ್ನು ದಾಟಬೇಕೆಂದು ಮುಂದೆ ಹೋಗಲು ಕೇಶಿ ರಾಜನ ಪಾದಸ್ಪರ್ಶವಾದ ಕೂಡಲೆ ಅದು ಇಬ್ಭಾಗವಾಯಿತು. ಹೀಗೆ ಅದು ದಾರಿಯನ್ನು ಬಿಡಲು ನೆರೆದ ಜನರೆಲ್ಲ, ಉಘೇ ಉಘೇ ಎಂದು ಉಘ್ಘಡಿಸುತ್ತ ಹೊಳೆಯನ್ನು ದಾಟಿದರು. ಅವರು ಹೊಳೆ ದಾಟಿದ ಕೂಡಲೆ ಅದು ಎಂದಿನಂತೆ ಹರಿಯ ತೊಡಗಿತು. ಆ ಮೇಲೆ ಕೇಶಿರಾಜನು ತನ್ನ ಗ್ರಾಮವಾದ ಕೊಂಡಗುಳಿಗೆ ಬಂದು ಶಿವಾನುಭವದಲ್ಲಿ ಇದ್ದುಕೊಂಡು, ಭಕ್ತಜನರನ್ನು ಕೃತಾರ್ಥರನ್ನಾಗಿ ಮಾಡುತ್ತ ತನ್ನ ಪದಪದ್ಯಗಳಿಂದ ಪರಮಾತ್ಮನನ್ನು ಭಜಿಸುತ್ತ ಅಲ್ಲಿಯೇ ಸಾಮರಸ್ಯ ಪದವನ್ನು ಹೊಂದಿದನು.

ಕೇಶಿರಾಜನಿದ್ದುದು ಪೆರ್ಮಾಡಿ ರಾಜನ ಕಾಲದಲ್ಲೆಂದು ಅವನ ಚರಿತ್ರೆಯಿಂದ ತಿಳಿದು ಬರುತ್ತದೆ. ಚಾಲುಕ್ಯರಾಜರಲ್ಲಿ ಅತ್ಯಂತ ಪ್ರಸಿದ್ಧನಾದ ವಿಕ್ರಮಾದಿತ್ಯನು 'ತ್ರಿಭುವನಮಲ್ಲ ವಿಕ್ರಮಾದಿತ್ಯ ಪೇರ್ಮಾಡಿ ದೇವ'ನೆಂದು ಶಿಲಾಶಾಸನಗಳಲ್ಲಿ ಕರೆಯಲ್ಪಟ್ಟಿದ್ದಾನೆ. ಆದ್ದರಿಂದ ವಿಕ ಮಾದಿತ್ಯನಿಗೆ ಪೇರ್ಮಾಡಿ ಎಂಬ ಬೇರೆ ಹೆಸರೂ ಇದ್ದದ್ದು ತಿಳಿಯುತ್ತದೆ. ಇದು ಅವನ ಪೂರ್ವದ ನಿಜವಾದ ಹೆಸರಿರಬೇಕು. ಬಿಜ್ಜಳನ ತಂದೆಯ ಹೆಸರೂ ಪೇರ್ಮಾಡಿ ಎಂದಿದೆ. ಆದರೆ ಕೇಶಿರಾಜನನ್ನು ಪ್ರಧಾನಿಯನ್ನಾಗಿ ಮಾಡಿದವನು ಇವನಿರದೆ ಚಾಲುಕ್ಯ ವಿಕ್ರಮಾದಿತ್ಯನಿರಬೇಕೆಂದು ನಮಗೆ ತೋರುತ್ತದೆ. ಬಿಜ್ಜಳನ ತಂದೆಯಾದ ಪೆರ್ಮಾಡಿಯು ಭೀಮಾ ನದೀ ತೀರದಲ್ಲಿದ್ದ ತರ್ದವಾಡಿಯಲ್ಲಿ ಒಬ್ಬ ಚಿಕ್ಕ ಮಾಂಡಲಿಕನಾಗಿದ್ದನು. ಆದರೆ ಕೇಶಿರಾಜನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದ ಪೇರ್ಮಾಡಿಯ ಮಂತ್ರಿಯಾಗಿದ್ದನು. ಕೇಶಿರಾಜನ ಚರಿತ್ರೆಯಲ್ಲಿ ತರ್ದವಾಡಿಯ ಉಲ್ಲೇಖವಿರದೆ ಕಲ್ಯಾಣದ ಉಲ್ಲೇಖವಿದೆ. ಕೇಶಿರಾಜನಂತೆಯೇ ಬಾಹೂರು ಬೊಮ್ಮಯ್ಯ, ತೆಲುಗು ಜೊಮ್ಮಯ್ಯ, ಇಲಿಹಾಳ ಬ್ರಹ್ಮಯ್ಯ ಇವರೂ ಕೂಡ ಪೇರ್ಮಾಡಿ ರಾಯನ ಕಾಲದಲ್ಲಿದ್ದುದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಇವರಿದ್ದುದು ಕಲ್ಯಾಣ ಪಟ್ಟಣದ ಪೇರ್ಮಾಡಿರಾಯನಲ್ಲಿ. ಈ ಎಲ್ಲ ಸಂಗತಿಗಳಿಂದ ಕೇಶಿರಾಜನು ಚಾಲುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದಿರಬಹುದೆಂದು ನಮಗೆ ತೋರುತ್ತದೆ.

ಈ ಚಾಲುಕ್ಯ ವಿಕ್ರಮನು ೧೦೭೬ ರಿಂದ ೧೧೨೬ ವರೆಗೆ ಅತ್ಯಂತ ವೈಭವದಿಂದ ರಾಜ್ಯವಾಳಿದನು. ಆದುದರಿಂದ ಕೇಶಿರಾಜನು ಬಸವೇಶ್ವರನಕಿಂತಲೂ ೬೦-೭೦ ವರ್ಷ ಹಿಂದಿನವನಾಗುತ್ತಾನೆ. ಅವನ ಚರಿತ್ರೆಯಲ್ಲಿ ಬಸವೇಶ್ವರನ ಉಲ್ಲೇಖವು ಎಷ್ಟು ಮಾತ್ರವು ಬರುವದಿಲ್ಲ. ಅವನು ಕಲ್ಯಾಣ ಪಟ್ಟಣದಲ್ಲಿದ್ದರೂ ಬಸವೇಶ್ವರನ ಉಲ್ಲೇಖವಿರುವದಿಲ್ಲ. ಬಸವೇಶ್ವರನಕಿಂತಲೂ ಅವನು ಮೊದಲಿನವನಾಗಿದ್ದದರಿಂದ ಇಂಥ ಉಲ್ಲೇಖವಿಲ್ಲೆಂದು ನಾವು ಅನುಮಾನ ಮಾಡಬೇಕಾಗುತ್ತದೆ.

ಕೇಶಿರಾಜನು ಬಸವೇಶ್ವರನಂತೆಯೇ ಶಿವಾನುಭವಿಯೂ ವಿದ್ವಾಂಸನೂ ಆಗಿದ್ದನು. ಬಸವೇಶ್ವರನಿಗೆ ಹೇಗೆ ಮಂತ್ರಿಪದವು ಪ್ರಾಪ್ತವಾಯಿತೋ ಹಾಗೆಯೇ ಕೇಶಿರಾಜನಿಗೂ ಮಂತ್ರಿಪದವು ಪ್ರಾಪ್ತವಾಯಿತು. ಕೇಶಿರಾಜನು ಅಧಿಕಾರವನ್ನು ಹೊಂದಿದಬಳಿಕ ಬಸವೇಶ್ವರನಂತೆಯೇ ಅವನೂ ವೀರಶೈವ ಮತವನ್ನು ರಾಜ್ಯದಲ್ಲಿ ಪ್ರಸಾರಗೊಳಿಸಿದನು. ಇದರಿಂದ ಅವನು ಪರವಾದಿಗಳ ಕೋಪಕ್ಕೆ ಈಡಾದನು. ಆದರೆ ಅವನು ಅತ್ಯಂತ ಸರಳ ಸ್ವಭಾವದವನು. ಆದುದರಿಂದ ಅವನ ವಿರೋಧಿಗಳು ಒಂದು ಉಪಾಯದಿಂದ ಅವನ ಮಂತ್ರಿಪದವನ್ನು ತಪ್ಪಿಸಿದರು. ಆದರೆ ಬಸವೇಶ್ವರನು ಬಹಳ ಜಾಣನು. ಆದ್ದರಿಂದ ಬಿಜ್ಜಳನನ್ನು ವಿರೋಧಿಸುವ ಪ್ರಸಂಗಗಳು ಅವನಿಗೆ ಆಗಿಂದಾಗ್ಗೆ ಬಂದರೂ ಅವನು ಉಪಾಯದಿಂದ ಅವುಗಳನ್ನು ತಪ್ಪಿಸಿಕೊಳ್ಳುತ್ತ ಬಂದನು. ಕೇಶಿರಾಜನು ತನ್ನ ಪ್ರಧಾನಿಪಟ್ಟವನ್ನು ಬಿಟ್ಟುಕೊಟ್ಟ ಬಳಿಕ ಅವನು ಸ್ವಗ್ರಾಮಕ್ಕೆ ಬಂದು ತನ್ನ ಶಿವಾನುಭವ ಗೋಷ್ಠಿಯಲ್ಲಿಯೇ ಕಾಲಕಳೆಯಹತ್ತಿದನು. ಇಂಥ ಪ್ರಸಂಗವು ಬಸವೇಶ್ವರನಿಗೂ ಬರಲು ಅವನು ತನ್ನ ಪ್ರಧಾನಿಪಟ್ಟವನ್ನು ತ್ಯಜಿಸಲಾಗಿ ದೇಶದಲ್ಲಿ ಒಂದು ಮಹತ್ತರವಾದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯೇ ಉದ್ಭವಿಸಿತು. ಅಷ್ಟರಲ್ಲಿ ಅಸಂಖ್ಯ ಶಿವಶರಣರು ದೇಶದಲ್ಲಿ ಉಂಟಾಗಿದ್ದದರಿಂದ, ಅವರ ಬಲದಿಂದ ಪ್ರಬಲವಾದ ಕ್ರಾಂತಿಯು ಉಂಟಾಯಿತು. ಆದರೆ ವೀರಶೈವ ಧರ್ಮವು ಬಸವೇಶ್ವರನ ಕಾಲದಲ್ಲಿ ಇಷ್ಟು ಪ್ರಬಲವಾದದ್ದಕ್ಕೆ ಕೇಶಿರಾಜನಂಥ ಶಿವಶರಣರು ಅವನಕಿಂತಲೂ ಮೊದಲು ಉದ್ಭವಿಸಿ ಶಿವಾನುಭವವನ್ನು ರಾಜ್ಯದಲ್ಲಿ ಹೆಚ್ಚಿಸಿದ್ದೇ ಮುಖ್ಯ ಕಾರಣವೆಂದು ನಮಗೆ ತೋರುತ್ತದೆ.

ಕೇಶಿರಾಜನು ಒಬ್ಬ ಶ್ರೇಷ್ಠ ಕವಿಯು ಎಂದು ವೀರಶೈವರಲ್ಲಿ ಪ್ರಖ್ಯಾತಿಯನ್ನು ಹೊಂದಿದ್ದಾನೆ. ಅವನನ್ನು ಸ್ಮರಿಸದ ಯಾವ ವೀರಶೈವ ಗ್ರಂಥಕಾರನೂ ಇರುವದಿಲ್ಲ. ಆದರೆ ಅವನು ರಚಿಸಿದ ಕವನಗಳು ಇನ್ನೂ ಪ್ರಸಿದ್ಧವಾಗಿಲ್ಲ. ಅವು ಮುಖ್ಯವಾಗಿ ಅಷ್ಟಾವರಣಕ್ಕೆ ಸಂಬಂಧಿಸಿದವಿರು ತ್ತವೆ. 'ಷಡಕ್ಷರ ಕಂದ' ಎಂಬ ಗ್ರಂಥವನ್ನು ಅವನು ರಚಿಸಿದ್ದು ಅದ ರಲ್ಲಿ ಮಂತ್ರ ಮಹಿಮೆಯು ಹೇಳಲ್ಪಟ್ಟಿದೆ. ಅವನ ಬಂಧವು ಬಹು ಪ್ರೌಢವಾದುದು. ಅವನ ಎರಡು ನುಡಿಗಳನ್ನು ನಾವು ಇಲ್ಲಿ ಉದ ಹರಿಸುತ್ತೇವೆ.

(೧) ಉಜ್ಜಿ ನಲಿನಲಿದು ವಿಷಯು । ದೊಳಬ್ಬರಿಸುವ ಮುಸಿಸು
ಮನದ ಕನಲಿಕೆ ಕಾಮುಂ।
ಜೊಬ್ಬಿಡುವ ದುರಿತ ಕೋಟಿಯು । ನೆಬ್ಬಟ್ಟುವು ದೋಂ
ನಮಶಿವಾಯೆಂಬ ಪದಂ ॥

(೨) ತರಿಯುಲ್ ಮೋಹದ ಕೆಚ್ಚಂ। ಮರಿಯುಲ್ ಭವ ಪಾಶಮುಂ
ಮನೋಜನ ಬಿಲ್ಲಂ।
ಮುರಿಯುಲ್ ಮಾಯೆಯ ಬೇರಂ । ಕೊರೆಯುಲ್
ಜಪಮೋಂ ನಮಶ್ಶಿವಾಯೆಂಬ ಪದಂ ॥

ಇವನು ಕೆಲಕಾಲವಿದ್ದ ಶಿವಪುರವು ಈಗ ಕಲ್ಯಾಣದ ಸಮೀಪ ದಲ್ಲಿ ಉಪಲಬ್ಧವಿರದಿದ್ದರೂ ಅದು ಅದರ ಉಪನಗರವಾಗಿತ್ತೆಂದು ತೋರುತ್ತದೆ. ಸಿದ್ಧರಾಮ, ಅಮುಗಿದೇವ, ಕೇಶಿರಾಜ, ತೆಲುಗು ಜೊಮ್ಮಯ್ಯ ಇವರೆಲ್ಲರು ಇಲ್ಲಿದ್ದುದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಈ ಉಪನಗರದಲ್ಲಿ ವೀರಶೈವರು ಹೆಚ್ಚಾಗಿ ವಾಸವಾ ಡುತ್ತಿರಬೇಕೆಂದು ತೋರುತ್ತದೆ. ಆದರೆ ಕಲ್ಯಾಣವು ಹಾಳಾದ ಬಳಿಕ ಈ ಶಿವಪುರವೂ ನಾಶವಾಗಿರಬಹುದು.

ಕೇಶಿರಾಜನ ಮೂಲ ಸ್ಥಾನವು ಕೊಂಡುಗುಳಿಯು. ಸಿಂದಗಿ ತಾಲೂಕಿನಲ್ಲಿರುವ ಹಿಪ್ಪರಗಿಯ ಆಗ್ನೇಯ ದಿಕ್ಕಿಗೆ ೧೨ ಮೈಲುಗಳ ಮೇಲೆ ಕೊಂಡುಗುಳಿ ಎಂಬ ಎಂಬ ದೊಡ್ಡ ಗ್ರಾಮವಿದೆ. ಆದರೆ ಇದು ಕೇಶಿರಾಜನ ಸ್ಥಾನವಿರುವದಿಲ್ಲ. ಕೇಶಿರಾಜನ ಗ್ರಾಮವು ಸಿಂದಿಗಿ

ಗ್ರಾಮದಿಂದ ಪೂರ್ವ ದಿಕ್ಕಿಗೆ ಇರುತ್ತಿದೆ. ಇಲ್ಲಿ ಅವನ **ಹೆಸರಿನ** ಪುರಾತನ ದೇವಾಲಯವು ಈಗಲೂ ಇದೆ.

ಕೇಶಿರಾಜನ ಹೊವಾಡವು ಸಂಭವಿಸಿದ್ದು ಭೀಮಾ ತೀರದಲ್ಲಿರಬೇಕೆಂದು ತೋರುತ್ತದೆ. ಈ ವಿಶಾಲವಾದ ನದಿಯು ಕಲ್ಯಾಣದಿಂದ ಕೊಂಡಗುಳಿಗೆ ಹೋಗುವ ಮಾರ್ಗದಲ್ಲಿ ಇರುತ್ತದೆ.

ಕೇಶಿರಾಜನ ಉಲ್ಲೇಖವು ಗಣ ಸಹಸ್ರದಲ್ಲಿ ಬಂದಿರುತ್ತದೆ.

---

## ಗುಪ್ತ ಮಂಚಣ್ಣ.

ಕಲ್ಯಾಣ ಪಟ್ಟಣದಲ್ಲಿ ದಾಮೋದರನೆಂಬ ವೀರವೈಷ್ಣವನು ಬಿಜ್ಜಳನ ಭಂಡಾರದ ಕರಣಿಕನಾಗಿ ನೇಮಿಸಲ್ಪಟ್ಟು ಅರಸನ ಸೇವೆ ಮಾಡುತ್ತ ಇದ್ದನು. ಇವನ ಹೆಂಡತಿಯ ಹೆಸರು ಮಾಯಾದೇವಿ. ಅವಳಿಗೆ ಮಕ್ಕಳಿಲ್ಲದ್ದರಿಂದ ಅವಳು ಒಂದು ದಿನ ಗುಪ್ತವಾಗಿ ಕೆಲವೊಂದು ಶಿವಾಲಯಕ್ಕೆ ಹೋಗಿ ಪುತ್ರಾರ್ಥಿಯಾಗಿ ದೇವರಿಗೆ ಬೇಡಿಕೊಂಡು ಅಲ್ಲಿಯ ಶಿವಪ್ರಸಾದವನ್ನು ಸೇವಿಸಿದಳು. ತರುವಾಯ ಅವಳು ಗರ್ಭಿಣಿಯಾಗಿ ಒಬ್ಬ ಗಂಡುಮಗುವನ್ನು ಹೆತ್ತಳು. ದಾಮೋದರನು ತನ್ನ ವೈಷ್ಣವ ಮತ ಪದ್ಧತಿಯ ಪ್ರಕಾರ ಮಗುವಿಗೆ ಜಾತಕರ್ಮಗಳನ್ನು ಮಾಡಿ ಮಂಚಣ್ಣನೆಂಬ ನಾಮಕರಣ ಮಾಡಿದನು. ಮುಂದೆ ಅವನಿಗೆ ಎಂಟನೆಯ ವರ್ಷವು ಪ್ರಾಪ್ತವಾಗಲು ಉಪನಯನವನ್ನು ಮಾಡಿ ಅವನ ಅಂಗದಲ್ಲಿ ಶಂಖ ಚಕ್ರ ಮುದ್ರೆಗಳನ್ನು ಕಾಯಿಸಿ ಒತ್ತಿಸಿ ಅವನನ್ನು ವೀರವೈಷ್ಣವನನ್ನಾಗಿ ಮಾಡಿದನು.

ಆ ಮೇಲೆ ದಾಮೋದರನು ಅವನಿಗೆ ವೇದಾಭ್ಯಾಸವನ್ನು ಮಾಡಿಸಿದನು. ಮಂಚಣ್ಣನು ಗಣಿತ ಶಾಸ್ತ್ರದಲ್ಲಿ ಬಹು ಸಮರ್ಥನಾದನು. ಅವನಿಗೆ ಮುಂದೆ ಲಗ್ನವನ್ನೂ ಮಾಡಿದನು. ಒಂದು ದಿನ ದಾಮೋದರನು ತನ್ನ ಪುತ್ರನನ್ನು ಬಿಜ್ಜಳನಿಗೆ ಭೆಟ್ಟಿಮಾಡಿಸಲು ಬಿಜ್ಜಳನು ಅವನ ಕುಶಾಗ್ರಬುದ್ಧಿಗೆ ಮೆಚ್ಚಿದವನಾಗಿ ತನಗೆ ಬರುತ್ತಿರುವ ವಿಜ್ಞಾಪನಾಪತ್ರಗಳನ್ನು ಓದಲಿಕ್ಕೂ ತಾನು ಹೇಳಿದಂತೆ ಅವುಗಳಿಗೆ ಉತ್ತರ ಬರೆ

ಯಲಿಕ್ಕೂ ಅವನನ್ನು ನಿಯಮಿಸಿಕೊಂಡನು. ಆದ್ದರಿಂದ ಅವನು ಯಾವಾಗಲೂ ಅರಸನ ಸಮೀಪದಲ್ಲಿಯೇ ಇರಹತ್ತಿದನು. ಅರಸನಾದರೂ ಅವನ ಬುದ್ಧಿಮತ್ತೆಗೆ ಮೆಚ್ಚಿ ಅವನನ್ನು ಬಹಳ ಪ್ರೀತಿಸುವವನಾದನು.

ಮಂಚಣ್ಣನು ತನ್ನ ನಿತ್ಯದ ಕಾರ್ಯಗಳನ್ನು ತೀರಿಸಿಕೊಂಡು ತನ್ನ ಗೃಹಕ್ಕೆ ಬಂದ ಬಳಿಕ ವೇದವೇದಾಂತಗಳು, ಉಪವೇದಗಳು, ಅಷ್ಟಾದಶ ಪುರಾಣಗಳು, ಹತ್ತೊಂಭತ್ತು ಧರ್ಮ ಶಾಸ್ತ್ರಗಳು, ಆಗಮಗಳು ಇವುಗಳನ್ನು ಸಾಂಗವಾಗಿ ಅಭ್ಯಾಸ ಮಾಡಿದನು. ಹೀಗೆ ಅಭ್ಯಾಸ ಮಾಡುವಲ್ಲಿ ಅವನಿಗೆ ಶಿವಭಕ್ತಿಯೇ ಹೆಚ್ಚಿನದೆಂದು ತೋರಹತ್ತಿತು. ಬಸವೇಶ್ವರನ ಸನ್ನಿಧಿಯಲ್ಲಿ ಯಾವಾಗಲೂ ನಡೆಯುತ್ತಿದ್ದ ಶಿವಾನುಭವದ ಚರ್ಚೆಗಳನ್ನು ಕೇಳುವ ಪ್ರಸಂಗಗಳೂ ಅವನಿಗೆ ಆಗಿಂದಾಗ್ಗೆ ಬರುತ್ತಿದ್ದವು. ಆಗ ಅವನಿಗೆ ಶಿವಾನುಭವ ಶಾಸ್ತ್ರವೇ ಶ್ರೇಷ್ಠವಾದುದೆಂದು ತೋರಿ ಯಾರಿಗೂ ತಿಳಿಯದಂತೆ ಒಂದು ದಿನ ರಾತ್ರಿಯಲ್ಲಿ ಒಬ್ಬ ಪಟ್ಟಾಧಿಕಾರಿಯನ್ನು ಕರೆಯಿಸಿಕೊಂಡು ಅವನಿಂದ ತಾನೂ ತನ್ನ ಹೆಂಡತಿಯೂ ಶಿವದೀಕ್ಷಾಪೂರ್ವಕವಾಗಿ ಲಿಂಗವನ್ನು ಪಡೆದುಕೊಂಡು ಮಂತ್ರೋಪದೇಶವನ್ನು ಹೊಂದಿದರು.

ಆ ಮೇಲೆ ಅವನು ವೈಷ್ಣವರು ರೇಗುವರೆಂದು ಶಿವಭಕ್ತಿಯನ್ನು ಅತ್ಯಂತ ಗೋಪ್ಯವಾಗಿ ಆಚರಿಸಹತ್ತಿದನು. ಅವನು ಬಾಹ್ಯದಲ್ಲಿ ವೀರ ವೈಷ್ಣವ ವೇಷವನ್ನು ಧರಿಸಿಕೊಂಡು ಬಿಜ್ಜಳನ ಅರಮನೆಗೆ ಹೋಗಿ ಅಲ್ಲಿ ತನ್ನ ಅಧಿಕಾರ ಕಾರ್ಯಗಳನ್ನೆಲ್ಲ ಪೂರೈಸುವನು. ಆ ಮೇಲೆ ತನ್ನ ಮನೆಗೆ ಬಂದು ಗೋಪ್ಯತರವಾಗಿ ಅಂತರ ಗೃಹದಲ್ಲಿ ರಾತ್ರಿಯ ವೇಳೆಯಲ್ಲಿ ಸಚೇಲ ಸ್ನಾನವನ್ನು ಮಾಡಿ ತನ್ನ ಶಿವಪೂಜಾಗೃಹವನ್ನು ಪ್ರವೇಶಿಸಿ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಷಟ್‌ಸ್ಥಲಕ್ಕನುಸಾರವಾಗಿ ಶಿವಪೂಜಾ ಕಾರ್ಯಗಳನ್ನು ನೆರವೇರಿಸುವನು. ಆ ಮೇಲೆ ಮಂತ್ರ ಪೂರ್ವಕವಾಗಿ ಲಿಂಗ ತೀರ್ಥವನ್ನು ಸ್ವೀಕರಿಸಿ ಶಿವಪ್ರಸಾದವನ್ನು ಸೇವಿಸುವನು. ಅವನ ಹೆಂಡತಿಯೂ ಕೂಡ ಹಾಗೆಯೇ ಮಾಡುವಳು. ಆ ಮೇಲೆ ಅವರು ತಮ್ಮ ಇಷ್ಟಲಿಂಗವನ್ನು ಬೇರೊಂದು ಪೆಟ್ಟಿಗೆಯಲ್ಲಿ ಬಚ್ಚಿಡುವರು. ಹೀಗೆ ಬಾಹ್ಯ ಲಿಂಗವನ್ನು ತೆಗೆದಿಟ್ಟರೂ ಅವರು ರೂಪಾದಿ ರುಚಿ ದ್ರವ್ಯಗಳನ್ನು ಪ್ರತಿ ಕ್ಷಣ ಆಯಾ ಲಿಂಗಗಳಿಗೆ ಸಲಿ

ನುತ್ತ ಪ್ರಸಾದೋಪಭೋಕ್ತೃಗಳಾಗಿ ತೃಪ್ತಿ ಬಡುತ್ತ ಗುಪ್ತ ಶಿವಭಕ್ತಿಯಿಂದ ಅನೇಕ ವರ್ಷ ಕಾಲ ಕಳೆದರು.

ಹೀಗಿರುವಲ್ಲಿ ಒಂದಾನೊಂದು ದಿನ ರಾತ್ರಿಯಲ್ಲಿ ಮಂಚರಸನು ಅಂತರಂಗ ಗೃಹದಲ್ಲಿ ಶಿವಾರ್ಚನೆಯನ್ನು ಮಾಡುತ್ತಿರುವಲ್ಲಿ ನೆರೆಮನೆಯ ಒಬ್ಬ ವೀರವೈಷ್ಣವನು ಮಧ್ಯರಾತ್ರಿಯಲ್ಲಿ ಎಚ್ಚತ್ತು ಹೊರಗೆ ಬಂದಿರಲಾಗಿ ಅವನಿಗೆ ಮಂಚಣ್ಣನ ಮೇಗಣ ಕಿಟಕಿಯಿಂದ ಧೂಪದ ಧೂಮವು ವಿಶೇಷವಾಗಿ ಬರುತ್ತಿರಲು ಅವನು, ವೀರವೈಷ್ಣವರು ಉಪಯೋಗಿಸದೆ ಇರುವ ಇಂಥ ಧೂಪದ ವಾಸನೆಯು ಇಲ್ಲಿ ಏಕೆ ಬರುತ್ತಿದೆ, ಎಂದು ಸಂಶಯಪಟ್ಟು ತನ್ನ ಮನೆಯನ್ನು ಹತ್ತಿ ಮಂಚಣ್ಣನ ಮನೆಯ ಬೆಳಕಿಂಡಿಯಿಂದ ಮುಖವನ್ನಿಟ್ಟು ನೋಡಲು ಕೆಳಗೆ ಮಂಚಣ್ಣನೂ ಅವನ ಪತ್ನಿಯೂ ಶಿವಭಕ್ತಿಯುತರಾಗಿ ಏಕೋಭಾವದಿಂದ ಲಿಂಗ ಪೂಜೆಯಲ್ಲಿ ಮಗ್ನರಾಗಿದ್ದದ್ದನ್ನು ಕಂಡನು. ಆಗ ಅವನು— ಆಹಾ, ಇದೇನು ಆಶ್ಚರ್ಯವು! ಮಂಚಣ್ಣನು ನಮ್ಮ ಮತ ಪದ್ಧತಿಯ ಪ್ರಕಾರ ಶಂಖ ಚಕ್ರಾಂಕಗಳನ್ನು ಹೊಂದಿ ವೀರವೈಷ್ಣವನಾಗಿದ್ದಾನೆ. ಇಂಥವನು ಹೀಗೆ ಶಿವಪೂಜೆ ಮಾಡುವುದೆಂದರೇನು? ಅಥವಾ ನಾನು ನಿತ್ಯದಲ್ಲಿ ಬಸವೇಶ್ವರನನ್ನು ನೋಡಿ ನೋಡಿ ನನಗೆಯೇ ಹೀಗೆ ಭ್ರಮೆಯಾಗಿದೆಯೋ? ಆಗಲಿ, ಎರಡು ಮೂರು ದಿವಸ ನಾನು ಇದನ್ನು ಚನ್ನಾಗಿ ಪರೀಕ್ಷಿಸುವೆನು ಎಂದು ಆ ದಿನ ತನ್ನ ಮನೆಯೊಳಗೆ ಬಂದನು. ಆ ಮೇಲೆ ೨-೩ ದಿನ ರಾತ್ರಿಯಲ್ಲಿ ಆ ವೈಷ್ಣವ ವಿಪ್ರನು ಬೆಳಕಿಂಡಿಯಿಂದ ನೋಡಲಾಗಿ ಮಂಚಣ್ಣನೂ ಅವನ ದಂಪತಿಯರಾ ಶಿವಪೂಜಾ ವೈಭವದಿಂದ ವಿಶೇಷವಾಗಿ ಮೆರೆಯುತ್ತಿದ್ದದ್ದನ್ನು ಕಂಡವನಾದನು.

ಆ ಮೇಲೆ ಅವನು ಮರುದಿನ ಬಸವೇಶ್ವರನನ್ನು ಕಂಡು ತಾನು ನೋಡಿದ ಸಂಗತಿಗಳನ್ನು ಅರುಹಲಾಗಿ ಬಸವೇಶ್ವರನು—ನೀನು ಹೇಳುವ ಮಾತನ್ನು ಕೇಳಿದರೆ ಆಶ್ಚರ್ಯವಾಗುತ್ತಿದೆ. ನಂಬಲಿಕ್ಕೆ ಶಕ್ಯವಲ್ಲ ಎಂದೆನ್ನಲು ಅವನು-ನಿಮ್ಮ ವಿಶ್ವಾಸಿಕನೊಬ್ಬನನ್ನು ಈ ದಿನ ರಾತ್ರಿ ಕಳಿಸಿಕೊಟ್ಟಲ್ಲಿ ಅವನಿಗೆ ಎಲ್ಲವನ್ನೂ ತೋರಿಸುವೆನು ಎಂದು ಹೇಳಿದನು. ಹಾಗೆಯೇ ಬಸವೇಶ್ವರನು ಒಬ್ಬನನ್ನು ಕಳಿಸಲು, ಆ ವಿಪ್ರನು ಅವನಿಗೆ ಸಾಂಗವಾಗಿ ಎಲ್ಲವನ್ನೂ ತೋರಿಸಲಾಗಿ ಆ ಚಾರನು ಬಸವೇಶ್ವರನಲ್ಲಿಗೆ ಬಂದು

ನಿಮ್ಮ ಪಾದದಾಣೆಯಾಗಿ ಮಂಚಣ್ಣಾನವರು ಭಕ್ತಿಯಿಂದ ಲಿಂಗಪೂಜೆಯನ್ನು ಮಾಡುತ್ತಾರೆ, ಅವರು ಸಾಮಾನ್ಯರಲ್ಲ, ಕಾರಣಿಕರೆಂದು ನನಗೆ ತೋರಿತು ಎಂದು ಹೇಳಿದನು.

ಬಸವೇಶ್ವರನು ಈ ಸಂಗತಿಯನ್ನು ಸೊಡ್ಡಳ ಬಾಚರಸ, ಮಧುವರಸ, ಜಗದೇವ, ಚನ್ನಬಸವ ಇವರಿಗೆ ತಿಳಿಸಿ ಅವರೆಲ್ಲರೂ ಒಡ್ಡೋಲಗವು ಮುಗಿದ ಬಳಿಕ ಮಂಚಣ್ಣಾನ ನೆರೆಮನೆಯವನಾದ ವೈಷ್ಣವನ ಮನೆಗೆ ಗುಪ್ತವಾಗಿ ಬಂದು, ಮಧ್ಯರಾತ್ರಿಯ ವರೆಗೆ ಅವನಲ್ಲಿ ಕಾದುಕೊಂಡಿದ್ದರು. ಆ ಮೇಲೆ ಅವರು ಬೆಳಕಿಂಡಿಯೊಳಗಿಂದ ಕೆಳಗೆ ನೋಡಲಾಗಿ ಮಂಚಣ್ಣಾನು ತನ್ನ ವೈಷ್ಣವ ವೇಷವನ್ನು ಬಿಟ್ಟು ಕೊಟ್ಟು, ಎಲ್ಲ ಬಾಗಿಲುಗಳನ್ನು ಮುಚ್ಚಿ ಪಂಚಾಕ್ಷರೀ ಮಂತ್ರವನ್ನು ಸ್ಮರಿಸುತ್ತ ಶಿವಾರ್ಚನೆಯಲ್ಲಿ ತಲ್ಲೀನ ಮನಸ್ಕನಾಗಿರುವದನ್ನು ಕಂಡರು. ಅದನ್ನು ಅವರು ನೋಡಿ ಮಂಚಣ್ಣಾನು ನಿಜವಾಗಿ ಮಹಿಮನು ಎಂದು ಭಾವಿಸಿ ಅವನನ್ನು ಪ್ರತ್ಯಕ್ಷ ಕಂಡು ಅವನಿಗೆ ನಮಸ್ಕಾರ ಮಾಡಬೇಕೆಂದು ಯೋಚಿಸಿ ಐವರೂ ಕೆಳಗಿಳಿದು ಮನೆಯ ಬಾಗಿಲಲ್ಲಿ ಬಂದು ನಿಂತರು. ಮಾಳಿಗೆಯ ಮೇಲೆ ವೈಷ್ಣವ ದ್ವಿಜನು ನಿಂತು--ಬಸವೇಶ್ವರನು ಇಲ್ಲಿಗೆ ಬಂದಿದ್ದಾನೆ. ಬಾಗಿಲು ತೆರೆಯಬೇಕೆಂದು ಬೆಳಕಿಂಡಿಯೊಳಗಿಂದ ಗಟ್ಟಿಯಾಗಿ ಕೂಗಿ ಹೇಳಲು, ಅದನ್ನು ಮಂಚಣ್ಣಾನು ಕೇಳಿ--ಆಯ್ಯೋ, ಗೋಪ್ಯವಾಗಿ ನಾನು ಮಾಡುತ್ತಿದ್ದ ಗೋಪ್ಯಲಿಂಗ ಪೂಜಾವ್ರತಕ್ಕೆ ಇಂದು ಭಂಗ ಉಂಟಾಯಿತು ಎಂದು ಪತ್ನಿಯೊಡನೆ ಯೋಚಿಸಿ, ಆ ಕ್ಷಣದಲ್ಲಿಯೇ ಅವನು ತನ್ನ ಪ್ರಾಣವನ್ನು ಲಿಂಗದಲ್ಲಿ ಊರ್ಧ್ವಗತಿಯಲ್ಲೆತ್ತಿ ಭಕ್ತಿಯಿಂದ ಅದರಲ್ಲಿ ತಲ್ಲೀನವಾಗಿಮಾಡಿದನು. ಆ ಲಿಂಗಾನುಸಂಧಾನವನ್ನು ಅವನ ಪತ್ನಿಯೂ ಮಾಡಲು ಅವಳ ಪ್ರಾಣವು ಲಿಂಗದಲ್ಲು ಳಿದು ಶೂನ್ಯದ ಸ್ಥಿತಿಯನ್ನೈದಿದಳು. ಇದರಿಂದ ಬಸವೇಶ್ವರಾದಿಗಳು ಅವರ ಬಾಗಿಲಲ್ಲಿ ನಿಂತು ಎಷ್ಟು ಕೂಗಿಕೊಂಡರೂ ಬಾಗಿಲು ತೆರೆಯಲಿಲ್ಲ. ಅಷ್ಟರಲ್ಲಿ ಬೆಳಗಾಗಿ ಸೂರ್ಯೋದಯವಾಯಿತು. ಆದರೂ ಅವರೆಲ್ಲರು ಅಲ್ಲಿಯೇ ನಿಂತುಕೊಂಡು ಬಿಟ್ಟರು.

ಮಂಚಣ್ಣಾನ ತಾಯಿತಂದೆಗಳೂ ಬಂಧು ವರ್ಗದವರೂ ಬೇರೆ ವೈಷ್ಣವರೂ ಅವರನ್ನು ನೋಡಿ ಅಲ್ಲಿ ಎಲ್ಲರೂ ನೆರೆದು--ಬಸವೇಶ್ವರನು

ಏನು ಕಾರಣ ಹೀಗೆ ವೀರ ವೈಷ್ಣವನ ಮನೆಯ ಬಾಗಿಲಲ್ಲಿ ಬಂದು ನಿಂತಿದ್ದಾನೆ? ಮಂಚಣ್ಣನು ಏಕೆ ಬಾಗಿಲು ತೆರೆಯಲವದಿಲ್ಲ;? ಎಂದು ಸಂಶಯಗ್ರಸ್ತರಾಗಿ ಅನೇಕ ಕುತರ್ಕಗಳನ್ನು ಮಾಡಹತ್ತಿದರು. ಅವರಲ್ಲಿ ಬಸವೇಶ್ವರನ ವಿರೋಧಿಗಳಿದ್ದು ಅವರೆಲ್ಲರೂ ಸೇರಿ, ಸಂಚುಮಾಡಿ ಬಸವೇಶ್ವರ ಮೊದಲ್ಗೊಂಡು ಐವರು ಈಗ ಮಂಚಣ್ಣನ ಬಾಗಿಲಲ್ಲಿದ್ದಾರೆ, ಬಿಜ್ಜಳನಲ್ಲಿಗೆ ಹೋಗಿ ಅವನಿಗೆ—ಮಂಚಣ್ಣನು ಬಾಗಿಲನ್ನು ತೆರೆಯುದೆ ಇದ್ದಾನೆ, ಈ ಸಂದರ್ಭಗಳನ್ನುನೋಡಿದರೆ ಅವರು ಅವನ ಕೊಲೆ ಮಾಡಿದ್ದಾರೆಂದು ತೋರುತ್ತದೆಂದು ಅವನಲ್ಲಿ ಮೊರೆಯಿಟ್ಟರು.

ಆಗ ಬಿಜ್ಜಳನು ತನ್ನ ಪ್ರೀತಿಯ ನಿಯೋಗಿಯು ಇನ್ನೂ ಬರಲಿಲ್ಲವೆಂದು ಅವನ ದಾರಿಯನ್ನು ನೋಡುತ್ತ ಕುಳಿತಿದ್ದು ಅವನಿಗೆ ಹೀಗೆ ಹೇಳಿದ ಕೂಡಲೆ ಅವನು ಅತ್ಯಂತ ಕೋಪಾವಿಷ್ಟನಾಗಿ ಮಂಚಣ್ಣನ ಮನೆಗೆ ತಾನೇ ಬಂದನು. ಅಲ್ಲಿ ಬಸವೇಶ್ವರನಿರುವದನ್ನು ನೋಡಿ— ಈ ವೈಷ್ಣವನ ಮನೆಗೆ ನಿಮಗೇಕೆ, ಎಂದು ಕೇಳಲು ಬಸವನು-- ಈತನು ವೈಷ್ಣವನಲ್ಲ. ಅವನು ಸದಾಚಾರ ಸಜ್ಜನ ಶುದ್ಧ ಲಿಂಗಾರ್ಚಕನು, ಇವನನ್ನು ನಮಸ್ಕರಿಸಲಿಕ್ಕೆ ಬಂದಿದ್ದೇವೆ ಎಂದು ಹೇಳಿದನು. ಅದಕ್ಕೆ ನೆರೆದವರು ಮತ್ತಷ್ಟು ಕೆರಳಿದವರಾಗಿ ವೀರ ವೈಷ್ಣವನಾದ ನಮ್ಮ ಮಂಚಣ್ಣನು ಶಿವಭಕ್ತನಂತೆ! ಅವನು ಶಂಖಚಕ್ರಾಂಕನಾಗಿ ವೀರ ವೈಷ್ಣವನಾಗಿರುತ್ತಾನೆ. ಈಗ ಮುಂಚಿತವಾಗಿ ಈ ಕದವನ್ನು ತೆರೆಯಿಸಬೇಕು ಎಂದು ಅವರು ಅರಸನಿಗೆ ಹೇಳಿದರು. ರಾಜನ ದೂತರು ಎಷ್ಟು ಅಬ್ಬರಿಸಿದರೂ ಕದ ತೆರೆಯುದಿರಲು ಅವರು ಅದನ್ನು ಒಡೆದು ಮನೆಯೊಳಗೆ ಪ್ರವೇಶ ಮಾಡಿದರು. ಅವರು ಒಳಗೆ ನೋಡುತ್ತಾರೆಯೋ ಮಂಚಣ್ಣನೂ ಅವನ ಹೆಂಡತಿಯೂ ಭಸ್ಮಧಾರಿಗಳಾಗಿ ಕೈಯಲ್ಲಿ ಲಿಂಗವನ್ನು ಇಟ್ಟುಕೊಂಡು ಹಾಗೆಯೇ ಪ್ರಾಣವನ್ನು ಬಿಟ್ಟು ಗೋಡೆಗೆ ಒರಗಿಕೊಂಡಿದ್ದನ್ನು ಕಂಡರು. ಆಗ ವೈಷ್ಣವರೆಲ್ಲರೂ ಆರ್ಭಟವಮಾಡಿ ಗೋಳಾಡುತ್ತಿರಲು ಬಿಜ್ಜಳನು ಅವರನ್ನು ಸಂತೈಸಿ ಬಸವೇಶ್ವರನಿಗೆ—ಎಲೋ ಬಸವೇಶ್ವರನೇ, ನೀನು ಮಹಾಪಾಪಿಯು. ನೀನು ಏನೋ ಉಪಾಯದಿಂದ ಇವರನ್ನು ಕೊಂದಿರುವಿ. ಇದಕ್ಕೆ ನಿನಗೆ ತಕ್ಕ ಶಿಕ್ಷೆಯನ್ನು ಮಾಡುತ್ತೇನೆ ಎಂದು ಹೇಳಿ ಆ ವೈಷ್ಣವರಿಗೆ ಈ ಎರಡೂ ಹೆಣಗಳನ್ನು ಸ್ಮಶಾನಕ್ಕೆ

ತೆಗೆದುಕೊಂಡು ಹೋಗಿ ಅದಕ್ಕೆ ಮಾಡತಕ್ಕ ಅಂತ್ಯ ಕರ್ಮಗಳನ್ನು ನೀವು ಮಾಡಿರೆಂದು ಹೇಳಿದನು.

ಆಗ ಆ ವೀರವೈಷ್ಣವರೆಲ್ಲರು ಮಂಚಣ್ಣನ ಆಸೆ ನಮಗಿನ್ನೇತಕ್ಕೆ? ಇವನು ಭಸ್ಮಗಿಸ್ಮವನ್ನು ಧರಿಸಿ ಅಂಗದಲ್ಲಿ ಲಿಂಗಗಿಂಗಗಳನ್ನು ಇಟ್ಟು ಕೊಂಡಿರುವದರಿಂದ ಇವನನ್ನು ನಾವು ಮುಟ್ಟಲಾಗದು ಎಂದು ನುಡಿ ಯಲು, ಬಿಜ್ಜಳನು ಕಸಿಕರ ಪಟ್ಟು ಬಸವೇಶ್ವರನನ್ನು ನೋಡಿ—ಈ ಮಂಚಣ್ಣನನ್ನು ನೀನು ಕೊಂದದ್ದು ಅಲ್ಲದೆ, ಈ ಲೋಕಕ್ಕೂ ಪರಲೋ ಕಕ್ಕೂ ಅವನು ಸಲ್ಲದಂತೆ ಮಾಡಿದಿ. ಆದಕಾರಣ ನೀನೂ ನಿನ್ನ ಈ ಜತೆಗಾರರೂ ಈ ಹೆಣವನ್ನು ಹೊತ್ತುಕೊಂಡು ಹೋಗಿ ಅಂತ್ಯ ಸಂಸ್ಕಾರ ವನ್ನು ನೀವೇ ಮಾಡಬೇಕು ಎಂದು ಆಜ್ಞಾಪಿಸಿದನು.

ಆಗ ಆ ಐವರು ಮಂಚಣ್ಣನ ಮಹತ್ವವನ್ನು ತಿಳಿದವರಾಗಿ ಒಳಗೆ ಪ್ರವೇಶ ಮಾಡಿ ಅವನಿಗೆ ಸಾಷ್ಟಾಂಗ ಹಾಕಿ ಕೈಮುಗಿದು ನಿಂತುಕೊಂ ಡರು. ಬಸವೇಶ್ವರನು ಮಂಚಣ್ಣನ ಹಣೆಯಲ್ಲಿ ತ್ರಿಪುಂಡ್ರ ಧಾರಣೆಯನ್ನು ಮಾಡಲು ಅವನ ಭವಬಾಧೆಯು ಕರ್ಮಗಳೆಲ್ಲವೂ ತೊಡೆದು ಹೋದವು. ಆಮೇಲೆ ಅವನು ತನ್ನ ಹಸ್ತವನ್ನು ಅವನ ಮಸ್ತಕದಲ್ಲಿರಿಸಲು ಅಲ್ಲಿಯ ಬ್ರಹ್ಮರಂಧ್ರದಿಂದ ಅಮೃತಬಿಂದುವು ಉತ್ಪನ್ನವಾಗಿ ಅವನ ಪ್ರಾಣವು ಪ್ರಭಾವಿಸಿ ದಶವಾಯುಗಳು ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಲು, ಆ ಕ್ಷಣದಲ್ಲಿಯೇ ಮಂಚರಸನು ಚೇತರಿಸಿ ಕಣ್ಣುಗಳನ್ನು ತೆರೆದನು. ಅವನು ತನ್ನ ಇದಿರಿಗೆ ಬಸವೇಶ್ವರ, ಚನ್ನಬಸವೇಶ್ವರ, ಮಧುವರಸ, ಸೊಡ್ಡಳ ಬಾಚರಸ, ಜಗದೇವರು ಇರುವದನ್ನು ಕಂಡು ಅವರನ್ನು ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಪಡೆದು ತನ್ನ ಪತ್ನಿಗೂ ತಕ್ಕ ಸಂಸ್ಕಾರ ಗಳನ್ನು ಮಾಡಿಸಿ ಆಕೆಯ ಪ್ರಾಣವನ್ನು ಕೂಡ ಬರಮಾಡಿಕೊಂಡು ಉಭಯತರು ಬಿಜ್ಜಳನಿದ್ದ ಸ್ಥಳಕ್ಕೆ ಬಂದರು.

ಆಗ ಅರಸನ ಕೋಪವು ಅಡಗಿತು. ನೆರೆದ ಸಮಸ್ತ ಜನರು ಆಶ್ಚರ್ಯಪಟ್ಟರು. ಸಮಸ್ತ ಶಿವಭಕ್ತರು ಅತ್ಯಾನಂದವನ್ನು ಹೊಂದಿ ದರು. ಆಗ ಬಸವೇಶ್ವರನು ಮಂಚಣ್ಣನ ಪೂಜಾಕಾರ್ಯಗಳನ್ನು ಮೊದಲು ನೋಡಿದ ವಿಪ್ರನನ್ನು ಬರಮಾಡಿಕೊಂಡು ಅವನಿಂದ ಎಲ್ಲ ವನ್ನು ಕ್ರಮವಾಗಿ ರಾಜನ ಮುಂದೆ ಹೇಳಿಸಲು ರಾಜನು—ನಿಜವಾದ

ಅಪರಾಧಿಯು ನಾನೇ, ಮಂಚಯ್ಯನು ಯಾವರೀತಿಯಿಂದ ಶಿವಭಕ್ತಿಯುಳ್ಳವನಾದನೆಂಬುದು ನನಗೆ ತಿಳಿಯಲಿಲ್ಲ, ಎಂದು ಹೇಳಿ ಅವನನ್ನು ಸ್ತುತಿಸುತ್ತ ತನ್ನ ಓಲಗಕ್ಕೆ ಕರೆದುಕೊಂಡು ಹೋದನು. ಮುಂದ ಮಂಚಯ್ಯನು ಬಹಿರಂಗವಾಗಿ ಶಿವಾನುಭವದ ಮಾರ್ಗದಲ್ಲಿ ಆಚರಿಸುತ್ತ ಶಿವಾನುಭವ ಮಂಟಪದಲ್ಲಿದ್ದುಕೊಂಡು ಶಿವಾನುಭವ ಸದ್ಗೋಷ್ಠಿಗಳನ್ನು ಕೇಳುತ್ತ, ತಾನೂ ವಚನಕಾರನಾಗಿ ಕಲ್ಯಾಣದಲ್ಲಿಯೇ ಸಾಮರಸ್ಯ ಪದವನ್ನು ಹೊಂದಿದನು.

ಗುಪ್ತ ಮಂಚಣ್ಣನು ವಚನಕಾರನಿದ್ದಾನೆ. ಅವನ ೪೦ ವಚನಗಳು ನಮ್ಮ ಹತ್ತಿರವಿದ್ದು ಅವನ ಮುದ್ರಿಕೆಯು ''ನಾರಾಯಣ ಪ್ರಿಯ ರಾಮನಾಥಾ'' ಎಂದಿದೆ. ಇದು ಅವನು ಬಾಹ್ಯದಲ್ಲಿ ತೋರಿಸುತ್ತಿದ್ದ ವೈಷ್ಣವ ಮತದ ದ್ಯೋತಕವೋ ಏನೋ ಎನ್ನುವ ಹಾಗೆ ಇದೆ. ಆದರೂ ಅವನ ವಚನಗಳಲ್ಲಿ ಶಿವಾನುಭವ ತತ್ವಗಳ ನಿರೂಪಣೆಯೇ ಇರುತ್ತದೆ. ಅವನ ಕೆಲವು ವಚನಗಳಲ್ಲಿ ಅವನು ಆರಂಭದಲ್ಲಿ ವಿಷ್ಣುವಿನ ಭಕ್ತನಾಗಿದ್ದು ಅದರಲ್ಲಿ ಅವನ ವಿಶ್ವಾಸವಿಲ್ಲದ್ದರಿಂದ ಮುಂದೆ ಅವನು ಶಿವಭಕ್ತನಾದದ್ದರ ಉಲ್ಲೇಖಗಳು ಕಂಡುಬರುತ್ತವೆ. ವಾಚಕರು ಕೆಳಗಿನ ವಚನಗಳನ್ನು ಅವಲೋಕಿಸತಕ್ಕದ್ದು,

## ವಚನಗಳು.

(೧) ಆನು ನಾಮದ ದಾಸನಲ್ಲದೆ ದಾಸೋಹದ ದಾಸನಲ್ಲಯ್ಯ. ಆನು ಹರಿಭಕ್ತನಲ್ಲದೆ, ಶಿವಭಕ್ತನಲ್ಲಯ್ಯ. ಎನಗೆ ಶಿವಭಕ್ತಿ ನೆಲೆಗೊಳ್ಳದಯ್ಯ. ನೀನೇ ಎನಗೆ ಕೃಪೆ ಮಾಡಾ ನಾರಾಯಣ ಪ್ರಿಯ ರಾಮನಾಥಾ.

ಇದರಿಂದ ಶಿವಭಕ್ತಿ ಮತ್ತು ಹರಿಭಕ್ತಿ, ಇವುಗಳ ಪರಸ್ಪರ ಘರ್ಷಣವು ಅವನು ಈ ವಚನವನ್ನು ನುಡಿದಾಗ ಅವನ ಮನಸ್ಸಿನಲ್ಲಿ ನಡಿದಿತ್ತೆಂದು ನಾವು ಊಹಿಸಬಹುದಾಗಿದೆ.

(೨) ತುಳಸಿಯ ಗಿಡವ ಮೆಲಲಾರದೆ ಕಿವಿಯೊಳಗಿಕ್ಕಿದೆ. ಕಲಸಿದ ನಾಮಕ್ಕೆ ಹಣೆಯ ಕಾಣದೆ ಎದೆಯೊಳಗಿಕ್ಕಿದೆ. ತಾವರೆ ಮಣಿಯ ತಾನಡಿಸೂದಕ್ಕೆ ಠಾವ ಕಾಣದೆ ಡಾವರಿಸುತ್ತಿದ್ದೆನಯ್ಯ. ಇದಕಿನ್ನಾವುದು ಹದನಯ್ಯ? ಎನ್ನ ನಿಮ್ಮ ದಾಸೋಹದ ದಾಸನ ಮಾಡಿರಿಸಯ್ಯ ನಿಮ್ಮ ಧರ್ಮವಯ್ಯ ನಾರಾಯಣಪ್ರಿಯ ರಾಮನಾಥಾ.

ಗುಪ್ತ ಮಂಚಣ್ಣನು ತನ್ನ ಮೊದಲಿನ ವೈಷ್ಣವ ಧರ್ಮವನ್ನು ಬಿಟ್ಟು ಇಷ್ಟ ಪ್ರಾಣ ಭಾವಲಿಂಗಗಳನ್ನು ಅಳವಡಿಸಿಕೊಂಡ ಬಳಿಕ ಅವನು ರಚಿಸಿದ ವಚನವು ಇದಾಗಿರಬಹುದೆಂದು ತೋರುತ್ತದೆ. ಇದರ ಮೊದಲಿನ ವಾಕ್ಯದಲ್ಲಿ ತಾನು ಗುರುಮಂತ್ರವನ್ನು ಹೊಂದಿದ್ದನ್ನು ಹೇಳುತ್ತಾನೆ. ಆ ಮೇಲೆ ಪ್ರಾಣಲಿಂಗವನ್ನು ಆ ಮೇಲೆ ಭಾವಲಿಂಗವನ್ನು ಹೊಂದಿ ತುಳಸಿಯ ಮಾಲೆ ಹಣೆಗೆ ಹಚ್ಚುವ ನಾಮ ಮತ್ತು ತಾವರೆಯ ಮಣಿಗಳನ್ನು ಆಯಾ ಲಿಂಗಗಳ ಸ್ವರೂಪ ಮಾಡಿದೆನೆಂದು ಹೇಳುತ್ತಾನೆ.

ಕೆಳಗಿನ ವಚನದಲ್ಲಿ ಅವನು ತನ್ನ ಗುಪ್ತ ಭಕ್ತಿಯನ್ನೂ ತಾನು ತೊಟ್ಟುಕೊಂಡ ವೈಷ್ಣವ ವೇಷವನ್ನೂ ಪರಸ್ಪರ ತುಲನೆಮಾಡಿ ಭಕ್ತಿಯು ತನ್ನಲ್ಲಿ ಇಲ್ಲ ಎಂದು ಹೇಳಿಕೊಳ್ಳುತ್ತಾನೆ.

(೩) ನಾನು ವಿಶ್ವಾಸಿಯಾದೊಡೆ ಗುಪ್ತಭಕ್ತಿಯ ಮಾಡಲೇಕೆ? ಆನು ವಿಶ್ವಾಸಿಯಾದೊಡೆ ಹರಿಭಕ್ತಿಯನಿದಿರಿಂಗೆ ತೊಟ್ಟು ಹರನ ಹರಣದಲ್ಲಿರಿಸಿಹೆನೆಂಬ ಸಂದೇಹವೇತಕ್ಕೆ? ಎನ್ನ ವಿಶ್ವಾಸವನಿದಿರರಿತರೆ ಆನಾವ ಹೊಸೆದಿಹೆನೆಂಬ ಹುಸಿಯ ಮಾತಿನ ಗಸಣಿ ಏತಕ್ಕೆ? ಎನ್ನ ವೇಷವು ಹುಸಿ, ನಿಮ್ಮನರಿದಿಹೆನೆಂಬ ವಿಶ್ವಾಸವು ಹುಸಿ, ನಿಮ್ಮ ಭಕ್ತಿಯ ದಾಸೋಹದ ದಾಸನೆಂಬುದು ಹುಸಿಯಯ್ಯ ನಾರಾಯಣ ಪ್ರಿಯ ರಾಮನಾಥಾ.

(೪) ನಾ ಬಂದೆ ಹರಿಭಕ್ತನಾಗಿ, ಬಾಹಾಗ ದಾಸನಾಗಿ ಒಂಬತ್ತು ಜೋಳಿಗೆಯ ತಣ್ಣೀರ ಕಣತೆಯ ಹೊತ್ತು ತಿತ್ತಿಗೆ ನೀರಕಾಣದೆ ಲೆಕ್ಕವಿಲ್ಲದ ನಾಮವ ಸಿಕ್ಕಿದೆ. ಸುತ್ತಿ ಸುತ್ತಿ ಬಳಸಿದೆನಯ್ಯ. ಹೀಲಿಯ ಗರಿಯ ಮೇಲ್ಕಣ್ಣ ಪಚ್ಚೆಯ ನಾಮವ ದೃಷ್ಟಿಯ ಮಧ್ಯದಲ್ಲಿಕ್ಕಿ ಮತ್ತದರ ನಡುವೆ ನಿಚ್ಚಯ ಬಿಳಿಯ ನಾಮವನಿಕ್ಕಿ ಹೊತ್ತದಾಸಿಕೆ ಹುಸಿಯಾಯಿತು. ದಾಸೋಹನೆಂಬುದನರಿಯದೆ ಎನ್ನ ದೇಹವು ಹುಸಿಯಾಯಿತಯ್ಯ ನಾರಾಯಣಪ್ರಿಯ ರಾಮನಾಥಾ.

(೫) ಹರಿಮಾಡಿದ ಭಕ್ತಿಗೆ ಕಡೆಮೊದಲಿಲ್ಲ. ಜಗದ ಕಂಟಕಬಂದಲ್ಲಿ ದಶಾವತಾರನಾಗಿ ಪಶುಪತಿಯ ಸೇವೆಮಾಡಿದ. ಶಶಿ ಶೇಖರನ ಆಲಯದಲ್ಲಿ ಪತಿಭಕ್ತಿಯಾಗಿಪ್ಪ ನಾರಾಯಣನ ಜಗವೇಷಮಂ ತಾಳಿ. ಇಂತಿವರೆಲ್ಲರು ಎನ್ನ ರಾಮನಾಥ ಗೋವಿಂದ ಎನುತಿದ್ದರು.

ಗುಪ್ತಭಕ್ತಿ ಮಾಡಬೇಕೆಂಬ ವಿಷಯವಾಗಿ ಅವನು ಹೇಳುವ ದೇನೆಂದರೆ--

(೬) ಶಿವಭಕ್ತಿ, ಶಿವಪೂಜೆ, ಶಿವಜ್ಞಾನ ಇಂತಿವಕೆ ಬಾಹ್ಯಾಡಂಬರವೇ? ಅರಿವುದೊಂದು ಆರುಹಿಸಿಕೊಂಬುವೊಂದು ಇಂತೀ ಉಭಯ ಸುಖ ಸಂಭಾಷಣವಲ್ಲದೆ ರಚ್ಚೆಯ ಪೂಜೆ ಕರ್ಕಶದನುಭಾವ ಡೊಂಬರ ಡೋಲು ಕೇಳಬಂದವರೆಲ್ಲರು ನಿಂದು ನೋಡಿ ತಮ್ಮ ತಮ್ಮ ಮಂದಿರಕ್ಕೆ ಹೋದಂತಾಯಿತ್ತು. ಈ ಪಥವನಾರು ಅರಿಯರು. ನಾರಾಯಣಪ್ರಿಯ ರಾಮನಾಥನಲ್ಲಿ ತನ್ನ ತಾನೆ ತಿಳಿದ ಶರಣ ಬಲ್ಲ.

ಬಾಹ್ಯಾಡಂಬರದ ಪೂಜೆ ಮತ್ತು ಕಠಿಣ ಶಬ್ದಗಳನ್ನು ಉಪಯೋಗಿಸುತ್ತ ಶಿವಾನುಭವದ ಬಾಹ್ಯ ಹೋರಾಟ, ಇವುಗಳನ್ನು ಕೇಳುವದು ಡೊಂಬರಾಟವನ್ನು ನೋಡಿ ಅಷ್ಟಕ್ಕೆ ಸಮಾಧಾನ ಹೊಂದಿ ಜನರು ತಮ್ಮ ತಮ್ಮ ಮನೆಗೆ ಹೋದಂತಾಗುತ್ತದೆಂದು ಹೇಳುತ್ತಾನೆ.

ಶಿವಪೂಜೆಯನ್ನು ಹೇಗೆ ಮಾಡಬೇಕೆಂಬುವನ್ನು ಕೆಳಗಿನ ವಚನದಲ್ಲಿ ಹೇಳಿದ್ದಾನೆ.

(೭) ಈಶ್ವರ ಮೂರ್ತಿಯ ಕರ ಕಮಲಕ್ಕೆ ತಂದಲ್ಲಿ ಕಣ್ಮನ ಮೂರ್ತಿಧ್ಯಾನದಲ್ಲಿ ಹೆರೆ ಹಿಂಗದೆ ಅಕ್ಕರದಿಂದ ಭಾವ ಭ್ರಮಿಸದೆ ಚಿತ್ತ ಸಂಚರಿಸದೆ ಮನ ವಚನ ಕಾಯ ಭಿನ್ನ ಭಾವವಿಲ್ಲದೆ ಪೂಜಿಸುವ ಕೈ ತಾನಾಗಿ, ಅರಿವ ಮನವು ತಾನಾಗಿ, ಹೊತ್ತಿಪ್ಪ ಅಂಗದ ನೆಲೆಯು ತಾನಾಗಿ, ಹೆರೆ ಹಿಂಗದೆ ಪೂಜೆಯ ಮಾಡುತಿಪ್ಪಾತನ ಅಂಗವೇ ಲಿಂಗ, ಆತನಿದ್ದುದೇ ಅವಿಮುಕ್ತ ಕ್ಷೇತ್ರ. ಇಂತಪ್ಪ ಮಹಾಮಹಿಮ ನಾರಾಯಣ ಪ್ರಿಯ ರಾಮನಾಥಾ.

ಮೇಲಿನ ವಚನಗಳು ಗುಪ್ತ ಮಂಚಣ್ಣನ ಚರಿತ್ರೆಯೊಳಗಿನ ಅನೇಕ ಸಂಗತಿಗಳನ್ನು ದೃಢ ಪಡಿಸುತ್ತವೆ.

ಒಂದು ಕಾಲದಲ್ಲಿ ಶಿವ, ವಿಷ್ಣುಗಳಲ್ಲಿ ಯಾರು ಶ್ರೇಷ್ಠರೆಂಬ ವಿಷಯವಾಗಿ ಕಲಹಗಳು ದಕ್ಷಿಣ ಹಿಂದುಸ್ತಾನದಲ್ಲಿದ್ದವೆಂದು ತೋರುತ್ತದೆ. ಇದು ಅನೇಕ ಧಾರ್ಮಿಕ ಪುರುಷರ ಚರಿತ್ರೆಗಳಲ್ಲಿ ಕಂಡು ಬರುತ್ತದೆ. ಆದರೆ ಬಸವೇಶ್ವರನು ಇಂಥ ಕಲಹಗಳನ್ನು ಪುರಸ್ಕರಿಸು

ತ್ರಿದ್ದಿಲ್ಲವೆಂಬುದನ್ನು ನಾವು ಗುಪ್ತ ಮಂಚಣ್ಣನ ಚರಿತ್ರೆಯಿಂದ ತಿಳಿಯಬಹುದು. ಬಾಹ್ಯದಲ್ಲಿ ಯಾವ ವೇಷವಿದ್ದರೂ ಶಿವಾನುಭವದಂತೆ ನಡೆಯಬಹುದೆಂದು ಇದರಿಂದ ಗೊತ್ತಾಗುತ್ತದೆ. ಶಿವಶರಣರ ಹೆಸರುಗಳಲ್ಲಿ ಮತ್ತು ಅವರ ಮುದ್ರಿಕೆಗಳಲ್ಲಿ ರಾಮ, ರಾಮನಾಥ, ರಾಮೇಶ್ವರ, ರಾಘವ ಎಂಬ ಶಬ್ದಗಳು ಹೇರಳವಾಗಿ ಬರುತ್ತವೆ. ಅಲ್ಲವೆ ಷಟ್‌ಸ್ಥಲ ಸಿದ್ಧಾಂತದಲ್ಲಿ ಬ್ರಹ್ಮ, ವಿಷ್ಣು, ರುದ್ರ, ಇವರಿಗೆ ಕೆಲವು ನಿಶ್ಚಿತ ಸ್ಥಾನಗಳಿರುತ್ತವೆ. ಶಿವಶರಣರು ದೇವರೊಬ್ಬನೇ ಇದ್ದಾನೆ ಎಂದು ಪ್ರತಿಪಾದಿಸುವದರಿಂದ ತ್ರಿಮೂರ್ತಿಗಳ ಇಂಥ ಪರಸ್ಪರ ಕಲಹಗಳಿಗೆ ಸ್ಥಾನವು ಇರಲಾರದು.

ಗುಪ್ತ ಮಂಚಣ್ಣನಿಗೆ, ಮಂಚಣ್ಣ, ಮಂಚರಸ, ಧೂಪದ ಮಂಚಣ್ಣ ಎಂಬ ಹೆಸರುಗಳೂ ಕೂಡ ಇರುತ್ತವೆ.

---

## ವರದಾನಿ ಗುಡ್ಡಮ್ಮ

ವಿಜಾಪುರ ಪಟ್ಟಣದಿಂದ ಪಶ್ಚಿಮಕ್ಕೆ ೨೦ ಮೈಲುಗಳ ಮೇಲೆ ಜತ್ತಿ ಸಂಸ್ಥಾನದಲ್ಲಿ ಉಮರಾಣಿ ಎಂಬ ಗ್ರಾಮವಿದೆ. ಅಲ್ಲಿ ಅನಂತರಾಯನೆಂಬ ಶೀಲವಂತ ಅಕ್ಕಸಾಲಿಗನು ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಶಿರಸಮ್ಮನು. ಅವರಿಗೆ ಮಕ್ಕಳಿಲ್ಲದ್ದರಿಂದ ಅವರು ತಮ್ಮ ಗ್ರಾಮದಲ್ಲಿದ್ದ ದೇವಾಲಯಕ್ಕೆ ಹೋಗಿ ಅಲ್ಲಿದ್ದ ವೀರಮಲ್ಲಯ್ಯನಿಗೆ ಬೇಡಿಕೊಂಡು ಒಬ್ಬ ಹೆಣ್ಣು ಮಗುವನ್ನು ಪಡೆದರು. ಆಕೆಗೆ ಅವರು ಲಿಂಗಮ್ಮನೆಂಬ ಹೆಸರನ್ನಿಟ್ಟರು. ಉಭಯ ದಂಪತಿಗಳು ಶಿವಜ್ಞಾನಿಗಳಾಗಿ ಶೀಲದಿಂದ ನಡೆದು ಶೀಲವಂತರೆಂದೆನಿಸಿಕೊಂಡರು. ಅವರು ತಮ್ಮ ಮಗಳಿಗೆ ಶಿವಾನುಭವವನ್ನು ಅರುಹುತ್ತ ಅವಳನ್ನು ಅತ್ಯಂತ ಪ್ರಿತಿಯಿಂದ ಸಲುಹುವವರಾದರು.

ಈ ಕಾಲದಲ್ಲಿ ಬಹು ಜನ ಶಿವಶರಣರು ಈ ಭಾಗದಲ್ಲಿ ಉದಯವಾಗಿದ್ದರು. ರೇವಣಸಿದ್ಧೇಶ್ವರನಿದ್ದ ಮಂಗಳವಾಡ, ಹಾವಿನಹಾಳು ಕಲ್ಲಯ್ಯನ ಹಾವಿನಾಳು, ಬಸವೇಶ್ವರನ ಬಾಗವಾಡಿ, ಶಾಂತಯ್ಯನಿದ್ದ ಇಂಡಿ ಇವೇ ಮೊದಲಾದ ಗ್ರಾಮಗಳು ಈ ಕಡೆಗೆಯೇ

ಇರುತ್ತವೆ. ಬಸವೇಶ್ವರನು ಬಾಗೇವಾಡಿಯಲ್ಲಿ ಜನಿಸಿ ಕಪ್ಪಡಿ ಸಂಗಮೇಶ್ವರನಲ್ಲಿ ಕೆಲ ಕಾಲ ನಿಂತು, ಬಿಜ್ಜಳನಲ್ಲಿ ಒಬ್ಬ ಅಧಿಕಾರಿಯಾಗಿ ಮುಂದೆ ಅವನು ಮಂತ್ರಿ ಪದಾರೂಢನಾದನು. ಆಗ ಬಹುಜನ ಶಿವಶರಣರು ಶರಣರ ಮಾರ್ಗವನ್ನು ಅರಿಯಲು ಅವನಲ್ಲಿನೆರೆಯುವವರಾದರು. ಲಿಂಗಮ್ಮನು ಇಷ್ಟರಲ್ಲಿ ಶಿವಯೋಗಾಚರಣೆಯಲ್ಲಿ ವಿಶೇಷ ಪ್ರಗತಿಯನ್ನು ಹೊಂದಿದವಳಾಗಿದ್ದದರಿಂದ ಅವಳು ಬಸವೇಶ್ವರನ ಸನ್ನಿಧಿಯಲ್ಲಿ ಶಿವಾನುಭವವನ್ನು ಅರಿಯಬೇಕೆಂದು ಅಪೇಕ್ಷಿಸಿ ಕಲ್ಯಾಣಕ್ಕೆ ಹೊರಡಲು ಸಿದ್ಧಳಾದಳು. ಇದನ್ನು ತನ್ನ ಮಾತಾಪಿತೃಗಳಿಗೆ ತಿಳಿಸಿದರೆ ಅವರು ತನ್ನ ಮೇಲಿದ್ದ ಮೋಹಕ್ಕೋಸ್ಕರ ತನ್ನನ್ನು ಅಲ್ಲಿಗೆ ಹೋಗಗೊಡಲಿಕ್ಕಿಲ್ಲೆಂದು ಭಾವಿಸಿ ಅವಳು ಯಾರಿಗೂ ಏನೂ ತಿಳಿಸದೆ ಉಮರಾಣಿಯಿಂದ ಹೊರಟು ಕಲ್ಯಾಣಕ್ಕೆ ಬಂದಳು. ಮಗಳು ಎಲ್ಲಿಗೆ ಹೋಗಿದ್ದಾಳೆಂಬುದು ಅವರಿಗೆ ತಿಳಿಯದ್ದರಿಂದ ಅವರು ಅತ್ಯಂತ ದುಃಖದಿಂದ ಕೆಲವು ದಿನ ಕಳೆದರು. ಲಿಂಗಮ್ಮನು ಅವರಿಗೆ ಆದ ದುಃಖವನ್ನು ತನ್ನ ಆತ್ಮನಲ್ಲಿ ತಿಳಿದು ಅವಳು ಅನಂತರಾಯನ ಸ್ವಪ್ನದಲ್ಲಿ ಬಂದು ಅವನಿಗೆ—ನಾನು ಕಲ್ಯಾಣದಲ್ಲಿ ಶಿವಶರಣರ ಸನ್ನಿಧಿಯಲ್ಲಿದ್ದೇನೆ. ದುಃಖಿಸಬೇಡಿರಿ. ನಾನು ಒಂದು ವರ್ಷದ ಮೇಲೆ ನಿಮ್ಮಲ್ಲಿ ಬರುತ್ತೇನೆ. ಆ ವರೆಗೆ ನೀವು ವಚನಗಳನ್ನು ಹಾಡುತ್ತ ಆತ್ಮನಲ್ಲಿ ನೀರಿ ಎಚ್ಚರಾಗಿರಿ, ಎಂದು ಹೇಳಿ ಬಯಲಾದಳು.

ಆ ಮೇಲೆ ಲಿಂಗಮ್ಮನು ಕಲ್ಯಾಣದಲ್ಲಿ ಮಹಾದೇವಿ ಎಂಬ ಹೆಸರಿನ ಒಬ್ಬ ಅತ್ಯಂತ ದರಿದ್ರಳಾದವಳ ಮನೆಯಲ್ಲಿರಹತ್ತಿದಳು. ಲಿಂಗಮ್ಮನು ಶಿವಯೋಗವನ್ನು ಆಚರಿಸುತ್ತ ಪ್ರಸಾದಿ ಪ್ರಾಣಲಿಂಗಿ ಸ್ಥಳದವಳಾಗಿದ್ದಳು. ಅವಳ ಕ್ರಿಯೆಗಳು ಅರ್ಪಣ ಭಾವದಿಂದ ಕೂಡಿಕೊಂಡಿದ್ದರಿಂದ ಅವಳು ಪ್ರಸಾದಮಯವಾಗಿ ಯಾವಾಗಲೂ ಆಚರಿಸುವಳು. ಅವಳು ದಿನಾಲು ಬಸವರಾಜನ ಉದ್ಯಾನ ವನಕ್ಕೆ ಹೋಗಿ ಅಲ್ಲಿ ಲಿಂಗಾರ್ಚನೆಯು ಜಪಗಳನ್ನು ಮಾಡುತ್ತ ಶಿವಯೋಗದಲ್ಲಿರುವಳು. ಇದನ್ನು ಬಸವೇಶ್ವರನು ತಿಳಿದವನಾಗಿ ಅವನು ಒಂದು ದಿನ ತನ್ನ ಹೆಂಡತಿ ನೀಲಲೋಚನೆಯೊಂದಿಗೆ ಅವಳಿದ್ದಲ್ಲಿಗೆ ಹೋಗಿ ಅವಳನ್ನು ಕಂಡನು. ಆಗ ಅವಳು ತನ್ನ ಪ್ರಸಾದ ಪಾದೋದಕದ ಮತ್ತು ಲಿಂಗಾನುಸಂಧಾನದ ರೀತಿಗಳನ್ನು ಅರುಹುತ್ತ ಜಂಗಮವನ್ನು

ಹೇಗೆ ತೃಪ್ತಿ ಬಡಿಸುತ್ತೇನೆಂಬುದನ್ನು ತಿಳಿಸಿ ಹೇಳಿದಳು. ಅವಳ ಅಗಾಧವಾದ ಶಿವ ಯೋಗದ ಜ್ಞಾನಕ್ಕೆ ಬಸವೇಶ್ವರನು ಸೋಜಿಗ ಗೊಂಡು ತನ್ನ ಅಂತರಾತ್ಮನಲ್ಲಿ ಅವಳನ್ನು ನೋಡಲಾಗಿ ಅವಳು ಮಹಾ ಶಿವಶರಣೆಯು, ಅವಳು ತನ್ನ ಝೇಂಕಾರ ಶರಣನ ನೆನಹಿನಿಂದ ಜನಿಸಿದ ತಾಯಿಯು, ಇವಳು ತನ್ನ ಶಿವಯೋಗದ ಮಹತ್ವ ದಿಂದ ಸರ್ವಗಣಾಧೀಶ್ವರರನ್ನು ತೃಪ್ತಿಬಡಿಸುತ್ತಾಳೆ ಎಂಬುದನ್ನು ತಿಳಿದು ಅವಳಿಗೆ— ನೀನು ಇನ್ನುಮೇಲೆ 'ದಾನಮ್ಮ ಶರಣೆ' ಎಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಸಿದ್ಧಳಾಗು ಎಂದು ನುಡಿದನು. ಆ ಮೇಲೆ ಅವನು ಅವಳನ್ನು ತನ್ನ ಅನುಭವ ಮಂಟಪಕ್ಕೆ ಕರೆದೊಯ್ದು ಎಲ್ಲರ ಇದಿರಿಗೆ ಸನ್ಮಾನಿಸಿದನು. ಅಂದಿನಿಂದ ಲಿಂಗಮ್ಮನು 'ದಾನಮ್ಮ' ಎಂಬ ಹೆಸರಿನಿಂದ ಜನರಲ್ಲಿ ಪ್ರಸಿದ್ಧಳಾದಳು. ದಾನಮ್ಮನ ಹತ್ತಿರ ಎರಡನೆಯವರಿಗೆ ಕೊಡಲು ಏನೂ ಧನವಿರಲಿಲ್ಲ. ಆದರೆ ಅರ್ಪಿತವನ್ನರಿತು ಆಚರಿಸುವವಳಾದ್ದರಿಂದ ಅವಳಿಗೆ 'ದಾನಮ್ಮ' ಎಂಬ ಹೆಸರು ಪ್ರಾಪ್ತವಾಗಿರುತ್ತದೆ.

ಆ ಮೇಲೆ ದಾನಮ್ಮನು ಕಲ್ಯಾಣದಲ್ಲಿ ತನ್ನನ್ನು ಕಂಡ ಜನರ ಕಷ್ಟಗಳನ್ನು ನಿವಾರಣೆ ಮಾಡುತ್ತ ಕಾಲಕಳೆಯ ಹತ್ತಿದಳು. ಅಂಥ ಸಮಯದಲ್ಲಿ ಅವಳು ಅವರ ಸೇವೆ ಮಾಡುವಳು, ಚಿಂತಾತುರರಿಗೆ ಸಮಾಧಾನ ಹೇಳುವಳು. ಅವಳು ಒಂದು ದಿನ ಗೌರಮ್ಮ ಎಂಬ ಬಾಲೆಯು ಪಟ್ಟಣದ ಬೀದಿಗಳಲ್ಲಿ ಚಿಂತಾಕ್ರಾಂತಳಾಗಿ ತಿರುಗುತ್ತಿದ್ದದ್ದನ್ನು ಕಂಡಳು. ಅವಳು ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅವಳ ಸಮಾಚಾರವನ್ನು ಕೇಳಲಾಗಿ ಅವಳು—ನನ್ನ ಗಂಡನು ನನಗೆ ಹೇಳದೆ ಹೋಗಿ ಇಂದಿಗೆ ಮೂರು ವರ್ಷಗಳಾದವು. ಅವನಿಗೋಸ್ಕರ ಚಿಂತೆಯನ್ನು ಮಾಡುತ್ತಿದ್ದೇನೆ ಎಂದು ಹೇಳಿದಳು. ಆಗ ದಾನಮ್ಮನು ಅಂತರ್ಮುಖವಾಗಿ ನೋಡಿ ಅವಳಿಗೆ—ನಿನ್ನ ಚಿಂತೆಯು ತೀವ್ರವೇ ದೂರಾಗುವದು. ನಿನ್ನ ಗಂಡನು ಬರುತ್ತಿರುವದನ್ನು ನಾನು ಈಗ ನೋಡುತ್ತಾ ಇದ್ದೇನೆ. ಕಳವಳ ಪಡಬೇಡ, ಎಂದು ಹೇಳಿದ ಬಳಿಕ ಒಂದು ಗಳಿಗೆಯೊಳಗಾಗಿ ಅವನು ದಾನಮ್ಮನನ್ನು ಕೇಳುತ್ತ ಅವಳಿದ್ದಲ್ಲಿಗೆ ಬಂದನು. ಆಗ ಆ ಬಾಲೆಯು ಹರ್ಷಿತಳಾಗಿ ಅವನೊಡನೆ ತನ್ನ ಗ್ರಾಮಕ್ಕೆ

ಹೋದಳು. ದಾನಮ್ಮನು ವಾಸಮಾಡುತ್ತಿದ್ದ ಮನೆಯ ಯಜಮಾ
ನಿಯು ಅತ್ಯಂತ ಬಡವೆಯು. ಆದರೆ ದಾನಮ್ಮನ ಸನ್ನಿಧಿಯಿಂದ
ಅವಳು ಸ್ವಲ್ಪ ದಿವಸಗಳಲ್ಲಿಯೇ ಧನವಂತಳಾದಳು. ಇದು ದಾನ
ಮ್ಮನ ಸಾನಿಧ್ಯದ ಫಲವೆಂದು ತಿಳಿದು ಅವಳ ಪಾದವನ್ನು
ಹಿಡಿಯಲು ದಾನಮ್ಮನು ಅವಳಿಗೆ--ನೀನು ದಿನಾಲು ಲಿಂಗಪೂಜೆ
ಯನ್ನು ಮಾಡು, ಪ್ರಸಾದ ಭೋಗದಲ್ಲಿರು, ಎಂದು ಬೋಧಿಸಿದಳು.
ಹೀಗೆ ದಾನಮ್ಮನು ಕಲ್ಯಾಣ ಪಟ್ಟಣದಲ್ಲಿ ಶಿವಯೋಗಾಚರಣೆಯಲ್ಲಿ
ದ್ದುಕೊಂಡು ಒಂದು ವರ್ಷ ಕಾಲಕಳೆದಳು.

ಆ ಮೇಲೆ ಕಲ್ಯಾಣ ಪಟ್ಟಣದಲ್ಲಿ ಅನಾಹುತಗಳು ಒಂದೇ
ಸವನೆ ಸಂಭವಿಸ ಹತ್ತಿದವು. ಮಧುವರಸನೆಂಬ ಬ್ರಾಹ್ಮಣನು ಬಿಜ್ಜ
ಳನಲ್ಲಿ ಶ್ರೇಷ್ಠಾಧಿಕಾರವನ್ನು ವಹಿಸಿದವನಾಗಿದ್ದು ಅವನು ತನ್ನ ಮಗ
ಳನ್ನು ಸುವರ್ಣಗಾರನಾದ ಹರಳಯ್ಯನ ಮಗನಿಗೆ ಕೊಟ್ಟು ಲಗ್ನ
ಮಾಡಿದನು. ಉಭಯತರು ಹೀಗೆ ಆಚರಿಸಿದ್ದಕ್ಕೋಸ್ಕರ ಬಿಜ್ಜಳ ನೃಪನು
ಅವರನ್ನು ಹಿಂಸಿಸಿ ಕೊಲ್ಲಿಸಿದನು. ಶಿವಾನುಭವವು ಜಾತಿ ಭೇದ
ವನ್ನು ಎಣಿಸುವದಿಲ್ಲ. ಹೀಗಿದ್ದರೂ ಇವರನ್ನು ಕೊಲೆಮಾಡಿಸಿದ್ದ
ಕ್ಕೋಸ್ಕರ ಪಟ್ಟಣದಲ್ಲಿ ದಂಗೆಗಳೆದ್ದವು. ಶಿವಶರಣರೆಲ್ಲರು ಪಟ್ಟಣದಲ್ಲಿರ
ಬಾರದೆಂದು ತೊಲಗಿ ಹೋಗಹತ್ತಿದರು. ಬಸವೇಶ್ವರನು ಇಂಥ ಹಿಂ
ಸಾಪೂರಿತ ವಾದ ಪಟ್ಟಣದಲ್ಲಿರಬಾರದೆಂದು ತನ್ನ ಅಧಿಕಾರವನ್ನು ಚನ್ನ
ಬಸವೇಶ್ವರನಿಗೆ ಒಪ್ಪಿಸಿ ತನ್ನ ಹೆಂಡತಿ ನೀಲಾಂಬಿಕೆ ಯೊಡನೆ ಕಪ್ಪಡಿ
ಸಂಗಮನಾಥನಲ್ಲಿಗೆ ಹೋಗಿ ಅಲ್ಲಿಯೇ ಐಕ್ಯವಾದನು. ನೀಲಾಂಬಿ
ಕೆಯು ಸಂಗಮಕ್ಕೆ ಸಮೀಪವಿರುವ ತಂಗಡಿಗೆ ಎಂಬ ಗ್ರಾಮದಲ್ಲಿ
ತನ್ನ ಲಿಂಗದಲ್ಲಿ ಬಯಲಾದಳು. ಈ ಸ್ಥಿತಿಯುಂಟಾಗಲು ದಾನ
ಮ್ಮನು ತನ್ನ ತಂದೆ ತಾಯಿಗಳಿಗೆ ವಚನ ಕೊಟ್ಟಂತೆ ಅವಳು ಪಟ್ಟ
ಣವನ್ನು ಬಿಟ್ಟು ತನ್ನ ಗ್ರಾಮವಾದ ಉಮರಾಣಿಗೆ ಬಂದು ತನ್ನ
ಮಾತಾ ಪಿತೃಗಳನ್ನು ಕಂಡಳು. ಅವರು ತಮ್ಮ ಪ್ರೀತಿಯ ಮಗಳು
ತಿರುಗಿ ಬಂದಳೆಂದು ಅವಳನ್ನು ಅತ್ಯಂತ ಆದರಿಸುವವರಾದರು. ಆ
ಮೇಲೆ ಅವಳು ಅಲ್ಲಿಯೇ ತನ್ನ ಶಿವಯೋಗಾಚರಣೆಯಲ್ಲಿ ಇರ
ಹತ್ತಿದಳು.

ಶಿವಾನುಭವದ ಪ್ರಕಾರ ಭಕ್ತರು ಸ್ತ್ರೀಯರಿರಲಿ ಅಥವಾ ಪುರುಷರಿರಲಿ, ಅವರು ಲಗ್ನವಾಗುವದು ಅಥವಾ ಬಿಡುವದು ಅವರ ಇಚ್ಛೆಯ ಮೇಲೆ ಇರುತ್ತದೆ. ಲಗ್ನವಾದರೆ ಕಡಿಮೆಯಲ್ಲ. ಲಗ್ನವಾಗದೆ ಇದ್ದರೆ ಹೆಚ್ಚಲ್ಲ. ಲಗ್ನವಾದ ಬಸವೇಶ್ವರ, ರೇವಣಸಿದ್ಧೇಶ್ವರರ ಯೋಗ್ಯತೆಯು ಕಡಿಮೆಯದಲ್ಲ. ಮಹಾದೇವಿಯಕ್ಕ, ಬೊಂತಾದೇವಿಯರ ಮಹತ್ವವು ಅವರು ಲಗ್ನವಾಗದೆ ಉಳಿದದ್ದಕ್ಕಲ್ಲ. ಅವರು ತಮ್ಮಲ್ಲಿದ್ದ ಶಿವಾನುಭವದ ಮೂಲಕ ಉಚ್ಚಸ್ಥಾನವನ್ನು ಹೊಂದಿದರು. ಲಗ್ನವಾದ ದುಗ್ಗಳೆ ನೀಲಾಂಬಿಕೆಯರು ಶಿವಶರಣೆಯರಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದಾರೆ. ಆದ್ದರಿಂದ ದಾನಮ್ಮನು ಸ್ವಗ್ರಾಮಕ್ಕೆ ತಿರುಗಿ ಬಂದ ಬಳಿಕ ಅವಳು ಲಗ್ನವಾಗಬೇಕೆಂದು ಬಯಸಿ ತನ್ನ ಗ್ರಾಮದಿಂದ ಉತ್ತರಕ್ಕೆ ೧೨ ಮೈಲು ದೂರವಿರುವ ಸಂಕ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದ ಸಂಗಮನಾಥನೆಂಬ ಶಿವಶರಣನೊಡನೆ ಲಗ್ನವಾದಳು.

ಉಭಯ ದಂಪತಿಗಳು ಕೇವಲ ಶಿವಾನುಭವಿಗಳು. ಅವರಲ್ಲಿ ದಾನಮ್ಮನು ಪ್ರಾಣಲಿಂಗಾನುಸಂಧಾನದಲ್ಲಿರುವವಳಾಗಿದ್ದಳು. ಆದ್ದರಿಂದ ಅವಳ ಆಚರಣೆಗೆ ಅನುಕೂಲವಾಗಬೇಕೆಂದು ಸಂಕ ಗ್ರಾಮದ ಪಶ್ಚಿಮಕ್ಕೆ ೮ ಮೈಲುಗಳ ಮೇಲಿರುವ ಗುಡ್ಡಾಪುರ ಎಂಬ ಗ್ರಾಮಕ್ಕೆ ಬಂದು ಉಭಯತರು ವಾಸ ಮಾಡಹತ್ತಿದರು. ಈ ಗ್ರಾಮವಿದ್ದ ಪ್ರದೇಶವು ಗುಡ್ಡಗಾಡು. ಒಂದು ಗುಡ್ಡದ ಸಾಲಿನಲ್ಲಿ ಒಂದು ದಿನ್ನೆಯ ಮೇಲೆ ಊರಿಗೆ ಸಮೀಪವಾಗಿ ಸೋಮೇಶ್ವರನ ಪ್ರಸಿದ್ಧ ದೇವಾಲಯವಿದ್ದು ಇದರ ನೆರೆಯಲ್ಲಿ ದಾನಮ್ಮನು ತನ್ನ ಲಿಂಗಾನುಸಂಧಾನದ ಕಾರ್ಯಗಳಲ್ಲಿ ತೊಡಗುವವಳಾದಳು.

ಇತ್ತ ಕಲ್ಯಾಣದಲ್ಲಿ ಅನಾಹುತಗಳು ಹೆಚ್ಚುತ್ತಲೇ ನಡೆದವು. ಬಿಜ್ಜಳನು ನಿಷ್ಕಾರಣವಾಗಿ ಈರ್ವರು ಶಿವಶರಣರನ್ನು ಕೊಂದಿದ್ದರಿಂದ ಅವನೂ ಕೊಲೆಗೀಡಾದನು. ದೇಶದಲ್ಲೆಲ್ಲ ಕಾಳಗಗಳು ಸಂಭವಿಸಹತ್ತಿದವು. ಶಿವಶರಣರು ರಾಜನ ಸೈನ್ಯವನ್ನಿದಿರಿಸಿ ಕಾದಾಡುತ್ತ ಉಳಿವೆಯ ಮಹಾಮನೆಯನ್ನು ಪ್ರವೇಶಿಸಿ ಅಲ್ಲಿಯೇ ಐಕ್ಯವಾದರು. ಆ ಮೇಲೆ ಪರವಾದಿಗಳು ಮತ್ತಿಷ್ಟು ಉಗ್ರರೀತಿಯಿಂದ ಶಿವಶರಣರ ಮೇಲೇರಿ ಹೋಗಿ ಅವರನ್ನು ಹಿಂಸಿಸ ಹತ್ತಿದರು. ಶಿವಾಲಯಗಳನ್ನು ಭ್ರಷ್ಟಗೊಳಿಸ ಹತ್ತಿದರು. ಆದರೆ ಅವರ ಇಂಥ ಬಲಾತ್ಕಾರ

ವರ್ತನೆಯು ಶಿವಶರಣರು ದೇಶದಲ್ಲಿ ಹೆಚ್ಚು ಹೆಚ್ಚಾಗಿ ಉದ್ಭವಿಸು ವಂತೆ ಮಾಡಿತು. ಅವರು ವಚನ ಶಾಸ್ತ್ರದ ಮೂಲಕ ಧರ್ಮಪ್ರಸಾರ ಕಾರ್ಯವನ್ನು ಭರದಿಂದ ಸಾಗಿಸಹತ್ತಿದರು. ಆಗ ಅವರು ಅನೇಕ ಹಿಂಸೆಗಳಿಗೆ ಒಳಗಾಗಬೇಕಾಯಿತು. ಅವರಲ್ಲಿ ಕೆಲವರು ಶಸ್ತ್ರವನ್ನೆತ್ತಿ ತಮ್ಮನ್ನು ರಕ್ಷಿಸಿಕೊಳ್ಳಬೇಕಾಯಿತು. ಯುದ್ಧಗಳು ಸಹ ಸಂಭವಿಸಿ ದವು. ಇಂಥ ಸಾಹಸದ ಕೃತ್ಯಗಳನ್ನು ಮಾಡಿದವರಲ್ಲಿ ದಾನ ಮ್ಮನು ಮುಖ್ಯಳಾಗಿದ್ದಾಳೆ.

ದೇಶದಲ್ಲಿ ಈ ಸ್ಥಿತಿಯಾಗಲು ದಾನಮ್ಮನೂ ಆಕೆಯ ಪತಿಯಾದ ಸಂಗಮನಾಥನೂ ಗುಡ್ಡಾಪುರವನ್ನು ಬಿಟ್ಟು ಅತ್ಯಂತ ಧೈರ್ಯ ದಿಂದ ಶಿವಾನುಭವದ ತತ್ವಗಳನ್ನು ದೇಶದಲ್ಲಿ ಪ್ರಸಾರಮಾಡುವ ಕಾರ್ಯವನ್ನು ಕೈಕೊಂಡರು. ಅವರು ಮೊದಲು ಶ್ರೀಶೈಲಾಭಿಮುಖ ವಾಗಿ ಹೊರಟರು. ಇತ್ತಕಡೆಗೆ ಮಹಾದೇವಿಯಕ್ಕ, ಅಲ್ಲಮ ಪ್ರಭು, ರುದ್ರಮುನಿ ಮೊದಲಾದವರು ಇಷ್ಟರಲ್ಲಿಯೇ ಗವಿಹಿದ್ದರು. ಅಲ್ಲಿ ಶಿವಾನುಭವದ ವಿರೋಧಿಗಳ ಕೂಡ ಹೋರಾಟಗಳೂ ನಡೆದಿದ್ದವು. ಆದ್ದರಿಂದ ಅತ್ತಕಡೆಗೆ ಅವರು ಹೊರಟು ಮೊದಲು ಆದವಾನಿ ಗ್ರಾಮಕ್ಕೆ ಬಂದರು.

ಅವರು ಆದವಾನಿಗೆ ಬಂದ ಬಳಿಕ ಅಲ್ಲಿಯ ಜನರು ದಾನಮ್ಮನ ಮಹತ್ವವನ್ನು ತಿಳಿದವರಾಗಿ ಅವಳೊಡನೆ ಅತ್ಯಂತ ಭಕ್ತಿಯಿಂದ ಆಚರಿಸಹತ್ತಿದರು. ಅವರಲ್ಲಿ ನೆಯ್ಗೆಯ ಕಾಯಕವನ್ನು ಮಾಡುತ್ತಿದ್ದ ಸಾವಿರಾರು ಜನ ದೇವಾಂಗರಿದ್ದರು. ಅವರು ಅವಳಲ್ಲಿ ಅತ್ಯಂತ ಭಕ್ತಿ ವಿಶ್ವಾಸವನ್ನು ತಾಳಿದವರಾದರು. ಅವರು ಕೆಲವೊಂದು ಹಬ್ಬದ ದಿನ ತಮ್ಮಲ್ಲಿ ಮುತ್ತೈದಿತನಕ್ಕೆ ರಬೇಕೆಂದು ಸತಿ ಪತಿಗಳೀರ್ವರಿಗೆ ಬಿನ್ನಹಮಾಡಿಕೊಂಡರು. ಅದಕ್ಕೆ ಅವರು ಒಪ್ಪಿಕೊಂಡರು. ಆ ದಿವಸ ಅವರಲ್ಲೊಬ್ಬನು ಅವರನ್ನು ಕಂಡು ಸಾಷ್ಟಾಂಗವೆರಗಿ ತನ್ನ ಗೃಹಕ್ಕೆ ಕರೆದುಕೊಂಡು ಹೋಗಿ ತನ್ನ ಕಾರ್ಯವನ್ನು ನೆರವೇರಿಸಿಕೊಂಡನು. ಆ ಮೇಲೆ ಅವನು ನೆರೆಮನೆಯವನಲ್ಲಿಗೆ ಹೋಗಿ ಈ ಉಭಯತರು ತನ್ನ ಮನೆಗೆ ಬಂದಿದ್ದನ್ನು ತಿಳಿಸಲು ಆವನು ಅದೇ ಕಾಲಕ್ಕೆ ಅವರೇ ತನ್ನ ಮನೆಗೆ ಬಂದಿದ್ದನ್ನು ಹೇಳಿದನು. ಆಗ ಅವರು ಆಶ್ಚರ್ಯ

ಬಿಟ್ಟು ಉಳಿದ ದೇವಾಂಗರ ಮನೆಗಳಿಗೆ ಹೋಗಿ ಕೇಳಲು ದಾನಮ್ಮನು ತನ್ನ ಪತಿಯೊಡನೆ ಅದೇಕಾಲಕ್ಕೆ ತಮ್ಮ ಮನೆಗಳಿಗೂ ಬಂದದ್ದನ್ನು ಹೇಳಿದರು. ಆಗ ಇದು ದಾನಮ್ಮನ ಮಹತ್ವವೆಂದು ಅವರಿಗೆ ತಿಳಿದು ಬಂದು ಭಕ್ತರು ನೆನಿಸಿದಾಗ ಶರಣರು ಅವರಿಗೆ ಸನ್ನಿಹಿತರಾಗುವ ರೆಂಬ ತತ್ವವನ್ನು ಅರಿತವರಾಗಿ ಅವರೆಲ್ಲರೂ ದಾನಮ್ಮನ ಕಡೆಯಿಂದ ವೀರಶೈವ ದೀಕ್ಷೆಯನ್ನು ಹೊಂದಿದವರಾದರು. ಅದರಂತೆಯೇ ಪಟ್ಟಣದಲ್ಲಿಯು ಬಹುಜನರೂ ಅವಳಿಂದ ಲಿಂಗಧಾರಣವನ್ನು ಹೊಂದಿದರು.

ಶಿವಾನುಭವದ ಆಚರಣೆಗೆ ತಡೆಯುಂಟಾಗಲು ಅದನ್ನು ನಿವಾರಿಸುವದು ಶಿವಾನುಭವಿಯ ಮೊದಲನೆಯ ಕರ್ತವ್ಯವಾಗಿರುತ್ತದೆ. ಇದರಲ್ಲಿ ಯುದ್ಧ ಮಾಡುವ ಪ್ರಸಂಗಗಳು ಉಂಟಾದರೂ ಅದಕ್ಕೆ ಅವನು ಹಿಂಜರಿಯಕೂಡದು. ಈ ಕಾಲದಲ್ಲಿ ವರದಾನಿಯಮ್ಮನು ಪರವಾದಿಗಳ ಕೂಡ ಹೋರಾಡುವ ಪ್ರಸಂಗವು ಬಂದೊದಗಿತು.

ಆದವಾನಿಯಿಂದ ಪೂರ್ವಕ್ಕೆ ೮೦ ಮೈಲುಗಳ ಮೇಲೆ ಅಲಂಪುರವೆಂಬ ಗ್ರಾಮವಿದೆ. ಅದು ಈಗ ರಾಯಚೂರ ಜಿಲ್ಲೆಯಲ್ಲಿ ತುಂಗಭದ್ರಾ ತೀರದಲ್ಲಿ ಒಂದು ತಾಲೂಕು ಸ್ಥಳವಾಗಿದೆ. ಅದು ಬಹು ಪವಿತ್ರವಾದ ಸ್ಥಳವೆಂದು ಬಹು ಪುರಾತನ ಕಾಲದಿಂದಲೂ ಪ್ರಸಿದ್ಧವಾಗಿರುತ್ತದೆ. ಬ್ರಹ್ಮದೇವನು ಸ್ಥಾಪಿಸಿದ ಬಾಲಬ್ರಹ್ಮೇಶನೆಂಬ ಲಿಂಗವು ಅಲ್ಲಿ ಈಗಲೂ ಇದೆ. (೧) ಈ ಪಟ್ಟಣವು ಶ್ರೀಶೈಲದ ನೆರೆಯಲ್ಲಿದ್ದು ಅದು ಅದರ ಪಶ್ಚಿಮದ್ವಾರವೆಂದು ತಿಳಿಯಲ್ಪಟ್ಟಿದೆ. ಹೀಗಿರಲು ಅಲ್ಲಿದ್ದ ಪರವಾದಿಗಳು ದೇವಾಲಯದಲ್ಲಿದ್ದ ಶಿವಲಿಂಗವನ್ನು ಕಿತ್ತಿ ತೆಗೆದು ಅದನ್ನು ಹೊಳೆಯಲ್ಲಿ ಒಗೆದು ಅದರ ಸ್ಥಳದಲ್ಲಿ ನಾರಾಯಣನ ಮೂರ್ತಿಯನ್ನು ಸ್ಥಾಪಿಸಿದರು. ಹೀಗಾಗಲು, ದೇವಾಲಯದ ಪೂಜಾರಿಯಾದ ವೀರಮಾಚಯ್ಯನ ಕನಸಿನಲ್ಲಿ ಬಾಲ ಬ್ರಹ್ಮೇಶನು ಬಂದು ಅವನಿಗೆ—ನೀನು ಈಗ ಶಿವಶರಣೆಯಾದ ದಾನಮ್ಮನ ಕಡೆಗೆ ಹೋಗಿ

---

**ಟೀಪು:—(೧) ಪ್ರಬುದ್ಧ ಕರ್ನಾಟಕ ಸಂಪುಟ ೨೫ ಸಂಚಿಕೆ ೨ ಪುಟ ೨೫ (೧೯೪೩). ಪಂ|| ದೇಸಾಯಿ ಪಾಂಡುರಂಗರಾಯರು ಈ ಸ್ಥಳವನ್ನು ಸಂದರ್ಶಿಸಿ ಬರೆದ ಲೇಖ.**

ನಡೆದ ಸಂಗತಿಗಳನ್ನು ನಿವೇದಿಸಿದರೆ ಅವಳು ತಕ್ಕ ಪ್ರತೀಕಾರ ಮಾಡುವಳು ಎಂದು ಹೇಳಿದನು. ಅಷ್ಟರಲ್ಲಿ ದಾನಮ್ಮನ ಕೀರ್ತಿಯು ಎಲ್ಲ ಕಡೆಗೂ ಪಸರಿಸಿತ್ತು. ಆಗ ಪೂಜಾರಿಯು ಅವಳಿದ್ದ ಸ್ಥಳಕ್ಕೆ ಹೋಗಿ ನಡೆದ ಸಂಗತಿಗಳನ್ನು ಅವಳಿಗೆ ತಿಳಿಸಿ ಹೇಳಿದನು. ಅದನ್ನು ಕೇಳಿ ವರದಾನಿಯು ಅತ್ಯಂತ ಕ್ರುದ್ಧಳಾಗಿ ಪುನಃ ಶಿವಲಿಂಗವನ್ನು ಸ್ಥಾಪಿಸುವದೇ ತನ್ನ ಶಿವಾನುಭವದ ನಡೆ ಎಂದು ಭಾವಿಸಿ ಆದವಾನಿಯಲ್ಲಿದ್ದ ಭಕ್ತ ಸಮೂಹಕ್ಕೆ—ನೀವೆಲ್ಲರೂ ಈ ಕ್ಷಣದಲ್ಲಿ ನನ್ನೊಡನೆ ಅಲಂಪುರಕ್ಕೆ ಬಂದು ಭವಿಜನರೊಡನೆ ಯುದ್ಧವನ್ನು ಹೂಡಿ ಬ್ರಹ್ಮೇಶ ಲಿಂಗವನ್ನು ಮರಳಿ ಸ್ಥಾಪಿಸಬೇಕೆಂದು ನಿವೇದಿಸಿದಳು. ಕೂಡಲೆ ಭಕ್ತ ಜನರು ಅದಕ್ಕೆ ಒಪ್ಪಿ, ಖಡ್ಗ, ತೋಮರ, ಪರಶು, ಚಕ್ರ, ಧನು ಶರಗಳಿಂದ ಸಜ್ಜಿತರಾಗಿ ಅಲಂಪುರದ ಮಾರ್ಗವನ್ನು ಹಿಡಿದರು. ಆಗ ವೀರ ಕಹಳೆಗಳೂ ಭೇರಿನಿಸ್ಸಾಳಗಳೂ ಮೊರೆಯುಹತ್ತಿದವು. ವರದಾನಿಯಮ್ಮನು ರಥಾರೂಢಳಾಗಿ ತನ್ನ ಸೇನೆಯನ್ನು ನಡಿಸುತ್ತ ಅಲಂಪುರದ ಹೊರವಳಯದಲ್ಲಿ ಬಂದಿಳಿದಳು. ಪರವಾದಿಗಳೂ ಕೂಡ ಪ್ರಬಲ ಸೇನೆಯನ್ನೊಡಗೊಂಡು ಅವಳನ್ನು ಇದಿರಿಸಿದರು. ಆಗ ತುಮುಲ ಯುದ್ಧವೆಸಗಿತು. ಆದರೆ ಭಕ್ತ ಸಮೂಹದ ಹೊಡೆತಕ್ಕೆ ಪರವಾದಿಗಳು ಕಂಗೆಟ್ಟು ಓಡಿಹೋದರು. ಆಗ ವರದಾನಿಯಮ್ಮನು ಬಾಲ ಬ್ರಹ್ಮೇಶನನ್ನು ಚೆಲ್ಲಿಕೊಟ್ಟ ಸ್ಥಳಕ್ಕೆ ಹೋಗಿ ಅಲ್ಲಿದ್ದ ಮೂರ್ತಿಯನ್ನು ಎತ್ತಿ ತೆಗೆದು ಅತ್ಯಂತ ವೈಭವದಿಂದ ಅದನ್ನು ದೇವಾಲಯಕ್ಕೆ ತಂದು ಅದರ ಗರ್ಭಗುಡಿಯನ್ನು ಪ್ರವೇಶ ಮಾಡಿದ ಕೂಡಲೆ ಅಲ್ಲಿದ್ದ ನಾರಾಯಣ ಮೂರ್ತಿಯು ತಾನಾಗಿಯೇ ಭಗ್ನವಾಗಿ ಕೆಳಕ್ಕೆ ಬಿದ್ದಿತು. ಆ ಮೇಲೆ ಅದರ ಸ್ಥಳದಲ್ಲಿ ವರದಾನಿಯಮ್ಮನು ಬಾಲಬ್ರಹ್ಮೇಶನನ್ನು ವಿಧಾನ ಪೂರ್ವಕವಾಗಿ ಸ್ಥಾಪಿಸಿದಳು. ಆಗ ದಿಕ್ಕು ದಿಕ್ಕುಗಳಲ್ಲಿ ಜಯಘೋಷಗಳೂ ವಾದ್ಯಗಳೂ ಭೋರ್ಗರೆಯಹತ್ತಿದವು. ನೆರೆದ ಜನರು ವರದಾನಿಯಮ್ಮನ ಅತುಲವಾದ ಶೌರ್ಯ ಧೈರ್ಯಗಳನ್ನು ಹೊಗಳಿ ಇವಳು ಶ್ರೇಷ್ಠ ಶರಣೆ ಎಂದು ಕೊಂಡಾಡಹತ್ತಿದರು. ಪಟ್ಟಣದಲ್ಲಿ ಬಹು ಜನರು ಅವಳಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ಹೀಗೆ ವರದಾನಿಯಮ್ಮನು ಈಗಿನ ಬಳ್ಳಾರಿ ಮತ್ತು ರಾಯಚೂರ ಜಿಲ್ಲೆಗಳ ಪೂರ್ವ ಭಾಗಗಳಿಂದ ಶ್ರೀಶೈಲ ಪರ್ವತದ ವರೆಗೂ ವೀರಶೈವ ಧರ್ಮದ ಉಜ್ವಲ ಕೀರ್ತಿಯನ್ನು ಬೆಳಗಿದಳು.

ಆದರೆ ವರದಾನಿಯಮ್ಮನು ಅಲಂಪುರದಲ್ಲಿ ಬಹಳ ದಿವಸಗಳಿರಲಿಲ್ಲ. ಅವಳು ಶಿವಾನುಭವ ಪ್ರಸಾರ ಕಾರ್ಯ ಮಾಡುತ್ತ ದಕ್ಷಿಣ ದೇಶಗಳಿಗೆ ಹೊರಟಳು. ಅವಳು ಮೊದಲು ಮೈಸೂರು ದೇಶದ ದಕ್ಷಿಣ ಭಾಗದಲ್ಲಿ ಬಂದು ನಿಂತಳು.

ಈ ಕಾಲದಲ್ಲಿ ಉತ್ತರ ಕರ್ನಾಟಕದ ಮಧ್ಯ ಪ್ರದೇಶದಲ್ಲಿರುವ ಬಾಗೇವಾಡಿ, ಹಿಪ್ಪರಗಿ, ಮುದನೂರು, ಸೊನ್ನಲಿಗೆ, ಮಂಗಳವಾಡ ಈ ಗ್ರಾಮಗಳಿರುವ ಭಾಗಗಳಲ್ಲಿ ಬಸವೇಶ್ವರ, ಸಿದ್ಧರಾಮೇಶ್ವರ, ಮಡಿವಾಳ ಮಾಚಿದೇವ, ದೇವರದಾಸಿಮಯ್ಯ, ರೇವಣಸಿದ್ಧೇಶ್ವರ ಮೊದಲಾದ ಮಹತ್ಪ್ರಿಕರಾದ ಶಿವಶರಣರು ಬಹುಮುಖವಾಗಿ ವೀರಶೈವ ಧರ್ಮವನ್ನು ವಿಸ್ತರಿಸಿದ್ದರು. ಪಶ್ಚಿಮ ಪ್ರಾಂತದಲ್ಲಿ ಬನವಸೆ, ಬಳ್ಳಿಗಾವಿಗಳಲ್ಲಿದ್ದ ಪ್ರದೇಶದಲ್ಲಿ ಅಲ್ಲಮಪ್ರಭು, ಗೊಗ್ಗವ್ವೆ, ಅನುಮಿಷ, ಸತ್ಯಕ್ಕ,ಮಹಾದೇವಿಯಕ್ಕ ಮೊದಲಾದ ಶಿವಶರಣ-ಶರಣಿಯರು ಉದಯವಾಗಿದ್ದರು. ಶ್ರೀಶೈಲ ಭಾಗದಲ್ಲಿ ಪಂಡಿತಾರಾಧ್ಯ, ಮುಕ್ತಿಮುನಿ, ಸಕಳೇಶ ಮಾದರಸ ಮೊದಲಾದವರೂ ಚೋಳ ಮಂಡಲದಲ್ಲಿ ಚನ್ನಯ್ಯ, ಮೆರೆಮಿಂಡದೇವ, ಶಿವಪ್ರಿಯನಾಚಿ ಮೊದಲಾದವರೂ ಪ್ರಸಿದ್ಧಿಗೆ ಬಂದಿದ್ದರು. ಆದರೆ ಮೈಸೂರು ದೇಶದ ದಕ್ಷಿಣದಲ್ಲಿ ರೇವಣಸಿದ್ಧೇಶ್ವರನ ತರುವಾಯ ಯಾರೂ ವೀರಶೈವ ಧರ್ಮ ಪ್ರಸಾರ ಮಾಡಿರಲಿಲ್ಲ. ಆದ್ದರಿಂದ ದಾನಮ್ಮನು ತನ್ನ ಪತಿಯೊಡನೆ ಇತ್ತ ಕಡೆಗೆ ಹೊರಟು ಕಪಿಲಾ ಕಾವೇರಿ ಸಂಗಮ ಸ್ಥಳದಲ್ಲಿ ಬಂದು ನಿಂತಳು.

ದಾನಮ್ಮನು ಅಲ್ಲಿಗೆ ಬರುವಷ್ಟರಲ್ಲಿ ಅವಳು ಆ ವರೆಗೆ ಮಾಡಿದ ಸಾಹಸದ ಕೃತ್ಯಗಳು ಜನರ ತಿಳವಳಿಕೆಗೆ ಬಂದಿದ್ದರಿಂದ ಅವಳು ಅಲ್ಲಿಗೆ ಬಂದ ಸ್ವಲ್ಪ ದಿವಸಗಳಲ್ಲಿ ಅಸಂಖ್ಯ ಜನರು ಅವಳನ್ನು ಕಾಣಲಿಕ್ಕೆ ಬರಹತ್ತಿದರು. ಕುರುಡ, ಕುಂಟ, ಹೆಳವರು ಅವಳ ಸ್ಪರ್ಶನದಿಂದ ತಮ್ಮ ನ್ಯೂನತೆಗಳನ್ನು ಹೋಗಲಾಡಿಸಿಕೊಳ್ಳಹತ್ತಿದರು. ಇದು ಅವಳಲ್ಲಿ ನೆಲೆಗೊಂಡಿದ್ದ ಲಿಂಗಾನುಭವದ ಪರಿಣಾಮವಾಗಿತ್ತು.ಒಂದು ದಿನ ಅಲ್ಲಿಯ ದೇವಾಲಯದ ಪೂಜಾರಿಗಳು ಅವಳಿಗೆ ಬಿನ್ನವಿಸಿಕೊಳ್ಳಲಾಗಿ ಅವಳು ಅಲ್ಲಿ ಕೋಟಿ ಲಿಂಗಗಳನ್ನು ಸ್ಥಾಪಿಸಿದಳು. ಮುಂದೆ ಮಲೆಯಾಳ, ಕೊಚೀನ ಸೀಮೆಯಿಂದಲೂ ಬಹುಜನರು ಅಲ್ಲಿಗೆ ಬಂದು ಅವಳಿಂದ ಪುನೀತರಾ

ದರು. ಅಲ್ಲಿಯ ದೇವಾಲಯದ ಪೂಜಾರಿಗಳೂ ಸುತ್ತಲಿನ ಜನರೂ ಅವಳ ಸಾನ್ನಿಧ್ಯದ ಫಲವಾಗಿ ಶಿವಧರ್ಮದಂತೆ ಆಚರಿಸಹತ್ತಿದರು. ಬಹು ಜನರು ವೀರಶೈವ ದೀಕ್ಷೆಯನ್ನು ಹೊಂದಿದರು. ಹೀಗೆ ಅವಳು ವೀರಶೈವ ಧರ್ಮ ಪ್ರಸಾರ ಕಾರ್ಯ ಮಾಡುತ್ತ ಅಲ್ಲಿ ಒಂದುವರೆ ವರುಷ ಕಾಲ ಕಳೆದಳು. ಈ ಕಾಲದಲ್ಲಿ ಬೇಡಿದವರಿಗೆ ದಾನಮ್ಮನು ಇಷ್ಟಾರ್ಥವನ್ನು ಕೊಡುತ್ತಿದ್ದುದರಿಂದ ಅವಳು 'ವರದಾನಿಯಮ್ಮ' ಎಂಬ ಹೆಸರಿನಿಂದ ಪ್ರಸಿದ್ಧಳಾದಳು.

ಮುಂದೆ ವರದಾನಿಯಮ್ಮನು ತನ್ನ ಪತಿಯೊಡನೆ ರಾಮೇಶ್ವರ ಕ್ಷೇತ್ರಕ್ಕೆ ತೆರಳಿದಳು. ಅಲ್ಲಿ ಅವಳು ಇರುವಾಗ ಶ್ರೀ ಬಸವೇಶ್ವರನ ದೇವಾಲಯವನ್ನು ಈ ಕ್ಷೇತ್ರಕ್ಕೆ ಸಮೀಪವಾಗಿ ಕಟ್ಟಿಸಿದಳು. ಅವಳು ಬಸವೇಶ್ವರನ ಕೇವಲ ಭಕ್ತಳು, ಅಸಂಖ್ಯ ಜನರು ಕ್ಷೇತ್ರಕ್ಕೆ ಬರುತ್ತಿರುವದರಿಂದ ಬಸವೇಶ್ವರನಾರೆಂಬುದು ಅವರಿಗೆ ತಿಳಿಯಬೇಕೆಂದು ಅವಳು ಈ ವ್ಯವಸ್ಥೆಯನ್ನು ಮಾಡಿದಳೆಂಬುದು ಸ್ಪಷ್ಟವದೆ. ಈ ದೇವಾಲಯವನ್ನು ಕಟ್ಟುವ ಕಾರ್ಯ ಮುಗಿಯುವ ವರೆಗೆ ಅವಳು ಈ ಕ್ಷೇತ್ರದಲ್ಲಿದ್ದು ಮುಂದೆ ಅವಳು ಚೋಳರಾಜನ ರಾಜಧಾನಿಯಾದ ಕಾಂಚೀ ನಗರಕ್ಕೆ ಬಂದಳು.

ಈ ಕಾಲದಲ್ಲಿ ೧೧೭೨ರಿಂದ ೧೧೮೭ರ ವರೆಗೆ ಅರಸನಾಗಿದ್ದ ೨ನೇ ರಾಜಾಧಿರಾಜನೆಂಬ ಹೆಸರಿನ ಚೋಳರಾಜನು ಈ ಪಟ್ಟಣದಲ್ಲಿ ಆಳುತ್ತಿದ್ದನು. ಆದರೆ ಈ ಕಾಲದಲ್ಲಿ ಮೊದಲಿನಂತೆ ಶೈವಧರ್ಮದ ಪ್ರಾಬಲ್ಯವು ಇಲ್ಲಿರಲಿಲ್ಲ. ವಿಶಿಷ್ಟಾದ್ವೈತ ಮತದ ಪ್ರಸಾರದ ಮೂಲಕ ವಿಷ್ಣುಧರ್ಮವು ಇಲ್ಲಿ ಪ್ರಬಲವಾಗಿತ್ತು. ವರದಾನಿಯಮ್ಮನು ಇಲ್ಲಿಗೆ ಬಂದ ಬಳಿಕ ಅವಳು ಅಲ್ಲಿಯ ಪ್ರಸಿದ್ಧವಾದ ವಿಷ್ಣು ದೇವಾಲಯವನ್ನು ಸಂದರ್ಶಿಸಲು ಹೋದಳು. ಆದರೆ ದ್ವಾರಪಾಲಕರು ಅವಳನ್ನು ದ್ವಾರದಲ್ಲಿ ತಡೆಯಲು ಅವಳು ಉಪಾಯದಿಂದ ಒಳಗೆ ಗರ್ಭಗುಡಿಯನ್ನು ಪ್ರವೇಶಿಸಲು, ಒಳಗಿದ್ದ ಮೂರ್ತಿಯು ತನ್ನ ಸ್ಥಾನದಿಂದ ಎದ್ದು ಅವಳಿಗೆ ನಮಸ್ಕರಿಸಲು ಆ ಮೂರ್ತಿಯ ತಲೆಯ ಮೇಲೆ ತನ್ನ ಕೈಗಳನ್ನು ಇಡಲು ಅಲ್ಲಿ ಒಂದು 'ಪರಶಿವಲಿಂಗ ಮುದ್ರೆ' ಯು ಉತ್ಪನ್ನವಾಯಿತು. ಇದನ್ನು ಬ್ರಾಹ್ಮಣರು ಕಂಡು ಅವರು ದ್ವಾರಪಾಲಕರನ್ನು ತಾಡನ ಮಾಡಲು ಆ ಪೆಟ್ಟುಗಳೆಲ್ಲ ಆ ಬ್ರಾಹ್ಮಣರಿಗೆಯೇ ಹತ್ತಲು ಅವರು ಆಶ್ಚರ್ಯಬಟ್ಟು ಅರಸನಿಗೆ ದೂರು ಹೇಳಿದರು. ಆಗ ಅರಸನು ದೇವಾಲಯಕ್ಕೆ ಬಂದು ನಡೆದ ಸಂಗತಿಗಳನ್ನು ತಿಳಿದುಕೊಂಡು ವರದಾನಿಯು ಮಹತ್ವಿಕಳೆಂದು

ಬಗೆದು ಅವಳನ್ನೂ ಅವಳ ಪತಿಯನ್ನೂ ಅರಮನೆಗೆ ಕರೆತಂದು ಅವರನ್ನು ಬಹಳ ಸನ್ಮಾನಿಸಿದನು. ಆಗ ಅವನೂ ಅಲ್ಲಿದ್ದ ಬಹುಜನ ಬ್ರಾಹ್ಮಣರೂ ತಮ್ಮ ಮೊದಲಿನ ವಿಷ್ಣುಧರ್ಮವನ್ನು ಬಿಟ್ಟು ಶಿವಧರ್ಮವನ್ನು ಸ್ವೀಕರಿಸಿದರು. ವರದಾನಿಯಮ್ಮನು ಕೈಯಿಟ್ಟ ವಿಷ್ಣುಮೂರ್ತಿಯ ತಲೆಯ ಮೇಲೆ ಈಗಲೂ ಶಿವಚಿನ್ಹವಿರುತ್ತದೆ. ಅವಳ ಮೂಲಕ ಹೀಗೆ ರಾಜಧಾನಿಯಲ್ಲಿ ನಡೆದ ಮಹತ್ವಗಳ ಪ್ರಸಿದ್ಧಿಯು ದೇಶದಲ್ಲಿ ಹೆಚ್ಚುತ್ತಹೋಗಲು ಬಹುಜನ ಕುರುಡ ಕುಂಟರು ವರದಾನಿಯಮ್ಮನನ್ನು ಕಂಡು ಅವಳಿಂದ ಪುನೀತರಾಗಿ ಆರೋಗ್ಯವನ್ನು ಹೊಂದಿ ಮರಳಹತ್ತಿದರು. ಈಮೇರೆಗೆ ವರದಾನಿಯು ಕಾಂಚೀಪಟ್ಟಣದಲ್ಲಿ ಕೆಲವು ದಿವಸ ವಾಸಮಾಡಿದಳು.

ಅಲ್ಲಿಂದ ಉಭಯತರು ದೇಶದಲ್ಲಿಯ ಕ್ಷೇತ್ರಗಳನ್ನು ನೋಡಬೇಕೆಂದು ಬಯಸಿ ಉತ್ತರಕ್ಕೆ ತೆರಳಿ ಕಾಶೀವಿಶ್ವೇಶ್ವರನ ದರ್ಶನವನ್ನು ಹೊಂದಿ ಅಲ್ಲಿಂದ ಪ್ರಯಾಗ, ಗಯಾಕ್ಷೇತ್ರಗಳನ್ನು ನೋಡಿ ಪುನಃ ದಕ್ಷಿಣಕ್ಕೆ ಹೊರಳಿ ಸೊನ್ನಲಿಗೆಗೆ ಬಂದರು. ಈ ಸ್ಥಳದಲ್ಲಿ ಸಿದ್ಧರಾಮೇಶ್ವರನು ಜಗದ್ಗುರುವಾಗಿ ಅನೇಕ ರಾಜರಿಂದಲೂ ಸಾಮಂತರಿಂದಲೂ ಪೂಜಿತನಾಗಿ ಬಹಳ ಸನ್ಮಾನವನ್ನು ಹೊಂದಿದ್ದನು. ಅವನು ಬಲ್ಲಿದನಾದ ಶಿವಯೋಗಿಯು. ಆದುದರಿಂದ ಉಭಯತರು ಶಿವಯೋಗದ ವಿಚಾರಗಳಲ್ಲಿ ಕೆಲಕಾಲ ಕಳೆದರು. ಆಗ ದಾನಮ್ಮನ ಮನಸ್ಸಿನಲ್ಲಿ ಬಸವಾದಿ ಪ್ರಮಥರ ಸ್ಥಾನಗಳನ್ನು ಸಂದರ್ಶಿಸಬೇಕೆಂಬ ಬಯಕೆಯುಂಟಾಗಲು ಮೊದಲು ಬಸವೇಶ್ವರನು ಐಕ್ಯಹೊಂದಿದ ಸ್ಥಳವಾದ ಕೂಡಲಸಂಗಮ ಕ್ಷೇತ್ರಕ್ಕೆ ಬಂದಳು. ಅಲ್ಲಿ ಕೆಲವು ದಿವಸವಿದ್ದು ಅಲ್ಲಿಂದ ಪಶ್ಚಿಮಕ್ಕೆ ೧೮ ಮೈಲುಗಳ ಮೇಲೆ ಇರುವ ಘಟಪ್ರಭಾನದಿಯು ಕೃಷ್ಣೆಗೆ ಕೂಡಿದ ಸಂಗಮಸ್ಥಾನಕ್ಕೆ ಬಂದಳು. ಇದಕ್ಕೆ ಸಮೀಪವಾಗಿ ಇಲಿಹಾಳ ಬೊಮ್ಮಯ್ಯ, ಚಂದಿಮರಸರು ಮೊದಲಾದ ಶಿವಶರಣರ ಸ್ಥಳಗಳಿವೆ. ಅವುಗಳನ್ನು ಅವಳು ಸಂದರ್ಶಿಸಿ ಅಲ್ಲಿಂದ ೨೦ ಮೈಲುಗಳ ಮೇಲೆ ಇರುವ ಬಸವೇಶ್ವರನ ಜನನ ಸ್ಥಾನವಾದ ಬಾಗೇವಾಡಿಗೆ ಬಂದಳು. ಅವಳು ಬಸವೇಶ್ವರನ ಕೇವಲ ಭಕ್ತಳು. ಆದ್ದರಿಂದ ಅವಳನ್ನು ಕಾಣಲು ಬಹುಜನರು ಬಂದು ಅವಳಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ಬಸವೇಶ್ವರನು ಬಾಗೇವಾಡಿಯಿಂದ ಹೊರಗೆ

ಹಾಕಲ್ಪಟ್ಟಬಳಿಕ ಅವನು ಪುನಃ ಸ್ವಗ್ರಾಮಕ್ಕೆ ಹೋದಂತೆ ಎಲ್ಲಿಯೂ ಉಲ್ಲೇಖವಿಲ್ಲ. ಆದರೆ ಅವನ ಭಕ್ತಳಾದ ವರದಾನಿಯಮ್ಮನು ಈ ಗ್ರಾಮಕ್ಕೆ ಬಂದಬಳಿಕ ಅಲ್ಲಿಯ ಬಹುಜನ ಬ್ರಾಹ್ಮಣರೂ ಕೂಡ ಅವ ಳನ್ನು ಆದರಿಸಿ ಶಿವಾನುಭವದ ಉಪದೇಶವನ್ನು ಹೊಂದಿದರೆಂದು ಗ್ರಂಥ ಗಳಲ್ಲಿ ಉಲ್ಲೇಖಗಳಿವೆ.

ಆಮೇಲೆ ವರದಾನಿಯಮ್ಮನು ತನ್ನ ಪತಿಯೊಡನೆ ಬಾಗೇವಾಡಿ ಯಿಂದ ಗುಡ್ಡಾಪುರಕ್ಕೆ ಹೋಗಲು ಉದ್ಯುಕ್ತಳಾದಳು. ಅವರು ದಾರಿ ಯಲ್ಲಿ ೧೨ ಮೈಲುಗಳ ಮೇಲಿರುವ ಮಣ್ಣಗೂಳಿ ಎಂದರೆ ಈಗ ಕರೆ ಯಲ್ಪಡುವ ಮನಗೂಳಿ ಎಂಬ ಗ್ರಾಮಕ್ಕೆ ಬಂದರು. ಅವರು ಅಲ್ಲಿಗೆ ಬಂದಕಾಲದಲ್ಲಿ ಅಲ್ಲಿಯ ಗೌಡತಿಯು ಗೌರಮ್ಮನೆಂಬುವಳಿದ್ದು ಅವ ಳಿಗೆ ಒಬ್ಬನೇ ಮಗನಿದ್ದು ಅವನು ಮರಣಹೊಂದಿದ್ದನು. ಆಗ ಆಕೆಯು ಅತ್ಯಂತ ದುಃಖಿತಳಾಗಿ ವರದಾನಿಯಮ್ಮನ ಮಹತ್ವವನ್ನು ಅರಿತವ ಳಾಗಿ ಅವಳಿಗೆ ಮೊರೆಹೊಗಲು ಆವಳು ಬಾಲಕನಿಗೆ ಆಯುಷ್ಯವು ಮುಗಿದಿಲ್ಲ ಎಂಬುದನ್ನು ತನ್ನ ಅಂತರ್ಜ್ಞಾನದಿಂದ ತಿಳಿದವಳಾಗಿ ಅವನ ಮೃತದೇಹದ ಮೇಲೆ ಕೆಯ್ಯನ್ನು ಆಡಿಸಲು ಅವನು ಎಚ್ಚರಾದವ ನಂತೆ ಎದ್ದು ಕುಳಿತನು. ಆಗ ಎಲ್ಲರೂ ಸೋಜಿಗಗೊಂಡು ಅವಳು ಮಹತ್ವಿಕಳೆಂದು ತಿಳಿದವರಾಗಿ ಅವಳಿಂದ ವೀರಶೈವ ದೀಕ್ಷೆಯನ್ನು ಹೊಂದಿದರು.

ಆಮೇಲೆ ಉಭಯತರು ತಾವು ಮೊದಲು ಲಿಂಗಾನುಸಂಧಾನ ಮಾಡುತ್ತಿದ್ದ ಗುಡ್ಡಾಪುರಕ್ಕೆ ಬಂದರು. ಅಲ್ಲಿಗೆ ಬರುವಷ್ಟರಲ್ಲಿ ವರ ದಾನಿಯಮ್ಮನ ಮಾತೆಯಾದ ಶಿರಸಮ್ಮನು ಮತ್ತು ಪಿತನಾದ ಅನಂತ ರಾಯನು ಅದೇ ಸ್ಥಳದಲ್ಲಿ ಸಮಾಧಿಸ್ಥರಾಗಿದ್ದರು. ಅವರ ಗದ್ದುಗೆ ಗಳಿಗೆ ಅವರು ಶರಣೆಂದು ಸಾಷ್ಟಾಂಗವೆರಗಿದರು. ಅವರು ಗುಡ್ಡಾ ಪುರಕ್ಕೆ ಬರುವಷ್ಟರಲ್ಲಿ ಅವರು ಮಾಡಿದ ಮಹತ್ಕಾರ್ಯಗಳು ಎಲ್ಲ ರಿಗೂ ಅರಿಕೆಯಾಗಿದ್ದವು. ಆದ್ದರಿಂದ ಪುರಜನರು ಅವರನ್ನು ಅತ್ಯಂತ ಸಂಭ್ರಮದಿಂದ ಇದಿರ್ಗೊಂಡು ಸನ್ಮಾನಿಸಿದರು.

ಹೀಗೆ ಕೆಲವು ದಿವಸಗಳು ಗತಿಸಿದ ಮೇಲೆ ವರದಾನಿಯಮ್ಮನು ಇನ್ನುಮೇಲೆ ಇಹಲೋಕಯಾತ್ರೆಯನ್ನು ಮುಗಿಸಿ ಪರಮಾತ್ಮನಲ್ಲಿ ಬೆರೆ

ಯುವ ಸಮಯವು ಪ್ರಾಪ್ತವಾಯಿತೆಂದು ತಿಳಿದವಳಾಗಿ ಒಂದು ದಿವಸ ಸಂಭ್ರಮದಿಂದ ತನ್ನ ಪೂಜಾದಿಕಾರ್ಯಗಳನ್ನು ನೆರವೇರಿಸುತ್ತಿರುವಾಗ ಅವು ಮುಗಿದು ಪ್ರಸಾದವು ನೆರವೇರುವ ಕಾಲದಲ್ಲಿ ಜನಸಮುದಾಯವು ಸಾಷ್ಟಾಂಗವೆರಗಿದಾಗ ಅವಳು ತನ್ನ ಲಿಂಗದಲ್ಲಿ ಬೆರೆದಳು. ಆದರೆ ಅವಳ ದೇಹವು ನೋಡನೋಡುತ್ತಿರುವಾಗ ಭವ್ಯವಾದ ಶಿಲಾಮೂರ್ತಿಯಾಗಿ ಅವರೆದುರಿಗೆ ನಿಂತುಬಿಟ್ಟಿತು. ಆಗ ನೆರೆದ ಭಕ್ತಜನರು ವರದಾನಿಯಮ್ಮನ ಮಹತ್ವವನ್ನು ಕಂಡು ತಾವು ಧನ್ಯರಾದೆವೆಂದು ಅವಳನ್ನು ಸ್ತುತಿಸಿದರು.

ವರದಾನಿಯಮ್ಮನು ಸಾಮಾನ್ಯ ಮನುಷ್ಯಳಲ್ಲ. ಅವಳು ರೇವಣಸಿದ್ಧೇಶ್ವರ, ಅಲ್ಲಮಪ್ರಭು, ತೋಂಟದಾರ್ಯ ಇವರ ಪಙ್ತಿಯಲ್ಲಿ ಬರುತ್ತಾಳೆ. ಅವಳು ಮಾಡಿದ ಘನತರವಾದ ಕಾರ್ಯಗಳು ಈ ಮಹಾನುಭಾವರ ಕಾರ್ಯಗಳನ್ನು ಹೋಲುತ್ತವೆ. ಅವರಂತೆಯೇ ಅವಳು ಧರ್ಮಪ್ರಸಾರ ಕಾರ್ಯಗಳನ್ನು ಮಾಡಿದ್ದಾಳೆ. ಅವಳು ಹೋದಲ್ಲೆಲ್ಲ ವೀರಶೈವ ಧರ್ಮವನ್ನು ಬೋಧಿಸಿ ಬಹುಜನರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾಳೆ. ಅವಳು ಅವರಂತೆಯೇ ಮಹಾತ್ಮಿಕಳು. ಅವಳು ಪ್ರಸಾದಿ ಪ್ರಾಣಲಿಂಗಿಸ್ಥಳಗಳನ್ನು ಒಳಕೊಂಡವಳು. ಬಸವೇಶ್ವರನ ತರುವಾಯ ದೇಶದಲ್ಲಿ ಅನೇಕ ಬಿಕ್ಕಟ್ಟುಗಳು ಉಂಟಾದಾಗ್ಗೆ ಅವಳು ಅಂಜಿ ಅರಣ್ಯಪ್ರದೇಶಗಳಿಗೆ ಓಡಿಹೋಗಲಿಲ್ಲ. ಶಸ್ತ್ರವನ್ನೆತ್ತಿ ತನ್ನ ಭಕ್ತರನ್ನು ಹುರಿದುಂಬಿಸಿ ವೈರಿಗಳೊಡನೆ ಯುದ್ಧ ಮಾಡಿದ್ದಾಳೆ. ಹೇಗೆ ಈ ಕಾಲದಲ್ಲಿ ಚನ್ನಬಸವೇಶ್ವರ, ಮಡಿವಾಳಮಾಚಿದೇವ, ಕಿನ್ನರೀಬ್ರಹ್ಮಯ್ಯಗಳು ಶತ್ರುಗಳ ಕೂಡ ಧರ್ಮಸ್ಥಾಪನೆಗಾಗಿ ಹೋರಾಡಿದರೋ ಹಾಗೆ ಇವಳೂ ಹೋರಾಡಿದ್ದಾಳೆ. ಮತ್ತು ಅದರಲ್ಲಿ ಅವಳು ಯಶಸ್ಸನ್ನೂ ಸಂಪಾದಿಸಿದ್ದಾಳೆ. ಅವಳು ಯಾವಲ್ಲಿ ವೀರಶೈವ ಧರ್ಮದ ಪ್ರಸಾರವಿರಲಿಲ್ಲವೋ ಅಂಥ ಸ್ಥಳಗಳಲ್ಲಿ ಅಂದರೆ ದಕ್ಷಿಣ ಮೈಸೂರು ಪ್ರಾಂತ, ಚೋಳ ಕೇರಳ ದೇಶಗಳಲ್ಲಿ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದ್ದಾಳೆ. ರಾಮೇಶ್ವರದ ವರೆಗೂ ಹೋಗಿ ಅಲ್ಲಿ ಬಸವೇಶ್ವರನ ದೇವಾಲಯವನ್ನು ಸ್ಥಾಪಿಸಿ ವೀರಶೈವರ ಒಂದು ಸ್ಥಿರವಾದ ಗುರುತನ್ನು ಅಲ್ಲಿ ನಿಲ್ಲಿಸಿದಳು. ಹೇಗೆ ರೇವಣಸಿದ್ಧೇಶ್ವರ, ತೋಂಟದಾರ್ಯರು ಆಗಿನ ರಾಜರಲ್ಲಿ ತಮ್ಮ ಪ್ರಭಾವವನ್ನು ಬೀರಿದರೋ ಹಾಗೆಯೇ ವರದಾನಿಯಮ್ಮನು

ಪರರಾಜರಲ್ಲಿ ತನ್ನ ವರ್ಚಸ್ಸನ್ನು ಕೆಡಹಿದ್ದಾಳೆ. ಹೀಗೆ ಈಕೆಯು ಉಜ್ವಲ ವರ್ತನೆ ಇದೆ. ಇದರಿಂದ ಅವಳ ಉಲ್ಲೇಖವನ್ನು ವೀರಶೈವ ಗ್ರಂಥಕಾರರೆಲ್ಲರೂ ಯಾವಾಗಲೂ ಮಾಡುತ್ತಬಂದಿದ್ದಾರೆ. ಅವಳ ವರ್ಚಸ್ಸು ದೇಶದಲ್ಲಿ ಎಷ್ಟು ಪ್ರಬಲವಾಗಿತ್ತೆಂಬುದು ಕೆಳಗೆ ಕಾಣಿಸಿದ ಶಿಲಾಶಾಸನದಿಂದ ತಿಳಿದುಬರುತ್ತದೆ.

ವರದಾನಿಯಮ್ಮನು ಇದ್ದ ಗುಡ್ಡಾಪುರವು ತರ್ದೇವಾಡಿನಾಡಿನಲ್ಲಿ ಅಂದರೆ ಈಗಿನ ಉತ್ತರ ವಿಜಾಪುರ ಜಿಲ್ಲೆಯಲ್ಲಿದ್ದು ಈ ಭಾಗವು ೧೨೬೦ ರಿಂದ ೧೨೭೮ ರ ವರೆಗೆ ಆಳಿದ ದೇವಗಿರಿಯ ಯಾದವ ವಂಶದವನಾದ ಮಹಾದೇವ ರಾಜನ ಅಧೀನದಲ್ಲಿ ಇತ್ತು. ಅವನ ಮಾಂಡಲಿಕನಾದ ಸಾಯಿದೇವನು ಈ ಭಾಗದಲ್ಲಿ ಅವನ ಪರವಾಗಿ ರಾಜ್ಯವಾಳುತ್ತಿದ್ದನು. ಅವನು ವರದಾನಿಯಮ್ಮನ ವಿಷಯವಾಗಿ ಭಕ್ತಿಯನ್ನು ತಾಳಿ ಅವನು ಭೀಮಾ ತೀರದಲ್ಲಿರುವ ಮಾತಾಮ್ಯಪುರವೆಂಬ ಪಟ್ಟಣವನ್ನು ಹೊಸದಾಗಿ ಕಟ್ಟಿಸಿ ಅಲ್ಲಿ ವರದಾನಿಯಮ್ಮನ ದೇವಾಲಯವನ್ನು ಸ್ಥಾಪಿಸಿದನು. ಈ ದೇವಾಲಯಕ್ಕೋಸ್ಕರ ಅರಸನ ಸಮ್ಮತಿಯಿಂದ ಅದರ ಸುತ್ತಲಿನ ಅನೇಕ ಗ್ರಾಮಗಳಲ್ಲಿದ್ದ ಭೂಮಿಯನ್ನು ಅವನು ಉಂಬಳಿಯಾಗಿ ಹಾಕಿ ಕೊಟ್ಟನು. ಈ ಸಂಗತಿಯು ಶಕೆ ವರುಷ ೧೨೦೦ ಅಂದರೆ ಕ್ರಿಸ್ತಶಕ ೧೨೭೮ನೆಯ ವೈಶಾಖ ಶು|| ೧೫ ಆದಿತ್ಯವಾರ ಜರಗಿತೆಂದು ಅಲ್ಲಿಯ ಶಿಲಾಶಾಸನದಿಂದ[1] ತಿಳಿದು ಬರುತ್ತದೆ. ಇವರಲ್ಲಿ ಉಲ್ಲೇಖವಾದ ಕೆಲವು ವಿಷಯಗಳು ವಿಶೇಷವಾಗಿ ಲಕ್ಷಿಸತಕ್ಕಂಥವಿರುತ್ತವೆ. ಈ ದೇವಾಲಯಕ್ಕೋಸ್ಕರ ಗ್ರಾಮದಲ್ಲಿ ಬಂದ ವ್ಯಾಪಾರದ ಸರಕುಗಳ ಮೇಲಿನ ಸುಂಕದ ಭಾಗಗಳು ಕೊಡಲ್ಪಟ್ಟಿವೆ. ಅವು ಬತ್ತ, ವೀಳ್ಯದ ಎಲೆಗಳು, ಗಾಣದ ಎಣ್ಣೆ, ಉಪ್ಪು ಇವುಗಳು ಇರುತ್ತವೆ. ಆದರೆ ನೆಯ್ದು ಬಟ್ಟೆಗೆ ಸುಂಕವಿಲ್ಲ. ಅಲಂಪುರದಲ್ಲಿ ಶಿವಲಿಂಗವನ್ನು ಸ್ಥಾಪಿಸುವಲ್ಲಿ ವರದಾನಿಯಮ್ಮನಿಗೆ ಮುಖ್ಯವಾಗಿ ಈ ಕಾಯಕದವರು ಬಹಳ ಸಹಾಯ ಮಾಡಿದ್ದರಿಂದ ಅವರಿಂದ ಯಾವ ಸುಂಕವೂ

---

(1) Inscriptions in Northern Karnataka & Kolhapur State, No 21 by Pro. K. G. Kundangar M. A. (ಶಿವಾನುಭವ ಸಂಪುಟ ೧೪-೧೧-೪೮.)

ಎತ್ತಲ್ಪಟ್ಟಿರಲಿಕ್ಕಿಲ್ಲೆಂದು ತೋರುತ್ತದೆ. ಹಾಗೆಯೇ 'ಸರ್ವಮಾನ್ಯ ದೇವಿ'ಯರ ಕಮ್ಮತದ ಭತ್ತ ಮತ್ತು ದೇವ ಧನ ಮಾರಿದರೆ ಬಂದ ಹಣದ ಮೇಲೆ ಸುಂಕವಿಲ್ಲ. ಆದರೆ ಇದರಲ್ಲಿ ಹೇಳಿರುವದೇನೆಂದರೆ— ಪುರದೊಳಗೆ ಅನ್ಯಾಯುವಾಗಬಾರದು. ನಿಪುತ್ರಿಕತನವಿರಬಾರದು. ಪಟ್ಟ ಣದಲ್ಲಿ ಅನಾಹುತಗಳಾದರೆ 'ಅರಸರು ಮನ್ನೆಯರು ಹಿರಿಯರು ಪಟ್ಟ ಣದ ಹಲವರು ಸರ್ವಬಾಧೆ ಪರಿಹಾರವಾಗಿ ಪುರವನ್ನು ಪಾಲಿಸುವುದು' ಎಂದು ಹೇಳಿದೆ. ಇದರಿಂದ ವರದಾನಿಯು ಹೆಸರಿನಿಂದ ಸ್ಥಾಪಿತವಾದ ಈ ಪಟ್ಟಣದಲ್ಲಿ ಎಲ್ಲರೂ ಸನ್ಮಾರ್ಗಿಗಳೂ, ನ್ಯಾಯುವಂತರೂ ಇರಬೇಕೆಂಬ ಅಭಿಪ್ರಾಯುವು ಇದರಲ್ಲಿದೆ. ಇದರಿಂದ ವರದಾನಿಯು ಜೀವಂತ ಇದ್ದಾಗ್ಗೆ ಅವಳು ಎಷ್ಟು ನ್ಯಾಯುದಿಂದಲೂ ನೀತಿಯಿಂದಲೂ ವರ್ತಿ ಸುತ್ತಿದ್ದಳೆಂಬುದನ್ನು ನಾವು ಊಹಿಸಬಹುದು.

ಈ ಶಿಲಾಶಾಸನದಲ್ಲಿ ಉಕ್ತವಾದ ವಾತಾಖ್ಯಪುರವು ಈಗ ತದ್ದೇ ವಾಡಿಯಿಂದ ಪಶ್ಚಿಮಕ್ಕೆ ೧೪ ಮೈಲುಗಳ ಮೇಲೆ ಮತ್ತು ವಿಜಾಪುರ ಪಟ್ಟಣದಿಂದ ಉತ್ತರಕ್ಕೆ ೫೦ ಮೈಲುಗಳ ಮೇಲೆ ಭೀಮಾತೀರದಲ್ಲಿದೆ. ಇದು ಗುಡ್ಡಾಪುರದಿಂದ ೪೦ ಮೈಲು ಉತ್ತರಕ್ಕೆ ಇರುತ್ತದೆ. ಈ ಗ್ರಾಮಕ್ಕೆ ಈಗಿನ ಹೆಸರು 'ವಾಡಪುರಿ'ಎಂದಿದೆ.

ದಾನಮ್ಮನು ತನ್ನ ಜೀವಿತದ ಕಾಲದಲ್ಲಿ ಅತ್ಯಂತ ಪವಿತ್ರತೆಯಿಂ ದಲೂ ಶುಚಿಯಿಂದಲೂ ಇರುತ್ತಿದ್ದದರಿಂದ ಅವಳ ಸ್ಮಾರಕಕ್ಕಾಗಿ ಕಟ್ಟಿಸಿದ ಈ ಗ್ರಾಮದಲ್ಲಿಯು ಜನರೂ ಕೂಡ ಮೇಲೆ ಶಿಲಾಶಾಸನದಲ್ಲಿ ಹೇಳಿದಂತೆ ನೀತಿಯಿಂದಲೂ ಧರ್ಮದಿಂದಲೂ ವರ್ತಿಸಬೇಕೆಂದು ಅದರಲ್ಲಿ ಹೇಳಿರ ಬಹುದೆಂದು ನಮಗೆ ತೋರುತ್ತದೆ. ಶಿಲಾಶಾಸನಗಳಲ್ಲಿ ಹೀಗೆ ಬರೆಯುವ ಪದ್ಧತಿಯು ಬಹಳ ಕಡಿಮೆ ಇರುತ್ತದೆ. ಈಗಲೂ ಸಹ ದಾನಮ್ಮನು ಅತ್ಯಂತ ಪವಿತ್ರ ದೇವತೆಯೆಂದು ಕರ್ನಾಟಕದ ಉತ್ತರ ಭಾಗದಲ್ಲಿ ಬಹು ಪ್ರಸಿದ್ಧಳಾಗಿದ್ದಾಳೆ. ಯಾರ ಮನೆಯಲ್ಲಿ ಅವಳು ಇದ್ದಾಳೆಯೋ ಅವರು ಅವಳ ಪೂಜಾಕಾಲದಲ್ಲಿ ಅತ್ಯಂತ ಶುಚಿಯಿಂದಲೂ ಮಡಿ ಮೈಲಿಗೆ ಯಿಂದಲೂ ಆಚರಿಸುವ ಸಂಪ್ರದಾಯುವಿದೆ. ದಾನಮ್ಮನಿಗೆ ನಡೆದು ಕೊಳ್ಳುವ ಜನರು ಉತ್ತರ ಕರ್ನಾಟಕ, ಮಹಾರಾಷ್ಟ್ರದ ದಕ್ಷಿಣಭಾಗ, ಸೊಲ್ಲಾಪುರ ಜಿಲ್ಲೆ ಮತ್ತು ನಿಜಾಮ ಇಲಾಖೆಯಲ್ಲಿ ಅಸಂಖ್ಯಾತರಾ

ಗಿದ್ದಾರೆ. ಆಕೆಯು ದೇವಸ್ಥಾನದಲ್ಲಿ ಯಾತ್ರಿಕರು ಪ್ರತಿದಿವಸ ಇರುತ್ತಾರೆ. ಗುಡ್ಡಾಪುರಕ್ಕೆ ಹೋಗಿಬರಲು ಸಮೀಪದ ರೇಲ್ವೆ ಮಾರ್ಗಗಳಿಲ್ಲ. ಸರಿಯಾದ ಲೈನ ಮಾರ್ಗಗಳೂ ಇಲ್ಲ. ಯಾತ್ರಿಕರು ಕಾಲುದಾರಿಗಳಿಂದ ಹೋಗಬೇಕಾಗುತ್ತದೆ. ಇದರ ಸುತ್ತಲೂ ಒಂದು ವೃಕ್ಷವಾದರೂ ಇರದೆ ರಣಗುಟ್ಟುವ ಪ್ರದೇಶ, ಎಲ್ಲೆಲ್ಲಿಯೂ ತಗ್ಗು ತೆವರುಗಳಿಂದ ತುಂಬಿದ ಕೊರಕಲುಗಳುಳ್ಳ ಕಲ್ಲು ನಾಡು, ಮಳೆಗಾಲದಲ್ಲಿ ಸ್ವಲ್ಪ ಮಳೆಯಾದ ಕೂಡಲೆ ದೊಡ್ಡ ನದಿಗಳಂತೆ ಹರಿಯುವ ಹಳ್ಳಕೊಳ್ಳಗಳು, ಬಿಸಿಲು ಗಾಲದಲ್ಲಿ ರೌದ್ರ ಮುದ್ರೆಯುಳ್ಳ ಭಯಾನಕ ಸೃಷ್ಟಿಯ ದೃಶ್ಯ, ಈ ತೆರದ ಪ್ರದೇಶದಲ್ಲಿ ವರದಾನಿಯಮ್ಮನು ಶಿವಯೋಗ ಸಾಧನೆಯನ್ನು ಮಾಡಿದ್ದಾಳೆ. ಇಂಥ ಪ್ರದೇಶಗಳಲ್ಲಿಯೇ ಪರಮಾತ್ಮನು ತನ್ನ ಭಕ್ತರಿಗೆ ದೃಗ್ಗೋಚರವಾಗುವಂತೆ ತೋರುತ್ತದೆ. ಇಂಥಲ್ಲಿಯೇ ಶೂರರೂ ಸಾಹಸಿಗರೂ ಧರ್ಮಪುರುಷರೂ ಆಗಿ ಹೋಗಿದ್ದು ಕಂಡು ಬರುತ್ತದೆ.

ಪ್ರಸಿದ್ಧ ಕವಿಯಾದ ಲಕ್ಕಣ್ಣಾ ದಂಡೇಶನು ವರದಾನಿ ಗುಡ್ಡಮ್ಮನು ಗುಡ್ಡಾಪುರದಿಂದ ೩೦ ಗಾವುದಗಳ ಮೇಲೆ ಮಲಾಪಹಾರೀ ನದಿಯ ದಂಡೆಯ ಮೇಲೆ ಇರುವ ಅಲಂಪುರದಲ್ಲಿ ಬಾಲ ಬ್ರಹ್ಮೇಶನನ್ನು ಸ್ಥಾಪಿಸಿದಳೆಂದು ತನ್ನ ಕಾವ್ಯದಲ್ಲಿ ಬರೆದಿದ್ದಾನೆ. ಆದರೆ ಈ ಹೆಸರಿನ ಗ್ರಾಮವಾಗಲಿ ಇಲ್ಲವೆ ಬಾಲಬ್ರಹ್ಮೇಶನ ದೇವಾಲಯವಾಗಲಿ ಈ ನದಿಯ ದಂಡೆಯ ಮೇಲೆ ಎಲ್ಲಿಯೂ ಇಲ್ಲ. ಆದ್ದರಿಂದ ಇದು ತಪ್ಪು ವಿವರಣೆ ಎಂದು ನಮಗೆ ತೋರುತ್ತದೆ. ಅಲಂಪುರವು ರಾಯಚೂರು ಜಿಲ್ಲೆಯಲ್ಲಿ ಒಂದು ಅತ್ಯಂತ ಪವಿತ್ರವಾದ ಸ್ಥಳವು. ಅಲ್ಲಿ ಬಾಲಬ್ರಹ್ಮೇಶನ ವಿಸ್ತಾರವಾದ ದೇವಾಲಯವೂ[೧] ಇದೆ. ತುಂಗಭದ್ರಾ ತೀರದಲ್ಲಿಯೇ ಇದು ಇದೆ. ಆದುದರಿಂದ ವರದಾನಿಯು ಯುದ್ಧಮಾಡಿದ ಸ್ಥಳವು ಇದೇ ಆಗಿರಬಹುದೆಂದು ನಾವು ಊಹಿಸುತ್ತೇವೆ.

ಲಕ್ಕಣ್ಣಾ ದಂಡೇಶನು ತನ್ನ ಕಾವ್ಯದಲ್ಲಿ ಅಲಂಪುರ ಗ್ರಾಮವು ಆಕೆಯು ಇದ್ದ ಗ್ರಾಮದಿಂದ ೩೦ ಗಾವುದ ಅಂದರೆ ೬೦ ಮೈಲು ದೂರವಾಗಿ ಇತ್ತೆಂದು ಬರೆದಿದ್ದಾನೆ. ಆದರೆ ಗುಡ್ಡಾಪುರವು ಇಲ್ಲಿಂದ ಸರಳ

(೧) ಮಿ। ದೇಸಾಯಿ ಪಾಂಡುರಂಗರಾಯರ ಲೇಖ. ಪ್ರಬುದ್ಧ ಕರ್ನಾಟಕ ಸಂಪುಟ ೨೫—೨—೨೫)

ರೇಷೆಯಲ್ಲಿ ೨೩೦ ಮೈಲು ದೂರವಾಗುತ್ತದೆ. ಆದರೆ ಆದವಾನಿಯು ಇಲ್ಲಿಂದ ೮೦ ಮೈಲು ಇದೆ. ಆದ್ದರಿಂದ ಅವಳು ಆದವಾನಿಯಲ್ಲಿ ಇದ್ದಾಗ್ಗೆ ಅವಳು ಅಲಂಪುರದ ಮೇಲೆ ದಂಡೆತ್ತಿ ಹೋಗಿರಬಹುದೆಂದು ತೋರುತ್ತದೆ. ಇಷ್ಟರಲ್ಲಿ ಅವಳ ಬಗ್ಗೆ ಅತ್ಯಂತ ಭಕ್ತಿಯುಳ್ಳವರಾದ ವರು ಬಹುಜನರಾಗಿದ್ದು ಅವರು ದಾನಮ್ಮನ ಸೈನಿಕರಾಗಿ ಅವಳ ಕೈಕೆಳಗೆ ಯುದ್ಧ ಮಾಡಿರುವದು ಸಂಭವನೀಯವಿರುತ್ತದೆ.

ಉಮರಾಣಿಯು ಭೀಮಾತೀರದಲ್ಲಿ ವಿಜಾಪುರ ಜಿಲ್ಲೆಯಲ್ಲಿದೆ. ಇನ್ನೊಂದು ಉಮರಾಣಿಯು ಗುಡ್ಡಾಪುರದ ದಕ್ಷಿಣಕ್ಕೆ ೧೨ ಮೈಲು ಗಳ ಮೇಲಿರುತ್ತದೆ. ಈ ಎರಡನೇ ಉಮರಾಣಿಯೇ ವರದಾನಿಯ ಮ್ಮನ ಜನ್ಮಸ್ಥಳವೆಂದು ನಮಗೆ ತೋರುತ್ತದೆ. ಯಾಕಂದರೆ ಈಗಲೂ ಸಹ ಈ ಉಮರಾಣಿಯಿಂದಲೇ ನೈವೇದ್ಯವು ಗುಡ್ಡಾಪುರಕ್ಕೆ ಹೋಗದ ಹೊರ್ತು ದಾನಮ್ಮನ ಪೂಜೆಯಾಗುವದಿಲ್ಲ. ಇದಕ್ಕೆ ಸಮೀಪವಾಗಿ ೧೪ ಮೈಲುಗಳ ಮೇಲೆ ಸಂಕ ಗ್ರಾಮವಿದ್ದು ಇದು ಆಕೆಯ ಗಂಡನ ಗ್ರಾಮ ವಿರಬೇಕು. ಆದರೆ ಭೀಮಾತೀರದಲ್ಲಿ ಬೇರೊಂದು ಸಂಗಮ ಗ್ರಾಮವು ಇದ್ದು ಅದು ಆಕೆಯ ಗಂಡನ ಊರು ಇರಲಿಕ್ಕಿಲ್ಲ.

ದಾನಮ್ಮನ ದೇವಾಲಯವು ವಿಸ್ತಾರವಾದ ಪ್ರಾಕಾರಗಳಿಂದಲೂ ಉನ್ನತವಾದ ಗೋಪುರಗಳಿಂದಲೂ ಕೂಡಿಕೊಂಡು ಭವ್ಯವಾಗಿದೆ. ಇದರ ಪ್ರಾಕಾರವು ೨೮೦ ಫೂಟು ಉದ್ದ ೧೬೫ ಫೂಟು ಅಗಲವಾಗಿರು ತ್ತದೆ. ಆವಾರದ ಪಶ್ಚಿಮ ದಿಕ್ಕಿಗೆ ಸೊಮೇಶ್ವರ ಲಿಂಗದ ದೇವಾಲಯ ವಿದೆ. ಇದು ಪುರಾತನ ಕಾಲದ್ದು. ಅಲ್ಲಿ ಒಂದು ಶಿಲಾಶಾಸನವಿದೆ. ಈ ಸೋಮೇಶನ ನೆರೆಯಲ್ಲಿಯೇ ವರದಾನಿಯಮ್ಮನು ತನ್ನ ಶಿವಯೋಗ ವನ್ನು ಸಾಧಿಸಿದ್ದಾಳೆ. ಆತನೇ ಅವಳ ಇಷ್ಟದೇವತೆಯಾಗಿರಬಹುದು. ದೇವಾಲಯದ ಸಮೀಪವಾಗಿ ವೀರಭದ್ರನ ಮತ್ತು ಮಲ್ಲಿಕಾರ್ಜುನನ ಗುಡಿಗಳು ಇರುತ್ತವೆ. ಇವಲ್ಲದೆ ನಂದೀಕೋಲು ಮತ್ತು ಗುರುಪಾ ದುಕೆಯ ಸ್ಥಾನಗಳೂ ಇವೆ.

---

(೧) ಪಿ ದೇಸಾಯಿ ಪಾಂಡುರಂಗರಾಯರು ಈ ಸ್ಥಳಗಳನ್ನು ಸಂದರ್ಶಿಸಿ ಬರೆದ ಲೇಖವನ್ನು ನೋಡುವದು ಶಿವಾನುಭವ ೧೬—೫—೨೪೫. ಈ ಸ್ಥಳಗ ಳಲ್ಲಿ ದಾನಮ್ಮನ ಕುರುಹುಗಳಿಲ್ಲೆಂದು ಅವರು ಬರೆದಿದ್ದಾರೆ.

(೨) ಶಿವಾನುಭವ ೧೬—೫—೨೪೫ ಮತ್ತು ೧—೪—೪ ನೋಡಿರಿ

ದಾನಮ್ಮನ ವಿಗ್ರಹವು ೪ ಅಡಿ ಎತ್ತರವಾಗಿ ಮನುಷ್ಯಾಕೃತಿಯಾಗಿದ್ದು ಅದು ಶಿಲೆಯದಾಗಿದೆ. ಕಾಲು ಮಡಿಚಿಕೊಂಡು ಎಡಗೈಯ್ಯಲ್ಲಿ ಇಷ್ಟಲಿಂಗ, ಬಲಗಯ್ಯಲ್ಲಿ ಜಪಮಾಲಿಕೆ ಇವೆ. ದಾನಮ್ಮನು ತಾನು ಶಿವಯೋಗದಲ್ಲಿ ಕುಳಿತ ರೀತಿಯು ಇದಾಗಿರಬಹುದು. ಅವಯವಗಳು ತುಂಬಿಕೊಂಡು ಸ್ವಲ್ಪ ಗಾತ್ರವುಳ್ಳವಾಗಿವೆ. ಎದ್ದುಕಾಣುವಂಥ ಗುಳ್ಳೆ ಗಣ್ಣುಗಳನ್ನು ತಲೆಗೆ ಬಿರಿಯಾಗಿ ಕಟ್ಟಿದ ಹೆಣೆದ ಕುಲಾಯಿಯನ್ನು ನೋಡಿದಲ್ಲಿ ಆಕೆಯ ಪಾರ್ಥಿವ ರೂಪಕ್ಕೆ ಇದು ಸಮೀಪವರ್ತಿಯಾಗಿರಬಹುದೆಂದು ತೋರುತ್ತದೆ.

ದಾನಮ್ಮನು ಲಿಂಗೈಕ್ಯಳಾದ ಬಳಿಕ ಅವಳ ಮಹತ್ವವು ಮತ್ತಿಷ್ಟು ಹೆಚ್ಚುತ್ತ ಹೋಗಿ ಅವಳು ಹಿಂದುಗಡೆ ಪಾರ್ವತಿಯ ಅವತಾರವೆಂದು ಭಾವಿಸಲ್ಪಟ್ಟಿರುತ್ತಾಳೆ. ಲಕ್ಕಣ್ಣ ದಂಡೇಶನು ತನ್ನ ಕಾವ್ಯದಲ್ಲಿ ಆಕೆಯನ್ನು ಹೀಗೆಯೇ ವರ್ಣಿಸಿದ್ದಾನೆ.

ಗುಡ್ಡಾಪುರವು ಜತ್ತ ಸಂಸ್ಥಾನಕ್ಕೆ ಸೇರಿದ್ದಾಗಿದೆ. ಈ ಗುಡಿಯ ಎಲ್ಲ ವ್ಯವಸ್ಥೆಯನ್ನು ಜತ್ತ ಸರಕಾರದ ಸ್ವಾಧೀನದಲ್ಲಿದೆ. ಗುಡಿಗೆ ಬರುವ ಆದಾಯವನ್ನು ಸರಕಾರದವರು ದೇವಾಲಯದ ಕಟ್ಟಡ, ಅದರ ಸೇವಾದಿಗಳ ವ್ಯವಸ್ಥೆ, ಯಾತ್ರಿಕರ ಸೌಕರ್ಯ ಇವುಗಳಿಗಾಗಿ ಉಪಯೋಗಿಸುತ್ತಾರೆ.

ದಾನಮ್ಮನ ಮೊದಲಿನ ಹೆಸರು ಲಿಂಗಮ್ಮನೆಂದಾಗಿತ್ತು. ಆದರೆ ಕಲ್ಯಾಣಕ್ಕೆ ಬಂದ ಬಳಿಕ ಅವಳಿಗೆ ದಾನಮ್ಮನೆಂಬ ಹೆಸರು ಪ್ರಾಪ್ತವಾಯಿತು. ಅವಳು ಧನಿಕಳಾಗಿ ಇತರರಿಗೆ ದಾನ ಕೊಡುತ್ತಿದ್ದುದಕ್ಕಾಗಿ ಅವಳಿಗೆ ಈ ಹೆಸರು ಬಂದಂತೆ ತೋರುವದಿಲ್ಲ. ಅವಳು ಶ್ರೀಮಂತಳಿದ್ದಳೆಂದು ಅವಳ ಚರಿತ್ರೆಯಲ್ಲಿ ಉಲ್ಲೇಖವೆಲ್ಲಿಯೂ ಇಲ್ಲ. ಷಟ್‌ಕರ್ಮಗಳಲ್ಲಿ ದಾನ ಪ್ರತಿಗ್ರಹಗಳು ಬರುತ್ತಿದ್ದು ಇವು ವೀರಶೈವರಿಗೆ ಅನ್ವಯಿಸುವದಿಲ್ಲ. ಅರ್ಪಿತದಿಂದ ಕ್ರಿಯೆಗಳನ್ನು ಮಾಡುವದು ಶಿವಾನುಭವದ ಮುಖ್ಯ ತತ್ವವಾಗಿದೆ. ಈ ರೀತಿ ದಾನಮ್ಮನು ಆಚರಿಸುತ್ತಿದ್ದುದರಿಂದ ಬಸವೇಶ್ವರನು ಅವಳಿಗೆ ಈ ಹೆಸರನ್ನು ಕೊಟ್ಟಂತೆ ತೋರುತ್ತದೆ. ಮುಂದೆ ದಾನಮ್ಮನು ವೀರಶೈವ ಧರ್ಮದ ಪ್ರಚಾರ ಕಾರ್ಯ ಮಾಡುತ್ತ ದೇಶವನ್ನು ಸಂಚರಿಸುವಾಗ ಅವಳು ಬಹುಜನರಿಗೆ ಅವರ

ಇಷ್ಟಾರ್ಥಗಳನ್ನು ಸಲ್ಲಿಸಿದ್ದಾಳೆ. ಆದ್ದರಿಂದ ಅವಳಿಗೆ ವರದಾನಿ, ಅಥವಾ ವರದಾನಿಯಮ್ಮ ಎಂಬ ಹೆಸರು ಪ್ರಾಪ್ತವಾಗಿರಬಹುದು. ಅವಳು ಗುಡ್ಡಾಪುರದಲ್ಲಿದ್ದು ಅಲ್ಲಿ ಶಿವಯೋಗವನ್ನು ಸಾಧಿಸಿ ಕಡೆಗೆ ಅಲ್ಲಿಯೇ ಐಕ್ಯಳಾದ್ದರಿಂದ ಸಾಮಾನ್ಯವಾಗಿ ಜನರು ಅವಳನ್ನು ವರದಾನಿಗುಡ್ಡಮ್ಮ ಅಥವಾ ಸಂಕ್ಷಿಪ್ತವಾಗಿ ಗುಡ್ಡಮ್ಮ ಎಂದು ಕರೆಯುತ್ತ ಬಂದರು. ಆದರೆ ಆಕೆಯ ನಿಜವಾದ ಹೆಸರು ದಾನಮ್ಮ ಎಂದು ಇದ್ದು ಇದೇ ಹೆಸರನ್ನು ಅವಳಿದ್ದ ಭಾಗದ ಜನರು ತಮ್ಮ ಮಕ್ಕಳಿಗೆ ಇಡುವ ಸಂಪ್ರದಾಯವು ಈಗಲೂ ಇದೆ.

ದೇವಿಯರ ತ್ರಿವಿಧಿಯಲ್ಲಿ ಅವಳ ಉಲ್ಲೇಖವಿದೆ. ಅದು ಹೇಗೆಂದರೆ–

ವಾರಿಜಾಕ್ಷನ ಕಿತ್ತು ಮಾರವೈರಿಯ ನಿಲಿಸಿ
ಧಾರಿಣಿಯ ಮೇಲೆ ಜಪಮೆತ್ತೀಶನ ಬೆರೆದ
ಧೀರೆ ಗುಡ್ಡವ್ವೆ ಶರಣಾಗು.

ವರದಾನಿಗುಡ್ಡಮ್ಮೆಯು ಶಿವಯೋಗವನ್ನು ಆಚರಿಸುತ್ತ ಪರಮಾತ್ಮನಲ್ಲಿ ಬೆರೆದಳೆಂದು ಇದರಲ್ಲಿ ಹೇಳಿದೆ. ಅವಳ ಹೆಸರು ಗಣಸಹಸ್ರದಲ್ಲಿದೆ. ಈಕೆಯು ಬಸವೇಶ್ವರನ ಸಮಕಾಲೀನಳಾಗಿದ್ದಾಳೆ.

---

## ಪುಲಿಗೆರೆಯ ಸೋಮಯ್ಯ.

ಧಾರವಾಡ ಜಿಲ್ಲೆಯಲ್ಲಿರುವ ಈಗಿನ ಲಕ್ಷ್ಮೇಶ್ವರ ಗ್ರಾಮಕ್ಕೆ ಮೊದಲು 'ಪುಲಿಗೆರೆ' ಅಥವಾ 'ಶಾರ್ದೂಲಪುರ'ವೆಂಬ ಹೆಸರಿತ್ತು. ಅದು ಕರ್ನಾಟಕದಲ್ಲಿ ಬಹು ಪ್ರಸಿದ್ಧವಾದ ಪಟ್ಟಣವು. ೧೨ನೇ ಶತಮಾನದ ಹಿಂದೆ ಅಲ್ಲಿ ಅನೇಕ ಚೈತ್ಯಾಲಯಗಳಿದ್ದು ಜೈನ ಸಂಸ್ಕೃತಿಗೆ ಅದು ಮುಖ್ಯ ಸ್ಥಾನವೆಂದು ಗಣಿಸಲ್ಪಟ್ಟಿತ್ತು. ಅಲ್ಲಿ ಬಹುಕಾಲ ಕೆಲವು ರಾಜಮನೆತನದವರೂ ಮಂಡಲಾಧೀಶ್ವರರೂ ರಾಜ್ಯವಾಳಿದ್ದಾರೆ.

ಹೀಗಿರಲು ಈ ಪಟ್ಟಣದಲ್ಲಿ ಸೋಮಣ್ಣನೆಂಬವನು ಜೈನಕುಲದಲ್ಲಿ ಹುಟ್ಟಿ ಜಿನ ಧರ್ಮದಂತೆ ಆಚರಿಸುತ್ತಿದ್ದನು. ಆದರೆ ನಾಡಿ

ನಲ್ಲಿ ಶಿವಾನುಭವದ ತತ್ವಗಳು ಪ್ರಸಾರವಾಗಲು ಅವನು ತನ್ನ ಜಿನ ಧರ್ಮವನ್ನು ಬಿಟ್ಟುಕೊಟ್ಟು ಶಿವಧರ್ಮವನ್ನು ಪಾಲಿಸಹತ್ತಿದನು. ಅವನು ದಿನಾಲು ಒಂದು ಶಿವಾಲಯಕ್ಕೆ ಹೋಗಿ ಲಿಂಗಪೂಜೆಯನ್ನು ತಪ್ಪದೆ ಮಾಡಿಬರುವನು. ಅವನಲ್ಲಿ ಕ್ರಮೇಣ ಶಿವಭಕ್ತಿಯು ಬೆಳೆಯುತ್ತಲೇ ಹೋಯಿತು. ಮುಂದೆ ಅವನು ಶಿವಪೂಜೆ ಇಲ್ಲದೆ ಊಟಮಾಡಲಿಕ್ಕಿಲ್ಲೆಂಬ ವ್ರತವನ್ನು ಇಟ್ಟುಕೊಂಡು ಅದರಂತೆ ಆಚರಿಸಹತ್ತಿದನು. ಆದರೆ ಅವನ ಮಕ್ಕಳೂ ಅವನ ಬಂಧುಬಳಗದವರೂ ಅವನನ್ನು ಅನುವರ್ತಿಸದೆ ತಮ್ಮ ಜಿನ ಧರ್ಮವನ್ನೇ ಪಾಲಿಸುತ್ತ ಬಂದರು.

ಹೀಗಿರಲು ಒಂದು ದಿನ ಸೋಮಣ್ಣನಿಗೆ ಕಣ್ಬೇನೆಯಾಗಿ ಅವನಿಗೆ ಕಣ್ಣುಗಳು ಕಾಣದಂತಾದವು. ಇದರಿಂದ ಅವನು ಶಿವಾಲಯಕ್ಕೆ ಹೋಗುವದು ನಿಂತಿತು. ಆದರೆ ಅವನ ಮಕ್ಕಳೂ ಬಾಂಧವರೂ ಅವನನ್ನು ಶಿವಾಲಯಕ್ಕೆ ಕರೆದುಕೊಂಡು ಹೋಗಲಿಕ್ಕೆ ಒಪ್ಪಲಿಲ್ಲ. ಆದ್ದರಿಂದ ಅವನು ಉಪವಾಸವಿರಹತ್ತಿದನು. ಹೀಗೆ ಕೆಲವು ದಿವಸ ಅವನು ಉಪವಾಸವಿದ್ದರೂ ಕೂಡ ಅವನು ತನ್ನ ವ್ರತವನ್ನು ಬಿಡಲಿಲ್ಲ. ಕಡೆಗೆ ಅವನ ಮಕ್ಕಳು ಅವನು ಸಾಯುತ್ತಾನೆಂದು ಕನಿಕರಪಟ್ಟು ಅವನಿಗೆ--ನಿನಗೆ ಲಿಂಗವನ್ನು ತೋರಿಸುತ್ತೇವೆ ಎಂದು ಹೇಳಿ ಅವನ ಕೈಹಿಡಿದು ಶಿವಾಲಯಕ್ಕೆ ಒಯ್ಯದೆ ಒಂದು ಬಸದಿಗೆ ಕರೆದುಕೊಂಡು ಹೋಗಿ ಅಲ್ಲಿಯ ಜಿನನ ಮೂರ್ತಿಯ ಮುಂದೆ ನಿಲ್ಲಿಸಿದರು. ಆಗ ಅವರು ಅವನಿಗೆ--ಇದೇ ಶಿವಲಿಂಗವು, ಇದನ್ನು ಪೂಜಿಸು, ಎಂದು ಹೇಳಿದರು. ಆಗ ಸೋಮಯ್ಯನು ಆ ಮೂರ್ತಿಯೇ ಲಿಂಗವೆಂದು ಭಾವಿಸಿ ನಿತ್ಯದಂತೆ ಅತ್ಯಂತ ಭಕ್ತಿಯಿಂದ ಪೂಜಿಸಿ ನಮಸ್ಕಾರ ಮಾಡಿದನು. ಅವನ ಈ ಪೂಜೆಯು ಮುಗಿದ ಬಳಿಕ ಅವನ ಮಕ್ಕಳು ಅವನಿಗೆ--ತಂದೆಯೇ, ಏಳೇಳು, ಈ ಜಿನೇಶ್ವರನು ಎಂದೆಂದು ಹೀಗೆಯೇ ತನ್ನನ್ನೇ ಪೂಜೆ ಮಾಡಬೇಕೆಂದು ನಿನಗೆ ಹೇಳುತ್ತಿದ್ದಾನೆ. ಏಳು ಏಳು, ಎಂದು ಅವನನ್ನು ಎಬ್ಬಿಸಿ ಅವನಿಗೆ ಹಾಸ್ಯಮಾಡಹತ್ತಿದರು. ಅದನ್ನು ಸೋಮಯ್ಯನು ಕೇಳಿ--ನಾನು ಶಿವನನ್ನು ಬಿಟ್ಟು ಜಿನ್ನ ಗಿನ್ನನನ್ನು ಪೂಜಿಸಿದೆನೇ ಎಂದು ಅವರಿಗೆ ಕೇಳಲು, ಅವರು--ಇದು ಜಿನ್ನನೋ, ಶಿವನೋ ಎಂಬುದನ್ನು ಸ್ವಲ್ಪ ಕಣ್ಣುತೆರೆದು ನೋಡು, ಎಂದೆನ್ನಲು ಅವನು ಶ್ರಮದಿಂದ

ಕಣ್ತೆರೆದು ನೋಡುವಲ್ಲಿ ಒಂದು ಅದ್ಭುತವಾಯಿತು. ಅವನ ಮುಂದಿದ್ದ ಆ ಜಿನ್ನನ ರೂಪು 'ಛಟ, ಛಟ' ಎಂದು ಸಪ್ಪಳ ಮಾಡುತ್ತ ಹೋಳಾಗಿ ಬಿಟ್ಟಿತು. ಮತ್ತು ಆದರ ಸ್ಥಳದಲ್ಲಿ ಶಿವನು ಪಂಚಮುಖ, ದಶ ಭುಜ, ತ್ರಿನೇತ್ರ, ವೃಷಭಾರೂಢನಾಗಿ ಸೋಮಣ್ಣನ ಇದಿರಿಗೆ ಪ್ರತ್ಯಕ್ಷ ನಾಗಿ ನಿಂತಿದ್ದನು. ಆಗ ಶಿವನು ಅವನಿಗೆ—ಸೋಮಯ್ಯನೇ, ನಾನು ನಿನ್ನ ಭಕ್ತಿಗೆ ಮೆಚ್ಚಿದೆನು. ನಿನಗೇನು ಬೇಕು ಬೇಡು ಎಂದೆನ್ನಲು, ಸೋಮಯ್ಯನು ಅವನಿಗೆ—ನಿಮ್ಮ ಪಾದದಲ್ಲಿ ಸದ್ಭಕ್ತಿಯಿಂದ ಯಾವಾ ಗಲೂ ಇರುವಂತೆ ಕರುಣಿಸಬೇಕು ಎಂದು ಬೇಡಿಕೊಂಡನು. ಶಿವನು ಹಾಗೆಯೇ ಆಗಲೆಂದು ನುಡಿಯಲು, ಸೋಮಯ್ಯನು ಪ್ರತ್ಯಕ್ಷನಾದ ಆ ಶಿವನ ರೂಪಿನಲ್ಲಿಯೇ ಅಡಗಿಬಿಟ್ಟನು.

ಶಿವನು ಸೋಮಯ್ಯನ ಭಕ್ತಿಯು ಚಿರಕಾಲ ಜನರ ಸ್ಮರಣೆಯಲ್ಲಿ ಉಳಿಯಲೆಂದು ಅವನು ಸೋಮೇಶ್ವರನೆಂಬ ಹೆಸರಿನಿಂದ ಆ ದೇವಾಲ ಯದಲ್ಲಿ ನೆಲಿಸಿದನು. ಅಂದಿನಿಂದ ಆ ದೇವಾಲಯವು 'ಹುಲಿಗೆರೆಯ ಸೋಮನಾಥ'ನೆಂಬ ಹೆಸರಿನಿಂದ ನಾಡಿನಲ್ಲಿ ಪ್ರಸಿದ್ಧವಾಯಿತು. ಒಬ್ಬ ವಚನಕಾರನು 'ಹುಲಿಗೆರಿಯ ಸೋಮನಾಥ' ಎಂಬ ಅಂಕಿತವನ್ನಿಟ್ಟು ಕೊಂಡು ತನ್ನ ವಚನಗಳನ್ನು ರಚಿಸಿದ್ದಾನೆ. ಇದು ಈ ದೇವಾಲಯದ ಮಹತ್ವವನ್ನು ಸೂಚಿಸುತ್ತದೆ. ಬಸವೇಶ್ವರನ ತರುವಾಯ ಆದಯ್ಯನು ತನ್ನ ದೇಶವಾದ ಸೌರಾಷ್ಟ್ರ ಅಂದರೆ ಈಗಿನ ಗುಜರಾಥದಿಂದ ಪುಲಿಗೆ ರೆಗೆ ಬಂದು ಸುರಹೊನ್ನೆ ಬಸದಿಯಲ್ಲಿ ಸೌರಾಷ್ಟ್ರ ಸೋಮನಾಥನನ್ನು ಸ್ಥಾಪಿಸಿದ ವೃತ್ತಾಂತವು ಹಿಂದೆಯೇ ಬಂದಿದೆ. ( ಹಿಂದೆ ಪುಟ ೪೮ ನೋಡಿರಿ. ) ಈ ದೇವಾಲಯವು 'ಸೌರಾಷ್ಟ್ರ ಸೋಮನಾಥ' ಎಂಬ ಹೆಸ ರಿನಿಂದ ಪ್ರಸಿದ್ಧವಾಯಿತು. ಆದರೆ ಸೋಮಯ್ಯನ ಮೂಲಕ ಉಂಟಾದ ಸೋಮನಾಥ ದೇವಾಲಯವು ಅದಕ್ಕೂ ಹಿಂದಿನದಾದ ಒಂದು ಪ್ರಸಿದ್ಧ ದೇವಾಲಯವಾಗಿರುತ್ತದೆ. ಸೋಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಇದರಿಂದ ಅವನು ಪುರಾತನ ಕಾಲದವನೆಂದು ಊಹಿಸಬ ಹುದಾಗಿದೆ.

ಸೋಮಯ್ಯನಿಗೆ 'ಸೋಮಣ್ಣ' ಎಂಬ ಬೇರೆ ಹೆಸರೂ ಕೆಲವು ಗ್ರಂಥ ಗಳಲ್ಲಿ ಬಂದಿದೆ.

---

# ಮೈದುನ ರಾಮಯ್ಯ.

ಆಂಧ್ರದೇಶದಲ್ಲಿ ಭೀಮಾವತೀ ಎಂಬ ಗ್ರಾಮವಿದ್ದು ಅಲ್ಲಿ ಸೋಮನಾಥನೆಂಬ ಶೈವ ಬ್ರಾಹ್ಮಣನು ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಮಹಾದೇವಿ. ಉಭಯ ದಂಪತಿಗಳು ಬಹಳ ಬಡವರು. ಆದ್ದರಿಂದ ಅವರು ಕಷ್ಟದಿಂದ ತಮ್ಮ ಜೀವನವನ್ನು ಸಾಗಿಸುತ್ತ ಬಂದರು. ಆದರೂ ಅವರು ಶಂಕರನ ಪ್ರೇಮಿಗಳು. ಶಂಕರನ ಭಜನೆಯಲ್ಲಿಯೇ ಅವರು ಸಂತೋಷದಿಂದ ಕಾಲಕಳೆಯುವರು. ಹೀಗಿರುವಲ್ಲಿ ಮುಂದೆ ಅವರಿಗೆ ಒಬ್ಬ ಮಗನು ಜನಿಸಿದನು. ಅವರು ಆತನಿಗೆ 'ರಾಮಯ್ಯ' ಎಂಬ ಹೆಸರನ್ನಿಟ್ಟರು. ಆದರೆ ಸೋಮನಾಥನು ಮುಂದೆ ಸ್ವಲ್ಪ ದಿವಸಗಳಲ್ಲಿ ಮರಣಹೊಂದಿದನು. ಇದರಿಂದ ಮಹಾದೇವಿಯ ಮೇಲೆ ತನ್ನ ಮಗನನ್ನು ಸಲಹುವ ಭಾರವು ಬೀಳಲು ಅವಳು ತನ್ನ ಬಡತನದಲ್ಲಿ ತನ್ನ ಸಂಸಾರವನ್ನು ಕಷ್ಟದಿಂದ ಸಾಗಿಸುತ್ತ ಬಂದಳು.

ಮಗನು ಸ್ವಲ್ಪ ದೊಡ್ಡವನಾದ ಬಳಿಕ ಮಹಾದೇವಿಯು ಅವನಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ಬಯಸಿ ಅವಳು ಅವನನ್ನು ಒಬ್ಬ ಶೈವ ಬ್ರಾಹ್ಮಣನ ಕಡೆಗೆ ಇಟ್ಟಳು. ಈ ಬ್ರಾಹ್ಮಣನು ಇತರ ಬಾಲಕರೊಡನೆ ಇವನಿಗೂ ಓದ ಕಲಿಸಹತ್ತಿದನು. ರಾಮಯ್ಯನು ಬಹು ಕುಶಾಗ್ರಬುದ್ಧಿಯುವನು. ಅವನು ಗುರುವು ಹೇಳಿದ್ದನ್ನು ತಿಳಿದುಕೊಂಡು ತನ್ನ ಅಭ್ಯಾಸದಲ್ಲಿ ಎಲ್ಲರಿಗಿಂತಲೂ ಮಿಗಿಲಾದವನೆಂದು ಎಣಿಸಿಕೊಂಡನು.

ಹೀಗಿರುವಲ್ಲಿ ಓದುವ ಮಕ್ಕಳೆಲ್ಲರೂ ದೀಪಾವಳಿಯ ಹಬ್ಬದ ಪೂರ್ವದಲ್ಲಿ ಒಂದು ದಿನ ಒಂದು ಗಿಡದಡಿಯಲ್ಲಿ ನೆರೆದು ಅವರು ತಮ್ಮ ತಮ್ಮೊಳಗೆ ಮಾತನಾಡುತ್ತಿರುವಾಗ—ನಾವು ಹಬ್ಬಕ್ಕೆ ನಮ್ಮ ಅಕ್ಕಭಾವಂದಿರನ್ನು ಕರೆತರುವೆವು. ಅವರೊಡನೆ ನಾವು ನಮ್ಮ ಹಬ್ಬವನ್ನು ಮಾಡುವೆವು ಎಂದ ಹೇಳಿಕೊಳ್ಳಹತ್ತಿದರು. ಅದನ್ನು ರಾಮಯ್ಯನು ಕೇಳಿ—ನಾನೂ ನನ್ನಕ್ಕಭಾವರನ್ನು ಕರೆತರುವೆನು ಎಂದೆನಲು ಆ ಮಕ್ಕಳೆಲ್ಲರೂ ಅವನಿಗೆ—ನೀನೊಬ್ಬ ಮುಂಡೆಯ ಮಗ. ನಿನಗೆಲ್ಲಿ ಅಕ್ಕಭಾವಂದಿರಿದ್ದಾರೆ ? ಅವರನ್ನೆಲ್ಲಿಂದ ತರುವೆ? ನೀನು ದರಿದ್ರ. ನೀನೇನು ಹಬ್ಬ ಮಾಡುವಿ ? ಎಂದು ಅವನಿಗೆ ಚುಚ್ಚಿ ನುಡಿದು ಹಾಸ್ಯ ಮಾಡಿದರು.

ಈ ನುಡಿಗಳು ರಾಮಯ್ಯನ ಮನಸ್ಸಿಗೆ ಬಹಳ ತಾಕಿದವು. ಅವನು ಅಳುತ್ತ ತನ್ನ ತಾಯಿಯ ಬಳಿಗೆ ಬಂದು—ನನ್ನ ಅಕ್ಕ ಭಾವಂದಿರು ಎಲ್ಲಿದ್ದಾರೆ ಎಂದು ಕೇಳಿದನು. ಮಹಾದೇವಿಯಾದರೂ ಶಿವನಲ್ಲಿ ಅತ್ಯಂತ ನಿಷ್ಠೆಯುಳ್ಳವಳು. ಅವಳು ತನ್ನ ಮಗನ ಇಂಗಿತವನ್ನು ತಿಳಿದುಕೊಂಡು—ನಿನಗೆ ಅಕ್ಕ ಭಾವಂದಿರು ಇದ್ದಾರೆ ಎಂದು ಹೇಳಿದಳು. ಅವರ ಹೆಸರು ಹೇಳು ಎಂದು ಬಾಲಕನು ಅಳುತ್ತಿರಲು, ತಾಯಿಯು ಅವನಿಗೆ–ನಿನ್ನ ಅಕ್ಕ ಗೌರಿ, ನಿನ್ನ ಭಾವ ಚನ್ನಮಲ್ಲಿಕಾರ್ಜುನ, ಅವರು ಇರುವ ಊರು ಶ್ರೀಶೈಲ ಎಂದು ಹೇಳಲು ಬಾಲಕನು ಅವರನ್ನು ಹಬ್ಬಕ್ಕೆ ಕರೆತರುವೆನೆಂದು ಶ್ರೀಶೈಲಕ್ಕೆ ಹೊರಟನು. ಅವನು ಅಲ್ಲಿಗೆ ಹೋಗಿ ಗೌರಕ್ಕಾ, ಚನ್ನಮಲ್ಲಯ್ಯಾ, ಎಂದು ಕೂಗಿ ಕರೆಯಹತ್ತಿದನು. ಆದರೆ ಯಾರೂ ಮಾತಾಡದಿರಲು ಬಾಲಕನು—ನಾನೆಂಥ ಪಾಪಿಯು, ಎಂದು ಹಲುಬುತ್ತ ದುಃಖಿಸುತ್ತ ಅರಣ್ಯವನ್ನು ಸುತ್ತುತ್ತ ತಿರುಗಹತ್ತಿದನು. ಅವನು ಅಳಿಗಿಳಿಗಳನ್ನೂ ತರುಗಿರಿಗಳನ್ನೂ ಖಗ ಮೃಗಗಳನ್ನೂ ಕೇಳುತ್ತ ಸಾಗಿದನು. ಅವನು ಕಲ್ಲುಮುಳ್ಳುಗಳನ್ನು ತುಳಿಯುತ್ತ ಹೋದನು. ಕಾಲುಗಳಿಂದ ನೆತ್ತರು ಬಸಿಯುತ್ತಿದ್ದರೂ ಲಕ್ಷಿಸಲಿಲ್ಲ. 'ಹಬ್ಬ ಹತ್ತಿರವಾಯಿತ್ತು. ನಮ್ಮಕ್ಕ ಭಾವನನ್ನು ಕಾಣಿರೇ' ಎಂದು ತಾನು ಕಂಡ ಪಕ್ಷಿಗಳನ್ನೂ ಮರಗಳನ್ನೂ ಸಿಂಹ ಶಾರ್ದೂಲಗಳನ್ನೂ ಕೇಳುವನು. ಹಸಿವೆ ಬಳಲಿಕೆಗಳಿಂದ ಎಷ್ಟು ಕಷ್ಟಪಟ್ಟರೂ ತನ್ನ ಅಕ್ಕ ಭಾವಗಳ ಸ್ಮರಣೆಯೊಂದೇ ಅವನಿಗಾಯಿತು. ಹೀಗಿರುವಲ್ಲಿ ಅವನು ಬಸವಳಿದು ಒಂದು ಕೋಡುಗಲ್ಲಿನ ಕೆಳಗೆ ಬಂದು ಬಿದ್ದನು. ಆಗ ಅವನು ನಿಶ್ಚೇಷ್ಟಿತನಾಗಿರಲು ಶಿವನಲ್ಲಿ ಅವನಿಗೋಸ್ಕರ ಕರುಣೆಯುಂಟಾಗಿ ಅವನು ಗಿರಿಜೆ ಸಹಿತ ಪ್ರತ್ಯಕ್ಷನಾಗಿ ರಾಮಯ್ಯನ ಕೈ ಹಿಡಿದು, ಅವನನ್ನು ಸಂತವಿಸಿ, ಅವನಿಗೆ ಅಂದದ್ದು—ನಾವೇ ನಿನ್ನ ಅಕ್ಕ ಭಾವಂದಿರು. ನಮ್ಮನ್ನು ನೀನು ಕಂಡೆ. ಇನ್ನು ಮೇಲೆ ನೀನು ಮನೆಗೆ ತಿರುಗಿಹೋಗು ಎಂದು ಹೇಳಲು ಬಾಲಕನು ಅವರಿಗೆ—ನೀವು ನಮ್ಮ ಮನೆಗೆ ಬಂದಲ್ಲದೆ ಹಬ್ಬವನ್ನು ಮಾಡೆವು. ನೀವು ನನ್ನೊಡನೆ ಊರಿಗೆ ಬರಬೇಕು ಎಂದು ನುಡಿದನು. ಆಗ ಶಿವನೂ ಅಗಜೆಯೂ ಬಾಲಕನ ಮುಗ್ಧಭಕ್ತಿಗೆ ಮೆಚ್ಚಿದವರಾಗಿ ಅವನೊಡನೆ ಭೀಮಾವತೀ ಗ್ರಾಮಕ್ಕೆ ಬಂದು ತಾಯಿಮಗನೊಡನೆ ಹಬ್ಬವನ್ನು ತೀರಿಸಿದರು. ಆಗ ಶಿವನು ತನಗೆ ಮೈದುನನಾಗಿ ಆಚರಿಸಿದ ರಾಮಯ್ಯನ

ಭಕ್ತಿಗೆ ಮೆಚ್ಚಿ ಅವನಿಗೆ ವೀರಶೈವೋಪದೇಶವನ್ನು ಮಾಡಿ ಇಷ್ಟಲಿಂಗದ ಮೂಲಕ ನಾನು ನಿನ್ನಲ್ಲಿ ಸದಾ ವಾಸಿಸುತ್ತೇನೆಂದು ಅಭಯವನ್ನಿತ್ತು ಅಲ್ಲಿಯೇ ಅಂತರ್ಧಾನನಾದನು.

ಅಂದಿನಿಂದ ರಾಮಯ್ಯನು ವೈದುನ ರಾಮಯ್ಯನೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧನಾದನು. ಅವನು ವೀರಶೈವೋಪದೇಶವನ್ನು ಹೊಂದಿ ಶಿವಾನುಭವದ ಆಚರಣೆಯಂತೆ ನಡೆಯುತ್ತ ಒಬ್ಬ ಶ್ರೇಷ್ಠ ಶಿವಶರಣನೆಂದೆನಿಸಿಕೊಂಡನು. ವೈದುನ ರಾಮಯ್ಯನು ವಚನಕಾರನಿದ್ದಾನೆ. ಅವನ ನಾಲ್ಕು ವಚನಗಳು ಮಾತ್ರ ನಮಗೆ ದೊರೆತಿವೆ. 'ಮಹಾಲಿಂಗ ಚನ್ನರಾಮ' ಎಂಬುದೇ ಅವನ ಮುದ್ರಿಕೆಯು.

## ವಚನಗಳು.

(೧) ಮಳಲಲ್ಲರಸಲುಂಟೇ? ನೆಳಲಿಗೆ ತಡೆಯುಂಟೇ? ರಣದಲ್ಲಿ ತಪ ಉಂಟೇ? ನೇಹ ತಪ್ಪಿದಲ್ಲಿ ಮೋಹವನರಸಲುಂಟೇ? ಮಹಾಲಿಂಗ ಚನ್ನರಾಮನ ಮನ ಮುರಿದ ಬಳಿಕ ಕಂಗಳಿಗೆ ವಿಷವಯ್ಯ.

(೨) ಹೊಲೆಯರಲ್ಲುಂಡೆ. ನೀ ಕುಲವಂತನೇ? ತರುಳನ ಕೊಲಿಸಿದೆ. ನೀ ಕರುಣಾವಂತನೇ? ತಿರಿದುಂಬೆ. ನೀ ಸಿರಿವಂತನೇ? ಪಂಚವರ್ಣದ ಮುಖ. ನೀ ಚೆಲುವನೇ? ಕಂಚಿಲ್ಲದೆ ಹಂಚಿನಲ್ಲುಂಬೆ. ಮರುಳ್ಗಳನೊಡಗೂಡಿ ಬೂದಿಯಂ ಪೂಸಿದೆ. ನಮ್ಮಕ್ಕನೊಡನಾಡಿ ನೀ ಸೊಕ್ಕಿದೆಯಾ ಮಹಾಲಿಂಗ ಚನ್ನರಾಮಾ?

(೩) ಗಣಂಗಳ ಬರವ ಕಂಡು ಕೈಮುಗಿದು ಅಂಜಲೇಬೇಕು. ಶರಣೆನ್ನಲೊಲ್ಲದೀ ಮನವು. ಆಳ್ದನೆಂದು ನಂಬಿ ನಂಬಲೊಲ್ಲದಾಗಿ ಮಹಾಲಿಂಗ ಚನ್ನರಾಮನೆನ್ನ ಕೆಡೆ ನೋಡಿ ನಗುತ್ತಲೈದಾನೆ.

(೪) ಎನಗೆ ನೀ ಕಟ್ಟುವರೆ ಎಂಬಲ್ಲಿ ಕೇಳು ಭಂಡಾರಿ ಬಸವಣ್ಣನೇ, ಎನಗೆ ನೀ ಕಟ್ಟುವರೆ ಕೇಳು ನಂಬಿಯಣ್ಣನೇ, ಎನಗೆ ನೀ ಕಟ್ಟುವರೆ ಎಂಬಲ್ಲಿ ಕೇಳು ಅಜಗಣ್ಣನೇ, ಆನೆ ಮುರಿದಲ್ಲಿ ಸುಂಡಾಲವೇ? ಆನಿಲ್ಲದಿರ್ದಡೆ ನೀನಿಲ್ಲ. ನೀನಿಲ್ಲದಿರ್ದೊಡೆ ಆನಿಲ್ಲ. ಆನು ನೀನೆಂಬುದಂತಿರಲಿ. ಹಿಡಿಯೋ, ಮುಡಿಯೋ, ನೀ ಮಾಡಿದಂತಿಪ್ಪೆನು.

ಸಾತ್ವಿಕ ಸಜ್ಜನ ಸದ್ಗುರುವಿನಿಂದೆ ಬದುಕಿದೆನಾಗಿ ನಿಮಗಾನಂಜೆ ಮಹಾಲಿಂಗ ಚನ್ನರಾಮಾ.

ಈ ಕಡೆಯ ವಚನದ ಮೇಲಿಂದ ಮೈದುನ ರಾಮಯ್ಯನು ಬಸವೇಶ್ವರನ ತರುವಾಯ ಪ್ರಸಿದ್ಧಿಗೆ ಬಂದನೆಂಬುದು ಸ್ಪಷ್ಟವದೆ. ಇವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಇವನು ಶಿವಶರಣರಲ್ಲಿ ಪುರಾತನ ಕಾಲದವನು. ಇವನ ಹೆಸರು ಶಿವಶರಣರ ಹೆಸರುಗಳ ಯಾವ ಮಾಲಿಕೆಯಲ್ಲಾದರೂ ಬರುವದುಂಟು. ಇಷ್ಟು ಈತನು ಪ್ರಸಿದ್ಧನಾಗಿದ್ದಾನೆ. ಆರಂಭದಲ್ಲಿ ಇವನು ಮುಗ್ಧಭಕ್ತಿಯುಳ್ಳವನಾಗಿ ಗಿರಿಜೆ ಮತ್ತು ಶಿವ ಇವರು ತನ್ನ ಅಕ್ಕ ಭಾವಂದಿರು ಎಂದು ತಿಳಿದು ಆ ಬಗೆಯ ಪ್ರೇಮದಿಂದ ವರ್ತಿಸಿ ಪರಮಾತ್ಮನನ್ನು ಒಲಿಸಿದ್ದಾನೆ. ಇದು ಅವನ ವೈಶಿಷ್ಟ್ಯವು. ಆರಂಭದಲ್ಲಿ ಚಿಕ್ಕಮಕ್ಕಳಂತೆ ಮುಗ್ಧಭಕ್ತಿಯುಳ್ಳವನಾದರೂ ಮುಂದೆ ಅವನು ಒಬ್ಬ ಶ್ರೇಷ್ಠ ಶಿವಾನುಭವಿಯಾಗಿ ಆಚರಿಸಿದನೆಂಬುದು ನಾವು ಮೇಲೆ ಉಲ್ಲೇಖಿಸಿದ ವಚನಗಳ ಮೇಲಿಂದ ಕಂಡು ಬರುತ್ತದೆ. ರಾಮಯ್ಯನು ಆಂಧ್ರದೇಶದವನು. ಅವನು ಬಹುಶಃ ಶ್ರೀಶೈಲಕ್ಕೆ ಸಮೀಪವರ್ತಿಯಾದ ಕೆಲವೊಂದು ಗ್ರಾಮದಲ್ಲಿದ್ದನೆಂದು ತೋರುತ್ತದೆ. ಬಸವೇಶ್ವರನ ಕಾಲದಲ್ಲಿ ಅನೇಕ ಆಂಧ್ರರು ವೀರಶೈವ ಧರ್ಮವನ್ನು ಸ್ವೀಕರಿಸಿ ಕನ್ನಡ ಭಾಷೆಯಲ್ಲಿ ವಚನಗಳನ್ನು ರಚಿಸಿದ್ದಾರೆ. ಅಂಥವರಲ್ಲಿ ಮೈದುನ ರಾಮಯ್ಯನು ಒಬ್ಬನು ಇದ್ದಾನೆ.

---

## ಕೋಳೂರು ಕೊಡಗೂಸು

ಕಲಬುರ್ಗಿ ಜಿಲ್ಲೆಯಲ್ಲಿರುವ ಯಾದಗಿರಿಯಿಂದ ಪಶ್ಚಿಮಕ್ಕೆ ೧೬ ಮೈಲು ಮತ್ತು ಸುರಪುರದಿಂದ ಈಶಾನ್ಯಕ್ಕೆ ೧೪ ಮೈಲು ದೂರದಲ್ಲಿ ಕೋಳೂರೆಂಬ ಗ್ರಾಮವಿದೆ. ಅದಕ್ಕೆ ಈಗ ಕನ್ನೆಕೋಳೂರೆಂದು ಹೆಸರಿದೆ. ಇಲ್ಲಿ ಶಿವದೇವನೆಂಬ ಶಿವಭಕ್ತನೂ ಅವನ ಹೆಂಡತಿಯೂ ವಾಸ ಮಾಡುತ್ತಿದ್ದರು. ಅವರು ಶಿವನಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿ ತಮ್ಮ ಗ್ರಾಮದಲ್ಲಿದ್ದ ಕಲ್ಲೇಶ್ವರ ಲಿಂಗಕ್ಕೆ ದಿನಾಲು ಕಪಿಲ ವರ್ಣದ ಗೋವಿನ ಹಾಲನ್ನು ಒಂದು ಬಳ್ಳತುಂಬ ನೈವೇದ್ಯ ಕೊಡುವ ನೇಮ

ವನ್ನು ಇಟ್ಟುಕೊಂಡಿದ್ದರು. ಅವರಿಗೆ ಚನ್ನಕ್ಕನೆಂಬ ೭ ವರುಷದ ಚಿಕ್ಕ ಮಗಳೊಬ್ಬಳಿದ್ದಳು. ತಾಯಿ ತಂದೆಗಳು ಅವಳ ಮೇಲೆ ಅತ್ಯಂತ ಪ್ರೀತಿಯುಳ್ಳವರಾಗಿದ್ದರು.

ಮುಂದೆ ಕೆಲವೊಂದು ದಿವಸ ತಾಯಿ ತಂದೆಗಳು ದೇವರ ದರ್ಶನದ ಸಲುವಾಗಿ ಪರ ಊರಿಗೆ ಹೋಗುವಾಗ ಅವರು—ಮಗಳೇ ನಾವು ಊರಿಗೆ ಹೋಗುತ್ತೇವೆ. ನೀನು ಹಾಲನ್ನು ಬಟ್ಟಲಲ್ಲಿ ಒಯ್ದು ಶಿವನಿಗೆ ಅರ್ಪಿಸುತ್ತಿರು ಎಂದು ಹೇಳಿ ಹೋದರು. ಆಗ ಚನ್ನಕ್ಕನು—ಇಂದು ನಾನು ದೇವರಿಗೆ ಹಾಲನೆರೆಯುವೆನೆಂದು ಬಲು ಹಿಗ್ಗಿ ಅವಳು ತನ್ನ ತಾಯಿ ತಂದೆಗಳು ಮಾಡುತ್ತಿದ್ದಂತೆ ಸ್ನಾನವನ್ನು ಮಾಡಿ ಮಡಿಬಟ್ಟೆಯನ್ನು ಉಟ್ಟುಕೊಂಡು ಭಸಿತವನ್ನು ಧರಿಸಿ, ಕಿವಿಯಲ್ಲಿ ಹುವ್ವಿನೋಲೆಯನ್ನಿಟ್ಟು ಬಳ್ಳದ ತುಂಬ ಹಾಲನ್ನು ತೆಗೆದುಕೊಂಡು ಕಲ್ಲೇಶ್ವರನ ದೇವಾಲಯಕ್ಕೆ ಹೋಗಿ ಅಲ್ಲಿ ಹಾಲನ್ನು ದೇವರ ಮುಂದಿರಿಸಿ, ಮುಗ್ಧಭಕ್ತಿಯಿಂದ—ಲಿಂಗವೇ ಹಾಲನ್ನು ತಂದಿದ್ದೇನೆ. ಅದನ್ನು ಸವಿಸು, ಎಂದು ಬಿನ್ನವಿಸಿಕೊಂಡಳು. ಆದರೆ ಶಿವನು ಸುಮ್ಮನಿರಲು ಅವಳು ಅವನನ್ನು ರಮಿಸಿ, ಬಣ್ಣಿಸಿ ಹಾಲನ್ನುಣ್ಣೆಂದು ಹೇಳಹತ್ತಿದಳು. ಆದರೆ ದೇವರು ಕುಡಿಯದಿರಲು ಅವಳು—ಗುರುಕಲ್ಲಿನಾಥಾ ಎಂದು ಬಿನ್ನೈಸುತ್ತ ನಾನು ದೂರ ಮರೆಗೆ ನಿಲ್ಲುವೆನು. ನೀನು ಉಣ್ಣು ಎಂದು ಹೇಳಿ ಹಿಂದೆ ಸರಿದು ಅಲ್ಲಿ ಕೆಲಹೊತ್ತು ನಿಂತು, ತಿರುಗಿ ಬಂದು ನೋಡುತ್ತಾ, ಹೀಗೆ ಅವಳು ಬಹಳ ವೇಳೆ ಅನೇಕ ರೀತಿಯಿಂದ ಹಾಲು ಕುಡಿ ಎಂದು ದೇವರಿಗೆ ಹೇಳಿಕೊಳ್ಳುತ್ತಾ ಉಳಿದಳು. ಆದರೆ ಹಾಲು ಇದ್ದ ಹಾಗೆಯೇ ಇರಲು,—ತಂದೆ, ನೀನಾರೋಗಿಸದೆ ಇರುವ ಕಾರಣವೇನು? ಈ ಹಾಲು ನಿನಗೆ ಬೇಸರವಾಯಿತೇ? ಅಥವಾ ನಾನು ಬಾಲೆ ಎಂದು ನೀನು ಉಣಲೊಲ್ಲೆಯೋ? ನೀನು—ನನಗೆ ಬೇಕು, ಬೇಡ ಎಂಬುದನ್ನು ಏಕೆ ಉಸಿರಲೊಲ್ಲೆ? ಎಂದು ದುಃಖಿಸುತ್ತ ಎಷ್ಟು ಹೇಳಿಕೊಂಡರೂ ಶಿವನು ಉಣ್ಣದಿರಲು ಆ ಬಾಲೆಯು—ನೀನು ಈ ಹಾಲನ್ನು ಆರೋಗಿಸದ ಹೊರ್ತು ನಾನು ನಿನ್ನನ್ನು ಬಿಡೆನು. ನಾನು ಹಿಂದಕ್ಕೆ ಮನೆಗೆ ಹೋಗುವವಳಲ್ಲ. ನೀನು ಕುಡಿಯದಿದ್ದರೆ ನಾನು ಇಲ್ಲಿಯೇ ಸತ್ತು ಬೀಳುವೆನು ಎಂದು ನುಡಿದು ಅವಳು ತನ್ನ ತಲೆಯನ್ನು ಅಲ್ಲಿದ್ದ ಕಲ್ಲಿಗೆ ತಾಟಿಸಿಕೊಳ್ಳಲು ಸಿದ್ಧಳಾದಳು. ಮುಂದೆ

ಅವಳು ತನ್ನ ಪ್ರಾಣವನ್ನು ಕೊಡುತ್ತಿರುವಷ್ಟರಲ್ಲಿ ಪರಮಾತ್ಮನು ಪ್ರತ್ಯಕ್ಷನಾಗಿ ಅವಳ ಕಯ್ಯನ್ನು ಹಿಡಿದು ಮುಗುಳ್ನಗೆ ನಕ್ಕು ಬಾಲಿಕೆಯು ತಂದಂಥ ಬಟ್ಟಲ ಹಾಲನ್ನು ಕುಡಿದುಬಿಟ್ಟನು. ಅದನ್ನು ಆ ಬಾಲೆಯು ನೋಡಿ ಆನಂದಬಡುತ್ತ ಮನೆಗೆ ತಿರುಗಿಹೋದಳು.

ಹೀಗೆಯೇ ಅವಳು ಪ್ರತಿದಿನ ಹಾಲನ್ನು ಚನ್ನಾಗಿ ಕಾಯಿಸಿ ಗುಡಿಗೆ ಹೋಗಿ ಅದನ್ನು ದೇವರ ಮುಂದೆ ಇಡಲು ದೇವರು ತಪ್ಪದೆ ಅದನ್ನು ಕುಡಿಯುತ್ತಿದ್ದನು. ಅವನು ಕುಡಿದ ಬಳಿಕ ಚನ್ನಕ್ಕನು ಬರಿಯ ಬಟ್ಟಲನ್ನು ಮನೆಗೆ ತರುತ್ತಿದ್ದಳು.

ಈಪ್ರಕಾರ ಕೆಲವು ದಿನ ಗತಿಸಲು ಊರಿಗೆ ಹೋದ ತಂದೆ ತಾಯಿಗಳು ಮನೆಗೆ ತಿರುಗಿಬಂದರು. ಅವರು ಬರುವಾಗ ಇದಿರಿನಲ್ಲಿ ಮಗಳು ಗುಡಿಗೆ ಹೋಗಿ ತಿರುಗಿ ಬರುವದನ್ನು ಕಂಡು ಅವರು ಆ ಬಟ್ಟಲಲ್ಲಿ ಹಾಲಿಲ್ಲದ್ದನ್ನು ನೋಡಿ, ತಂದೆಯು ಅವಳಿಗೆ—ಈ ಬಟ್ಟಲಲ್ಲಿ ಹಾಲಿಲ್ಲ, ಅದನ್ನು ನೀನು ಚಲ್ಲಿದೆಯೋ ಅಥವಾ ನೀನೇ ಕುಡಿದಿಯೋ ಎಂದು ಅಬ್ಬರಿಸಿ ಕೇಳಲು, ಅವಳು ಹಾಲನ್ನು ಲಿಂಗಕ್ಕೆ ನೀಡಿದೆನು, ಲಿಂಗವು ಕುಡಿಯಿತು ಎಂದು ಹೇಳಿದಳು. ಅದಕ್ಕೆ ಅವನು—ಕಲ್ಲು ಲಿಂಗವು ಎಂದಾದರೂ ಕುಡಿಯುವದುಂಟೇ? ನೀನು ಹೇಳುವದು ಸಟೆ ಎಂದು ನುಡಿದು ಮರುದಿನ ಅವಳು ಅಂದದ್ದನ್ನು ಪರೀಕ್ಷಿಸಬೇಕೆಂದು ಆಗ ಸುಮ್ಮನಾದನು.

ಮರುದಿನ ಅವನು ತನ್ನ ಮಗಳಿಗೆ ಹಾಲನ್ನು ಅಳೆದು ಕೊಟ್ಟು ಗುಡಿಗೆ ಹೋಗೆಂದು ಅವಳನ್ನು ಮುಂದೆ ಕಳಿಸಿದನು. ಅವಳು ಮುಂದೆ ಹೋದಹಾಗೆ ತಾನೂ ಅವಳ ಹಿಂದೆ ಹೋಗಿ ಗುಡಿಯಲ್ಲಿ ಮರೆಗೆ ನಿಂತು ನೋಡಹತ್ತಿದನು. ಆಗ ಕಲ್ಲಿನಾಥನು ಈ ಬಾಲಿಕೆಯ ಮುಗ್ಧಭಕ್ತಿಯನ್ನು ಜಗಕ್ಕೆ ತೋರಬೇಕೆಂದು ಬಯಸಿ ಅವಳು ಮುಂದಿಟ್ಟ ಹಾಲನ್ನು ಮುಟ್ಟಲಿಲ್ಲ.

ಆಗ ತಂದೆಯು ಮುಂದೆಬಂದು ಘುಡುಘುಡಿಸುತ್ತ ಮಗಳಿಗೆ—ನೀನು ನಿನ್ನೆ ಹೇಳಿದ್ದೆಲ್ಲವೂ ಸುಳ್ಳು. ಹಾಲನ್ನು ನೀನೇ ಕುಡಿದೆ. ನೀನು ಲಿಂಗದ್ರೋಹಿ. ನಿನ್ನನ್ನು ಕಡಿದುಹಾಕುವೆನು ಎಂದು ಅಬ್ಬರಿಸಿ ಮುಂದೆ

ಬರಲು ಆ ಕನ್ನೆಯು ಭೀತಿಗೊಂಡು—ಹಾ, ಶಿವನೇ, ಹಾ! ನೀನೇ ನನಗೆ ಗತಿಯು, ನನ್ನನ್ನು ಕಾಯು ಎಂದು ಒರಲುತ್ತ ಓಡಿ ಹೋಗುವದರಲ್ಲಿದ್ದಳು. ಅಷ್ಟರಲ್ಲಿ ಶಿವನು ರೂಪುಗೊಂಡು ತನ್ನ ಅಭಯ ಹಸ್ತವನ್ನು ಮುಂದೆ ನೀಡಿ ತನ್ನ ಮುಂದಿದ್ದ ಬಟ್ಟಲಲ್ಲಿಯ ಹಾಲನ್ನು ಕುಡಿದು ಓಡಿಹೋಗುತ್ತಿದ್ದ ಬಾಲಿಕೆಯ ಸೆರಗನ್ನು ಹಿಡಿದು ಆಕೆಯನ್ನು ತನ್ನಲ್ಲಿ ಅಡಗಿಸಿಕೊಳ್ಳುತ್ತಿದ್ದನು. ತಂದೆಯು ಈ ಅದ್ಭುತವನ್ನು ಕಂಡು ಚಕಿತನಾಗಿ— ನನ್ನ ಮಗಳು ನಿಜವಾದ ಶರಣೆಯು. ಅವಳು ಹೇಳಿದ್ದು ನಿಜವು. ಆದರೆ ಅವಳು ನನ್ನನ್ನು ಬಿಟ್ಟು ಹೋಗುತ್ತಿದ್ದಾಳೆ. ಅವಳನ್ನು ನಾನು ಬಿಡಲಾರೆನು ಎಂದು ಅವಳ ಕೂದಲುಗಳನ್ನು ಹಿಡಿಯಲು ಆ ಕೂದಲುಗಳು ಲಿಂಗದ ಹೊರಗೆಯೇ ಉಳಿದವು ಮತ್ತು ಅವಳ ದೇಹವು ಲಿಂಗದ ಒಳಗೆ ಸೇರಿ ಶಿವನಲ್ಲಿಯೇ ಅವಳು ಅಡಗಿಬಿಟ್ಟಳು.

ಕಲ್ಲಿನಾಥನ ದೇವಾಲಯವು ಕೋಳೂರಲ್ಲಿ ಈಗಲೂ ಇದೆ. ಅದರಲ್ಲಿಯ ಲಿಂಗದ ಮೇಲೆ ಆಕೆಯ ತಲೆಗೂದಲುಗಳ ಗುರುತುಗಳಿವೆ. ಈ ಗ್ರಾಮವು ಪುಣ್ಯಕ್ಷೇತ್ರವೆಂದು ಈಗಲೂ ಭಾವಿಸಲ್ಪಟ್ಟಿದೆ.

ಕೋಳೂರು ಕೊಡಗೂಸೆಂದು ಆಕೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವಳು ಬಹಳ ಹಿಂದಿನವಳು. ಅನೇಕ ಕವಿಗಳು ಅವಳ ಚರಿತ್ರೆಯನ್ನು ಬಹು ಸುಂದರವಾಗಿ ತಮ್ಮ ಕವನಗಳಲ್ಲಿ ವರ್ಣಿಸಿದ್ದಾರೆ.

ದೇವಿಯರ ತ್ರಿವಿಧಿಯಲ್ಲಿ ಆಕೆಯ ಉಲ್ಲೇಖವು ಇದ್ದುದು ಹೇಗೆಂದರೆ—

ಬಾಲವಯದಲಿ ಸತತ । ಪಾಲನೀಶಗೆ ಕುಡಿಸಿ
ಸಾಲೋಕ್ಯ ಪದವ ಸೇರಿ ನಿಜದೊಳು ನಿಂದ
ಕೋಳೂರು ಹೆಣ್ಣೆ ಶರಣಾಗು.

# ಮಾದರ ಚೆನ್ನಯ್ಯ.

ಮಾದರ ಚೆನ್ನಯ್ಯನು ಶಿವಶರಣರಲ್ಲಿ ಅತ್ಯಂತ ಪ್ರಖ್ಯಾತನು. ಅವನನ್ನು ಸ್ಮರಿಸದ ಯಾವ ವೀರಶೈವ ಕವಿಯೂ ವಚನಕಾರನೂ ಇರುವದಿಲ್ಲ. ಬಸವೇಶ್ವರನು ತನ್ನ ವಚನಗಳಲ್ಲಿ ಅವನನ್ನು ಆಗಿಂದಾಗ ಸ್ಮರಿಸುತ್ತಾನೆ. ಅವನ ವಿಷಯವಾಗಿ ವೀರಶೈವ ಗ್ರಂಥಕಾರರು ಇಷ್ಟು ಪೂಜ್ಯಭಾವವನ್ನು ತಾಳಿದ್ದಾರೆ.

ಚೆನ್ನಯ್ಯನು ಜಾತಿಯಿಂದ ಮಾದರನು. ಆದರೂ ಅವನು ಅತ್ಯಂತ ಜ್ಞಾನಿಯು. ಅವನು ವಚನಕಾರನೂ ಇದ್ದಾನೆ. ನಮಗೆ ದೊರೆದ ಅವನ ಹತ್ತು ವಚನಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ. ಅವನ ಒಂದು ವಚನ ದಿಂದ ಅವನು ಮೊದಲು ಚರ್ಮವನ್ನು ಹದಮಾಡಿ ಜನರು ಮೆಟ್ಟುವ ಜೋಡುಗಳನ್ನು ಮಾಡುವ ಕಾಯಕವನ್ನು ಕೈಕೊಂಡಿದ್ದನೆಂದು ತೋರು ತ್ತದೆ. ಆದರೆ ಮುಂದೆ ಅವನು ಅಡವಿಗೆ ಹೋಗಿ ಹುಲ್ಲನ್ನು ಕೊಯ್ದು ಪಟ್ಟಣದಲ್ಲಿ ತಂದುಹಾಕುವ ಕಾಯಕವನ್ನು ಕೈಕೊಂಡನು.

ಮಾದರ ಚೆನ್ನಯ್ಯನು ಪ್ರಸಿದ್ಧಿಗೆ ಬಂದದ್ದು ತಮಿಳು ದೇಶದ ಲ್ಲಿದ್ದ ಕಾಂಚೀ ಪಟ್ಟಣದಲ್ಲಿ. ಆದರೆ ಅವನು ಕನ್ನಡ ಭಾಷೆಯಲ್ಲಿ ವಚನಗಳನ್ನು ರಚಿಸಿರುವದರಿಂದ ಅವನು ಕನ್ನಡಿಗನಾಗಿದ್ದನೆಂಬದು ಸ್ಪಷ್ಟವು. ಅವನು ಮೊದಲು ಕರ್ನಾಟಕದಲ್ಲಿದ್ದು ಹಿಂದುಗಡೆ ತಮಿಳು ದೇಶಕ್ಕೆ ಹೋಗಿರಬಹುದೆಂದು ತೋರುತ್ತದೆ.

ಚೆನ್ನಯ್ಯನು ಕಾಂಚೀಪಟ್ಟಣದಲ್ಲಿದ್ದಾಗ್ಗೆ ಕರಿಕಾಲಚೋಳನು ರಾಜ್ಯವಾಳುತ್ತಿದ್ದನು. ಈ ರಾಜನು ಕ್ರಿ. ಶ. ೧೦೭೦ ರಿಂದ ೧೧೧೮ ರ ವರೆಗೆ ಅತ್ಯಂತ ಘನತೆಯಿಂದ ರಾಜ್ಯವಾಳಿದನು. ಅವನಿಗೆ ರಾಜೇಂದ್ರ. ಚೋಳ, ಮತ್ತು ಕುಲೋತ್ತುಂಗ ಚೋಳ ಎಂಬ ಹೆಸರುಗಳೂ ಇದ್ದವು. ೧ ಅವನು ಅತ್ಯಂತ ಶಿವಮತಾಭಿಮಾನಿಯು. ಅವನು ತಮಿಳು ವಾಙ್ಮಯದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿರುವ ಪಿರಿಯ

(1) History of the Shri Vaishnawas by T. A. Gopinathrao P. 38 published by the University of Madras.

ಪುರಾಣವನ್ನು ಬರೆಯಿಸಿದನು. ಕ್ರಿ. ಶ. ೧೦೭೬ ರಿಂದ ೧೧೨೬ ರ ವರೆಗೆ ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳಿದ ಚಾಲುಕ್ಯರ ರಾಜನಾದ ೬ ನೇ ವಿಕ್ರಮಾದಿತ್ಯನ ಕೂಡ ಅವನು ಅನೇಕ ತುಮುಲಯುದ್ಧಗಳನ್ನು ನಡಿಸಿದನು. ಆದರೆ ಕಡೆಗೆ ವಿಕ್ರಮಾದಿತ್ಯನು ಅವನ ಮಗಳನ್ನು ಲಗ್ನವಾಗಿ ಉಭಯತರು ಸಂಧಾನ ಮಾಡಿಕೊಂಡಂತೆ ತೋರುತ್ತದೆ. ಆ ಕಾಲದಲ್ಲಿ ಕರ್ನಾಟಕಸ್ಥರಿಗೂ ತಮಿಳರಿಗೂ ಅನೇಕ ರೀತಿಯಿಂದ ನಿಕಟ ಸಂಬಂಧವಿದ್ದಿತು. ತಮಿಳರ ೬೩ ಪುರಾತನರನ್ನು ವೀರಶೈವರು ಈಗಲೂ ಪೂಜ್ಯಭಾವದಿಂದ ಕಾಣುತ್ತಾರೆ. ಹಾಗೆಯೇ ಅನೇಕ ಶಿವಶರಣರು ತಮಿಳು ದೇಶಕ್ಕೆ ಹೋಗಿ ಅಲ್ಲಿ ತಮ್ಮ ಶಿವಾನುಭವದ ನಡೆಯನ್ನು ಪಸರಿಸಿದ್ದೂ ಕಂಡುಬರುತ್ತಿದೆ. ಆದ್ದರಿಂದ ಚನ್ನಯ್ಯನು ಇವರಂತೆಯೇ ಕರ್ನಾಟಕವನ್ನು ಬಿಟ್ಟು ಕಾಂಚೀ ಪಟ್ಟಣಕ್ಕೆ ಹೋಗಿ ಅಲ್ಲಿ ವಾಸ ಮಾಡಿದನೆಂದು ತೋರುತ್ತದೆ.

ಕರಿಕಾಲಚೋಳನು ಬಸವೇಶ್ವರನಕಿಂತಲೂ ಮೊದಲಿನವನು. ಮತ್ತು ಬಸವೇಶ್ವರನು ತನ್ನ ವಚನಗಳಲ್ಲಿ ಚನ್ನಯ್ಯನನ್ನು ಆಗಿಂದಾಗ್ಗೆ ಉಲ್ಲೇಖಿಸುತ್ತಾನೆ. ಆದ್ದರಿಂದ ಚನ್ನಯ್ಯನು ಬಸವೇಶ್ವರನಕಿಂತಲೂ ಸ್ವಲ್ಪ ಕಾಲ ಹಿಂದಿನವನೆಂದು ತೋರುತ್ತದೆ.

ಚನ್ನಯ್ಯನು ಗುರುಕಾರುಣ್ಯವನ್ನು ಪಡೆದು ಇಷ್ಟಲಿಂಗಧಾರಿಯಾಗಿದ್ದನೆಂದು ಅವನ ಎಲ್ಲ ಚರಿತ್ರೆಗಳಲ್ಲಿ ಹೇಳಿದೆ. ಮಹಾಕವಿಯಾದ ಹರಿಹರನು ಅವನು ಲಿಂಗಾಭಿಮಾನಿಯೂ ಲಿಂಗಪ್ರಾಣಿಯೂ ಆಗಿದ್ದನೆಂದು ಅವನನ್ನು ಹೊಗಳುತ್ತಾನೆ. ಚನ್ನಯ್ಯನ ಚರಿತ್ರೆಯಿಂದ ಅವನು ಪ್ರಸಾದಿಸ್ಥಲವನ್ನು ಹೊಂದಿ ಎಲ್ಲವನ್ನೂ ಲಿಂಗಾರ್ಪಣಮಾಡಿ ಲಿಂಗ ಭೋಗೋಪಭೋಗಿಯಾಗಿ ಗುಪ್ತಭಕ್ತಿಯಿಂದ ಆಚರಿಸುತ್ತಿದ್ದನೆಂದು ತಿಳಿಯುತ್ತದೆ.

ಚನ್ನಯ್ಯನು ಕರಿಕಾಲಚೋಳನ ರಾಜ್ಯದಲ್ಲಿ ಇರಹತ್ತಿದ ಬಳಿಕ ಹುಲ್ಲುಕೊಯ್ಯುವ ಕಾಯಕವನ್ನು ಅವನು ಪಾಲಿಸುವವನಾಗಿ ಹುಲ್ಲನ್ನು ಕೊಯ್ದು ಅದನ್ನು ರಾಜನ ಕುದುರೆಗಳ ಲಾಯದಲ್ಲಿ ಹಾಕುವ ಕೆಲಸವನ್ನು ಕೈಕೊಂಡನು. ಮುಂದೆ ಹುಲ್ಲುಕೊಯ್ಯುವ ಅಲ್ಲಿಯ ಕಬಾಡಿಗರ ಒಡೆಯನೂ ಆದನು. ಅವನು ದಿನಾಲು ಈ ಕಬಾಡಿಗರನ್ನು

ಕೂಡಿಕೊಂಡು ಕಾನನಕ್ಕೆ ಹೋಗಿ ಅವರಿಂದ ಹುಲ್ಲನ್ನು ಕೊಯ್ಯಿಸಿ ಅದನ್ನು ಹೊರೆಗಟ್ಟಿಕೊಂಡು ರಾಜಧಾನಿಗೆ ಬಂದು ಅರಸನ ಲಾಯದಲ್ಲಿ ಅದನ್ನು ಚೆಲ್ಲಿಸುವನು.

ಚನ್ನಯ್ಯನು ಹೀಗೆ ಕಾನನದಲ್ಲಿ ಸಂಚರಿಸುವಾಗ್ಗೆ ಶಿವಾನುಭವದಲ್ಲಿಯ ಪ್ರಸಾದಿಯ ಆಚರಣೆಯಂತೆ ಆಚರಿಸುವನು. ಅವನು ಸುಂದರವಾದ ವಸ್ತುಗಳನ್ನು ಅಲ್ಲಲ್ಲಿ ಕಂಡಕೂಡಲೆ ಅವುಗಳನ್ನು ಮೊದಲು ಲಿಂಗಾರ್ಪಿತವಮಾಡಿ ಅನುಭವಿಸುವನು. (ಹರಿಹರ ಕವಿಯು ಹೇಳುವದೇನಂದರೆ—ಅವನು ತನ್ನ ಕಣ್ಣುಗಳ ಮುಖದಿಂದಲೇ ಸೌಂದರ್ಯವನ್ನು ಶಿವನಿಗರ್ಪಿಸುವನು. ಕೇಳುವಂಥ ನವಿನುಡಿಗಳನ್ನು ಕಿವಿಮುಖದಿಂದಲೇ ಅರ್ಪಿಸುವನು. ವಾಸಿಸುವ ಗಂಧವನ್ನು ನಾಸಿಕದ ಮುಖದಿಂದಲೇ ಶಿವನಿಗೆ ಅರ್ಪಿಸುವನು. ಸೋಂಕಿದ ಮೃದುದ್ರವ್ಯಗಳನ್ನು ಅಂಗದಿಂದಲೇ ಶಿವಾರ್ಪಣವಮಾಡುವನು. ಚಿತ್ತದಲ್ಲಿ ಉಂಟಾಗುವ ನೆನಹನ್ನು ಮನದಿಂದಲೇ ಲಿಂಗಾರ್ಪಣ ಮಾಡುವನು.) ಹೀಗೆ ಅವನು ಲಿಂಗಾರ್ಪಣ ಮಾಡುತ್ತ ಕಾಂತಾರ ಮಧ್ಯದಲ್ಲಿ ಪರಮಾತ್ಮನ ನೆನಹಿನಲ್ಲಿ ಸಂಚರಿಸುತ್ತ ತನ್ನ ಹುಲ್ಲಿನ ಕಾಯಕವನ್ನು ಮಾಡುವನು. ಅದು ತೀರಿದ ಬಳಿಕ ಅವನು ಯಾರಿಗೂ ತಿಳಿಯದಂತೆ ಒಂದು ಏಕಾಂತಸ್ಥಳಕ್ಕೆ ಹೋಗಿ ಮಘಮಘಿಸುವ ಪುಷ್ಪಗಳ ಮಂಟಪವನ್ನು ಹುಡಿಕಿಕೊಂಡು ಅದರ ತಣ್ಣೆಳಲಲ್ಲಿ ಉಸಿಕಿನ ಹಾಸಿಕೆಯ ಮೇಲೆ ಒಂದು ವಸ್ತ್ರವನ್ನು ಹಾಸಿ ಅಲ್ಲಿ ಪರಮಾತ್ಮನನ್ನು ನೆನೆಯುತ್ತ ಕೆಲ ಹೊತ್ತು ಕುಳ್ಳಿರುವನು. ಆಮೇಲೆ ತನ್ನ ಸಜ್ಜೆಯಲ್ಲಿದ್ದ ಇಷ್ಟಲಿಂಗವನ್ನು ಭಕ್ತಿಯಿಂದ ಹೊರಗೆ ಕೈಯ್ಯಲ್ಲಿ ತೆಗೆದುಕೊಂಡು ಅದಕ್ಕೆ ನಮಸ್ಕರಿಸಿ ತಿಳಿಯಾದ ಅಗ್ಗವಣಿಯನ್ನು ಎರೆದು, ಮಕರಂದವನ್ನು ತೀಡುವ ಅಲ್ಲಿದ್ದ ಕಾಡು ಹೂವುಗಳನ್ನು ಅದಕ್ಕೆ ಸಮರ್ಪಣಮಾಡಿ ಲಿಂಗಪೂಜೆಯನ್ನು ಮಾಡುವನು. ಆಮೇಲೆ ಅಲ್ಲಿದ್ದ ಫಲಗಳನ್ನು ಅರ್ಪಿಸಿ ಪರಮಾತ್ಮನನ್ನು ಕೊಂಡಾಡುತ್ತ ಲಿಂಗಾರ್ಪಿತದಿಂದ ಪ್ರಸಾದ ಗ್ರಹಣ ಮಾಡುವನು. ಆಮೇಲೆ ತನ್ನ ಮೊದಲಿನ ಸ್ಥಳಕ್ಕೆ ಬಂದು ಸಿದ್ಧವಾಗಿದ್ದ ಹುಲ್ಲಿನ ಹೊರೆಗಳನ್ನು ಮೊರಿಸಿಕೊಂಡು ಚೋಳ ರಾಜನ ಲಾಯದಲ್ಲಿ ಒಗಿಸಿ ತನ್ನ ಗೃಹಕ್ಕೆ ಬರುವನು. ಆಗ ಅವನ ಹೆಂಡತಿಯು ಅವನನ್ನು ಆನಂದದಿಂದ ಕಂಡು ಮನೆಯಲ್ಲಿದ್ದ ಊಟದ ಪದಾರ್ಥಗಳನ್ನು ಅವನಿಗೆ

ಉಣಬಡಿಸುವಳು. ಚನ್ನಯ್ಯನು ಅತ್ಯಂತ ಬಡವನು. ಆದರೂ ತನಗೆ ನೀಡಿದ ಪದಾರ್ಥಗಳನ್ನು ಅಮೃತಸಮಾನವಾಗಿ ಕಂಡು ಮೊದಲು ಅವುಗಳನ್ನು ಲಿಂಗಾರ್ಪಿತ ಮಾಡಿ ಅವುಗಳನ್ನು ಪ್ರಸಾದರೂಪವಾಗಿ ಸ್ವೀಕರಿಸುವನು. ಹೀಗೆ ಉಭಯದಂಪತಿಗಳು ತಮ್ಮ ಕಾಯಕವನ್ನು ನಡಿಸುತ್ತ ಲಿಂಗಭಕ್ತಿಯನ್ನು ಅತ್ಯಂತ ಗೌಪ್ಯತರವಾಗಿ ಮಾಡುತ್ತ ಶಿವಾನುಭವಿಗಳಾಗಿ ಆನಂದದಿಂದ ಕಾಲಕಳೆಯುತ್ತಿದ್ದರು. ಇವರು ಇಂಥ ಲಿಂಗಭಕ್ತಿಯುಳ್ಳವರೆಂಬುವನ್ನು ಯಾರೂ ಅರಿತಿರಲಿಲ್ಲ. ಈಪ್ರಕಾರ ಚನ್ನಯ್ಯನು ತನ್ನ ಹೆಂಡತಿಯೊಡನೆ ೬೦ ವರುಷಗಳ ವರೆಗೆ ಚೋಳ-ರಾಜನ ರಾಜ್ಯದಲ್ಲಿ ಹುಲ್ಲಿನ ಕಾಯಕ ಮಾಡುತ್ತ ಬಾಳಿದನು.

ಪರಮಾತ್ಮನು ಚನ್ನಯ್ಯನ ಈ ಪ್ರಸಾದಿಯು ಉತ್ಕಟತರ ನಡೆಗೆ ಅತ್ಯಂತ ಪ್ರೀತನಾಗಿ ಇನ್ನುಮೇಲೆ ಇವನ ಭಕ್ತಿಯನ್ನು ಜಗತ್ತಿನಲ್ಲಿ ಮೆರೆಯಬೇಕೆಂದು ಬಯಸಿ ಕೆಳಗೆ ಕಾಣಿಸಿದ ಒಂದು ಉಪಾಯವನ್ನು ಯೋಜಿಸಿದನು.

ಒಂದು ದಿನ ಚನ್ನಯ್ಯನು ನಿತ್ಯದಂತೆ ಹುಲ್ಲು ಕೊಯ್ದು ಚೋಳನ ಲಾಯದಲ್ಲಿ ಅದನ್ನು ಒಗೆದು ಮನೆಗೆ ಬಂದು ಪರಮಾತ್ಮನ ಧ್ಯಾನದಲ್ಲಿದ್ದಾಗ, ಅವನಿಗೆ ಅತ್ಯಂತ ಪ್ರಿಯವಾದುದನ್ನು ಅವನ ಹೆಂಡತಿಯು ಕಂಡು ಮನೆಯಲ್ಲಿ ಏನೂ ಇಲ್ಲದ್ದರಿಂದ ಬೆಳ್ಳಗಿನ ಅಂಬಲಿಯನ್ನು ಸಿದ್ಧಮಾಡಿ ಅವನ ಮುಂದೆ ತಂದು ಇಟ್ಟಳು. ಚನ್ನಯ್ಯನು ಅದನ್ನು ಕಂಡು ಲಿಂಗಾರ್ಪಿತಭಾವದಿಂದ ಅದನ್ನು ಸವಿಯುತ್ತಿದನು. ಆಗ ಅದು ನಿತ್ಯದಕಿಂತಲೂ ನೂರ್ಮಡಿ ಹೆಚ್ಚು ಸವಿಯಾಗಿ ರುಚಿಸಿತು. ಅವನು ಆ ರುಚಿಯನ್ನು ತನ್ನ ಅಂತರ್ಲಿಂಗಕ್ಕೆ ಸಮರ್ಪಿಸಲು ಪರಮಾತ್ಮನು ರೂಪುದೋರಿ ತನ್ನೊಡನೆ ಉಣ್ಣುವಂತೆ ಅವನಿಗೆ ತೋರಿತು. ಆಗ ಆ ಉಭಯತರು ಆ ಅಂಬಿಲಿಯನ್ನು ಸುರಿದುಕೊಳ್ಳುತ್ತಿದರು. ಹೀಗೆ ಚನ್ನಯ್ಯನು ಸುರಿದುಕೊಳ್ಳುವಾಗ ಶಿವಪದವು ತನಗೆ ಸಾಧ್ಯವಾದಷ್ಟು ಸುಖವು ಅವನಿಗೆ ಆಯಿತು. ಈ ಸುಖದಲ್ಲಿಯೇ ಅವನು ತನ್ನ ಪ್ರಸಾದ ಸೇವನೆಯನ್ನು ಮಾಡುತ್ತ ಆ ದಿನ ಓಲಾಡಿದನು.

ಹೀಗಿರುವಲ್ಲಿ ಮರುದಿನ ಮುಂಜಾವಿನಲ್ಲಿ ಇತ್ತ ಕರಿಕಾಲಚೋಳನ ಎಂದಿನಂತೆ ಶಿವಾಲಯಕ್ಕೆ ಹೋಗಿ ದೇವರ ದರ್ಶನವನ್ನು ಹೊಂದಿದ

ಬಳಿಕ ಪರಮಾತ್ಮನನ್ನು ಒಲಿಸಿಕೊಂಡು ಅವನನ್ನು ಪ್ರತ್ಯಕ್ಷ ಮಾಡಿಕೊಳ್ಳಬೇಕೆಂಬ ಉತ್ಕಟೇಚ್ಛೆಯು ಅವನಲ್ಲಿ ಉಂಟಾಯಿತು. ಆದಕ್ಕೋಸ್ಕರ ಅವನು ಸರ್ವಸನ್ನಾಹಗಳನ್ನು ಮಾಡಿಕೊಂಡನು. ಅವನು ಪೂಜಾಸಾಮಗ್ರಿಗಳನ್ನು ಅಪರಿಮಿತವಾಗಿ ಶೇಖರಿಸಿದನು. ವಿಭೂತಿ ರುದ್ರಾಕ್ಷಿಗಳನ್ನು ಧಾರಣಮಾಡಿಕೊಂಡು ಹೊಸತಾದ ಅನೇಕ ಬಗೆಯ ನೂತನ ವಸ್ತ್ರಗಳನ್ನೂ ಬೆಲೆಯುಳ್ಳ ರತ್ನಾಭರಣಗಳನ್ನೂ ತರಿಸಿ ದೇವರಿಗರ್ಪಿಸಿ ಅತ್ಯಂತ ಭಕ್ತಿಭಾವದಿಂದ ಪರಮಾತ್ಮನನ್ನು ಭಜಿಸುವವನಾದನು. ಅವನು ಬಹಳ ವೇಳೆ ಹೀಗೆ ಭಜಿಸಿದ ಬಳಿಕ ತಾನು ಸಿದ್ಧಪಡಿಸಿಕೊಂಡಿದ್ದ ರುಚಿಕರವಾದ ಶಾಕಗಳನ್ನೂ ಬೋನವನ್ನೂ ಆಹಾರದ ಅನೇಕತರದ ಜೀನಸುಗಳನ್ನೂ ನೂರಾರು ಬಂಗಾರದ ಹರಿವಾಣಗಳಲ್ಲಿ ತುಂಬಿಸಿ ಅವುಗಳನ್ನು ದೇವರೆದುರಿಗೆ ಇಟ್ಟು, ನಾನಾವಿಧ ವಾದ್ಯವೈಭವದಲ್ಲಿ ಪರಮಾತ್ಮನನ್ನು ಬಹಳಹೊತ್ತು ಸ್ತುತಿಸಿದನು. ಆಗ ಅವನಲ್ಲಿ ಉಂಟಾದ ಭಕ್ತಿಯ ಉದ್ರೇಕಕ್ಕೆ ಪಾರಾವಾರವಿಲ್ಲ. ಕಡೆಗೆ ಅವನು ದೇವರಿಗೆ ಉದ್ದೇಶಿಸಿ--ಪರಮಾತ್ಮನೇ ನಾನೀಗ ನಿನ್ನಗೋಸ್ಕರ ಅತ್ಯಂತ ರುಚಿಕರವಾದ ಪದಾರ್ಥಗಳನ್ನು ತಂದಿದ್ದೇನೆ. ಇದನ್ನು ನೀನು ಪ್ರತ್ಯಕ್ಷ ಸೇವಿಸು ಎಂದು ಹೇಳಿ ದೇವರೆದುರಿಗೆ ಅವುಗಳನ್ನಿಟ್ಟು ಮುಂದೆ ಪರದೆಯನ್ನು ಎಳೆದು ದೇವರು ಉಣ್ಣುವ ಸಪ್ಪಳ ಕೇಳಬೇಕೆಂದು ಬಯಸಿ ಅದನ್ನು ಆಲಿಸಬೇಕೆಂದು ಹಿಂದೆ ನಿಂತುಕೊಂಡನು.

ಹೀಗೆ ಕೆಲಹೊತ್ತಾದ ಬಳಿಕ ತೆರೆಯೊಳಗಿಂದ ಅವನು ಒಳಗೆ ಇಣಿಕಿ ಹಾಕಿ ನೋಡಲು ಆಹಾರ ಪದಾರ್ಥಗಳೆಲ್ಲವನ್ನು ದೇವರು ಏನೂ ಲಕ್ಷ್ಯಿಸದೆ ಇದ್ದಕ್ಕಿದ್ದಹಾಗೆಯೇ ಸ್ತಬ್ಧವಾಗಿ ಇರುವದನ್ನು ಕಂಡು ತೆರೆಯನ್ನು ತೆರೆದು--ಪರಮಾತ್ಮನೇ, ನಾನು ಕೆಟ್ಟೆನು ಕೆಟ್ಟೆನು, ನನ್ನ ಸೇವೆಯು ನಿನಗೆ ಮುಟ್ಟದೆಹೋಯಿತು. ನಾನು ಇನ್ನುಮೇಲೆ ಬದುಕಿರಲಾರೆನು, ಎಂದು ನುಡಿಯುತ್ತ ತನ್ನ ಕತ್ತಿಯನ್ನು ಒರೆಯೊಳಗಿಂದ ಹಿರಿದು ತನ್ನ ಕೊರಳನ್ನು ಕತ್ತರಿಸಿಕೊಳ್ಳುವಷ್ಟರಲ್ಲಿ ಪರಮಾತ್ಮನು ಅವನಿಗೆ ಪ್ರತ್ಯಕ್ಷನಾಗಿ--- ಚೋಳನೇ, ನಿನಗಷ್ಟು ಸ್ಮರಣೆ ಇಲ್ಲವಲ್ಲಾ! ನಾನು ಮಾದರ ಚನ್ನಯ್ಯನೊಡನೆ ಉಂಡಿದ್ದೇನೆ. ನನಗೆ ಹಸಿವೆ ಇಲ್ಲ. ಚನ್ನಯ್ಯನು ಸಿದ್ಧಪಡಿಸಿದ ಅಂಬಿಲಿಯ ರುಚಿಯನ್ನು ನಾನೇನು ನಿನಗೆ ಹೇಳಲಿ! ಅಂಥ ರುಚಿಯಾದ ಅಂಬಿಲಿಯು ಚೋಳಾದಿಗಳಿಗೆ ದೊರೆಯದು.

ನೀನು ಮಾಡಿದ ದೇವಾನ್ನ ದಿವ್ಯಾನ್ನಗಳ ರುಚಿಯು ಅವಕ್ಕೆ ಏನೂ ಸರಿಬಾರದು ಎಂದು ಹೇಳಿ ಆ ಲಿಂಗದಲ್ಲಿಯೇ ಅಡಗಿದನು.

ಚೋಳರಾಜನು ಈ ನುಡಿಗಳನ್ನು ಕೇಳಿ ಅತ್ಯಂತ ಬೆರಗಾದನು. ಅವನು ತನ್ನ ರಾಜ್ಯದಲ್ಲಿ ಪರಮಾತ್ಮನೊಡನೆ ಉಂಡ ಮಹಾತ್ಮನೂ ಒಬ್ಬನು ಇದ್ದಾನೆಂಬುದು ತಿಳಿಯಿತು. ಆಗ ಅವನ ದರ್ಶನವನ್ನು ಹೊಂದಬೇಕೆಂಬ ಬಲವಾದ ಕಾಂಕ್ಷೆಯು ಉತ್ಪನ್ನವಾಯಿತು. ಆದ್ದರಿಂದ ಅವನನ್ನು ಹುಡುಕುತ್ತ ದಾರಿಗುಂಟ ನಡೆದನು. ಅವನು ಹೋಗುವಾಗ—ಚನ್ನಯ್ಯನೆಂಬ ಶರಣನನ್ನು ನೀವು ಕಂಡಿರುವಿರೇ ಹೇಗೆ? ಅವನು ಪರಮಾತ್ಮನೊಡನೆ ಉಂಡಿದ್ದಾನೆ. ಅಂಥ ಶಿವಶರಣನನ್ನು ತೋರಿಸಿರಿ ಎಂದು ಜನರಿಗೆ ಕೇಳುತ್ತ ಹೊರಟನು. ಸುತ್ತಲೂ ಚಾರರನ್ನು ಕಳಿಸಿದನು. ಈ ಚಾರರಲ್ಲಿ ಕೆಲವರು ಆಕಸ್ಮಾತ್ತಾಗಿ ಮಾದರ ಕೇರಿಯನ್ನು ಹೊಕ್ಕು ಇಲ್ಲಿ ಚನ್ನಯ್ಯನೆಂಬುವವನು ಇದ್ದಾನೆಯೇ ಎಂದು ಕೇಳಲು ಅಲ್ಲಿದ್ದವರು ಅವನು ಇದ್ದಾನೆ ಎಂದು ಅವನ ಮನೆಯನ್ನು ಅವರಿಗೆ ತೋರಿಸಲಾಗಿ ಅವರು ಅವನ ಮನೆಯನ್ನು ಪ್ರವೇಶಿಸಿ ಒಳಗೆ ಅವನು ಇರುವುದನ್ನು ಕಂಡು ಅರಸನಲ್ಲಿಗೆ ಬಂದು ಅದನ್ನು ತಿಳಿಸಿದರು. ಆಗ ಅರಸನು ಅತ್ಯಂತ ಆನಂದಬಟ್ಟು ತನ್ನ ಎಲ್ಲ ಪರಿವಾರದೊಡನೆ ಅತಿ ಸಂಭ್ರಮದಿಂದ ಮಾದರ ಕೇರಿಯನ್ನು ಪ್ರವೇಶಿಸಿದನು.

ಚನ್ನಯ್ಯನು ಅವರು ಬರುವುದನ್ನು ಕಂಡ—ನನ್ನ ಮನೆಗೆ ಈ ಅರಮನೆಯ ಚಾರರೇಕೆ, ಅರಸನೇಕೆ? ಶಿವಶಿವಾ ಮಹಾದೇವಾ, ನಾನು ಭಕ್ತನೆಂದು ಜನರು ಅರಿಯದಿದ್ದರೆ ಮಾತ್ರ ನಾನು ಬದುಕುವೆನು. ಅವರು ನನ್ನನ್ನು ಅರಿತ ಬಳಿಕ ನಾನು ಹೇಗೆ ಬದುಕಲಿ? ಹರಹರಾ ನಾನೇನು ತಪ್ಪುಮಾಡಿದೆನು? ಎಂದು ನುಡಿಯುತ್ತಿರಲು ಚೋಳರಾಜನು ರಾಜಪುತ್ರರನ್ನು ಕೂಡಿಕೊಂಡು ಅವನಿದ್ದಲ್ಲಿಗೆ ಬಂದು ಅವನಿಗೆ ಸಾಷ್ಟಾಂಗವೆರಗಿದನು.

ಆಗ ಚನ್ನಯ್ಯನು ಅರಸನಿಗೆ—ಚೋಳರಾಜನೇ ನಾನು ಮಾದರನು. ನನ್ನ ಜಾತಿಯನ್ನು ನೋಡದೆ ಹೀಗೆ ನೀನು ಮಾಡಬೇಕೇ? ಎಂದು ಕಂಪಿಸಿ ನುಡಿಯುತ್ತ—ರಾಜನೇ ನನ್ನ ಕಾಲನ್ನು ಬಿಡು ನಿನ್ನಾಣೆ, ಎನ್ನಾಣೆ ಎಂದು ಅನ್ನುತ್ತಿರಲು ಅರಸನು ಅವನಿಗೆ—ಪರಮಾತ್ಮನು

ಒಲಿದ ಜಾತಿಯೇ ನಿರ್ಮಲವಾದದ್ದು. ಪರಮಾತ್ಮನು ನಿನ್ನೊಡನೆ ಉಂಡಿದ್ದಾನೆ. ನಿನ್ನ ಜಾತಿಗೆ ಆವ ಜಾತಿಯು ಸರಿಯು? ನಿನ್ನ ಕೆರ ಹಿಗೆ ನನ್ನ ಶಿರಸ್ಸು ಸಹ ಸರಿಯಲ್ಲ, ಎಂದು ಅಂದು—ಚನ್ನಯ್ಯನೇ ಪರಮಾತ್ಮನಿದ್ದಲ್ಲಿಗೆ ನಾವು ಈಗ ಹೋಗೋಣ ನಡೆ, ಕುಲಗೋತ್ರದ ರೀತಿಯನ್ನು ಅವನಲ್ಲಿ ಕೇಳೋಣ, ಎಂದು ನುಡಿದು ಚನ್ನಯ್ಯನನ್ನು ಆನೆಯ ಮೇಲೆ ಕುಳ್ಳಿರಿಸಿ, ತಾನು ಕುದುರೆಯನ್ನೇರಿ ಅದರ ಮುಂದೆ ಹೋಗುತ್ತ ರಾಜಕುಮಾರರ ಸಂದಣಿಯಲ್ಲಿ ಚನ್ನಯ್ಯನನ್ನು ಸಂಭ್ರಮ ದಿಂದ ಕರೆದುಕೊಂಡು ದೇವಾಲಯದ ಮುಂದೆ ಬಂದು ಇಳಿದನು.

ಆಮೇಲೆ ಚನ್ನಯ್ಯನು ಶಿವಲಿಂಗದಿದಿರಿಗೆ ಬಂದು ನಿಂತು—ಪರಮಾತ್ಮನೇ, ನಾನು ಯಾವ ಅಪರಾಧವನ್ನು ಮಾಡಿದೆನು? ಚೋಳ ರಾಜನಿಂದ ಹೀಗೆ ನನ್ನನ್ನು ಹಿಡಿಸಿಕೊಂಡು ಬರಬೇಕೇ? ನಾನು ನಿನಗೆ ಏನು ಮಾಡಿದೆನು? ನಾನು ನಿನ್ನಲ್ಲಿ ಯಾವ ಪದವಿಯನ್ನು ಬೇಡಲಿಲ್ಲ. ನಾನು ಗುಪ್ತಭಕ್ತಿಯನ್ನು ಮಾಡುತ್ತ ಸುಖವಾಗಿದ್ದನು. ನನ್ನ ಭಕ್ತಿಯು ಈಗ ಜಗತ್ತಿಗೆ ತೋರಿತು. ನಾನು ಇನ್ನುಮೇಲೆ ಜಗತ್ತಿನಲ್ಲಿ ಇರಲಾರೆನು ಎಂದು ನುಡಿದು ಅಲಗನ್ನು ಕಿತ್ತು ತನ್ನ ಕೊರಳನ್ನು ಅರಿದು ಪರಮಾತ್ಮನಿಗೆ ಅದನ್ನು ಅರ್ಪಿಸಲು ಸಿದ್ಧನಾದನು.

ಅಷ್ಟರಲ್ಲಿ ಶಿವಲಿಂಗದೊಳಗಿಂದ ಶಿವನು ಪ್ರತ್ಯಕ್ಷನಾಗಿ ಚನ್ನಯ್ಯನ ಕರವನ್ನು ಹಿಡಿದು—ಚನ್ನಯ್ಯನೇ, ಹೀಗೆ ಅವಿಚಾರದಿಂದ ನಡೆಯ ಬಹುದೇ? ನಾನು ನಿನ್ನ ರೀತಿಯನ್ನು ಚೋಳನಲ್ಲಿ ಹೇಳಿದರೆ ಕೋಪ ವೇಕೆ? ಎಂದು ಅಂದು ಚೋಳರಾಜನಿಗೆ—ಚೋಳನೇ ಇದು ನೋಡು ಚನ್ನಯ್ಯನ ಈ ಗುಪ್ತಭಕ್ತಿಯನ್ನು. ಅವನ ಭಕ್ತಿಯಲ್ಲಿ ಆಡಂಬರವೆಂಬು ದಿಲ್ಲ. ಮಾದರ ಚನ್ನನೇ, ನೀನೇ ನನ್ನ ನಿಜವಾದ ಭಕ್ತನು. ನಿನ್ನ ಗುಪ್ತ ಪೂಜೆಯು ನನಗೆ ಪ್ರಿಯವಾಯಿತು. ಇನ್ನು ಚನ್ನನು ಜಗತ್ತಿನಲ್ಲಿ ಮೆರೆಯಲಿ ಎಂದು ನುಡಿದು ಲಿಂಗದಲ್ಲಿ ಅಡಗಿದನು. ಆಗ ಕರಿ ಕಾಲಚೋಳನು ಪ್ರಸಾದದ ರೀತಿಯನ್ನು ಮಾದರ ಚನ್ನಯ್ಯನಿಂದ ಅರಿ ತವನಾಗಿ ಅವನನ್ನು ಸೇವಿಸುವವನಾದನು. ಚನ್ನಯ್ಯನು ಚೋಳ ರಾಜ್ಯದಲ್ಲಿ ಇದ್ದು ಅಲ್ಲಿಯೇ ಅವನು ಲಿಂಗಾಂಗ ಸಮರಸ್ಯವನ್ನು ಹೊಂದಿದನು.

ಮಾದರ ಚನ್ನಯ್ಯನು ಉಚ್ಚತರದ ಶಿವಾನುಭವಿಯು. ಅವನು ವಚನಕಾರನೂ ಇದ್ದಾನೆ. ಅವನ ಮುದ್ರಿಕೆಯು 'ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅರಿನಿಜಾತ್ಮ ರಾಮ ರಾಮನಾ' ೧ ಎಂದಿದೆ. ಮಾದರರು ತಮ್ಮ ಕಾಯಕವನ್ನು ಮಾಡುವಾಗ ಕಯ್ಯಲ್ಲಿ ಉಳಿ ಮತ್ತು ಕತ್ತಿಯನ್ನು ಹಿಡಿದು ಚರ್ಮವನ್ನು ಅಡೆ ಎಂದರೆ ಕಟ್ಟಿಗೆಯ ಫಳಿಯ ಮೇಲೆ ಹಾಕಿ ಆ ಫಳಿಯನ್ನು ಒಂದು ಗೂಟಕ್ಕೆ ಆನಿಸಿ ಕೆತ್ತುತ್ತ ಸ್ವಚ್ಛ ಮಾಡುತ್ತಾರೆ. ಇದರಲ್ಲಿಯೇ ಅವರು ಮಗ್ನರಾಗಬಾರದು. ಅವರು ತಮ್ಮ ಆತ್ಮನಲ್ಲಿ ಪರಮಾತ್ಮನಿದ್ದಾನೆಂಬುದನ್ನು ಅರಿತುಕೊಳ್ಳಬೇಕು ಎಂದು ಅವನು ಈ ಮುದ್ರಿಕೆಯ ಮೂಲಕ ತನ್ನ ಸಮಾಜದವರನ್ನು ಎಚ್ಚರಿಸುತ್ತಿದ್ದಾನೆ.

## ವಚನಗಳು.

(೧) ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ಕಂಭವ ನಟ್ಟು ಆಗುಚಾಗು ಎಂಬ ದಡಿಗೋಲಿನಲ್ಲಿ ಆಗಡದೆಮ್ಮೆಯ ಚರ್ಮವ ತೆಗೆದು ಉಭಯನಾಮವೆಂಬ ನಾರಿನಲ್ಲಿ ತಿತ್ತಿಯನೊಪ್ಪವ ಮಾಡಿ ಭಾವವೆಂಬ ತಿಗುಡಿನಲ್ಲಿ ಸರ್ವಸಾರವೆಂಬ ಖಾರದಲ್ಲಿ ನೀರ ಹೊಯಿದು ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯುವರಿಗೆ ಮೆಟ್ಟಿಸಬಂದೆ. ಮೆಟ್ಟಡಿಯ ತಪ್ಪಲ ಕಾಯದೆ ಮೆಟ್ಟಡಿಯ ಬಟ್ಟೆಯ ನೋಡಿಕೊಳ್ಳಿ. ಕೈಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅರಿನಿಜಾತ್ಮರಾಮ ರಾಮನಾ.

ಭಾವಃ-- ಇದರಲ್ಲಿ ಮಾದರ ಚನ್ನಯ್ಯನು ತನ್ನ ಕಾಯಕದ ರೀತಿಯನ್ನು ಹೇಳುವಲ್ಲಿ ಆದಕ್ಕೆ ಪಾರಮಾರ್ಥಿಕ ಸ್ವರೂಪನ್ನು ಕೊಟ್ಟು ಅದರಿಂದ ಹೇಗೆ ಮೋಕ್ಷವನ್ನು ಹೊಂದಬೇಕೆಂಬುದನ್ನು ಹೇಳಿದ್ದಾನೆ. ಇದು ಬೆಡಗಿನ ವಚನವಿದೆ. ಮನುಷ್ಯನಿಗೆ ಸ್ಥೂಲ ಸೂಕ್ಷ್ಮ ಕಾರಣವೆಂಬ ದೇಹಗಳೆಂಬುವಿವೆ. ಅವು ಚರ್ಮವನ್ನು ಹದ ಮಾಡುವಲ್ಲಿ ಬೇಕಾಗುವ ಮೂರು ಕಂಭಗಳಂತೆ ಇವೆ. ಅಲ್ಲದೆ ಈ ಕಾಯಕಕ್ಕೆ ಚರ್ಮ, ದಡಿಗೋಲು, ನಾರು, ತಿಗುಡಿ ಎಂಬ ವನಸ್ಪತಿ, ಖಾರ, ಇವುಗಳನ್ನು

---

೧. ಕೆಲವು ಕಡೆಗೆ 'ಕಯ್ಯುಳಿಗತ್ತಿ ಅಡಿಗೂಂಟ ಕೆಡೆಯಾಗಬೇಡ ಅರಿನಿಜಾತ್ಮ ರಾಮ ರಾಮನಾ' ಎಂತಲೂ ಇದೆ.

ಉಪಯೋಗಿಸುವದುಂಟು. ಈ ಸನ್ನಾಹಗಳು ಮನುಷ್ಯನ ಶರೀರದಲ್ಲಿಯೇ ಇದ್ದು ಅವುಗಳ ಮೂಲಕ ದೇಹವನ್ನು ಶುದ್ಧಗೊಳಿಸಬೇಕು. ಹೀಗೆ ದೇಹವನ್ನು ಶುದ್ಧಪಡಿಸಿ, ಹೇಗೆ ಹದಗೊಳಿಸಿದ ಚರ್ಮವನ್ನು ಮೆಟ್ಟಲಿಕ್ಕೆ ಉಪಯೋಗಿಸುತ್ತಾರೋ ಹಾಗೆಯೇ ಮನುಷ್ಯನು ಆಚರಿಸುತ್ತ ಲಿಂಗಾಂಗ ಸಾಮರಸ್ಯವನ್ನು ಹೊಂದಬೇಕೆಂಬ ಭಾವವು ಇದರಲ್ಲಿದೆ.

ಈ ವಚನದ ಮೇಲಿಂದ ಮಾದರ ಚನ್ನಯ್ಯನು ಮೊದಲು ಚರ್ಮವನ್ನು ಹದ ಮಾಡುತ್ತಿದ್ದನೆಂದು ಊಹಿಸಲಿಕ್ಕೆ ಅವಕಾಶವಿದೆ. ಆದರೆ ಮುಂದೆ ಅವನು ಕರಿಕಾಲಚೋಳನ ರಾಜ್ಯದಲ್ಲಿ ವಾಸಿಸಹತ್ತಿದ ಬಳಿಕ ಅವನಲ್ಲಿ ಹುಲ್ಲು ಕೊಯ್ದು ಅವನ ಲಾಯಕ್ಕೆ ಹಾಕುವ ಕಾಯಕವನ್ನು ಕೈಕೊಂಡಿರಬೇಕೆಂದು ತೋರುತ್ತದೆ.

(೨) ಕಾಯದ ಸುಳುಹುಳ್ಳನ್ನಕ್ಕ ಜ್ಞಾನವನರಿಯಬೇಕೆಂಬರು. ಜೀವನ ಸಂಚಾರವುಳ್ಳನ್ನಕ್ಕ ಜ್ಞಾನವನರಿಯಬೇಕೆಂಬರು. ಜ್ಞಾನ ಧ್ಯಾನಿಸಿಕಾಂಬಲ್ಲಿ ಕಾಯದ ಕರ್ಮದಿಂದ ಮುಕ್ತಿಯೋ? ಜೀವನ ಜ್ಞಾನದಿಂದ ಮುಕ್ತಿಯೋ? ಜ್ಞಾನ ಧ್ಯಾನದಿಂದ ಮುಕ್ತಿಯೋ? ಧ್ಯಾನಿಸಿ ಕಾಂಬ ಕುರುಹ ಎನಗೊಂದು ಬಾರಿ ತೋರಾ ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅರಿನಿಜಾತ್ಮ ರಾಮ ರಾಮನಾ.

ಭಾವಃ—ಇದರಲ್ಲಿ ಚನ್ನಯ್ಯನು, ಕರ್ಮ, ಜ್ಞಾನ, ಧ್ಯಾನಗಳ ಪರಸ್ಪರ ಸಂಬಂಧವನ್ನು ಹೇಳುತ್ತಾನೆ. ಶಿವಾನುಭವವು ಇಷ್ಟಲಿಂಗವನ್ನು ಧ್ಯಾನಿಸುತ್ತ ಪರಮಾತ್ಮನನ್ನು ಅರಿಯಬೇಕೆಂದು ಹೇಳುತ್ತದೆ. ಇಂಥ ಇಷ್ಟಲಿಂಗದ ತಿಳುವಳಿಕೆಯಿಂದ ವೀರಶೈವನು ತನ್ನ ಕರ್ಮಗಳನ್ನು ಮಾಡುತ್ತಾನೆ. ಅದರ ಮೂಲಕವೇ ಅವನು ಜ್ಞಾನವನ್ನು ಹೊಂದಿ ತನ್ನ ಜೀವನ ಚಂಚಲತ್ವವನ್ನು ತೊರೆದುಬಿಡುತ್ತಾನೆ. ಅವನು ಶಿವಯೋಗದಂತೆ ಆಚರಿಸುತ್ತ ತನ್ನ ಕುರುಹಿನ ರೀತಿಯನ್ನು ತಿಳಿಯುತ್ತಾನೆ. ಈ ರೀತಿಯನ್ನು ತಿಳಿದುಕೊಂಡು ಹಿಂಸಾಯುಕ್ತವಾದ ಮಾದರರ ಆಚರಣೆಯನ್ನು ಬಿಟ್ಟುಕೊಟ್ಟು ತನ್ನಲ್ಲಿಯೇ ಇರುವಂಥ ಪರಮಾತ್ಮನನ್ನು ತಿಳಿಯಬೇಕು ಎಂದು ವಚನಕಾರನು ಬೋಧಿಸುತ್ತಾನೆ.

(೩) ನಡೆನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಸೂತಕವಿಲ್ಲ. ನುಡಿ ಲೇಸು ನಡೆಯಧಮವಾದಲ್ಲಿ ಅದೇ ಬಿಡುಗಡೆ. ಇಲ್ಲದ ಹೊಲೆ

ಕಳವು ಪರದಾರಂಗಳಲ್ಲಿ ಹೊಲಬನರಿಯದೆ ಕೆಟ್ಟು ನಡೆಯುತ್ತ ಮತ್ತೆ ಕುಲಜರೆಂಬ ಒಡಲವರುಂಟೇ? ಆಚಾರವೇ ಕುಲ, ಅನಾಚಾರವೇ ಹೊಲೆ. ಇಂತೀ ಉಭಯವನಳಿದುಲಿಯಬೇಕು ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅರಿನಿಜಾತ್ಮ ರಾಮ ರಾಮನಾ.

ಭಾವಃ— ನಿಜವಾಗಿ ಅಸ್ಪೃಶ್ಯತ್ವವೆಂಬುದಿಲ್ಲವೆಂದು ವಚನಕಾರನು ಹೇಳುತ್ತಾನೆ. ಎಲ್ಲಿ ನಡೆನುಡಿಗಳು ದೃಢವಾಗಿವೆಯೋ ಅಲ್ಲಿ ಅಸ್ಪೃಶ್ಯತ್ವ ಅಥವಾ ಹೊಲೆ ಎಂಬುವುಗಳು ಇರಲಾರವು. ಆದರೆ ನುಡಿಯಲ್ಲಿ ಮಾತ್ರ ಲೇಸು ಇದ್ದು ನಡೆಯಲ್ಲಿ ಅಧಮತನವಿದ್ದರೆ, ಅದೇ ಬಿಡುಗಡೆ ಅಂದರೆ ತ್ಯಾಜ್ಯವಾದ ಸ್ಥಿತಿಯು. ಯಾರಾದರೂ ಹೊಲೆ, ಕಳವು, ಪಾದರಗಳನ್ನು ಮಾಡುತ್ತ ಇದ್ದರೆ ಅವರು ಶ್ರೇಷ್ಠ ಕುಲದವರೆಂದು ಎಂದಿಗೂ ಹೇಳಲಿಕ್ಕೆ ಬರಲಾರದು. ಎಲ್ಲಿ ಆಚಾರವಿದೆಯೋ ಅದೇ ಉತ್ತಮ ಕುಲ ಮತ್ತು ಎಲ್ಲಿ ಅನಾಚಾರವಿದೆಯೋ ಅದೇ ಹೊಲೆಯ ಕುಲ, ಹೀಗೆ ಭಾವಿಸಬೇಕು. ಆದರೆ ವೀರಶೈವನಾದವನು ಈತರದ ಉತ್ತಮ ಕುಲ, ಹೀನಕುಲ ಇವುಗಳನ್ನು ಸಹ ಮೀರಿ ನಡೆಯಬೇಕು ಎಂದು ವಚನಕಾರನು ಹೇಳುತ್ತಾನೆ.

(೪) ವೇದಶಾಸ್ತ್ರಕ್ಕೆ ಹಾರುವನಾಗಿ ವೀರವಿತರಣಕ್ಕೆ ಕ್ಷತ್ರಿಯನಾಗಿ ಸರ್ವವನಾರೈದು ನೋಡುವಲ್ಲಿ ವೈಶ್ಯನಾಗಿ ವ್ಯವಹಾರದೊಳಗಾಗಿ ಕೃಷಿಯ ಮಾಡುವುದಕ್ಕೆ ಶೂದ್ರನಾಗಿ ಇಂತೀ ಜಾತಿ ಗೋತ್ರದೊಳಗಾದ ನೀಚ ಶ್ರೇಷ್ಠವೆಂಬೆರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ. ಬ್ರಹ್ಮವನರಿದಲ್ಲಿ ಬ್ರಾಹ್ಮಣ. ಸರ್ವ ಜೀವ ಹತಕ್ಕೊಳಗಾದಲ್ಲಿ ಸಮ್ಮಗಾರ. ಈ ಉಭಯವನರಿದು ಮರೆಯಲಿಲ್ಲ ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅರಿನಿಜಾತ್ಮರಾಮ ರಾಮನಾ.

ಭಾವಃ— ಚಾತುರ್ವರ್ಣಗಳು ಉದ್ಯೋಗದ ಮೇಲೆ ಕಲ್ಪಿಸಲ್ಪಟ್ಟಿವೆ. ವೇದಶಾಸ್ತ್ರಗಳನ್ನು ಬಲ್ಲವನಾದರೆ ಅವನು ಹಾರುವನೆಂತಲೂ ಶೂರನೂ ಉದಾರಿಯೂ ಆದಲ್ಲಿ ಕ್ಷತ್ರಿಯನೆಂತಲೂ ಜಿನಸುಗಳನ್ನು ಶೋಧಿಸಿ ಅವುಗಳ ವ್ಯವಹಾರವನ್ನು ಮಾಡಿದಲ್ಲಿ ವೈಶ್ಯನೆಂತಲೂ ಒಕ್ಕಲುತನ ಮಾಡಿದರೆ ಅವನು ಶೂದ್ರನೆಂತಲೂ ಹೇಳುವದುಂಟು.

ಆದರೆ ಮಾನವರಲ್ಲಿ ಉತ್ತಮ ಗುಣವುಳ್ಳವರು, ನೀಚ ಗುಣವುಳ್ಳವರು
ಎಂಬ ಎರಡೇ ಜಾತಿಗಳಿರುತ್ತವೇ ಹೊರ್ತು ಹೊಲೆ ಹದಿನೆಂಟು ಜಾತಿ
ಗಳಿರುವದಿಲ್ಲ. ಬ್ರಹ್ಮಜ್ಞಾನಹೊಂದಿದವನು ಬ್ರಾಹ್ಮಣನಾಗುತ್ತಾನೆ. ಜೀವ
ಹಿಂಸೆ ಮಾಡುವವನು ಸಮ್ಮಗಾರನಾಗುತ್ತಾನೆ. ಈ ರೀತಿಯನ್ನು ತಿಳಿ
ದುಕೊಂಡು ಇದರಂತೆಯೇ ಆಚರಿಸಬೇಕೆಂದು ವಚನಕಾರನು ಇಲ್ಲಿ
ಹೇಳುತ್ತಾನೆ.

(೫) ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಲಿಗ, ದುರ್ವಾಸ ಮುಚ್ಚಿಗ,
ದಧೀಚಿ ಕೀಲಿಗ, ಕಶ್ಯಪ ಕಮ್ಮಾರ, ರೋಮಜ ಕಂಚುಗಾರ, ಕೌಂಡಿಲ್ಯ
ನಾವಿದನೆಂಬುದನರಿದು ಮೇಲೆ ಕುಲ ಉಂಟೆಂದು ಛಲಕ್ಕೆ ಹೋರ
ಲೇತಕ್ಕೆ? ಇಂತೀ ಸಪ್ತ ಋಷಿಯರುಗಳೆಲ್ಲರು ಸತ್ಯದಿಂದ ಮುಕ್ತರಾ
ದರೆಂಬುದನರಿಯದೆ ಅಸತ್ಯದಲ್ಲಿ ನಡೆದು ನಾವು ವಿಪ್ರರು ನಾವು ಘನ
ವೆಂದು ಹೋರುವ ಹೊತ್ತು ಹೋಕರ ಮಾತೇತಕ್ಕೆ ಕೈಯ್ಯುಳಿಗತ್ತಿ
ಅಡಿಗೂಂಟಕ್ಕೆಡೆಯಾಗಬೇಡ ಅರಿನಿಜಾತ್ಮರಾಮ ರಾಮನಾ.

ಭಾವಃ— ಹಿಂದಿನ ಕಾಲದಲ್ಲಿ ಆಗಿಹೋದ ಅನೇಕ ಋಷಿಗಳ
ಜನನವನ್ನು ನೋಡಿದರೆ ಅವರು ಹೀನ ಕಾಲಗಳಲ್ಲಿ ಜನಿಸಿರುತ್ತಾ
ರೆಂಬುದು ಕಂಡುಬರುತ್ತದೆ. ಆದ್ದರಿಂದ ಇದು ಉತ್ತಮ ಕುಲ ಇದು
ಹೀನ ಕುಲ ಎಂದು ಜಗಳಾಡಬಾರದು. ಋಷಿಗಳು ಹೀನ ಕುಲ
ದಲ್ಲಿ ಜನಿಸಿದರೂ ಕೂಡ ಅವರು ಸತ್ಯವನ್ನು ಆಚರಿಸಿದ್ದರಿಂದ ಮುಕ್ತಿ
ಯನ್ನು ಹೊಂದಿದರು. ಆದರೆ ವಿಪ್ರರು ಅಸತ್ಯತನದಿಂದ ನಡೆದು
ನಾವು ದೊಡ್ಡವರು ಎಂದು ವಾದಿಸಿದರೆ ಅವರ ನುಡಿಯನ್ನು ಲಕ್ಷಿಸ
ಬೇಡಿರೆಂದು ವಚನಕಾರನು ಹೇಳುತ್ತಾನೆ.

---

## ಮೆರೆಮಿಂಡದೇವ.

ಮೆರೆಮಿಂಡದೇವನು ಚೋಳಮಂಡಲದಲ್ಲಿರುವ ತಿರುವಾರೂರು
ಎಂಬ ಗ್ರಾಮದವನು. ಅವನು ವಚನಕಾರನಿದ್ದಾನೆ. ಅವನ ೧೦೧
ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟಮಾಡಿ
ದ್ದೇವೆ. ಇವನು ತಮಿಳು ನಾಡಿನವನು. ಆದರೂ ಕನ್ನಡ ಭಾಷೆ
ಯಲ್ಲಿ ಶಿವಾನುಭವದ ತತ್ವಗಳನ್ನು ನಿರೂಪಿಸಿದ್ದಾನೆ. ಅವನು ತನ್ನವಚನ

ಗಳಲ್ಲಿ ಕ್ರಿಯಾಜ್ಞಾನದ ಭೇದವನ್ನೂ ಇಷ್ಟಲಿಂಗ, ಪ್ರಾಣಲಿಂಗ, ಭಾವ ಲಿಂಗಗಳ ಸ್ವರೂಪನ್ನು, ಗುರುಲಿಂಗಜಂಗಮದ ರೀತಿಯನ್ನೂ ಬಹು ಆಳವಾಗಿ ವಿವೇಚಿಸಿದ್ದಾನೆ. ಇದರಿಂದ ತಮಿಳು ದೇಶದಲ್ಲಿ ಸಹ ವೀರ ಶೈವ ಧರ್ಮದ ತತ್ವಗಳ ಪ್ರಚಾರವು ಉಂಟಾಗಿತ್ತೆಂದು ಕಂಡುಬರು ತ್ತದೆ. ಹೇಗೆ ಆಂಧ್ರದೇಶದಲ್ಲಿಯೂ ಕೇರಳ ದೇಶದಲ್ಲಿಯೂ ವೀರ ಶೈವ ಶಿವಶರಣರು ಆಗಿಹೋಗಿರುವರೋ ಹಾಗೆಯೇ ತಮಿಳು ದೇಶ ದಲ್ಲಿಯೂ ಕೂಡ ಅವರು ಉತ್ಪನ್ನವಾಗಿರುತ್ತಾರೆ.

ಮೆರೆಮಿಂಡದೇವನು ತನ್ನ ವಚನಗಳನ್ನು 'ಐ ಘಟದೂರ ರಾಮೇ ಶ್ವರಲಿಂಗ' ಎಂಬ ಮುದ್ರಿಕೆಯನ್ನಿಟ್ಟುಕೊಂಡು ರಚಿಸಿದ್ದಾನೆ. ಅಂದರೆ ಅಂಗ ಅಥವಾ ಲೌಕಿಕ ವ್ಯವಹಾರದಿಂದ ದೂರನಾದ ಪರಮಾತ್ಮನೇ ಎಂದು ಸಂಬೋಧಿಸುತ್ತ ತನ್ನ ವಿಚಾರಗಳನ್ನು ಪ್ರಕಟಿಸಿದ್ದಾನೆ. 'ವಿಘಟ ದೂರ ರಾಮೇಶ್ವರಲಿಂಗ' ಎಂತಲೂ ಅವನ ಮುದ್ರಿಕೆಯು ಇದೆ. ವಿಘಟ ಎಂದರೆ ಭೇದ. ಇದಕ್ಕೆ ದೂರನಾದ ಪರಮಾತ್ಮನೆಂಬ ಭಾವವು ಇದರಲ್ಲಿದೆ.

ಮೆರೆಮಿಂಡದೇವನು ೬೩ ಪುರಾತನರಲ್ಲಿ ಒಬ್ಬನಿದ್ದಾನೆ. ಈ ಪುರಾತನರೆಲ್ಲರೂ ತಮಿಳು ದೇಶದವರಿದ್ದು ಅವರಲ್ಲಿ ಕರ್ನಾಟಕದ ವೀರಶೈವ ಸಂಸ್ಕೃತಿಯನ್ನು ಕುರಿತು ಇವನೊಬ್ಬನ ಹೊರತು ಬೇರೆ ಯಾರೂ ನಿರೂಪಿಸಿದಂತೆ ತೋರುವದಿಲ್ಲ. ಇದೊಂದು ಈತನ ಚರಿ ತ್ರೆಯಲ್ಲಿ ಲಕ್ಷಿಸತಕ್ಕ ಮಹತ್ವದ ಸಂಗತಿಯಾಗಿದೆ.

ಶಿವಾನುಭವವು ಸ್ತ್ರೀಪುರುಷರಲ್ಲಿ ಮತ್ತು ಜಾತಿಜಾತಿಗಳಲ್ಲಿ ಭೇದ ವನ್ನು ಎಣಿಸುವದಿಲ್ಲ. ವೀರಶೈವರೆಲ್ಲರೂ ಸಮಾನರೆಂದು ಅದು ಯಾವಾ ಗಲೂ ಪ್ರತಿಪಾದಿಸುತ್ತದೆ. ಇಷ್ಟೇಅಲ್ಲ, ಅದು ಭಕ್ತ, ಗುರು, ಲಿಂಗ, ಜಂಗಮ ಇವುಗಳಲ್ಲಿಯೂ ಕೂಡ ಪರಸ್ಪರ ಸಾಮರಸ್ಯವನ್ನು ಪ್ರತಿ ಪಾದಿಸುತ್ತದೆ. ಇಂಥ ಸಮರಸಾಚರಣೆಯಿಂದ ಭಕ್ತನು ತನ್ನಲ್ಲಿ ಗುರು, ಲಿಂಗ, ಜಂಗಮಗಳ ತತ್ವಗಳನ್ನು ಒಳಕೊಳ್ಳತಕ್ಕದ್ದು. ಹಾಗೆಯೇ ಗುರು, ಲಿಂಗ, ಜಂಗಮಗಳು ಭಕ್ತ ಮತ್ತು ಇತರ ಆವರಣಗಳ ಮೂಲಕ ತಮ್ಮ ತಮ್ಮ ನಡೆಗಳನ್ನು ದೃಢಪಡಿಸಿಕೊಳ್ಳತಕ್ಕದ್ದು. ಹೀಗೆ ಶಿವಾನುಭವದ ತತ್ವವಿದೆ. ಈ ತತ್ವಕ್ಕನುಸರಿಸಿಯೇ ವೀರಶೈವಾಚರಣೆ ಗಳು ಕಲ್ಪಿಸಲ್ಪಟ್ಟಿರುತ್ತವೆ.

ಆದ್ದರಿಂದ ಹೇಗೆ ವೀರಶೈವರಿಗೆಲ್ಲ ಗುರು, ಲಿಂಗ, ಜಂಗಮಗಳ ನಿಂದೆಯು ಮತ್ತು ಅನಾದರಣೆಯು ಅಸಹನೀಯವೋ ಹಾಗೆಯೇ ಭಕ್ತನಿಂದೆಯೂ ಅಸಹನೀಯವಾದುದು. ಯಾರು ಇದಕ್ಕೆ ವಿರುದ್ಧ ವಾಗಿ ವರ್ತಿಸುತ್ತಾರೋ ಅವರು ಶಿವಶರಣರಿದ್ದರೂ ಕೂಡ ಅವರು ತಮ್ಮ ಮಹತ್ವವನ್ನು ಕಳೆದುಕೊಂಡಿರುವದು ಶಿವಶರಣರ ಚರಿತ್ರೆಗ ಳಿಂದ ತಿಳಿದುಬರುತ್ತದೆ. (ಹಿಂದೆ ಅಗ್ಗವಣಿಯ ಹೊನ್ನಯ್ಯ ಮತ್ತು ಓಲೆಯ ಶಾಂತಯ್ಯಗಳ ಚರಿತ್ರೆಗಳನ್ನು ನೋಡಿರಿ. ಪುಟ ೮೭) ಇದ ರಿಂದ ವೀರಶೈವ ಸಮಾಜದ ಸಂಘಟನೆಯಲ್ಲಿ ಮತ್ತು ಅವರ ಮಠ ಗಳ ವ್ಯವಸ್ಥೆಯಲ್ಲಿ ಪೂರ್ಣ ಲೋಕಸತ್ತಾಕ ತತ್ವಗಳು ಸೇರ್ಪಡೆ ಯಾದದ್ದನ್ನು ನಾವು ಕಾಣಬಹುದು.

ತಿರುವಾರೂರು ಅನೇಕ ಶಿವಾಲಯಗಳಿಂದಲೂ ಶಿವಭಕ್ತರಿಂದಲೂ ತುಂಬಿಕೊಂಡು ಚೋಳದೇಶದಲ್ಲಿ ಮನೋಹರವಾಗಿ ಕಂಗೊಳಿಸುತ್ತಿತ್ತು. ಅಲ್ಲಿ ತಿರುವಾರೂರೇಶ್ವರ ದೇವಾಲಯುವೇ ಮುಖ್ಯ ಗುಡಿಯಾಗಿತ್ತು. ಮೆರೆಮಿಂಡದೇವನು ಶಿವಭಕ್ತಿಯಿಂದ ಕೂಡಿಕೊಂಡು ಗಣಾಚಾರವು ಳ್ಳವನಾಗಿ ಆ ಗ್ರಾಮದಲ್ಲಿ ಪ್ರಸಿದ್ಧನಾಗಿ ಮೆರೆಯುತ್ತಿದ್ದನು. ಆ ತಿರು ವಾರೂರೇಶ್ವರನ ಜಾತ್ರೆಯು ಒಂದುದಿನ ಪ್ರಾರಂಭವಾಗಲು ಭಕ್ತರು ದಿನಾಲು ಶಿವಾಲಯದಲ್ಲಿ ಹೆಚ್ಚಾಗಿ ಬರುತ್ತ ಇದ್ದು ರಥವನ್ನು ಎಳೆಯುವ ದಿವಸ ಅವರು ದೇವಾಲಯದಲ್ಲಿ ತುಂಬಿ ಹೋದರು. ರಥೋತ್ಸವವನ್ನು ನೋಡಲಿಕ್ಕೆ ಮೆರೆಮಿಂಡದೇವನೂ ದೇವಾಲಯಕ್ಕೆ ಬಂದಿದ್ದನು.

ಅವನು ಅಲ್ಲಿ ನಿಂತುಕೊಂಡು ನೋಡುತ್ತಿರುವಾಗ್ಗೆ ಸೌಂದರ ನಂಬಿಯಣ್ಣನೆಂಬ ಶಿವಭಕ್ತನು ಅತ್ಯಂತ ವೈಭವದಿಂದ ದೇವಾಲಯದ ಹೆಬ್ಬಾಗಿಲಿಗೆ ಬಂದನು. ಅವನ ಸುತ್ತಲೂ ಕಹಳೆ ಮದ್ದಳೆಗಳೂ ಶಂಖ ನಾದವೂ ಬೋರ್ಗರೆಯುತ್ತಿದ್ದವು. ಅನೇಕ ನರ್ತಕರೂ ಗಾಯಕರೂ ತಮ್ಮ ಹಾಡುಗಾರಿಕೆಯನ್ನು ತೋರಿಸುತ್ತ ಅವನೆದುರಿಗೆ ನಡೆದಿದ್ದರು. ಅವನು ಉತ್ತಮತರದ ಉಡುಪುಗಳನ್ನು ಧರಿಸಿಕೊಂಡು ಕೊರಳಲ್ಲಿ ಪೂಮಾಲೆಗಳು ಲಲಾಟದಲ್ಲಿ ಕಸ್ತುರಿ ಮೈಯಲ್ಲೆಲ್ಲ ಚಂದನ ಇವುಗಳ ಸುಗಂಧ ಎತ್ತಲೂ ಹಬ್ಬಿರಲು ಅಶ್ವಾರೂಢನಾಗಿ ಒಳ್ಳೇ ಉತ್ಸವದಿಂದ ದೇವಾಲಯಕ್ಕೆ ಬಂದು ಹೆಬ್ಬಾಗಿಲಿನಲ್ಲಿ ಇಳಿಯದೆ ಕುದುರೆಯನ್ನು ಹಾಗೆಯೇ ಬಾಗಿಲಿನ ಒಳಗಿಂದ ನಡೆಯಿಸುತ್ತ ಎಡಬಲದಲ್ಲಿ ಅನೇಕ

ಶಿವಭಕ್ತರು ನೆರೆದಿದ್ದರೂ, ಅವರನ್ನು ನೋಡದೆ ನಮಸ್ಕರಿಸದೆ ಒಳಗೆ ಹೋಗಿ ಗುಡಿಯ ಮುಂದೆ ಕುದುರೆಯಿಂದ ಇಳಿದು ಎಲ್ಲ ಕಡೆಗೂ ಸೊಕ್ಕೇರಿ ನೋಡುತ್ತ ದೇವಾಲಯದ ಒಳಗೆ ಪ್ರವೇಶಿಸಿದನು.

ಮುರಿಮಿಂಡದೇವನು ಅವನ ವರ್ತನೆಯನ್ನು ನೋಡಿ ಅತ್ಯಂತ ಕೋಪಾವಿಷ್ಟನಾಗಿ ನೆರೆದ ಭಕ್ತರಿಗೆ--ಇವನಾರು? ಶಿವಾಲಯದ ಮಹಾದ್ವಾರದಲ್ಲಿ ಕುದುರೆಯನ್ನಿಳಿಯದೆ ಒಳಗೆ ಪ್ರವೇಶಮಾಡುತ್ತಾನೆ. ಇವನ ಗರ್ವವೆಷ್ಟು ಎಂದು ನುಡಿಯಲು ನೆರೆದ ಜನರು--ಇವನು ಸೌಂದರ ನಂಬಿಯಣ್ಣನು. ಇವನು ದೇವರಿಗೆ ಸಲುಗೆವಂತನಾಗಿದ್ದಾನೆ. ಈಶ್ವರನು ದಿನಾಲು ಇವನಿಗೆ ಪಡಿ ಹೊನ್ನು ಕೊಟ್ಟು ಇವನಿಗೆ ತನ್ನ ಪ್ರೀತಿಯನ್ನು ತೋರಿಸುತ್ತಾನೆ ಎಂದು ಹೇಳಲು ಮುರಿಮಿಂಡದೇವನು ಘುಡುಘುಡಿಸುತ್ತ--ಇದೇತರ ಭಕ್ತಿ? ಇಂಥವನ ಭಕ್ತಿಯನ್ನು ಶಿವನು ಕೈಕೊಳ್ಳುವನೇ? ಇವನ ನಡೆಯು ಭಕ್ತ ಸಭೆಗೆ ಹೊರತಾದದ್ದು. ಇಂಥ ಸೊಕ್ಕಿನವನಿಗೆ ಶಿವನು ಪ್ರೀತಿಸುವನೇ? ಇವನನ್ನು ಬಂಧಿಸಿರಿ ಎಂದು ಕೋಪಾಟೋಪದಿಂದ ನುಡಿಯಲು ನೆರೆದ ಭಕ್ತರು ಅವನಂತೆಯೇ ಕೋಪೋದ್ರೇಕವುಳ್ಳವರಾಗಿ ನಂಬಿಯಣ್ಣನನ್ನು ಮುತ್ತಲು ಅವನು ಅಂಜಿ ಅವರ ಕೈಯಿಂದ ಪಾರಾಗಿ ದೇವಾಲಯದ ಗರ್ಭಗುಡಿಯನ್ನು ಪ್ರವೇಶಿಸಿ ಅದರ ಬಾಗಿಲುಗಳನ್ನ ಭದ್ರವಾಗಿ ಮುಚ್ಚಿಕೊಂಡನು.

ಆಗ ನಂಬಿಯಣ್ಣನ ಕುದುರೆಯೊಂದೆಸೆ, ಅವನ ತುರಾಯಿಯೊಂದೆಸೆ, ಅವನ ಪರಿವಾರ ಒಂದೆಸೆಯಾಗಿ ಬಿಟ್ಟವು. ನಂಬಿಯಣ್ಣನು ಗಾಬರಿಯಾಗಿ ಕಂಪಿಸುತ್ತ ದೇವರೆದುರಿಗೆ ನಿಂತು ದೇವರೇ ನಿನ್ನ ನಂಬಿದ ನಂಬಿಗೆ ನಿನ್ನೆದುರಿಗೆ ಹೀಗಾಗಬೇಕೇ? ನನ್ನನ್ನು ಇವರು ಕೊಲ್ಲಲು ಸಿದ್ಧರಾಗಿದ್ದಾರೆ. ನನ್ನನ್ನು ಕಾಯಿ ಎಂದು ಆರ್ತಸ್ವರದಿಂದ ರೋದಿಸುತ್ತ ದೇವರ ಕಾಲನ್ನು ಹಿಡಿದನು.

ಆಗ ಶಂಕರನು ಲಿಂಗ ಮಧ್ಯದಿಂದ ಹೊರಗೆ ಬಂದು ಅವನೂ ಗಾಬರಿಯಾದವನಂತೆ ನಟಿಸುತ್ತ-- ಮಗನೇ, ನೀನೇಕೆ ಭಕ್ತರನ್ನು ವಂದಿಸದೆ ಇಲ್ಲಿಗೆ ಬಂದೆ? ನನಗೂ ಭಕ್ತರಿಗೂ ಹೀಗೆ ಅಂತರಿಸಬಹುದೇ? ನಾನು ಭಕ್ತಕಾಯನೆಂಬುದನ್ನು ನೀನು ಮರೆತೆಯಾ ಎಂದು ಕೇಳಲು, ನಂಬಿಯು-ನೀನು ಸಹ ಭಕ್ತರಿಗೆ ಹೀಗೆ ಅಂಜಿದರೆ ನನ್ನ ಪಾಡೇನು? ನಾನು ಉಳಿಯುವುದೆಂತು? ಎಂದು ಮತ್ತಿಷ್ಟು ಗಟ್ಟಿಯಾಗಿ ರೋದಿಸಹತ್ತಿದನು.

ಇತ್ತ ಮೆರೆಮಿಂಡದೇವನು ಗರ್ಭಗುಡಿಯ ಮುಚ್ಚಿದ ಒಳಬಾಗಿಲುಗಳು ತೆರೆಯಪ್ಪದನ್ನು ನೋಡಿ ಖತಿಗೊಂಡು—ಶಂಕರನೂ ನಂಬೆಣ್ಣನೂ ಒಂದಾಗಿದ್ದಾರೆ. ಅವರು ಬಾಗಿಲನ್ನು ತೆರೆಯುವದಿಲ್ಲ. ದೇವರು ಶಿವಭಕ್ತರನ್ನು ಮೀರಿದವರೊಡನೆ ಮತ್ತು ಅವರನ್ನು ಕಣ್ಣೆತ್ತಿ ನೋಡದವರೊಡನೆ ಸ್ನೇಹ ಮಾಡಿದ್ದಾನೆ. ಆದ್ದರಿಂದ ಭಕ್ತರನ್ನು ಒಲ್ಲದ ಈಶನನ್ನು ಭಕ್ತರಿಂದ ಹೊರಗುಮಾಡಬೇಕು, ಅವನನ್ನು ಬಹಿಷ್ಕರಿಸಬೇಕು, ಎಂದು ಹೇಳಿ ಯಾವ ಭಕ್ತನೂ ಶಿವನನ್ನು ಪೂಜಿಸಬಾರದು, ಅವನನ್ನು ಹೊರಗಿಡಬೇಕೆಂದು ಡಂಗುರ ಹೊಡಿಸಿದನು.

ಗರ್ಭಗುಡಿಯೊಳಗೆ ಇದ್ದ ಈಶನೂ ಅವನ ಮುಂದಿದ್ದ ನಂಬಿಯಣ್ಣನೂ ಆ ಡಂಗುರವನ್ನು ಕೇಳಿ ಈಶನು ಭಯಪಟ್ಟು—ಭಕ್ತರ ಈ ವಿರೋಧವನ್ನು ನಾನು ಹೇಗೆ ತಡೆಯಲಿ! ಭಕ್ತರು ನನ್ನನ್ನು ಬಹಿಷ್ಕರಿಸಿದರೆ ನನ್ನನ್ನು ಕೇಳುವರಾರು? ಎಂದು ನುಡಿಯಲು ನಂಬಿಯು ಮತ್ತಷ್ಟು ಗಾಬರಿಗೊಂಡು ನಡುನಡುಗುತ್ತ—ಪರಮಾತ್ಮನೇ, ನಿನ್ನ ಗತಿಯು ಹೀಗಾದರೆ ನನ್ನ ಗತಿ ಏನು? ನಾನು ಸತ್ತೆನು ಸತ್ತೆನು ಎಂದು ಒರಲಹತ್ತಿದನು. ಪರಮಾತ್ಮನು ಅದನ್ನು ನೋಡಿ—ಈಗ ಮಾತ್ರ ಈ ನಂಬಿಯು ಹಾದಿಗೆ ಬಂದನು. ಭಕ್ತರೊಡನೆ ಹೇಗೆ ಆಚರಿಸಬೇಕೆಂಬುದು ಅವನಿಗೆ ಈಗ ಗೊತ್ತಾಯಿತು ಎಂದು ತಿಳಿದವನಾಗಿ ಅವನಿಗೆ—ಅಂಜದಿರು, ಅಂಜದಿರು. ನಮ್ಮ ಭಕ್ತರು ಹೀಗೆ ಕ್ರೋಧವುಳ್ಳವರಾದರೂ ಅವರಿಗೆ ಯಾರು ಶರಣೆಂದೆನ್ನುವರೋ ಅವರನ್ನು ಅವರು ಕಾಯುವರು. ಇಷ್ಟೇಅಲ್ಲ, ಅವರಿಗೆ ತಮ್ಮನ್ನೇ ಕೊಡಲು ಮುಂದಾಗುವರು. ಆದ್ದರಿಂದ ನೀನು ಪುರಾತನ ಭಕ್ತರ ಮಹಿಮೆಗಳನ್ನು ಹಾಡಹತ್ತು ಎಂದು ಹೇಳಿದನು. ಆಗ ನಂಬಿಯಣ್ಣನು ನನಗೆ ಈ ಮಹಿಮರ ಚರಿತ್ರೆಗಳು ಲಕ್ಷದಲ್ಲಿ ಏನೂ ಉಳಿದಿಲ್ಲ. ಇಷ್ಟೇಅಲ್ಲ, ಅವರ ಹೆಸರುಗಳನ್ನು ಸಹ ಮರೆತುಬಿಟ್ಟಿದ್ದೇನೆ. ಅಂದಬಳಿಕ ಅವರ ಚರಿತ್ರೆಗಳನ್ನು ನಾನು ಹೇಗೆ ಹಾಡಲಿ ಎಂದು ಅಂದನು. ಆಗ ತಿರುವಾರೂರೇಶ್ವರನು ಪ್ರಸನ್ನ ಮುದ್ರೆಯಿಂದ—ನಂಬಿಯಣ್ಣನೇ ಕೇಳು, ಇನ್ನು ಮೇಲೆ ನೀನು ಭಕ್ತರನ್ನು ನಿಂದಿಸಬೇಡ, ಪುರಾತನರ ಹೆಸರುಗಳನ್ನೂ ಅವರ ದಿವ್ಯ ಚರಿತ್ರೆಗಳನ್ನೂ ನಿನ್ನ ಸ್ಮರಣೆಗೆ ತಂದುಕೊಡುತ್ತೇನೆ. ಅವರನ್ನು ಹಾಡಹತ್ತು ಎಂದು ಒರೆದನು. ಆಗ ನಂಬಿಯಣ್ಣನ ಮನ

ಸ್ಸಿನಲ್ಲಿ ಏನೋ ಒಂದು ದಿವ್ಯಗ್ಗನೇ ಪ್ರಕಾಶವು ಬಿದ್ದಿತು. ಅವನಲ್ಲಿ ಅಂತಃಸ್ಫೂರ್ತಿಯುಂಟಾಯಿತು. ಆಗ ಅವನು ಪುರಾತನರ ಚರಿತ್ರೆಗಳನ್ನು ತಿರುಪಾಡುಗಳ ಮೂಲಕ ಹಾಡಹತ್ತಿದನು. ಅವನು ತಿರುನೀಲಕಂಠ, ಇಹಪ್ಪಗೆಯಾಂಡ, ಇಳಿಯಾಂಡಗುಡಿಮಾರ, ಸೇದಿರಾಜ ಮೊದಲಾದ ೬೩ ಪುರಾತನರ ಚರಿತ್ರೆಗಳನ್ನು ವೀಣೆಯ ನಾದದಲ್ಲಿ ಹಾಡಹತ್ತಿದನು. ಆಗ ಪರಮಾತ್ಮನೇ ಅವನ ಮೂಲಕ ಹಾಡುತ್ತಾನೋ ಎನ್ನುವಂತೆ ಭಾಸ ವಾಯಿತು. ನಂಬಿಯಣ್ಣನು ಹಾಡುತ್ತ ಹಾಡುತ್ತ ಗರ್ಭಗುಡಿಯ ಬಾಗಿಲು ಗಳ ಕಡೆಗೆ ಬರಲು ಆ ಬಾಗಿಲುಗಳು ತಾವಾಗಿಯೇ ತೆರೆದವು. ಅಷ್ಟರಲ್ಲಿ ಪರಮಾತ್ಮನು ಒಳಗೆ ಅಂತರ್ಧಾನನಾಗಿದ್ದನು. ಆದರೆ ಹೊರಗೆ ಮಾತ್ರ ಕ್ರೋಧಾವಿಷ್ಟರಾದ ಭಕ್ತ ಜನರು ಮುಕುರಿದ್ದರು. ಆದರೆ ನಂಬಿಯ ಣ್ಣನ ತಿರುಪಾಡಿನ ದನಿಯು ಅವರ ಕಿವಿಗೆ ಬಿದ್ದ ಕೂಡಲೆ ಅವರ ರೋಷವು ತತ್‌ಕ್ಷಣವೇ ಅಡಗಿತು. ಅವನು ಪುರಾತನರನ್ನು ತನ್ನ ದಿವ್ಯ ಸ್ವರದಿಂದ ಸ್ತುತಿಸುತ್ತ ಮುಂದುವರಿದನು. ಅದನ್ನು ಕೇಳಿದ ಬಳಿಕ ಅವರ ಮನಸ್ಸಿನಲ್ಲಿ ಭಕ್ತಿಯ ರಸಪ್ರವಾಹವು ಉಕ್ಕೇರಿ ಬರಹತ್ತಿತು.

ಭಕ್ತ ಜನರ ಇದಿರಿಗೆ ಪೊರೆಯುಂಡದೇವನು ನಿಂತಿದ್ದನು. ಅವನು ತನ್ನ ಮುಂದೆ ತಿರುಪಾಡುಗಳನ್ನು ಹಾಡುತ್ತ ಬರುವ ನಂಬಿಯಣ್ಣ ನನ್ನು ಕಂಡು—ನಂಬಿಯಣ್ಣನಿಗೆ ಇದೆಲ್ಲಿಯ ಭಕ್ತಿ? ಇದು ಹೊಸತಾ ದದ್ದು. ನನಗೆ ತಿಳಿಯದೆ ಪರಮಭಕ್ತನಾದ ಇವನೊಡನೆ ಕೋಪಿಸಿ ದೆನು, ಎಂದು ಅವನಿಗೆ ಬಹಳ ಪಶ್ಚಾತ್ತಾಪವಾಯಿತು ಮತ್ತು ಅವನ ಮೊದಲಿನ ಕೋಪವು ಅಡಗಿತು. ಆಗ ಅವನು—ನಾನು ನಂಬಿಯ ಣ್ಣನನ್ನು ಭಂಗಿಸಿದೆನು. ಇಷ್ಟೇ ಅಲ್ಲ, ಪರಮಾತ್ಮನು ತಿರುವಾರೂರು ಭಕ್ತರಿಂದ ಹೊರಗೆಂದು ಡಂಗುರವನ್ನು ಹೊಯಿಸಿದೆನು. ನಾನು ಪಾಪಿಷ್ಠನು. ನಾನು ಇನ್ನೇಕೆ ಜೀವಿಸುವುದು? ಶಿವದ್ರೋಹವನ್ನು ಮಾಡಿದ ತಪ್ಪಿಗಾಗಿ ನನ್ನನ್ನು ದಂಡನೆಗೊಪ್ಪಿಸುವೆನೆಂದು ನಿರ್ಧರಿಸಿ ಹದನಾದ ಒಂದು ಖಡ್ಗವನ್ನು ತೆಗೆದುಕೊಂಡು ತನ್ನ ಕೊರಳನ್ನು ಕತ್ತರಿಸಿಕೊಳ್ಳುವಷ್ಟರಲ್ಲಿ ಭಕ್ತಪ್ರೇಮಿಯಾದ ಸದಾಶಿವನು ಅವನ ಸಾಹ ಸವನ್ನು ತಡೆದು ಅವನಿಗೆ ತನ್ನ ನಿಜರೂಪುದೋರಿ ಅವನನ್ನು ಸಂತ ವಿಸಿದನು.

ಪರಮಾತ್ಮನ ಪ್ರೇರಣೆಯಾದಂತೆ ಸೌಂದರ ನಂಬಿಯಣ್ಣನು ಪುರಾತನರನ್ನು ಹಾಡುತ್ತ ತಿರುವಾರೂರಲ್ಲಿ ಸುಖವಾಗಿದ್ದನು. ಇತ್ತ ಮೆರೆಮಿಂಡದೇವನು ತನ್ನ ಶಿವಾನುಭವದಂತೆ ಆಚರಿಸುತ್ತ ಶಿವಸಾಮರಸ್ಯಪದವನ್ನು ಹೊಂದಿ ವೀರಶೈವರಲ್ಲಿ ಒಬ್ಬ ಶ್ರೇಷ್ಠ ಶಿವಶರಣನೆಂದು ಎನ್ನಿಸಿಕೊಂಡನು.

ಈಪ್ರಕಾರ ಸೌಂದರ ನಂಬೆಣ್ಣನು ಪಿರಿಯ ಪುರಾಣವನ್ನು ರಚಿಸಲಿಕ್ಕೆ ಕಾರಣನಾದವನು ಶಿವಶರಣನೂ ವಚನಕಾರನೂ ಶಿವಾನುಭವಿಯೂ ಆದ ಮೆರೆಮಿಂಡದೇವನು. ಇವನು ಮಾದರ ಚನ್ನಯ್ಯನಂತೆ ಕರ್ನಾಟಕದಿಂದ ತಮಿಳುದೇಶಕ್ಕೆ ಹೋಗಿ ವಾಸಿಸಿರಬಹುದೆಂದು ತೋರುತ್ತದೆ.

ತಮಿಳುದೇಶದಲ್ಲಿ ಕೆಲವು ಪ್ರಸಿದ್ಧ ವಿಷ್ಣು ಭಕ್ತರಾಗಿದ್ದು ಅವರಿಗೆ 'ಆಳ್ವಾರ್' ಎಂಬ ಹೆಸರಿದೆ. ಹಾಗೆಯೇ ಅನೇಕ ಶಿವಭಕ್ತರೂ ಆಗಿದ್ದು ಅವರಿಗೆ 'ಪುರಾತನ'ರೆಂಬ ಹೆಸರಿದೆ. ಅವರ ವಿಷಯವಾಗಿ ನಂಬಿಯಣ್ಣನು ಹಾಡಿದ ಪದ್ಯಗಳಿಗೆ 'ತಿರುಪಾಡು' ಎಂದರೆ ದೇವರ ಹಾಡು ಎಂಬ ಹೆಸರಿದೆ.

---

## ತಿಲಕವ್ವೆ.

ವಿಜಾಪುರ ಜಿಲ್ಲೆಯಲ್ಲಿ ಮುದ್ದೇಬಿಹಾಳ ತಾಲೂಕಿನಲ್ಲಿ ಹೇರೂರೆಂಬ ಗ್ರಾಮವಿದೆ. ಇದು ತಾಳೀಕೋಟೆಯ ವಾಯುವ್ಯಕ್ಕೆ ಆರು ಮೈಲುಗಳ ಮೇಲಿದೆ. ಅಲ್ಲಿಯ ಒಂದು ಜೈನ ಕುಟುಂಬದಲ್ಲಿ ತಿಲಕವ್ವೆಯು ಜನಿಸಿದಳು. ಅವಳು ಚಿಕ್ಕಂದಿನಲ್ಲಿ ಜೈನಳಾಗಿಯೇ ಬೆಳೆದಳು. ಆದರೆ ಈ ನಾಡಿನಲ್ಲಿ ಆಗ ಬಾಹೂರು ಬ್ರಹ್ಮಯ್ಯ, ಮುದನೂರಿನ ದೇವರದಾಸಿಮಯ್ಯ, ಕೆಂಭಾವಿಯ ಭೋಗಣ್ಣ, ನಾವದಿಗೆಯ ಗುಡ್ಡವ್ವ, ಅಗ್ನಿಯಲ್ಲಿಯ ಅಘವಣಿಯ ಹೊನ್ನಯ್ಯ ಹೀಗೆ ಅನೇಕ ಶಿವಶರಣರು ಜನಿಸಿ ಪ್ರಸಿದ್ಧಿಯನ್ನು ಹೊಂದಿದ್ದರಿಂದ ಶಿವಾನುಭವದ ತತ್ವಗಳು ಇಲ್ಲಿ ಎಲ್ಲ ಕಡೆಗೂ ಪ್ರಸಾರವಾಗಿದ್ದವು. ಆದ್ದರಿಂದ ತಿಲಕವ್ವೆಯು ತನ್ನ ಜೈನ ಧರ್ಮವನ್ನು ಬಿಟ್ಟುಕೊಟ್ಟು ಶಿವಧರ್ಮವನ್ನು

ಪಾಲಿಸುವವಳಾದಳು. ಅವಳು ತನ್ನ ಗ್ರಾಮದಲ್ಲಿದ್ದ ಶಿವಾಲಯಕ್ಕೆ ದಿನಾಲು ಹೋಗಿ ಶಿವಾರ್ಚನೆಯನ್ನು ಮಾಡಲು ಪ್ರಾರಂಭಿಸಿದಳು. ಆದರೆ ಇದು ಅವಳ ತಾಯಿ ತಂದೆಗಳಿಗೆ ರುಚಿಸಲಿಲ್ಲ. ಆದ್ದರಿಂದ ಅವರು ಅವಳು ಅಲ್ಲಿಗೆ ಹೋಗುವದನ್ನು ಪೂರ್ಣವಾಗಿ ನಿಲ್ಲಿಸಿಬಿಟ್ಟರು. ಆಗ ಅವಳು ಅತ್ಯಂತ ಖಿನ್ನ ಮನಸ್ಕಳಾಗಿ ಪರಮಾತ್ಮನಿಗೆ--ಎಲೋ ಶಿವನೇ, ಹರನೇ, ನನ್ನ ತಾಯಿ ತಂದೆಗಳು ನಿನ್ನ ಪೂಜೆಯನ್ನು ಮಾಡಗೊಡು ವದಿಲ್ಲ. ಇನ್ನು ಮೇಲೆ ನಿನ್ನನ್ನು ಧ್ಯಾನಿಸುವದೇ ನನ್ನ ಪೂಜೆಯಾ ಯಿತು. ಅದನ್ನು ನೀನು ಸ್ವೀಕರಿಸು ಎಂದು ಬೇಡಿಕೊಂಡು ಅವಳು ಗುಪ್ತಭಕ್ತಳಾಗಿ ಪರಮಾತ್ಮನ ಧ್ಯಾನಮಾಡುತ್ತ ವಾಸಿಸಹತ್ತಿದಳು.

ಹೀಗಿರುತ್ತಿರಲು ಅವಳಿಗೆ ಯೌವ್ವನವು ಪ್ರಾಪ್ತವಾಯಿತು. ಆಗ ಅವಳ ತಾಯಿ ತಂದೆಗಳು ಸೋದರಳಿಯನಾದ ಜಿನಸೇನ ಸೆಟ್ಟಿಗೆ ಅವಳನ್ನು ಕೊಟ್ಟು ಲಗ್ನ ಮಾಡಬೇಕೆಂದು ಬಯಸಿದರು. ಆದರೆ ತಿಲ ಕವ್ವೆಯು ಜೈನನನ್ನು ನಾನು ಲಗ್ನವಾಗುವದಿಲ್ಲೆಂದು ಎಷ್ಟು ಹೇಳಿ ದರೂ ಅವರು ಅದನ್ನು ಕೇಳದೆ ಆವನಿಗೆ ಅವಳನ್ನು ಬಲಾತ್ಕಾರದಿಂದ ಲಗ್ನ ಮಾಡಿದರು.

ಲಗ್ನವಾದ ಬಳಿಕ ಜಿನಸೇನ ಸೆಟ್ಟಿಯು ತಿಲಕವ್ವೆಯನ್ನು ಕರೆದು ಕೊಂಡು ತನ್ನ ನಿಬ್ಬಣದವರೊಡನೆ ತನ್ನ ಗ್ರಾಮಕ್ಕೆ ಹೊರಟನು. ಆದರೆ ತಿಲಕವ್ವೆಗೆ ಆಗ ಎಷ್ಟು ಮಾತ್ರವೂ ಸಮಾಧಾನವಿರಲಿಲ್ಲ. ಮನಸ್ಸಿನಲ್ಲಿಯೇ ಬಹಳ ನೊಂದುಕೊಂಡು ದುಃಖಿಸುತ್ತಿದ್ದಳು. ಹೀಗಿ ರುವಲ್ಲಿ ನಿಬ್ಬಣಿಗರು ಊರಿಗೆ ಬರುತ್ತಿರುವಾಗ ತಿಲಕವ್ವೆಯು ಮಧ್ಯ ದಾರಿಯಲ್ಲಿ ಒಂದು ಶಿವಾಲಯವಿರುವದನ್ನು ಕಂಡು ಯಾರಿಗೂ ತಿಳಿಯದಂತೆ ಅಲ್ಲಿಗೆ ಹೋಗಿ ಅಲ್ಲಿದ್ದ ಲಿಂಗವನ್ನು ಗಟ್ಟಿಯಾಗಿ ಅಪ್ಪಿ ಕೊಂಡು--ಶಿವನೇ, ಹರನೇ, ಶಿವಭಕ್ತಕುಲದೀಪಕನೇ, ನನ್ನ ಈ ಹೆಣ್ಣು ಜನ್ಮವನ್ನು ಬಿಡಿಸು. ನನ್ನನ್ನು ರಕ್ಷಿಸು, ರಕ್ಷಿಸು ಎಂದು ಮೊರೆ ಇಡ ಹತ್ತಿದಳು. ಆದರೆ ಅಷ್ಟರಲ್ಲಿ ನಿಬ್ಬಣಿಗರು ಅವಳು ತಮ್ಮ ಕೂಡ ಇಲ್ಲದ್ದನ್ನು ಕಂಡು ಅವರು ಅವಳನ್ನು ಹುಡುಕಹತ್ತಲು ಅವಳು ಶಿವಾಲ ಯದಲ್ಲಿ ಹೋಗಿರುವಳೆಂಬುದು ಅವರಿಗೆ ತಿಳಿಯಿತು. ಇದು ಜಿನಸೇನನಿಗೆ ಗೊತ್ತಾಗಲು ಅವನು ಅತ್ಯಂತ ಕ್ರೋಧಾವಿಷ್ಟನಾಗಿ ಒಂದು ಅಲಗನ್ನು

ತೆಗೆದುಕೊಂಡು ದೇವಾಲಯವನ್ನು ಪ್ರವೇಶಿಸಿದನು. ಆಗ ಆ ದೀನ ಅಬಲೆಯು ಅವನ ಭೀಕರ ಸ್ವರೂಪವನ್ನು ಕಂಡು ಅವನು ತನ್ನನ್ನು ಕೊಂದು ಹಾಕಲು ಬಂದಿರುವನೆಂಬುದನ್ನು ತಿಳಿದವಳಾಗಿ ಭಯಭೀತಳಾಗಿ ಲಿಂಗವನ್ನು ಮತ್ತಷ್ಟು ಗಟ್ಟಿಯಾಗಿ ಅಪ್ಪಿಕೊಂಡು ಆಕ್ರೋಶ ಮಾಡಹತ್ತಿದಳು. ಅವಳ ಆಕ್ರೋಶವು ಪರಮಾತ್ಮನಿಗೆ ಅರಿಕೆಯಾಯಿತು. ಆಗ ಒಂದು ಅದ್ಭುತವಾಯಿತು. ಅವಳು ಬೇಡಿಕೊಳ್ಳುತ್ತಿದ್ದಂತೆ ಅವಳ ಹೆಣ್ಣು ರೂಪು ಹೋಗಿ ಗಂಡು ರೂಪಾಯಿತು! ಅದನ್ನು ಕಂಡಾಕ್ಷಣವೇ ಅವಳ ಗಂಡನು ಹಿಂಜರಿದನು. ಸಮೀಪಕ್ಕೆ ಬಂದಿದ್ದ ಸಿಬ್ಬಂದಿಗರೆಲ್ಲರೂ ಚಕಿತರಾದರು. ಅವರು ತಿಲಕವ್ವೆಯು ಮಹಾ ಶಿವಶರಣೆಯು, ಅವಳು ನಿಜವಾದ ಭಕ್ತೆಯು, ಎಂದು ತಿಳಿದವರಾಗಿ ಅವರು ಶಿವಲಿಂಗದೆದುರಿನಲ್ಲಿ ಪೊಡಮಟ್ಟರು ಮತ್ತು ಶಿವನನ್ನು ಭಜಿಸಹತ್ತಿದರು. ಜೀನಸೇನನಿಗೆ ಪಶ್ಚಾತ್ತಾಪವಾಯಿತು. ಅವನು ಕೇವಲ ಶಿವಭಕ್ತಿಯುಳ್ಳವನಾದನು. ಆಗ ಅವನು ತನ್ನ ಪತ್ನಿಯಿಂದಲೇ ಸಂಸ್ಕಾರ ಪೂರ್ವಕವಾಗಿ ಮಂತ್ರೋಪದೇಶವನ್ನು ಹೊಂದಿ ವೀರಶೈವ ಧರ್ಮವನ್ನು ಪಾಲಿಸುವವನಾದನು. ಮುಂದೆ ಸತಿಪತಿಗಳೀರ್ವರು ಶಿವಾನುಭವಿಗಳಾಗಿ ಕಾಲಾಂತರದಲ್ಲಿ ತಮ್ಮ ಲಿಂಗದಲ್ಲಿ ಬೆರೆದರು.

ತಿಲಕವ್ವೆಯು ಪುರಾತನಳು. ಅವಳ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವಳು ಹೇರೂರು ಹೆಣ್ಣೆಂದು ಬಹು ಪ್ರಸಿದ್ಧಳಾಗಿದ್ದಾಳೆ. ದೇವಿಯರ ತ್ರಿವಿಧಿಯಲ್ಲಿ ಅವಳ ಉಲ್ಲೇಖವಿರುವದು ಹೇಗೆಂದರೆ:—

ಪುರುಷ ಭವಿಯಾಗಿರಲು। ನರನವನ ಧಿಕ್ಕರಿಸಿ
ಹರನೆಂಬ ಪುರುಷನೊಡಗೂಡೆ ಪೋಗಿರ್ದ
ವಿರತೆ ತಿಲಕವ್ವೆ ಶರಣಾಗು ॥

ಹೀಗೆ ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣೆಯರು ಉದ್ಭವಿಸಿ ಶಿವಾನುಭವದ ಮಹತ್ವವನ್ನು ಎಲ್ಲ ಕಡೆಗೂ ಬೀರಿದ್ದಾರೆ.

---

# ಮೋದರ ಕೇತಯ್ಯ.

ಮೋದರ ಕೇತಯ್ಯನೆಂಬ ಶಿವಶರಣನು ಕಲ್ಯಾಣ ಪಟ್ಟಣದಲ್ಲಿ ಬಿದಿರಿನ ಕಾಯಕವನ್ನು ಮಾಡುತ್ತ ಇದ್ದನು. ಅವನು ದಿನಾಲು ಬೆಟ್ಟಕ್ಕೆ ಹೋಗಿ ಅಲ್ಲಿದ್ದ ಬಿದಿರುಗಳನ್ನು ಕಡಿದುಕೊಂಡು ಬಂದು ಅವುಗಳಿಂದ ಬುಟ್ಟಿ ಮೊರ ಮೊದಲಾದವುಗಳನ್ನು ಮಾಡಿ ಅವುಗಳನ್ನು ಪಟ್ಟಣದಲ್ಲಿ ಮಾರಿ, ಅದರಿಂದ ಬಂದ ಹಣದಿಂದ ತನ್ನ ನಿರ್ವಾಹವನ್ನು ಸಾಗಿಸುತ್ತಿದ್ದನು. ಅವನು ಶಿವಶರಣರ ನಡೆಯಂತೆ ಶ್ರಮಪನ್ನು ಮಾಡಿ ದೊರಕಿಸಿ, ದೊರಕಿಸಿದ್ದನ್ನು ಲಿಂಗಭೋಗೋಪಭೋಗಿಯಾಗಿ ಭೋಗಿಸಿ, ಉಳಿದದ್ದನ್ನು ಶಿವಾರ್ಪಣ ಮಾಡಿ ದಾಸೋಹ ಭಾವದಿಂದ ಇರುತ್ತಿದ್ದನು. ಅವನು ಬಸವೇಶ್ವರನ ಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವಗೋಷ್ಠಿಗಳನ್ನು ದಿನಾಲು ಕೇಳಲಿಕ್ಕೆ ಹೋಗಿ ಅಲ್ಲಿ ನಡೆಯುತ್ತಿದ್ದ ಅನುಭವಾಮೃತವನ್ನು ಸೇವಿಸುವನು. ಶಿವಶರಣರಲ್ಲಿ ಅವನು ಒಬ್ಬ ಶ್ರೇಷ್ಠ ಶಿವಾನುಭವಿ ಎಂದೆನಿಸಿಕೊಂಡನು. ಅವನು ತನಗಾದ ಅನುಭವವನ್ನು ವಚನಗಳಲ್ಲಿ ಹೇಳುವವನಾದನು. ಮೋದರ ಕೇತಯ್ಯನು ವಚನಕಾರನಿದ್ದಾನೆ. ಅವನ ಮುದ್ರಿಕೆಯು 'ಗೌರೇಶ್ವರಾ' ಎಂದಿದೆ. ಹೀಗೆ ಕೇತಯ್ಯನು ಜ್ಞಾನಿಯಾಗಿದ್ದದರಿಂದ ಬಸವೇಶ್ವರನು ಅವನನ್ನು ಜಂಗಮಸ್ಥಲದಲ್ಲಿ ಕಂಡು ಅವನಿಗೋಸ್ಕರ ಅತ್ಯಂತ ಪೂಜ್ಯಭಾವವನ್ನು ತಾಳಿದ್ದನು. ಓೀಗೆ ಕೇತಯ್ಯನು ಕಲ್ಯಾಣಪಟ್ಟಣದಲ್ಲಿ ಅನೇಕ ವರ್ಷ ಕಾಲ ಕಳೆದನು.

ಹೀಗಿರುವಲ್ಲಿ ಕೇತಯ್ಯನ ಮಹತ್ವವನ್ನು ಜಗತ್ತಿನಲ್ಲಿ ಹೆಚ್ಚಾಗಿ ಬೀರಬೇಕೆಂದು ಪರಮಾತ್ಮನು ಬಯಸಿ ಒಂದು ಉಪಾಯವನ್ನು ಯೋಜಿಸಿದನು. ಒಂದು ದಿನ ಕೇತಯ್ಯನು ಅಡವಿಗೆ ಹೋಗಿ ಒಂದು ಬಿದಿರನ್ನು ಕಡಿಯುವಾಗ ಅದರೊಳಗಿಂದ ಹೊನ್ನುಗಳು ಬಳಬಳನೆ ಹೊರಗೆ ಬೀಳಹತ್ತಿದವು. ಯಾವಾಗಲೂ ಕಾಯಕದಿಂದ ಜೀವಿಸುವವನಾದ ಕೇತಯ್ಯನು ಅವುಗಳನ್ನು ಮುಟ್ಟಲಿಲ್ಲ. ಈ ಬಿದಿರಿಗೆ ಹುಳಹತ್ತಿವೆ ಎಂದು ತಿಳಿದನು. ಆದ್ದರಿಂದ ಅವನು ಅದನ್ನು ಬಿಟ್ಟು ಮತ್ತೊಂದು ಬಿದಿರಿನ ಕಡೆಗೆ ಹೋಗಿ ಅದನ್ನು ಕಡಿಯಹತ್ತಲು ಅದರೊಳಗಿಂದಲೂ ಹೊನ್ನುಗಳು ಬೀಳಹತ್ತಿದವು. ಆಗ ಅವನು ಅದನ್ನು ಬಿಟ್ಟು ಮತ್ತೊಂ

ವರ ಕಡೆಗೆ ಹೋಗಿ ಅದನ್ನು ಕಡಿಯಲಾಗಿ ಅಲ್ಲಿಯೂ ಹೀಗೆಯೇ ಆಗಲು, ಅವನು—ಏಕೋ ಇಲ್ಲಿಯ ಗಿಡಗಳಿಗೆ ಬಂಗಾರದ ಹುಳಗಳು ಹತ್ತಿರುತ್ತವೆ. ಇವುಗಳನ್ನು ಬಿಟ್ಟು ಬೇರೊಂದು ಕಡೆಗೆ ಹೋಗಬೇಕು ಎಂದು ದೂರದಲ್ಲಿದ್ದ ಒಂದು ಎತ್ತರವಾದ ಗಿಡದ ಕಡೆಗೆ ಹೋಗಿ ಅದನ್ನು ಹತ್ತಿ ಕಡಿಯಹತ್ತಿದನು. ಅದನ್ನು ಕಡಿಯುವಾಗ ಕಾಲು ಜಾರಿ ಅವನು ನೆಲಕ್ಕೆ ಬಿದ್ದನು. ಬಹು ಎತ್ತರವಾದ ಸ್ಥಳದಿಂದ ಬಿದ್ದದರಿಂದ ಅವನು ಅಲ್ಲಿಯೇ ಗತಪ್ರಾಣನಾದನು.

ಕೇತಯ್ಯನು ಬಿದಿರಿನ ಮೆಳೆಯಲ್ಲಿ ಸತ್ತು ಬಿದ್ದಿದ್ದಾನೆಂಬ ಸುದ್ದಿಯನ್ನು ಬಸವೇಶ್ವರನು ಕೇಳಿ, ಕೂಡಲೆ ಅವನು ಅಲ್ಲಿಗೆ ಬಂದು — ಈ ಕೇತಯ್ಯನು ನನ್ನ ಪ್ರಾಣದಂತೆ ಇದ್ದನು. ಅವನು ಜ್ಞಾನಿಯಾದ್ದರಿಂದ ಜಂಗಮ ಸ್ಥಳದಲ್ಲಿಯವನು. ಆದ್ದರಿಂದ ಅವನಿಗೆ ಕ್ರಿಯಾ ಸಮಾಧಿಯೇ ಯುಕ್ತವೆಂದು ಅದನ್ನು ಮಾಡಿಸುವದರಲ್ಲಿ ತೊಡಗಿದನು. ಆಗ ಶಿವಾನುಭವ ಮಂಟಪಕ್ಕೆ ಹೋಗುವ ವೇಳೆಯಾಗಲು ಅಲ್ಲಿ ಎಲ್ಲರೂ ಕೂಡಿರುವರೋ ಹೇಗೆಂಬುದನ್ನು ನೋಡಿಕೊಂಡು ಬರಲು ತನ್ನ ನಿತ್ಯದ ಚಾರನಾದ ಉತ್ತಣ್ಣನನ್ನು ಅಲ್ಲಿಗೆ ಕಳಿಸಲು ಅವನು ಅಲ್ಲಿಗೆ ಹೋಗಿ ಅಲ್ಲಿದ್ದ ಶಿವಶರಣರಿಗೆ—ಕೇತಯ್ಯನು ಮರಣಹೊಂದಿದ್ದಾನೆ, ಆವನ ಕ್ರಿಯಾ ಸಮಾಧಿಯನ್ನು ಬಸವೇಶ್ವರನು ಮಾಡಿಸಹತ್ತಿದ್ದಾನೆ ಎಂದು ಹೇಳಲು, ಮಡಿವಾಳ ಮಾಚಯ್ಯನು ಬಸವೇಶ್ವರನು ಜಂಗಮ ಪ್ರಾಣಿಯು, ಜಂಗಮನ ಪ್ರಾಣದೊಡನೆ ಅವನ ಪ್ರಾಣವೂ ಹೋಗಬೇಕಾದುದು ಯುಕ್ತವು ಎಂದು ನುಡಿಯಲು ಉತ್ತಣ್ಣನು ಹಾಗೆಯೇ ಬಸವೇಶ್ವರನಲ್ಲಿಗೆ ಬಂದು ಮಡಿವಾಳ ಮಾಚಿದೇವನು ಅಂದದ್ದನ್ನು ಅವನಿಗೆ ತಿಳಿಸಿದನು. ಆಗ ಬಸವೇಶ್ವರನು-ಮಡಿವಾಳ ಮಾಚಿದೇವನ ನುಡಿಯು ಸತ್ಯವಾದುದು. ಶಿವಾನುಭವಿಗಳು ಅದರಂತೆಯೇ ನಡಿಯಬೇಕು ಎಂದು ಅಂದು ತನ್ನ ಪ್ರಾಣವನ್ನು ಕೇತಯ್ಯನ ಪ್ರಾಣದೊಂದಿಗೆ ಸೇರಿಸಲಾಗಿ ಅವನು ಗತಪ್ರಾಣನಾಗಲು ಅವನ ಬಾಹ್ಯ ಶರೀರವು ಹೊರಗೆ ಕಳಚಿಬಿದ್ದಿತು. ಶಿವಾನುಭವ ಮಂಟಪದಲ್ಲಿದ್ದ ಶಿವಶರಣರು ಬಸವೇಶ್ವರನಿಗೂ ಕೇತಯ್ಯನಿಗೂ ಹೀಗಾದುದನ್ನು ಕೇಳಿ ಅವರೆಲ್ಲರೂ ಅಲ್ಲಿಗೆ ಬಂದು—ಬಸವೇಶ್ವರನೂ, ಕೇತಯ್ಯನೂ, ಹೀಗೆ ನಮ್ಮನ್ನು ಬಿಟ್ಟು ಹೋದರೆ ನಮ್ಮನ್ನು ಉದ್ಧಾರಮಾಡುವವರು ಯಾರು? ಅವರ ಪ್ರಾಣ

ಗಳನ್ನು ನೀನು ಮರಳುವಂತೆ ಮಾಡು ಎಂದು ಮಡಿವಾಳ ಮಾಚ ಯ್ಯನಿಗೆ ಅವರು ಹೇಳಲು, ಮಾಚಯ್ಯನು ಪರಮಾತ್ಮನನ್ನುದ್ದೇಶಿಸಿ—ಪರಶಿವನೇ, ಭಕ್ತಿತತ್ಪರರೂ ಜಂಗಮ ಪ್ರಾಣಿಗಳೂ ಆದ ಇವರೀರ್ವರನ್ನು ಅಕಾಲದಲ್ಲಿ ಹೀಗೆ ನೀನು ನಿನ್ನಲ್ಲಿ ಬರಮಾಡಿಕೊಳ್ಳಬೇಕೇ? ಈ ಕೇತಯ್ಯನ ಪ್ರಾಣವನ್ನು ಜಾಗ್ರತೆಯಾಗಿ ನಮಗೆ ಕೊಡು, ಅದರೊಡನೆ ಬಸವೇಶ್ವರನ ಪ್ರಾಣವೂ ಬರುವದು ಎಂದು ಆವೇಶದಿಂದಲೂ ತನ್ನ ಭಕ್ತಿಯ ಉದ್ರೇಕದಿಂದಲೂ ನುಡಿಯಲು ಉಭಯತರು ಸ್ವಲ್ಪ ಹೊತ್ತಿನಲ್ಲಿ ಚೇತರಿಸಿಕೊಂಡು ಎದ್ದರು. ಕೇತಯ್ಯನು ಎದ್ದ ಕೂಡಲೆ ಮೂರ್ಛೆತಿಳಿದವನಂತೆ ಬಸವೇಶ್ವರನೂ ಎದ್ದು ಕುಳಿತನು. ಆಗ ನೆರೆದ ಶರಣರೆಲ್ಲರು ಆನಂದಸಾಗರದಲ್ಲಿ ಮುಳುಗಿದರು. ಮುಂದೆ ಮೇದರ ಕೇತಯ್ಯನು ಎಂದಿನಂತೆ ತನ್ನ ಬಿದಿರಿನ ಕಾಯಕವನ್ನು ಮಾಡುತ್ತ ದಾಸೋಹದಲ್ಲಿ ವರ್ತಿಸುತ್ತ ಕಲ್ಯಾಣದಲ್ಲಿ ಇರುವವನಾದನು. ಮತ್ತು ಅಲ್ಲಿಯೇ ಅವನು ಸಮಾಧಿಸ್ಥನಾದನು.

ಈ ಪ್ರಕಾರ ಬಸವೇಶ್ವರನ ಕಾಲದಲ್ಲಿ ಶಿವಶರಣರೆಲ್ಲರು ದೇಹ ಬೇರೆಯುಳ್ಳವರಾದರೂ ಅವರು ಪ್ರಾಣ ಒಂದೇ ಆಗಿ ಶಿವಾನುಭವದ ಆಚರಣೆಯಂತೆ ಆಚರಿಸುವವರಾಗಿದ್ದರು.

ಮೇದರ ಕೇತಯ್ಯನ ಆರು ವಚನಗಳು ಮಾತ್ರ ನಮಗೆ ದೊರೆತಿದ್ದು ಅವುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

## ವಚನಗಳು.

(೧) ಒಂದು ಬಿದಿರಿಗೆ ಕವೆ ಮೂರು, ಆ ಕವೆಯ ಒಳಗೆ ಲಕ್ಷ ಸಿಬಿರು. ಮೂರು ಕವೆಯ ಕೊಚ್ಚಿಸಿ ಲಕ್ಷಸಿಬಿರು ಬಿಡಿಸಿ, ಸೀಳಿದ ಬಿದಿರ ಹೊರೆ ಹೊರೆಯಲ್ಲಿ ನೆಯ್ದಡೆ ತೊಟ್ಟಿಲ ಸಂದ ಕಾಣದಂತೆ ನಾಲ್ಕು ಕಾಲನಿಕ್ಕಿ, ಅಂದು ಅಂದವಾದ ತೊಟ್ಟಿಲದಂಡೆಯನಿಕ್ಕಿ ಕಟ್ಟುವುದಕ್ಕೆ ಶ್ರುತ, ದೃಷ್ಟವೆಂಬೆರಡು ದಾರದಲ್ಲಿ ತೊಟ್ಟಿಲ ಕಟ್ಟಿ ಗೌರೇಶ್ವರ ಲಿಂಗಕ್ಕೆ ಹುಟ್ಟು ಹೋಗೋ ಎಂದು ಜೋಗುಳವಾಡಿದೆ.

ಭಾವ:-- ಇದರಲ್ಲಿ ಕೇತಯ್ಯನು ತನ್ನ ಕಾಯಕದ ರೀತಿಯನ್ನು ಒಂದು ಬೆಡಗಿನ ವಚನದ ಮೂಲಕ ಹೇಳುತ್ತಾನೆ. ಅಲ್ಲಲ್ಲಿ ಅಶುದ್ಧ ಶಬ್ದಗಳಿರುವದರಿಂದ ಅರ್ಥ ತಿಳಿಯಲು ದುಸ್ತರವಾಗುತ್ತದೆ. ತಾನು ಬಿದಿರಿನ ಕಾಯಕವನ್ನು ಮಾಡುತ್ತ ಲಿಂಗಾಂಗ ಸಾಮರಸ್ಯವನ್ನು ಹೇಗೆ ಹೊಂದುವೆನೆಂಬುದನ್ನು ಅವನು ಇಲ್ಲಿ ನುಡಿದಿದ್ದಾನೆ. ಇದರಿಂದ ಕೇತಯ್ಯನು ಬಿದಿರು ಕಾಯಕವನ್ನು ಮಾಡುತ್ತ ಇದ್ದುದು ಸಿದ್ಧವಾಗುತ್ತದೆ.

(೨) ಇಂದ್ರಿಯಂಗಳ ಕೊಂದೆಹೆನೆಂದೊಡವು ಕಂದರ್ಪನ ಹಂಗು. ಕಂದರ್ಪನ ಕೊಂದಿಹೆನೆಂದೊಡವು ಕಂಗಳ ಲಾಭ. ಕಂಗಳ ಮುಚ್ಚಿಯುಳ್ಳದೆ ಲಿಂಗವ ಕಾಣಬಾರದು. ಅದು ನಿರಂಗಂಗಲ್ಲದೆ ಜಗದ ಹಂಗಿನವರಿಗಿಲ್ಲ ಎಂದ ಗೌರೀಶ್ವರಾ.

(೩) ಮೊದಲು ಹುಸಿ, ಲಾಭ ದಿಟವೇ? ನಿರೀಕ್ಷಣೆ ಇಲ್ಲದೆ ಪರೀಕ್ಷೆಯುಂಟೇ? ಈಯುವಸರದಂಗವ ಗೌರೀಶ್ವರಲಿಂಗ ನೀನೇ ಬಲ್ಲೆ.

(೪) ಭಕ್ತಂಗೆ ಸುಖವೂ ಸರಿ, ದುಃಖವೂ ಸರಿ. ಉರಿ ಸಿರಿ ಉಭಯವು ಸರಿ ಎನ್ನದಿರ್ದಡೆ ಭಕ್ತಿಗದೇ ಹಾನಿ. ಜಂಗಮವೆಂದು ಪ್ರಮಾಣಿಸಿ ತನ್ನ ಕಂಗಳ ಮುಂದೆ ಕಂಡವರು ಭುಂಜಿಸಲ್ಕೆ ತನ್ನಂಗವ ಹೊರೆದಡೆ ತೀರ್ಥ ಪ್ರಸಾದಕ್ಕೆ ಅವನಂದೇ ಹೊರಗು ಗೌರೀಶ್ವರಾ.

(೫) ಗುರು ಹುಸಿ, ಲಿಂಗ ದಿಟವೆನಲಿಲ್ಲ. ಲಿಂಗ ಹುಸಿ ಜಂಗಮ ದಿಟವೆನಲಿಲ್ಲ. ಜಂಗಮ ಹುಸಿ ಪಂಚಾಚಾರ ದಿಟವೆನಲಿಲ್ಲ. ಇಂತಿ ವರಂಗವನು ಗೌರೀಶ್ವರ ಬಲ್ಲ.

(೬) ಎನ್ನ ಚಿತ್ತಕ್ಕೆ ಆಚಾರಲಿಂಗವಾದಾತ ಬಸವಣ್ಣ-ಎನ್ನ ಬುದ್ಧಿಗೆ ಗುರುಲಿಂಗವಾದಾತ ಬಸವಣ್ಣ. ಎನ್ನ ಅಹಂಕಾರಕ್ಕೆ ಶಿವಲಿಂಗವಾದಾತ ಬಸವಣ್ಣ. ಎನ್ನ ಮನಕ್ಕೆ ಜಂಗಮಲಿಂಗವಾದಾತ ಬಸವಣ್ಣ. ಎನ್ನ ಜ್ಞಾನಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ. ಎನ್ನ ಭಾವಕ್ಕೆ ಮಹಾಲಿಂಗವಾದಾತ ಬಸವಣ್ಣ. ಎನ್ನ ಸ್ಥೂಲತನುವಿಂಗೆ ಇಷ್ಟಲಿಂಗವಾದಾತ ಬಸವಣ್ಣ. ಎನ್ನ ಸೂಕ್ಷ್ಮತನುವಿಗೆ ಪ್ರಾಣಲಿಂಗ

ವಾದಾತ ಬಸವಣ್ಣ. ಎನ್ನ ಕಾರಣ ತನುವಿಂಗೆ ಭಾವಲಿಂಗವಾದಾತ ಬಸವಣ್ಣ. ಇಂತೆಂದರಿದೆನಾಗಿ ಗೌರೇಶ್ವರಲಿಂಗದಲ್ಲಿ ಸುಖಿಯಾದೆನು.

ಈ ಎಲ್ಲ ವಚನಗಳಲ್ಲಿ ಶಿವಾನುಭವದ ಉಚ್ಚ ತತ್ವಗಳು ನಿರೂಪಿತವಾಗಿದ್ದು, ಇವುಗಳಿಂದ ಮೇದರ ಕೇತಯ್ಯನು ಬಸವೇಶ್ವರನ ಸಮಕಾಲೀನನಾಗಿ ಅವನು ಉಚ್ಚ ಶಿವಾನುಭವಿಯಾಗಿದ್ದನೆಂದು ನಾವು ಊಹಿಸಬಹುದಾಗಿದೆ.

---

## ಅಮ್ಮವ್ವೆ ಅಥವಾ ಬಿಜ್ಜಮಹಾದೇವಿ.

ಮೈಸೂರು ಸೀಮೆಯಲ್ಲಿ, ಬಿಜ್ಜಾವರವೆಂಬ ಗ್ರಾಮವಿದೆ. ಅದು ತುಮಕೂರಿನಿಂದ ಈಶಾನ್ಯಕ್ಕೆ ೨೮ ಮೈಲುಗಳ ಮೇಲೆ ಇದೆ. ಅಲ್ಲಿ ಶಂಕರನೆಂಬ ಶಿವಬ್ರಾಹ್ಮಣನು ವಾಸಿಸುತ್ತಿದ್ದನು. ಅವನ ಹೆಂಡತಿಯ ಹೆಸರು ಭಾಗೀರಥಿಯು. ಅವರಿಗೆ ಅಮ್ಮವ್ವೆ ಎಂಬ ಮಗಳು ಹುಟ್ಟಿದಳು. ಅವಳು ಮನೆಯಲ್ಲಿ ಯಾವಾಗಲೂ ನಡೆಯುತ್ತಿದ್ದ ಶಿವಗೋಷ್ಠಿಗಳನ್ನೂ ಹರಕಥನಗಳನ್ನೂ ಲಕ್ಷ್ಯಪೂರ್ವಕವಾಗಿ ಕೇಳುವಳು. ಶಿವಾಲಯಕ್ಕೆ ತಪ್ಪದೆ ಹೋಗುವಳು. ಇದರಿಂದ ಅವಳಲ್ಲಿ ಶಿವಭಕ್ತಿಯು ದಿನೇ ದಿನೇ ಹೆಚ್ಚುತ್ತ ಹೋಯಿತು.

ಅಮ್ಮವ್ವೆಯು ಯೌವ್ವನಸ್ಥಳಾದ ಬಳಿಕ, ಅವಳ ಸೋದರತ್ತೆಯು ತನ್ನ ಮಗನಿಗೆ ಅವಳನ್ನು ಕೊಟ್ಟು ಲಗ್ನಮಾಡಬೇಕೆಂದು ತಂದೆಗೆ ಕೇಳಲು ಅವನು—ನನ್ನ ಮಗಳು ಲಿಂಗಪೂಜೆಯನ್ನಲ್ಲದೆ ಮತ್ತೊಂದ ನರಿಯಳು. ನಿನ್ನ ಮಗನು ಅನ್ಯದೈವಪೂಜಕನು. ಅದು ಕಾರಣ ನಿನ್ನ ಮಗನಿಗೆ ಅವಳನ್ನು ಕೊಡಲಾರೆನೆನಲು, ಸೋದರತ್ತೆಯು—ನಾವು ಕುಲಹೀನರೆಂದು ನೀನು ಕೊಡಲೊಲ್ಲೆಯೋ ಏನು? ಹೀಗಾದರೆ ನಾನು ಇಲ್ಲಿಯೇ ಪ್ರಾಣಬಿಡುವೆನು ಎಂದೆನ್ನಲು, ತಂದೆಯು ಅಂಜಿ ಮಗಳ ಪುಣ್ಯವಿದ್ದಂತೆ ಆಗಲಿ ಎಂದು ಅವಳನ್ನು ಅವಳ ಮಗನಿಗೆ ಕೊಟ್ಟು ಲಗ್ನಮಾಡಿದನು.

ಆದರೆ ಲಗ್ನವಾದ ಬಳಿಕ ಒಂದು ತಿಂಗಳಲ್ಲಿಯೇ ಅಮ್ಮವ್ವೆಯ ಗಂಡನು ಮೃತಪಟ್ಟನು. ಆಮೇಲೆ ಸ್ವಲ್ಪ ದಿವಸಗಳಲ್ಲಿ ಅವಳ ತಾಯಿ ತಂದೆಗಳೂ ಕೂಡ ಸತ್ತುಹೋದರು. ಹೀಗೆ ಅಮ್ಮವ್ವೆಯು ಅನಾಥಳಾದಳು. ಆಗ ಅವಳು ವೀರಶೈವ ದೀಕ್ಷೆಯನ್ನು ಹೊಂದಿ ಶಿವಾನುಭವದ ನಡೆಯಂತೆ ನಡೆಯುತ್ತ ರಾಟಿಯ ಕಾಯಕವನ್ನು ಕೈಕೊಂಡಳು. ಅವಳು ಹತ್ತಿಯನ್ನು ಹಿಂಜಿ ನೂತು ತನ್ನ ಉಪಜೀವನವನ್ನು ಸಾಗಿಸುವಳು. ಅದರಲ್ಲಿ ತನಗೆ ಉಳಿದಷ್ಟನ್ನು ದಾಸೋಹದ ಕಾರ್ಯಗಳಿಗೆ ಉಪಯೋಗಿಸುವಳು.

ಹೀಗಿರಲು ಒಂದು ದಿನ ಒಬ್ಬ ಚರಮೂರ್ತಿಯು ಆಕೆಯ ಮನೆಗೆ ಬರಲು ಅವಳು ಅವನನ್ನು ಸತ್ಕರಿಸಿ ನೀವಾರೆಂದು ಕೇಳಲು——ನಾವು ಶಿವನ ಭಕ್ತರು, ದೇಶಾಂತರಿಗಳು, ಎಂದು ಹೇಳಿದನು. ಅದಕ್ಕೆ ಅಮ್ಮವ್ವೆಯು ಶಿವನೆಂತಿರುವನೆಂದು ಕೇಳಲು, ಆ ಚರಮೂರ್ತಿಯು——ಶಿವನು ಅಗ್ನಿನೇತ್ರವುಳ್ಳವನು, ಅವನು ಜಟಾಧಾರಿಯು, ಅವನ ಜಟೆಯಲ್ಲಿ ಗಂಗೆ, ಸರ್ವಾಂಗದಲ್ಲಿ ಭಸ್ಮ, ಉಡುಪು ಹುಲಿದೊಗಲು, ಹೊದೆಯುವದು ಗಜಚರ್ಮ, ಸ್ಮಶಾನವಾಸಿಯು, ಸರ್ಪಾಭರಣನು, ಉರದಲ್ಲಿ ಶಿರೋಮಾಲೆ. ಅವನಿಗೆ ತಂದೆತಾಯಿಗಳಿಲ್ಲ. ಆದರೆ ಜಗತ್ತಿಗೆ ತಾನೇ ತಂದೆತಾಯಿ. ಅವನಿಗೆ ಬಂಧುಬಳಗವಿಲ್ಲ. ಆದರೆ ಜಗತ್ತಿಗೆ ತಾನೇ ಬಂಧುವು, ಎಂದು ಶಿವನ ಸ್ವರೂಪವನ್ನು ವಿಸ್ತಾರವಾಗಿ ಬಣ್ಣಿಸಿ ಹೇಳಿದನು. ಆದರೆ ಅವನು ಹೇಳಿದ್ದರಲ್ಲಿ ಶಿವನಿಗೆ ತಂದೆತಾಯಿಗಳಿಲ್ಲ, ಅವನಿಗೆ ಬಂಧುಬಳಗವಿಲ್ಲ ಎಂದು ಹೇಳಿದ್ದು ಮಾತ್ರ ಅವಳ ಮರ್ಮಕ್ಕೆ ತಾಕಿತು. ಅವಳು—ಶಿವನಿಗೆ ತಾಯಿ ಇಲ್ಲವೇ ಎಂದು ಕೇಳಲು ಆ ಚರಮೂರ್ತಿಯು—ಅವನಿಗೆ ತಾಯಿ ಇಲ್ಲ. ಇದು ಅವನಿಗೆ ಸಹಜವಾದುದು ಎಂದೆನ್ನಲು, ಅಮ್ಮವ್ವೆಯು ಆಗ ಸುಮ್ಮನಾಗಿ ಚರಮೂರ್ತಿಯನ್ನು ಚೆನ್ನಾಗಿ ಉಪಚರಿಸಿ ಅವನನ್ನು ಕಳಿಸಿಕೊಟ್ಟಳು.

ಅವನು ಹೋದಬಳಿಕ ಅಮ್ಮವ್ವೆಯು ಚಿಂತಾಕ್ರಾಂತಳಾಗಿ ತನ್ನಲ್ಲಿಯೇ——ಶಿವನಿಗೆ ಯಾರೂ ದಿಕ್ಕಿಲ್ಲವೇ? ಅವನಿಗೆ ತಾಯಿ ಇಲ್ಲವೇ? ತಾಯಿ ಇದ್ದರೆ ಅವನ ತಲೆ ಹೀಗೆ ಜಡೆಗಟ್ಟುವದೇ ? ಅವನು

ಚರ್ಮವನ್ನು ಹೊದೆಯಗೊಡುವಳೇ? ಸ್ಮಶಾನದಲ್ಲಿ ಇರಗೊಡುವಳೇ? ಅಕಟಕಟಾ, ಶಿವನಿಗಾರೂ ಇಲ್ಲವೇ? ಎಂದು ಚಿಂತೆಮಾಡುತ್ತ ನಿದ್ರೆ ಹೋದಳು.

ಅವಳು ನಿದ್ರೆ ಹೋದಾಗ ಅವಳ ಸ್ವಪ್ನದಲ್ಲಿ ಶಿವನು ಜಂಗಮ ರೂಪಾಗಿ ಬಂದು—ಎಲೋ ಭಕ್ತೆಯೇ, ನೀನು ಚಿಂತೆ ಮಾಡಬೇಡ. ಈ ಊರ ಸಮೀಪದಲ್ಲಿ ಒಂದು ಅರಣ್ಯವಿದೆ. ಅಲ್ಲಿ ನಾನು ತೊಟ್ಟಿಲಲ್ಲಿ ಶಿಶುವಾಗಿರುತ್ತೇನೆ. ಉದಯದಲ್ಲೆದ್ದು ನನ್ನನ್ನು ಅಲ್ಲಿ ಕಾಣು, ಎಂದು ಹೇಳಿ ಅಂತರ್ಧಾನನಾದನು. ಆಗ ಅವಳು ಮುಂಜಾವಿನಲ್ಲಿ ಎಚ್ಚತ್ತು ಶಿವನನ್ನು ಹುಡುಕುತ್ತ ಅರಣ್ಯಕ್ಕೆ ಹೊರಟಳು. ಅರಣ್ಯದಲ್ಲಿ ಅವಳು ಹೋಗುವಾಗ, ಅವಳಿಗೆ ಶಿವಧ್ಯಾನವೇ ಧ್ಯಾನವು. ಶಿವನನ್ನು ಶಿಶುವಾಗಿ ನಾನು ಯಾವಾಗ್ಗೆ ಕಂಡೇನು, ಅವನನ್ನು ನಾನು ಎಂದು ಸಲಹೇನು, ಎಂದು ಆತುರಪಡುತ್ತ ಅವಳು ಶಿವನನ್ನು ಹುಡುಕುತ್ತ ಹೊರಟಳು. ಮಾರ್ಗದಲ್ಲಿ ಒಂದು ಎರಳೆಯ ಮರಿಯು ತಾಯ ಕೂಡ ಹೋಗುವದನ್ನು ಕಂಡು ಅವಳು—ಶಿವನೇ ನೀನೆನಗೆ ಮಕ್ಕಳನ್ನು ಕೊಡಲಿಲ್ಲ. ಈ ಎರಳೆಯ ಬಾಳುವೆಯಕಿಂತ ನನ್ನ ಬಾಳುವೆ ಕಡೆಯದಾಯಿತಲ್ಲಾ, ಎಂದು ನುಡಿಯುತ್ತ ಮುಂದೆಹೋಗಲು, ಅಲ್ಲಿ ಒಂದು ಮರದ ಮೇಲೆ ಒಂದು ಕಪಿಯು ತನ್ನ ಮರಿಯನ್ನು ಅಪ್ಪಿಕೊಂಡು ಕುಳಿತದ್ದನ್ನು ಕಂಡು—ಪರಮಾತ್ಮನೇ, ಇದಕ್ಕೆಲ್ಲ ಮಕ್ಕಳನ್ನು ನೀನು ಕೊಟ್ಟೆ. ನೀನು ನನಗೆ ಕೊಡಲಿಲ್ಲ. ಈ ಕಪಿಯಕಿಂತಲೂ ನಾನು ಕನಿಷ್ಟಳಾದೆನಲ್ಲಾ, ಎಂದು ಹಲುಬುತ್ತ ಶಿವನನ್ನು ಹುಡುಕುತ್ತ, ಅರಣ್ಯ ಮಧ್ಯದಲ್ಲಿ ಸಂಚರಿಸಹತ್ತಿದಳು. ಹೀಗೆ ಅವಳು ಸಂಚರಿಸುತ್ತಿರುವಾಗ ಶಿವನು ತೊಟ್ಟಿಲಲ್ಲಿ ಶಿಶುವಾಗಿ ಮಲಗಿದ ಸ್ಥಳಕ್ಕೆ ಬಂದಳು. ಮತ್ತು ಅಲ್ಲಿ ಶಿವನನ್ನು ಕಂಡಳು. ಶಿಶುವನ್ನು ನೋಡಿದ ಕೂಡಲೆ ಅವಳಿಗೆ ಪ್ರೇಮವು ಉಕ್ಕೇರಿತು, ಶಿಶುವನ್ನು ಮುದ್ದಾಡಿದಳು, ಎತ್ತಿಕೊಂಡಳು.

ಆ ಶಿಶುವು ಮಲಗಿದ್ದ ತೊಟ್ಟಿಲವು ಅಗಾಧವಾದದ್ದು. ಆ ಶಿಶುವಿಗೆ ನಿರಾಕಾರ ಬಯಲೇ ಅದರ ತೊಟ್ಟಿಲು, ಶಿವನ ಜಡೆಗಳು ಅದಕ್ಕೆ ಪಟ್ಟಾವಳಿಯು, ಶಿವಾಗಮಗಳೇ ತೊಟ್ಟಿಲ ಹಗ್ಗಗಳು, ಚಂದ್ರಮನು ಅರ

ಳಿಲೆ, ಹಣೆಗಣ್ಣು ಕಸ್ತೂರಿಯ ತಿಲಕ, ಫಣಿಕುಂಡಲಗಳು ಮಾಗಾಯ್ಗಳು, ನಾಗಕಂಕಣವು ಕೈಗಡಗವು, ಪಾದದಲ್ಲಿದ್ದ ಫಣಿಗಳು ಅದಕ್ಕೆ ಕಾಲ ಗಡಗಗಳು, ಬ್ರಹ್ಮನ ತಲೆ ಮುದ್ರೆಯುಂಗುರ, ಗಜಚರ್ಮವು ಶಿಶುವಿಗೆ ಹಸುರು ಹೊದಿಕೆ, ಆದಿ ಆಧಾರವು ಅದಕ್ಕೆ ಉಡಿದಾರ, ಹೀಗೆ ಶಿವನು ಶಿಶುವಿನ ವೇಷಧಾರಣ ಮಾಡಿಕೊಂಡು ತೊಟ್ಟಿಲಲ್ಲಿ ಕುಳಿತುಕೊಂಡು ಅರಣ್ಯ ಮಧ್ಯದಲ್ಲಿ ತನ್ನ ತಾನೇ ತೂಗಿಕೊಳ್ಳುತ್ತ ಕುಳಿತಿದ್ದನ್ನು ನೋಡಿ ದಳು. ಅಂಥ ಶಿಶುವನ್ನು ಅಮ್ಮವ್ವೆಯು ನೋಡಿದ ಕೂಡಲೆ ಆವ ಳಲ್ಲಿ ಪ್ರೇಮವು ಉಕ್ಕೇರಿತು. ಅದನ್ನು ಅವಳು ಎತ್ತಿಕೊಂಡು ಮನೆಗೆ ಬಂದು ಮನೆಯ ತೊಲೆಗೆ ಒಂದು ತೊಟ್ಟಿಲನ್ನು ಕಟ್ಟಿ ಅದರಲ್ಲಿಟ್ಟು ಅದನ್ನು ಜೋಕೆ ಮಾಡಲು ಆರಂಭಿಸಿದಳು.

ಅವಳು ಆ ಕೂಸಿಗೆ ನಾಗೇಶನೆಂಬ ಹೆಸರನ್ನಿಟ್ಟಳು. ಮತ್ತು ಅದಕ್ಕೆ ಬಾಲ್ಯೋಪಚಾರಗಳನ್ನು ಮಾಡಹತ್ತಿದಳು. ಆ ಶಿಶುವು ತನ್ನ ಹೊಟ್ಟೆಯ ಕೂಸು ಎಂದು ತಿಳಿದು ಅದಕ್ಕೆ ಮೊಲೆಯುಣಿಸುವಳು, ಆಡಿಸುವಳು, ಮುದ್ದಿಕ್ಕುವಳು, ಜೋಗುಳವಾಡುವಳು. ಜೋಗುಳ ವಾಡುವಲ್ಲಿ ಸುಕೃತಾತ್ಮನೇ ಜೋ ಜೋ, ಅನಾಥನಾಥನೇ ಜೋ ಜೋ, ಮಾಹೇಶ್ವರ ಪಿತನೇ ಜೋ ಜೋ, ಎಂದು ಶಿವನ ಕುರಿತು ಹಾಡು ವಳು. ಹೀಗೆ ಆ ಶಿಶುವಿನ ಮೇಲೆ ಅವಳಿಗಾದ ಅಕ್ಕರತೆಗೆ ಎಣೆ ಇಲ್ಲ.

ಹೀಗಿರುವಲ್ಲಿ ಪರಮಾತ್ಮನು ಆಕೆಯ ಮನಸ್ಸನ್ನು ಪರೀಕ್ಷಿಸಬೇ ಕೆಂದು ಒಂದುದಿವಸ ಮೊಲೆಯುಣ್ಣುವದನ್ನು ಬಿಟ್ಟನು. ಅವನ ಎದೆ ಹೊಟ್ಟೆಯುಬ್ಬಿಕೊಂಡು ಮುಖ ಬಿಳಿಚಿಕೊಂಡು ಅತ್ಯಂತ ಕಸವಿಸಿ ಪಡಹತ್ತಿದನು. ಅಮ್ಮವ್ವೆಯು ಅದನ್ನು ನೋಡಿ ಹೌಹಾರಿದಳು. ಅನೇಕ ಉಪಚಾರಗಳನ್ನು ಮಾಡಿದಳು. ಆದರೆ ಯಾವುದರಿಂದಲೂ ಪ್ರಯೋಜನವಾಗಲಿಲ್ಲ. ಕೂಸಿನ ಬೇನೆಯು ಹೆಚ್ಚುತ್ತಹೋಯಿತು. ಆಗ ಅಮ್ಮವ್ವೆಯು ಕೂಸಿನ ಮರಣವನ್ನು ನೋಡಲಾರೆನೆಂದು ಅದಕ್ಕೂ ಮೊದಲು ತಾನು ಸಾಯಬೇಕೆಂದು ಬಯಸಿ ತನ್ನ ಕತ್ತನ್ನು ಕತ್ತರಿಸಿ ಕೊಳ್ಳುವಾಗ ಶಿವನು ಮೆಚ್ಚಿ ಪಂಚಮುಖ, ದಶಭುಜ, ನಾಗಕಂಕಣ, ಜಟಾಧಾರಿಯಾಗಿ ತೊಟ್ಟಿಲಲ್ಲಿಯೇ ಪ್ರತ್ಯಕ್ಷನಾಗಿ ಕಾಣಿಸಿಕೊಂಡನು. ಅವನನ್ನು ಅಮ್ಮವ್ವೆಯು ಕಂಡು ಅತ್ಯಂತ ಹರುಷಿತಳಾಗಿ ಅವನಿಗೆ

ಪೊಡಮಡಲು ಪರಮಾತ್ಮನು ಅವಳಿಗೆ ನಿನಗೇನು ಬೇಕು ಬೇಡು ಎನಲು, ಅಮ್ಮವ್ವೆಯು—ನನಗೇನು ಬೇಡ, ನೀನು ನಿರೋಗಿಯಾಗುವದು ನನಗೆ ಬೇಕು. ನೀನು ಶಾಶ್ವತ ತನುವಾಗಿರುವದು ಬೇಕು. ನಿನ್ನಿಂದ ಬೇಡುವದು ಇದೊಂದೇ ವರವು. ಇಷ್ಟೇ ನನಗೆ ಸಾಕು, ಎಂದು ನುಡಿದಳು. ಆಗ ಪರಮಾತ್ಮನು ನಕ್ಕು—ಎಲೌ ತಾಯೇ, ನಿನ್ನಂಥ ತಾಯಿಗಳು ನನಗೆ ಇರಲು ವ್ಯಾಧಿಗಳು ನನಗೇನು ಮಾಡುವವು? ನಾನು ನಿತ್ಯನಾಗಿದ್ದೇನೆ. ನಾನು ಕ್ಷೇಮವಾಗಿರುವೆನು. ಆದರೆ ಇನ್ನುಮೇಲೆ ನಿನಗೂ ನಿತ್ಯತ್ವವು ಪ್ರಾಪ್ತವಾಗಲಿ ಎಂದು ನುಡಿದು, ಅಲ್ಲಿಯೇ ಅಂತರ್ಧಾನನಾದನು. ಆಮೇಲೆ ಅಮ್ಮವ್ವೆಯು ತನ್ನ ಲಿಂಗದಲ್ಲಿ ವಿನೋದಿಸುತ್ತ ಕೆಲಕಾಲದ ಮೇಲೆ ಬಿಜ್ಜಾವರದಲ್ಲಿಯೇ ಸಮಾಧಿಯನ್ನು ಹೊಂದಿದಳು.

ಅಮ್ಮವ್ವೆಗೆ ಬಿಜ್ಜಾಂಬೆ, ಬಿಜ್ಜಮಹಾದೇವಿ ಎಂಬ ಬೇರೆ ಹೆಸರುಗಳಿವೆ. ಬಿಜ್ಜಾಂಬೆ ಇದು ಆಕೆಯು ಹುಟ್ಟಿದಾಗಿನ ಹೆಸರು ಇದ್ದು, ಅವಳು ಪ್ರಸಿದ್ಧಳಾದ ಬಳಿಕ 'ಅಮ್ಮವ್ವೆ' ಎಂದು ಜನರಲ್ಲಿ ಸಾರ್ಥಕನಾಮವನ್ನು ಪಡೆದಿರಬಹುದೆಂದು ತೋರುತ್ತದೆ. ಅಮ್ಮವ್ವೆಯು ಅಥವಾ ಬಿಜ್ಜಮಹಾದೇವಿಯು ವೀರಶೈವ ಶಿವಶರಣ ಶರಣೆಯರಲ್ಲಿ ಬಹು ಪ್ರಖ್ಯಾತಳಾಗಿದ್ದಾಳೆ. ಗಣಸಹಸ್ರದಲ್ಲಿ ಅವಳ ಹೆಸರು ಇದೆ. ದೇವಿಯರ ತ್ರಿವಿಧಿಯಲ್ಲಿ ಅವಳ ವರ್ಣನೆ ಇರುವದು ಹೇಗೆಂದರೆ—

ಮಾಯಾ ವಿರಹಿತನಿಗೆ । ತಾಯಿ ತಾನಿಲ್ಲೆಂದು
ಒಯ್ಯಾರದಿಂದ ಮೊಲೆಯೂಡಿ ಸಲಹಿದ
ತಾಯಿ ಅಮ್ಮವ್ವೆ ಶರಣಾಗು ॥

ಬಿಜ್ಜಾವುರ ಗ್ರಾಮದ ಹೆಸರಾದರೂ ಬಿಜ್ಜವ್ವೆ ಈ ಹೆಸರಿನಿಂದಲೇ ಬಂದಿರಬಹುದೆಂದು ತೋರುತ್ತದೆ.

# ಗಟ್ಟಿವಾಳಯ್ಯ.

ಗಟ್ಟಿವಾಳಯ್ಯನು ಬಸವೇಶ್ವರನ ಕಾಲದಲ್ಲಿದ್ದ ಶಿವಶರಣರಲ್ಲಿ ಉನ್ನತ ಸ್ಥಾನವನ್ನು ಪಡೆದವನಿರುತ್ತಾನೆ. ಆವನು ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ವಿವಾದಗಳಲ್ಲಿ ಯಾವಾಗಲೂ ಅಂಗವಹಿಸಿದವನು. ಮತ್ತು ಶ್ರೇಷ್ಠತರಗತಿಯ ವಚನಕಾರನಿದ್ದಾನೆ. ಅವನ ಮುದ್ರಿಕೆಯು 'ಚಿಕ್ಕಯ್ಯ ಪ್ರಿಯಸಿದ್ಧಲಿಂಗ ಇಲ್ಲ ಇಲ್ಲ' ಎಂದಿದೆ. ಅವನ ವಚನಗಳಲ್ಲಿ ಪರಮಾತ್ಮನ ಸ್ವರೂಪು, ಶಿವಶರಣರ ನಡೆ, ಈ ಮೊದಲಾದ ಶಿವಾನುಭವ ವಿಷಯಗಳ ಸಂಬಂಧವಾಗಿ ಅತ್ಯಂತ ಉನ್ನತವಾದ ವಿಚಾರಗಳಿವೆ.

ಗಟ್ಟಿವಾಳಯ್ಯನ ಮೊದಲಿನ ಹೆಸರು ಮುದ್ದಣ್ಣನೆಂದಿದೆ. ಅವನು ತನ್ನ ಗ್ರಾಮದಲ್ಲಿ ಚಿಕ್ಕವನಿರುವಾಗಲೇ ಶಿವಾನುಭವದ ವಿಚಾರಗಳಲ್ಲಿ ಮಗ್ನನಾಗಿ ಅದರ ನಡೆಯಂತೆ ನಡೆಯುತ್ತ ನರ್ತನ ಮಾಡುವ ಕಾಯಕವನ್ನು ಕೈಕೊಂಡವನಾಗಿದ್ದನು. ಅವನು ಈ ಕಾಯಕವನ್ನು ಮಾಡುತ್ತ ಮದ್ದಳೆಯನ್ನು ನುಡಿಸುತ್ತ ಶಿವಾನುಭವದ ತತ್ವಗಳನ್ನು ಜನರಲ್ಲಿ ಸಾರುವನು. ಈ ಕಾಯಕದಿಂದ ತನಗೆ ದೊರಕಿದ್ದರಲ್ಲಿ ತೃಪ್ತನಾಗಿ ಅದರಲ್ಲಿ ತನಗೆ ಏನಾದರೆ ಉಳಿದರೆ ಅದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವನು.

ಗಟ್ಟಿವಾಳಯ್ಯನು ಪರಮ ವೈರಾಗ್ಯ ಶಾಲಿಯು. ಅವನು ಇಂದ್ರಿಯ ವಿಷಯಗಳನ್ನು ತೃಣೀಕರಿಸಿ ನಿರಾಶಾಭರಿತನಾಗಿ ಆಚರಿಸುವವನಾಗಿದ್ದನು. ಅವನು ಕನಕವೆಂದರೆ ಕಲ್ಲು, ತನ್ನ ಮನೆ ಎಂದರೆ ಸಂತೆಯ ಗುಡಿಸಲು, ಎಂದು ಭಾವಿಸಿ ಎಲ್ಲರಲ್ಲಿಯೂ ವಿಶ್ವಬಂಧುತ್ವಭಾವವನ್ನು ತಾಳಿದವನಾಗಿದ್ದನು. ಅವನು ಯಾರನ್ನೂ ಪೀಡಿಸುತ್ತಿದ್ದಿಲ್ಲ. ಯಾರ ಮನಸ್ಸನ್ನೂ ನೋಯಿಸುತ್ತಿದ್ದಿಲ್ಲ. ಅಹಿಂಸಾ ಧರ್ಮವನ್ನು ಪಾಲಿಸುವವನಾಗಿದ್ದನು. ಅವನ ಈ ಕಡುತರವಾದ ಆಚರಣೆಯನ್ನು ನೋಡಿ ಜನರು ಅವನನ್ನು ಗಟ್ಟಿವಾಳ ಮುದ್ದಣ್ಣನೆಂದು ಕರೆಯಹತ್ತಿದರು. ಹೀಗೆ ಅವರು ಕರೆಯುತ್ತ ಕರೆಯುತ್ತ ಮುಂದೆ ಗಟ್ಟಿವಾಳಯ್ಯನೆಂಬ ಹೆಸರು ಮಾತ್ರ ಅವನಿಗೆ ಉಳಿಯಿತು.

ಗಟ್ಟಿವಾಳಯ್ಯನಿಗೆ ಒಬ್ಬ ಹೆಂಡತಿಯು ಇದ್ದಳು. ಅವಳು ಗಟ್ಟಿವಾಳಯ್ಯನ ಈ ನಿರಾಶಾವೃತ್ತಿಯನ್ನು ನೋಡಿ ಅತ್ಯಂತ ಬೇಸರಗೊಂಡವಳಾಗಿದ್ದಳು. ಅವಳಿಗೆ ವೈಭವವೂ ಶ್ರೀಮಂತಿಕೆಯೂ ಬೇಕಾಗಿದ್ದವು. ಇವು ಅವನಲ್ಲಿ ಇಲ್ಲದ್ದರಿಂದ ಅವಳು ಅವನನ್ನು ಪ್ರೀತಿಸುವದನ್ನು ಬಿಟ್ಟು ಜಾರತನದಿಂದ ನಡೆಯುತ್ತಿದಳು. ಇದು ಗಟ್ಟಿವಾಳಯ್ಯನಿಗೆ ತಿಳಿದು ಬಂದಿತು. ಆದರೂ ಅವನು ಅಹಿಂಸಾವೃತ್ತಿಯುಳ್ಳವನಾದ್ದರಿಂದ ಅವಳಲ್ಲಿ ಎಷ್ಟು ಮಾತ್ರವೂ ಮುನಿಸು ತಾಳದೆ ತನ್ನ ಶಿವಾನುಭವದಲ್ಲಿಯೇ ಮಗ್ನನಾಗಿ ಅತ್ಯಂತ ಸಮಾಧಾನದಿಂದಿರುವನು.

ಒಂದು ದಿನ ಅವನ ಹೆಂಡತಿಯು ತನ್ನ ತವರೂರಿಗೆ ಹೋಗಬೇಕೆಂದು ಬಯಸಲು ಗಟ್ಟಿವಾಳಯ್ಯನು ಹಾಗೆಯೇ ಆಗಲೆಂದು ಒಂದು ಚಕ್ಕಡಿಯನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿಗೆ ಹೊರಟನು. ಅವನ ಹೆಂಡತಿಯು ಚಕ್ಕಡಿ ಹೊಡೆಯಲಿಕ್ಕೆ ತನ್ನ ವಿಟಪುರುಷನೊಬ್ಬನನ್ನು ಗೊತ್ತುಮಾಡಿಕೊಂಡು ಮೂವರೂ ದಾರಿಯಿಂದ ನಡೆದು ಬರುವಲ್ಲಿ ಮಧ್ಯದಲ್ಲಿ ಒಂದು ಭಾವಿಯನ್ನು ಕಂಡು ಗಟ್ಟಿವಾಳಯ್ಯನಿಗೆ ಅವನ ಹೆಂಡತಿಯು—ನಾನು ನೀರಡಿಸಿದ್ದೇನೆ. ಬಾವಿಯಿಂದ ನೀರು ತನ್ನಿ ಎಂದು ಹೇಳಲು ಅವನು ಒಳಗೆ ಇಳಿದು ನೀರು ತುಂಬಿಕೊಳ್ಳುವಾಗ, ಆ ವಿಟನು ಇದು ಒಳ್ಳೇ ಸಮಯವೆಂದು ಒಂದು ಕಲ್ಲು ಗುಂಡನ್ನು ತೆಗೆದುಕೊಂಡು ಮೇಲಿನಿಂದ ಗಟ್ಟಿವಾಳಯ್ಯನ ಮೇಲೆ ಬಲವಾಗಿ ಎಸೆಯಲು ಅದು ಅವನಿಗೆ ತಾಕಲು ಅವನು ನೀರಿನಲ್ಲಿ ಮುಳುಗಿದನು.

ಆಗ ಆ ವಿಟನೂ ಹೆಂಡತಿಯೂ ನಗುತ್ತ ಸಂತೋಷಪಟ್ಟು ಗಾಡಿಯನ್ನು ಹೊಡೆದುಕೊಂಡು ಅವಳ ತವರುಮನೆಗೆ ಬರುವಷ್ಟರಲ್ಲಿ ಗಟ್ಟಿವಾಳಯ್ಯನು ಅವರಕಿಂತಲೂ ಮೊದಲಿಗೆಯೇ ಅಲ್ಲಿಗೆ ಬಂದು ಮನೆಯ ಮುಂದೆ ಕುಳಿತಿದ್ದನು. ಗಟ್ಟಿವಾಳಯ್ಯನು ಶ್ರೇಷ್ಠ ಶಿವಾನುಭವಿಯೂ, ಲಿಂಗದೇಹಿಯೂ. ಅಂಥವನಿಗೆ ಬಾಹ್ಯ ಪೀಡೆಗಳು ಹೇಗೆ ಬಾಧಿಸುವವು? ಅವನು ಅಲ್ಲಿ ಕುಳಿತಿರುವದನ್ನು ಅವನ ಹೆಂಡತಿಯು ನೋಡಿ ನಾಚಿಕೆಯಿಂದ ತಲೆ ಬಗ್ಗಿಸಿಕೊಂಡು ನಿಂತಳು. ಆದರೆ ಗಟ್ಟಿವಾಳಯ್ಯನು ತನ್ನನ್ನು ಕೊಂದು ಹಾಕಬೇಕೆಂದು ಬಯಸಿದ ಅವಳಿಗೂ ಅವಳ ವಿಟನಿಗೂ ಒಂದಾದರೂ ಸಿಟ್ಟಿನ ನುಡಿಗಳನ್ನು ಆಡಲಿಲ್ಲ.

ಗಟ್ಟಿವಾಳಯ್ಯನು ಲಗ್ನವಾದ ಬಳಿಕ ತನ್ನ ಅತ್ತೆಯ ಮನೆಗೆ ಎಂದೂ ಬಂದಿರಲಿಲ್ಲ. ಅವನು ಶಿವಾನುಭವಿಯಾದ ಬಳಿಕ ಅವನ ರೂಪು, ವೇಷ ಇವೆಲ್ಲವುಗಳು ಬದಲಾಗಿದ್ದರಿಂದ ಅತ್ತೆಯ ಮನೆಯಲ್ಲಿ ಯಾರೂ ಅವನನ್ನು ಗುರುತಿಸಲಿಲ್ಲ. ಆದರೆ ಅವನ ಹೆಂಡತಿಯು ಅಲ್ಲಿಗೆ ಆಗಿಂದಾಗ್ಗೆ ಬರುತ್ತಿದ್ದು ಅಲ್ಲಿಯೂ ಕೂಡ ಅವಳು ದುರ್ನಡತೆಯಿಂದ ನಡೆಯುತ್ತಿದ್ದಳು. ಆದ್ದರಿಂದ ಅವಳು ಊರಿಗೆ ಬಂದಳೆಂಬ ಸುದ್ದಿಯನ್ನು ಅವಳ ಅಲ್ಲಿಯ ವಿಟನೊಬ್ಬನಿಗೆ ತಿಳಿಯಲು ಅವನು ಅಲ್ಲಿಗೆ ಬಂದು ಅವಳನ್ನು ಕರೆದುಕೊಂಡು ಹೋಗಹತ್ತಿದನು. ಬಾಡಿಗೆಯವನು ಅದನ್ನು ನೋಡಿ, ಇವಳು---ನನ್ನ ಸ್ತ್ರೀ ಎಂದು ಹೇಳಲು ಉಭಯತರು ಕಾದಾಡಹತ್ತಿದರು. ಗಟ್ಟಿವಾಳಯ್ಯನು ಅದನ್ನು ನೋಡಿ ಉಭಯತರ ಜಗಳವನ್ನು ಬಗೆ ಹರಿಸಬೇಕೆಂದು ಬಯಸಿ ತನ್ನಲ್ಲಿದ್ದ ಲಿಂಗಶಕ್ತಿಯ ಮೂಲಕ ತನ್ನ ಹೆಂಡತಿಯನ್ನು ಇಬ್ಭಾಗಮಾಡಿ, ಅವುಗಳಿಂದ ಎರಡು ಹೆಣ್ಣುಗಳನ್ನು ಮಾಡಿ, ನೀವಿಬ್ಬರು ಒಂದೊಂದು ಹೆಣ್ಣು ತೆಗೆದುಕೊಳ್ಳಿರಿ ಎಂದು ಹೇಳಿ ಅವರಿಗೆ ಒಪ್ಪಿಸಿ, ಇನ್ನು ಮೇಲೆ ನನಗೆ ಈ ಸ್ತ್ರೀ ಪ್ರಪಂಚವು ಸಾಕು, ಇದನ್ನು ನಡಿಸಲಿಕ್ಕೆ ನನಗೆ ಬಾರದು, ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥರಿದ್ದಾರೆ, ಅವರ ಕಡೆಗೆ ಹೋಗುವೆನೆಂದು, ಪರಮ ವೈರಾಗ್ಯಶಾಲಿಯಾಗಿ ಅಲ್ಲಿಗೆ ನಡೆದುಕೊಂಡು ಬಂದು ಶಿವಾನುಭವ ಮಂಟಪದಲ್ಲಿ ಬಸವೇಶ್ವರ ಸನ್ನಿಧಾನದಲ್ಲಿ ಇರಹತ್ತಿದನು.

ಅವನು ಕಲ್ಯಾಣ ಪಟ್ಟಣಕ್ಕೆ ಬಂದ ಬಳಿಕ ಅಲ್ಲಿ ಭಿಕ್ಷೆಯನ್ನು ಬೇಡಿಕೊಂಡಿರದೆ, ತನ್ನ ಮೊದಲಿನ ನರ್ತನ ಮಾಡುವ ಕಾಯಕವನ್ನು ಮಾಡಿಕೊಂಡಿರುತ್ತಿದ್ದನು. ಆಗ ಅವನಿಗೆ ಸದ್ಭಕ್ತಿಯೇ ಭಿಕ್ಷೆಯಾಯಿತು. ಅವನು ಇದು ಅಡವಿ ಅರಣ್ಯ ಗುಡಿ ಗುಂಡಾರ ತಿಪ್ಪೆ ಉಪ್ಪರಿಗೆ ಎಂಬ ಭೇದ ಭಾವವಿಲ್ಲದೆ ಎಲ್ಲವೂ ಸಮವಾದುದು ಎಂಬ ಭಾವವುಳ್ಳವನಾಗಿ ಯಾವಾಗಲೂ ಆನಂದ ವೃತ್ತಿಯುಳ್ಳವನಾಗಿ ಪಟ್ಟಣದಲ್ಲಿ ಇರಹತ್ತಿದನು.

ಹೀಗಿರುವಲ್ಲಿ ಒಂದು ದಿನ ಬಸವಣ್ಣನ ಮನೆಯ ಮುಂದಿನ ಭೇರಿಯು ಬಾರಿಸಹತ್ತಲು, ಆಗ ಊಟದ ಸಮಯವಾಯಿತೆಂದು ಪಟ್ಟಣದಲ್ಲಿಯ ಜಂಗಮರು ಎಂದಿನಂತೆ ತಂಡ ತಂಡವಾಗಿ ಅಲ್ಲಿಗೆ

ಭೋಜನಕ್ಕೆಂದು ಬರಹತ್ತಿದರು. ಅವರನ್ನು ಗಟ್ಟಿವಾಳಯ್ಯನು ನೋಡಿ ಅಸಹ್ಯಪಟ್ಟು—ಈ ಜಂಗಮರು ಬಸವಣ್ಣನ ಮನೆಯ ಮುಸುರಿಯ ಗಡಿಗೆಯ ನೊಣಗಳು. ಇವರು ಉಪಾಧಿಯಿಂದ ಶರೀರ ಪೋಷಕರಲ್ಲದೆ ಜಂಗಮ ಸ್ಥಲಕ್ಕೆ ಸಲ್ಲರು. ಇವರು ಭಕ್ತಿಯನರಿಯದ ಕಿಸುವಾಯಿಗಳು. ಬಸವ ಊಟ ಹಾಕುತ್ತಾನೆಂದು ಇವರು ಬಸಿದ ಲೋಳೆಯನ್ನು ಬಾಯಲ್ಲಿ ಹಾಕುವವರು. ಇವರಿಗೇಕೆ ಪರಮಾತ್ಮನು? ಎಂದು ಅವರನ್ನು ವಿಡಂಬಿಸುತ್ತ ನಿಂತನು. ಅದನ್ನು ಆ ಜಂಗಮರು ಕೇಳಿ ಅತ್ಯಂತ ಕ್ರುದ್ಧರಾಗಿ ಈ ಗಟ್ಟಿವಾಳಯ್ಯನಿಗೇನು ಮಾಡಬೇಕೆಂದು ಯೋಚಿಸಿ—ಇವನು ಶಿವಾನುಭವಿಯು ಎಂದು ಜನರಲ್ಲಿ ಪ್ರಸಿದ್ಧನಾಗಿದ್ದಾನೆ. ಆದ್ದರಿಂದ ಇವನ ಇಷ್ಟಲಿಂಗವನ್ನು ಕಿತ್ತುಕೊಂಡು ಬಿಟ್ಟರೆ ಸಾಕು, ಇವನು ತಾನಾಗಿಯೇ ಉಪವಾಸ ಬಿದ್ದು ಸತ್ತು ಹೋಗುತ್ತಾನೆ, ಎಂದು ತಿಳಿದು ಅವನನ್ನು ಬಂಧಿಸಿ ನೋಯಿಸಿ, ಅವನ ಇಷ್ಟಲಿಂಗವನ್ನು ಕಸಿದು ಕೊಂಡು ಬಿಟ್ಟರು.

ಆದರೆ ಗಟ್ಟಿವಾಳಯ್ಯನು ಜಂಗಮರ ಈ ದುರ್ಬುದ್ಧಿಯನ್ನು ತಿಳಿದವನಾಗಿ ಸಮೀಪದಲ್ಲಿ ಬಿದ್ದ ಒಳ್ಳೇ ಗಾತ್ರವುಳ್ಳ ಒಂದು ದೊಡ್ಡ ಬಂಡೆಯ ಕಲ್ಲನ್ನು ತೆಗೆದುಕೊಂಡು ಬಂದು ಅದಕ್ಕೆ ಹಗ್ಗವನ್ನು ಹಾಕಿ ಕೊರಳಿಗೆ ಕಟ್ಟಿಕೊಂಡು ಇದು ನನ್ನ ಇಷ್ಟಲಿಂಗ, ಇದು ನನ್ನ ಮಹಾಲಿಂಗ, ಎಂದು ಹೇಳುತ್ತ ಬಸವೇಶ್ವರನ ಮನೆಯ ಹೆಬ್ಬಾಗಿಲಿಗೆ ಬಂದು ಅಲ್ಲಿ ಚಾಚಿಕೊಂಡು ಕುಳಿತನು. ಆಗ ಆ ಬಂಡೆಗಲ್ಲು ಬಾಗಿಲಿಗೆ ಸರಿಸಮಾನವಾಗಲು ಒಳಗೆ ಯಾರೂ ಹೋಗದಂತಾಯಿತು. ಅದರಿಂದ ಹಾಲು ಮೊಸರು, ಕಜ್ಜಾಯ, ಪಕ್ವಾನ್ನಗಳನ್ನು ತರುತ್ತಿದ್ದ ಬಸವೇಶ್ವರನ ಸೇವಕರು ಅವನ ಮನೆಯ ಹೊರಗೆಯೇ ನಿಂತುಕೊಳ್ಳಬೇಕಾಯಿತು. ಊಟಕ್ಕೆ ಬರುತ್ತಿದ್ದ ಅಸಂಖ್ಯಾತ ಜಂಗಮರು ಒಳಗೆ ಹೋಗಲಾರದವರಾದರು. ಆಗ ಅವರು ಗಟ್ಟಿವಾಳಯ್ಯನನ್ನು ಬೈಯ್ಯುತ್ತ ದ್ವಾರದಲ್ಲಿಯೇ ನಿಂತುಕೊಂಡರು. ಹೀಗೆ ಅಲ್ಲಿ ದೊಡ್ಡ ಗಲಾಟೆಯೇ ನಡಿಯಿತು.

ಇದು ಬಸವೇಶ್ವರನ ಹೆಂಡತಿಯಾದ ನೀಲಲೋಚನೆಗೆ ತಿಳಿಯಲು ಅವಳು ಬಿಜ್ಜಳನ ಸಭೆಯಲ್ಲಿದ್ದ ಬಸವೇಶ್ವರನಿಗೆ ಹೇಳಿ ಕಳುಹಿಸಿದಳು. ಆಗ ಅವನು ಅಲ್ಲಿದ್ದ ಪ್ರಭುದೇವ ಚನ್ನಬಸವ ಮೊದಲಾದ ಶಿವಶರ

ಣಾರನ್ನೊಡಗೊಂಡು ಗಟ್ಟಿವಾಳಯ್ಯನಿದ್ದಲ್ಲಿಗೆ ಬಂದು ಅಲ್ಲಿ ನಡೆದ ಎಲ್ಲವನ್ನು ತಿಳಿದುಕೊಂಡು ನೆರೆದ ಜಂಗಮರಿಗೆ--ನೀವು ಗಟ್ಟಿವಾಳಯ್ಯನ ಇಷ್ಟ ಲಿಂಗವನ್ನು ಅವನಿಗೆ ಕೊಡಿರಿ ಎಂದು ಹೇಳಲು, ಅವರು ಗಟ್ಟಿವಾಳಯ್ಯನಿಗೆ--ನಿಮಗೆ ಗುರು ಕೊಟ್ಟ ಲಿಂಗ, ಮತ್ತು ಬೆಟ್ಟದ ಈ ಗುಂಡು ಹೀಗೆ ಎರಡು ಲಿಂಗಗಳೇ? ನಿಮಗೆ ಇಬ್ಬರು ಗಂಡರೇ? ಎಂದು ಕೇಳಲು ಗಟ್ಟಿವಾಳಯ್ಯನು--ಒಂದೆರಡಾಗಬಲ್ಲದು, ಎರಡು ಮೂರಾಗಬಲ್ಲದು, ಆ ಮೂರು ಆರಾಗಬಲ್ಲುದು, ಆ ಆರು ಮೂವತ್ತಾರಾಗಬಲ್ಲದು, ಆ ಮೂವತ್ತಾರು ಇನ್ನೂರು ಹದಿನಾರಾಗಬಲ್ಲದು, ಆ ಇನ್ನೂರು ಹದಿನಾರು ಏಕ ಕೋಟಿ ಲಿಂಗ ಸ್ಥಲವಾಗಬಲ್ಲದು. ಇದು ಲಿಂಗದ ನಿಜವು. ನಿಮ್ಮದು ಅರ್ಥಿಗೆ ಕಟ್ಟಿದ ಲಿಂಗವು. ಅದು ನಿಮ್ಮ ಕೈಯ್ಯೊಳಗಾಯಿತ್ತು. ನಿಶ್ಚಯದ ಲಿಂಗ ನಿಮ್ಮ ಗೊತ್ತಿಗೆ ಸಿಕ್ಕದು. ಆ ಘನ ಲಿಂಗವುಳ್ಳ ನಾನೇ ಜಂಗಮನು. ನೀವು ಜಂಗುಳಿಗಳು. ಈ ಗುಂಡೇ ನನಗೆ ಬಟ್ಟಬಯಲು ಪರಬ್ರಹ್ಮ, ಎಂದು ಹೇಳಿದನು. ಆಗ ಆ ಜಂಗಮರು-ಈ ಲಿಂಗವು ನಿನ್ನದಾದರೆ ಅದು ನಿನ್ನ ಅಂಗೈಯಲ್ಲಿ ಏಕೆ ಅಡಗಬಾರದು? ಇದು ಲಿಂಗದ ರೀತಿಯಲ್ಲ ಎಂದು ನುಡಿಯುತ್ತ, ಅವರು ಅವನಿಗೆ--ಇಗೋ ಇದು ನಿನ್ನ ಮೊದಲಿನ ಇಷ್ಟ ಲಿಂಗವು. ನಿನಗೆ ಇಬ್ಬರು ಗಂಡರು ಎಂದು ಹೇಳಿ ಅದನ್ನು ಅವನಿಗೆ ಕೊಡಲು, ಗಟ್ಟಿವಾಳಯ್ಯನು ತನ್ನಲ್ಲಿ ನೆಲೆಗೊಂಡ ಲಿಂಗ ಸಾಮರ್ಥ್ಯದಿಂದ ಆ ಬೆಟ್ಟದ ಗುಂಡವನ್ನು ತನ್ನ ಆ ಇಷ್ಟಲಿಂಗದಲ್ಲಿಯೇ ಅಡಗಿಸಿಕೊಂಡು ಬಿಟ್ಟನು.

ಆಗ ಅಲ್ಲಿದ್ದ ಪ್ರಭುದೇವರು ಗಟ್ಟಿವಾಳಯ್ಯನ ನಡೆಯೇ ನಿಜವಾದದ್ದು ಎಂದು ನುಡಿದು ಅವನನ್ನು ಸ್ತುತಿಸುತ್ತ ಅಂದದ್ದು:--'ಅಂಗದ ಮೇಲಣ ಲಿಂಗ ಹಿಂಗಿದಾತನ ಭವಿ ಎಂಬರು, ಅಂಗದ ಮೇಲಣ ಲಿಂಗ ಇಪ್ಪಾತನ ಭಕ್ತನೆಂಬರು, ಅಂಗದೊಳಗೆ ಬೆರಸಿಪ್ಪ ಲಿಂಗದ ಹೊಲಬನರಿಯದೆ. ಲಿಂಗವಿಲ್ಲದೆ ಒಂದು ಕ್ಷಣ ಒಂದಂಗ ಸುಳಿದುದುಂಟೇ ಜಗದೊಳಗೆ? ಆ ಜಗದೊಳಗಣ ಲಿಂಗವನು ಹಿಂಗದವರಿಗೆ ಭವಮಾಲೆಯುಂಟು. ಹಿಂಗಿದವರಿಗೆ ಭವಮಾಲೆ ಇಲ್ಲ ಗುಹೇಶ್ವರಾ' ಎಂದು ನುಡಿದನು.

ಹಾಗೆಯೇ ಚನ್ನಬಸವೇಶ್ವರನು ಅಲ್ಲಮ ಪ್ರಭುವಿನನ್ನು ಸಮರ್ಥಿಸುತ್ತ --'ಅಂಗದ ಮೇಲಣ ಲಿಂಗ ಹಿಂಗಿತ್ತೆಂದು ಆತ್ಮಘಾತವ ಮಾಡ

ಬೇಕೆಂಬ ಅಜ್ಞಾನಿಗಳು ಅಂಗವಾವುದು, ಲಿಂಗವಾವುದೆಂದವರೆತ್ತಬಲ್ಲರು? ಅಂಗವೇ ಆತ್ಮಲಿಂಗವ ಸಂದಿತ್ತು. ಈ ಎರಡರ ಸಂಬಂಧ ಸಂಚವ ತಿಳಿಯದೆ ಅಂಗಲಿಂಗ ಹಿಂಗಿತ್ತೆಂಬವರಿಗೆ ಪ್ರಾಣಲಿಂಗನಾಸ್ತಿ. ಪ್ರಸಾದ ವೆಲ್ಲಿಯದೋ ಕೂಡಲ ಚನ್ನಸಂಗಮದೇವಾ?' ಎಂದು ಗಟ್ಟಿವಾಳ ಯ್ಯನ ಆಚರಣೆಯ ರೀತಿಯನ್ನು ವಿವರಿಸಿ ಹೇಳಿದನು.

ಹೀಗೆ ಗಟ್ಟಿವಾಳಯ್ಯನು ಬಿಟ್ಟಿದ ಗುಂಡನ್ನು ತನ್ನ ಇಷ್ಟಲಿಂಗದಲ್ಲಿ ಅಡಿಗಿಸಿಕೊಂಡದ್ದನ್ನು ಬಸವಾದಿ ಪ್ರಮಥರೂ ಜಂಗಮರೂ ಕಂಡು ಅವ ನನ್ನು ಕೊಂಡಾಡುವವರಾದರು. ಜಂಗಮರಾದರೂ ಬಸವಣ್ಣನ ಮನೆಗೆ ಹೀಗೆ ಕೂಳಿಗೆ ಬಂದರೆ ತಾವು ಕೇವಲ ವೇಷಧಾರಿಗಳೆಂದು ತಿಳಿದು ಕೊಂಡು ಆಚರಿಸುವವರಾದರು. ಹೀಗೆ ಗಟ್ಟಿವಾಳಯ್ಯನು ಅವರೆಲ್ಲರಿಗೆ ಶಿವಾನುಭವದ ನಡೆಯನ್ನು ಆಗಿಂದಾಗ್ಗೆ ಅರುಹುತ್ತ ಬರುವವನಾದನು.

ಕಲ್ಯಾಣ ಪಟ್ಟಣದಲ್ಲಿ ಗಟ್ಟಿವಾಳಯ್ಯನು ತನ್ನ ಶಿವಾನುಭವದ ತತ್ವಗಳನ್ನು ನಾಟ್ಯದ ಮೂಲಕ ಅನೇಕ ವಿಧವಾಗಿ ಸಾರುತ್ತ ತನ್ನ ಕಾಯಕವನ್ನು ನಡಿಸುತ್ತಲಿದ್ದನು. ಅವನು ಇದರ ತತ್ವಗಳನ್ನು ಹೇಳುವಲ್ಲಿ ತನ್ನ ಎಲ್ಲ ವಚನಗಳ ಸಾರವೆಂದು—'ಸತ್ತು ಸಮಾಧಿಯಲ್ಲಿರಲಿಲ್ಲ, ಕಾಯವೆರಸಿ ಕೈಲಾಸಕ್ಕೆ ಹೋಗಲಿಲ್ಲ, ನಿತ್ಯವಾದ ಚರಲಿಂಗ ಹಸ್ತದ ಲ್ಲಿಯೇ ನಮಗೆ ನಿರವಯಲ ನಿಜಸಮಾಧಿ. ಇದ ಮೀರಿದವರಿಗೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ' ಎಂಬ ವಚನದಲ್ಲಿಯ ಬೋಧೆ ಯನ್ನು ಅವನು ಯಾವಾಗಲೂ ತಿಳಿಸುತ್ತ ಪಟ್ಟಣದ ಬೀದಿಗಳಲ್ಲಿ ಸಂಚರಿಸುವನು. ಹೀಗೆ ಅವನು ಅನೇಕ ವರ್ಷ ಬೋಧಿಸುತ್ತ ಒಂದು ದಿನ ಕಲ್ಯಾಣ ಪಟ್ಟಣದ ರಾಜಬೀದಿಯಲ್ಲಿಯೇ ಮೃತಿಯನ್ನು ಹೊಂದಿದನು.

ಹೀಗೆ ಅವನ ಮೃತ ಶರೀರವು ಬೀದಿಯಲ್ಲಿಯೇ ಬಿದ್ದಿರುವವನ್ನು ಬಿಜ್ಜಳನ ಚಾರರು ಅವನಿಗೆ ತಿಳಿಸಲಾಗಿ ಬಿಜ್ಜಳನು ಬಸವಣ್ಣನಿಗೆ— 'ನಮ್ಮ ಪಟ್ಟಣದಲ್ಲಿ ಸತ್ತರೆ ಹೂಳಲಾಗದು, ಕಾಯವೆರಸಿ ಕೈಲಾಸಕ್ಕೆ ಹೋಗಲಾಗದು' ಎಂದು ಸಾರುವವನೊಬ್ಬನು ಸತ್ತನಂತೆ. ಅವನ ಶರೀರವು ಬೀದಿಯಲ್ಲಿ ಬಿದ್ದಿದೆಯಂತೆ. ಬಸವಣ್ಣನೇ, ನಿನ್ನ ಶರಣರಿಗೆ ನುಡಿದಂತೆ ನಡೆ ಇಲ್ಲವಲ್ಲಾ' ಎಂದು ಹಾಸ್ಯಮಾಡಿದನು. ಬಸವೇಶ್ವರನು ಇದನ್ನು ಕೇಳಿ ಕೂಡಲೆ ಕೆಲ ಶಿವಶರಣರೊಡಗೂಡಿ ಗಟ್ಟಿವಾಳಯ್ಯನ ಶರೀರವು ಬಿದ್ದ ಸ್ಥಳದಲ್ಲಿ ಬಂದು ಅದನ್ನು ಎತ್ತಿ ಸಮಾಧಿ ಮಾಡಬೇಕೆಂದು

ಶವದ ಪಾದವನ್ನು ತಾನು, ಒಬ್ಬ ಜಂಗಮನು ಅವನ ಹಸ್ತಗಳನ್ನು, ಉಳಿದ ಶರಣರು ಅವನ ಶರೀರವನ್ನು, ಹಿಡಿದು ಎಬ್ಬಿಸಬೇಕೆಂದು ಅವನ್ನು ಎತ್ತುವಷ್ಟರಲ್ಲಿಯೇ ಅವನ ದೇಹವು ಅವರ ಹಸ್ತಗಳಲ್ಲಿಯೇ ಬಯಲಾಯಿತು.

ಗಟ್ಟಿವಾಳಯ್ಯನ ಮೃತಶರೀರವು ಹೀಗೆ ಬಯಲಾಯಿತೆಂಬ ವಾರ್ತೆಯನ್ನು ಬಿಜ್ಜಳನು ಕೇಳಿ ಗಟ್ಟಿವಾಳಯ್ಯನ ಶವವು ಬಿದ್ದ ಸ್ಥಳಕ್ಕೆ ಬಂದು, ಅವನ ನುಡಿಯು ನಿಜವಾಯಿತೆಂದು ಅವನನ್ನೂ ಅಲ್ಲಿ ನೆರೆದಿದ್ದ ಶಿವಶರಣರನ್ನೂ ಹೊಗಳುತ್ತ ತನ್ನ ಓಲಗಕ್ಕೆ ಹೋದನು.

ವೀರಶೈವರಲ್ಲಿ ಎಂಟುವಿಧ ಸಮಾಧಿಗಳಿವೆ. ಅವು ಕ್ರಿಯಾಸಮಾಧಿ, ಗೋಮುಖಸಮಾಧಿ, ಗೋಳಕ ಸಮಾಧಿ, ಬಯಲಸಮಾಧಿ, ನಿಜಶಿವ ಸಮಾಧಿ, ನಿರವಯಸಮಾಧಿ, ಸಚ್ಚಿದಾನಂದಸಮಾಧಿ, ಮತ್ತು ನಿರ್ವಾಣ ಸಮಾಧಿ ಎಂದಿವೆ. ಗಟ್ಟಿವಾಳಯ್ಯನು ನಿರವಯಸ್ಥಲವನ್ನು ಹೊಂದಿ ನಿರ್ವಾಣ ಸಮಾಧಿಯನ್ನು ಹೊಂದಿದವನಾಗಿದ್ದಾನೆ. ನಿರ್ವಾಣ ಸಮಾಧಿಯ ವಿವರಣೆಯು ಸಂಗನಬಸವೇಶ್ವರ ವಚನದಲ್ಲಿ ಹೇಳಿದುದು ಹೇಗೆಂದರೆ:— 'ಪ್ರಥಮದಲ್ಲಿ ಗಟ್ಟಿವಾಳ, ಅಜಗಣ್ಣತಂದೆಗಳು, ಅಕ್ಕನಾಗಲಿ, ಮಹಾದೇವಿ, ನೀಲಲೋಚನೆ, ಮುಕ್ತಾಂಗನೆ ಮೊದಲಾದ ಶರಣರ್ಗೆ ನಿರವಯಸ್ಥಲಕ್ಕೆ ಕಾರಣವಾದ ಶೂನ್ಯಲಿಂಗಾನುಭಾವವ ಬೋಧಿಸಿ ೨೧೬ ಸಕೀಲು ಮೊದಲಾದ ಸಕೀಲವನರುಪಿ ಆ ಅಪಸ್ಮರ ಕುಂಡಲಿ ಶೂನ್ಯಲಿಂಗೋದ್ಧರಣೆ ಚಿದಂಬರ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ನಿರ್ವಾಣ ಸಮಾಧಿಯ ಪಥವ ತೋರಿದರು ನೋಡಾ.' ಗಟ್ಟಿವಾಳಯ್ಯನು ಹೊಂದಿದುದು ಈ ನಿರ್ವಾಣ ಸಮಾಧಿಯು. ಇದು ಶರಣನ ಅಂತಿಮಸ್ಥಿತಿಯು.

ಗಟ್ಟಿವಾಳಯ್ಯನು ವಚನಕಾರನಿದ್ದಾನೆ. ಅವನ ೧೦೦ ವಚನಗಳು ನಮ್ಮಲ್ಲಿವೆ. ಅವನು ತನ್ನ ಅನೇಕ ವಚನಗಳಲ್ಲಿ ಕೇವಲ ಅಶನಕ್ಕಾಗಿ ಬಸವೇಶ್ವರನಲ್ಲಿ ಬಂದಂಥ ಜಂಗಮರನ್ನು ಅತ್ಯಂತ ಕಟುವಾದ ರೀತಿಯಿಂದ ಟೀಕಿಸಿದ್ದಾನೆ. ಅವನ ಕೆಲವು ವಚನಗಳನ್ನು ನಾವು ಆಯ್ದು ಇಲ್ಲಿ ಉದಹರಿಸಿದ್ದೇವೆ.

## ವಚನಗಳು.

(೧) ಬಸವ ಮಾಡಿಹನೆಂದು ಬಾಯಲ್ಲಿ ಬಸಿವ ಲೋಳೆಯನರಿಯದೆ ಎಸಕದಿಂದ ಮಾಡುವದು ಹುಸಿ. ಭಕ್ತಿಯನರಿಯದ ಈ ಕಿಸುವಾಯರಿಗೇಕೆ ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲವೆಂದೆ.

(೨) ಜಂಗಮವಾಗಿ ಹುಟ್ಟಿದ ಮೇಲೆ ಹಿಂದಣ ಹೆಜ್ಜೆಯ ಮೆಟ್ಟಲುಂಟೇ? ಜಂಗಮವೆಂಬ ಮಾತಿಂಗೊಳಗಾದಲ್ಲಿ ಮೂರು ಮಲತ್ರಯವ ಹಿಂಗಿರಬೇಕು. ಅನಂಗನ ಬಲೆಗೆ ಎಂದಿಗೂ ಸಿಕ್ಕದಿರಬೇಕು. ಅದು ನಿಜದ ಸಂಗ. ಚಿಕ್ಕಯ್ಯಪ್ರಿಯ ಸಿದ್ಧ ಈ ಗುಣ ಆರಿಗೂ ಇಲ್ಲ ಇಲ್ಲ ಎಂದೆ.

(೩) ಆಸೆಗಾಗಿ ವೇಷವ ಹೊತ್ತು ತಿರುಗುವ ವೇಷದ ಗಂಡ. ಈಷಣತ್ರಯಕ್ಕಾಗಿ ಈಶನ ಪೂಜಿಸುವ ದಾಸನ ಗಂಡ, ಇಷ್ಟವ ಧರಿಸಿ ತನುವಿಗೆ ಆಸೆ ಮಾಡುವ ಭಾಷೆವಂತರ ಗಂಡ. ನಾನಂಜುವೆ ಹಂಗಳಿದವರಿಗೆ. ನಾನವರಿಗೆ ಊಳಿಗದ ಬಂಟ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆನು.

ಮೇಲಿನ ವಚನಗಳಿಂದ ಗಟ್ಟಿವಾಳಯ್ಯನು ಕೇವಲ ವೇಷಧಾರಿ ಜಂಗಮರನ್ನು ಕಂಡಲ್ಲಿ ಅವನು ಸ್ಪಷ್ಟ ಶಬ್ದಗಳಿಂದ ಹಳಿಯುತ್ತ ವರ್ತಿಸುತ್ತಿದ್ದುದು ಕಂಡುಬರುತ್ತಿದೆ.

(೪) ಎನಗೆ ಹಳ್ಳದ ಹೊಡೆಕೆಯೆ(?) ಶಿವಧಾರವಾಗಿ, ಬೆಟ್ಟದ ಗುಂಡೇ ಲಿಂಗವಾಗಿ ಕಾಡಸೊಪ್ಪುಹಾಕಿದ ಮಡಕೆಯ ಉದಕವೇ ಮಜ್ಜನವಾಗಿ ಪೂಜಿಸುತ್ತಿದ್ದೆ. ಬಸವನ ಮನೆಗೆ ಹೋಗುವ ವ್ರತಗೇಡಿಗಳ ನೋಡಿ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎನುತಿದ್ದೆ.

(೫) ಇಷ್ಟಲಿಂಗವ ತಕ್ಕೊಂಡಲ್ಲಿ ದೃಷ್ಟವಾಯಿತ್ತೇ ನಿಮಗೆ? ಬಂಧನ ಮಾಡುವುದು ಲಿಂಗದೇಹಿಗಳಿಗೆ ಉಂಟೇ ಅಯ್ಯಾ? ಜಗದಲ್ಲುಂಡುಂಡು ಕೊಂಡಾಡುವವರಿಗೆ ಘನಲಿಂಗದ ಸುದ್ದಿ ಏಕೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ.

(೬) ಅರ್ಥಿಗೆ ಕಟ್ಟಿದ ಲಿಂಗ ಕೆಯ್ಯೊಳಗಾಯಿತ್ತು. ನಿಶ್ಚಯದ ಲಿಂಗ ಆರ ಗೊತ್ತಿಗೆ ಸಿಕ್ಕದು. ಆ ಘನಲಿಂಗವುಳ್ಳನ್ನಕ್ಕ ನಾ ಜಂಗಮ

ನೀವು ಜಂಗುಳಿಗಳು. ಎನಗಾ ಭೀತಿ ಇಲ್ಲ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ.

ಇವುಗಳಲ್ಲಿ ೪, ೫, ೬ ಈ ವಚನಗಳು ಜಂಗಮರು ಗಟ್ಟಿವಾಳಯ್ಯನ ಇಷ್ಟಲಿಂಗವನ್ನು ಕಸೆದುಕೊಂಡಾಗ್ಗೆ ಅವನು ಉದ್ರೇಕಗೊಂಡು ನುಡಿದವುಗಳು ಇರಬಹುದೆಂದು ನಮಗೆ ತೋರುತ್ತಿದೆ. ಶಿವಾನುಭವದ ಅವನ ವಿಚಾರಗಳನ್ನು ಹೇಳುವ ವಚನಗಳು ಅನೇಕವಿರುತ್ತವೆ. ಗ್ರಂಥ ವಿಸ್ತಾರಭಯಕ್ಕಾಗಿ ಅವುಗಳನ್ನು ನಾವು ಇಲ್ಲಿ ಉದಹರಿಸಿಲ್ಲ. ಇವನು ಸಹಸ್ರ ಗಣರಲ್ಲಿ ಎಣಿಸಲ್ಪಟ್ಟಿದ್ದಾನೆ.

---

## ಗೊಲ್ಲಾಳ.

ವಿಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾದ ಸಿಂದಿಗಿ ಗ್ರಾಮದಿಂದ ಆಗ್ನೇಯ ದಿಕ್ಕಿಗೆ ೧೨ ಮೈಲುಗಳ ಮೇಲೆ ಗೋಲಗಿರಿ ಎಂಬ ಗ್ರಾಮವಿರುತ್ತದೆ. ಅಲ್ಲಿ ಕಾಟಕೋಟನೆಂಬ ಕುರುಬನು ವಾಸ ಮಾಡುತ್ತಿದ್ದನು. ಅವನ ಮಗನ ಹೆಸರು ಗೊಲ್ಲಾಳನು. ಅವನು ಕುರಿಯ ಮುಂದೆಯನ್ನಿಟ್ಟುಕೊಂಡು ಕುರಿಗಳನ್ನು ಮೇಯಿಸುವದೇ ಅವನ ಹೋರೆಯಾಗಿತ್ತು. ಒಂದುದಿನ ಅವನು ಬೀಸುಗೋಲನ್ನು ಹಿಡಿದುಕೊಂಡು ಕುರಿಗಳನ್ನು ಮೇಯಿಸುತ್ತ ಅಡವಿಯಲ್ಲಿದ್ದಾಗ ಶ್ರೀಶೈಲಕ್ಕೆ ಹೋಗುವ ಒಂದು ಪರಿಷೆಯು 'ಹರಹರಾ ಉಘೇ ಉಘೇ' ಎಂದು ಅನ್ನುತ್ತ ಗೋಲಗೆರೆಯ ಮೇಲಿಂದ ಹಾಯ್ದು ಹೋಗುತ್ತಿದ್ದದ್ದನ್ನು ಕಂಡನು. ಅವನು ಅವರಿಗೆ—ನೀವೆಲ್ಲಿಗೆ ಪೋಗುತ್ತೀರೆಂದು ಕೇಳಲು ಅವರು ಮುದಿಮಲ್ಲೇಶಲಿಂಗಕ್ಕೆ ಹೋಗುತ್ತೇವೆಂದು ಹೇಳಿದರು. ಅವರಲ್ಲೊಬ್ಬ ಮುದುಕ ಜಂಗಮನು ಕಾವಡಿಯನ್ನು ಹೊತ್ತುಕೊಂಡು ಬಿಸಿಲಲ್ಲಿ ಬೆವತು ಬಾಯಾರಿ ಆಯಾಸಪಟ್ಟು ನಡೆಯುತ್ತಿದ್ದದ್ದನ್ನು ಗೊಲ್ಲಾಳನು ಕಂಡನು. ಗೊಲ್ಲಾಳನು ಅವನಿಗೋಸ್ಕರ ಕನಿಕರಪಟ್ಟು ಅವನನ್ನು ಮಾತಾಡಿಸಲು, ಆ ಜಂಗಮನು—ನಾನು ಬಿಸಿಲಲ್ಲಿ ಬಸವಳಿದಿದ್ದೇನೆ. ನನಗೆ ಚರಣರಕ್ಷೆಗಳು ಬೇಕು. ಅವನ್ನು ನೀನು ಕೊಟ್ಟರೆ ನಿನಗೆ ನಾನು ಶ್ರೀಶೈಲಗಿರಿಯಿಂದ ಲಿಂಗವನ್ನು ತಂದು ಕೊಡುವೆನು. ಆ ಲಿಂಗವು ಬಹು ಪವಿತ್ರವಾದುದು ಎಂದು ಹೇಳಲು

ಗೊಲ್ಲಾಳನು—ಆಗಲಿ. ಮುದಿಮಲ್ಲೇಶನನ್ನು ತಂದುಕೊಡು ಎಂದು ಹೇಳಿ, ಅವನಿಗೆ ತನ್ನ ಜೋಡನ್ನು ಕೊಟ್ಟನು. ಮುದುಕನು ಆನಂದ ದಿಂದ ಚನ್ನಮಲ್ಲೇಶನು ನನಗೆ ಪ್ರಸನ್ನನಾದನು ಎಂದು ಅಂದು ಗಿರಿಗೆ ಹೋಗಿ ತಿರುಗಿ ಅದೇ ಗ್ರಾಮದ ಮೇಲಿಂದ ತನ್ನ ಪರಿಸೆಯೊಡನೆ ಹಾಯ್ದು ಬರುತ್ತಿರುವಾಗ ಗೊಲ್ಲಾಳನು ನರೆಗಂಬಳಿಯನ್ನು ಹೊತ್ತು ಕೊಂಡು ಬರುತ್ತಿದ್ದ ಆ ಮುದುಕ ಜಂಗಮನನ್ನು ಕಂಡು—ಅವನಿಗೆ ನನಗೆ ಮುದಿಮಲ್ಲೇಶನನ್ನು ತಂದೆಯಾ? ಎಂದು ಕೇಳಿದನು. ಆದರೆ ಆ ಜಂಗಮನು ಲಿಂಗವನ್ನು ತರುವದನ್ನು ಮರೆತು ಬಿಟ್ಟಿದ್ದನು. ಗೊಲ್ಲಾಳನು ಹೀಗೆ ಕೇಳಲು ಅವನು ಗಾಬರಿಗೊಂಡು, ಸಮೀಪದ ಲ್ಲಿಯೇ ನೆಲದ ಮೇಲೆ ಬಿದ್ದಿದ್ದ ಒಂದು ಕುರಿಯ ಹಿಕ್ಕೆಯನ್ನು ಪದು ಳದಿಂದ ಹಿಡಿದು—ಇದೇ ನಾನು ಪರ್ವತದಿಂದ ತಂದ ಲಿಂಗವು ಎಂದು ಹೇಳಿ ಅವನ ಹಸ್ತದಲ್ಲಿಟ್ಟನು. ಗೊಲ್ಲಾಳನು—ಗುರುವು ನನಗೆ ಲಿಂಗವನ್ನು ಕೊಟ್ಟನು ಎಂದು ಉಬ್ಬಿ, ಇವನ್ನೇನ ಮಾಡಲಿ ಎಂದು ಆ ಮುದಿಜಂಗಮನಿಗೆ ಕೇಳಲು, ಅವನು ಅವನಿಗೆ ಪೂಜೆಯನ್ನು ಮಾಡುವ ರೀತಿಯನ್ನು ಹೇಳಿದನು. ಹೀಗೆ ಹೇಳಿ ಆ ಜಂಗಮನು ಮುಂದೆ ಹೊರಟುಹೋದನು.

ಆಮೇಲೆ ಗೊಲ್ಲಾಳನು ಅತ್ಯಂತ ಭಕ್ತಿಯಿಂದ ಆ ಮಳಲಲ್ಲಿ ಒಂದು ಶಕ್ತಿಪೀಠವನ್ನು ರಚಿಸಿ, ಅದರಲ್ಲಿ ಹಿಕ್ಕೆಯನ್ನು ಕುಳ್ಳಿರಿಸಿ, ಎಕ್ಕೆ ಕಕ್ಕೆಯ ಹೂವುಗಳಿಂದ ಅದನ್ನು ಆರ್ಚಿಸಿ, ತನ್ನ ಎದೆಯನ್ನೇ ನಗಾ ರಿಯನ್ನು ಮಾಡಿ ಹೊಡೆದುಕೊಳ್ಳುತ್ತ, ಕೊಳಲನ್ನು ಊದುತ್ತ, ಕುರಿಗಳ ಹಾಲನ್ನು ತಂದು ನೀಡುತ್ತ ಪೂಜಿಸಿದನು. ಈ ಪ್ರಕಾರ ಅವನು ದಿನಾಲು ಕೊಡ ಹಾಲು ಹಿಕ್ಕೆಗೆ ಎರೆಯುತ್ತ, ಅದು ಪರ್ವತ ಮಲ್ಲೇ ಶನೆಂಬ ಭಾವದಿಂದ ಅತ್ಯಂತ ಭಕ್ತಿಯಿಂದ ಪೂಜೆ ಮಾಡುತ್ತ ಬಂದನು.

ಒಂದು ದಿನ ಅವನ ತಂದೆಯು ಕುರಿಗಳು ಹಾಲು ಕರೆಯುವ ದಿಲ್ಲ, ಇದಕ್ಕೆ ಕಾರಣವೇನೆಂಬುದನ್ನು ನೋಡಬೇಕೆಂದು ಅಡವಿಗೆ ಬಂದು, ಗೊಲ್ಲಾಳನು ಕುರಿಗಳ ಹಾಲು ಕರೆದು ಅದನ್ನು ಹಿಕ್ಕೆಯ ಮೇಲೆ ಸುರಿಯುತ್ತಿದ್ದದ್ದನ್ನು ಕಂಡು, ಅತ್ಯಂತ ಕೋಪಾವಿಷ್ಟನಾಗಿ ಮುಂದೆ ಬಂದು, ಆ ಲಿಂಗವನ್ನು ಕೆರಹು ಗಾಲಿಂದ ಒದೆದು ತುಳಿದು ಅಳಿಸಿಬಿಟ್ಟನು.

ಗೊಲ್ಲಾಳನು ತಾನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಿದ್ದ ಲಿಂಗವನ್ನು ತನ್ನ ತಂದೆಯು ಹೀಗೆ ಒದೆದು ಕೆಡಿಸಿಬಿಟ್ಟಿದ್ದರಿಂದ ಅವನು ಅತ್ಯಂತವಾಗಿ ನೊಂದುಕೊಂಡನು. ಅವನಿಗೆ ಆ ಲಿಂಗವು ಅಂಥಿಂಥ ವಸ್ತುವಾಗಿರಲಿಲ್ಲ. ಅದು ಅವನಿಗೆ ಅತ್ಯಂತ ಪವಿತ್ರವಾದ ವಸ್ತುವಾಗಿತ್ತು. ಶ್ರೀಶೈಲದಿಂದ ತಂದಂತಹದು, ಒಬ್ಬ ವೃದ್ಧ ಜಂಗಮನು ಕೊಟ್ಟಂತಹದು, ಅವನಿಂದ ಅವನು ಉಪದೇಶವನ್ನು ಹೊಂದಿ ದಿನಾಲು ಅತ್ಯಂತ ಭಕ್ತಿಯಿಂದ ಪೂಜಿಸುವಂತಹದು. ಇಂಥ ಶ್ರೇಷ್ಠ ವಸ್ತುವನ್ನು ತನ್ನ ತಂದೆಯು ಒದೆದು ತುಳಿದುಬಿಟ್ಟಿದ್ದರಿಂದ ಗೊಲ್ಲಾಳನು ಅತ್ಯಂತ ಕೋಪಾವಿಷ್ಟನಾಗಿ ತನ್ನ ಭಕ್ತಿಯ ಆವೇಶದಲ್ಲಿ ಕಯ್ಯಲ್ಲಿದ್ದ ಕೊಡಲಿಯಿಂದ ತನ್ನ ತಂದೆಯನ್ನು ಆಕ್ಷಣದಲ್ಲಿಯೇ ತುಂಡರಿಸಿದನು. ಆಗ ಪರಮಾತ್ಮನು ಅವನ ನಿಚ್ಚಟವಾದ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಅವನಿಗೆ— ನಿನ್ನ ಭಕ್ತಿಗೆ ನಾನು ಮೆಚ್ಚಿದೆನು. ನಿನಗೇನು ಬೇಕು ಬೇಡು ಎಂದೆನ್ನಲು, ಗೊಲ್ಲಾಳನು ಅವನಿಗೆ— ನನಗೇನೂ ಬೇಡ. ನಿನ್ನನ್ನು ಯಾವಾಗಲೂ ಪೂಜಿಸುತ್ತ ಇರುವ ವರವನ್ನೊಂದನ್ನು ಕೊಡು ಎಂದು ಹೇಳಿದನು. ಆಗ ಪರಮಾತ್ಮನು— ನೀನು ಪೂಜಿಸುತ್ತಿದ್ದ ಈ ಹಿಕ್ಕೆಯಲ್ಲಿಯೇ ನಾನು ಯಾವಾಗಲೂ ವಾಸಿಸುವೆನು. ಇಲ್ಲಿಯೇ ನೀನು ನನ್ನನ್ನು ಪೂಜಿಸುತ್ತಾ ಇರು, ಎಂದು ಹೇಳಲು ಗೊಲ್ಲಾಳನು ಅತ್ಯಂತ ಸಂತೋಷಗೊಂಡು— ನಿನ್ನಪ್ಪಣೆಯಂತೆ ನಾನು ನಡೆಯುವೆನು. ಆದರೆ ನನ್ನ ತಂದೆಯ ಮೂಲಕ ನಾನು ನಿನ್ನನ್ನು ಕಂಡೆನು. ಅವನಿಗೆ ನೀನು ಪ್ರಾಣದಾನ ಮಾಡು ಎಂದೆನ್ನಲು ಹಾಗೆಯೇ ಆಗಲೆಂದು ಪರಮಾತ್ಮನು ಹೇಳಲು ಅವನ ತಂದೆಯ ದೇಹದಲ್ಲಿ ಪ್ರಾಣವು ತುಂಬಿ ಅವನು ಎಚ್ಚತ್ತು ಕುಳಿತನು. ಅಂದಿನಿಂದ ಗೊಲ್ಲಾಳನು ವೀರಗೊಲ್ಲಾಳನೆಂಬ ಹೆಸರಿನಿಂದ ಪ್ರಸಿದ್ಧನಾದನು. ಅವನು ಪೂಜಿಸುತ್ತಿದ್ದ ಲಿಂಗರೂಪಾದ ಆ ಕುರಿಯ ಹಿಕ್ಕೆಯು ಗೊಲ್ಲಾಳೇಶ್ವರನೆಂದು ಜನರು ಕರೆಯಹತ್ತಿದರು.

ಗೊಲ್ಲಾಳನು ಲಿಂಗಧಾರಿಯಾಗಿ ಶಿವಾನುಭವದಂತೆ ನಡೆಯುತ್ತ ವಚನಕಾರನಾದನು. ಅವನ ಮುದ್ರಿಕೆಯು 'ವೀರಬೀರೇಶ್ವರಾ' ಎಂದಿದೆ. ಅವನ ೨೦ ವಚನಗಳು ನಮ್ಮಲ್ಲಿವೆ. ಅವುಗಳಲ್ಲಿ ನಾವು ಕೆಲವುಗಳನ್ನು ಮಾತ್ರ ಇಲ್ಲಿ ಉದಹರಿಸಿದ್ದೇವೆ.

ಗೋಲಗಿರಿಯ ಗೊಲ್ಲಾಳೇಶ್ವರನ ಜಾತ್ರೆಯು ವಿಜಾಪುರ ಜಿಲ್ಲೆಯಲ್ಲೆಲ್ಲ ಬಹು ದೊಡ್ಡದಾಗಿದೆ. ಈ ದೇವಾಲಯಕ್ಕೋಸ್ಕರ ಭಕ್ತಿಭಾವವನ್ನು ತಾಳಿ ನಡೆದುಕೊಳ್ಳುವವರು ಈ ಭಾಗದಲ್ಲಿಯೂ ನಿಜಾಮ ಇಲಾಖೆಯಲ್ಲಿಯೂ ಅಸಂಖ್ಯ ಜನರಿದ್ದಾರೆ.

## ವಚನಗಳು

(೧) ಸ್ಥಲಂಗಳನರಿಯೆನೆಂಬೊಡೆ, ತ್ರಿವಿಧಸ್ಥಲಕುಳವೆನಗಿಲ್ಲ. ಷಟ್‌ಸ್ಥಲವ ಮುನ್ನವೇ ಅರಿಯೆ. ತತ್ವವನರಿದಿಹೆನೆಂದಡೆ, ಭಕ್ತಿ ಜ್ಞಾನ ವೈರಾಗ್ಯ ತ್ರಿವಿಧ, ಲಕ್ಷವಿಧ, ನಾನಲ್ಲ. ನಿಷ್ಠೆಯಲ್ಲಿ ದೃಷ್ಟವ ಕಂಡೆಹೆನೆಂದಡೆ ವಿಶ್ವಾಸವೆನಗಿಲ್ಲ. ವಿರಕ್ತಿಯಲ್ಲಿ ವೇಧಿಸಿಹೆನೆಂದಡೆ ತ್ರಿವಿಧ ಮಲದ ಮೊತ್ತದೊಳಗೆ ಮತ್ತನಾಗಿದ್ದೇನೆ. ಮತ್ತೆ ನಿಶ್ಚಯವನರಿದಿಹೆನೆಂದಡೆ ಆತ್ಮಂಗೆ ಲಕ್ಷವಿಡುವುದೊಂದು ಗೊತ್ತ ಕಾಣೆ. ಇಂತೀ ಕಷ್ಟ ತನುವಿನಲ್ಲಿ ಬಂದು ಧೂರ್ತನಾಗಿ ಕೆಟ್ಟುಹೋಗುತ್ತಿದ್ದೇನೆ. ಗುಡಿಸಿದ ಹಿಕ್ಕೆಯಲ್ಲಿ ಬಂದು ತನ್ನ ನಿಷ್ಠೆಯ ತೋರಿ ಎನಗೆ ಸದ್ಭಕ್ತಿಯ ಬೀರಿ ವಿಶ್ವಾಸಗಳಿಗೆಲ್ಲಕ್ಕೆ ಕೃತ್ಯದೊಳಗಾಗಿ ನಿತ್ಯನೇಮಂಗಳಜ್ಯೋತ್ತಿದಂತಿರು. ನೀನೆ ನಿರ್ಮುಕ್ತನಹೆ. ನಿಜನಿತ್ಯನಹೆ. ಜಗಕ್ಕೆ ಕರ್ತನಹೆ. ಎನ್ನ ಹಿಕ್ಕೆಗೆ ಬಂದು ಸಿಕ್ಕಿದೆಯಲ್ಲ ಮಹಾಮಹಿಮ ವೀರಬೀರೇಶ್ವರಲಿಂಗಾ

ಈ ವಚನದಲ್ಲಿ ಗೊಲ್ಲಾಳನು ತಾನು ಏನೂ ಅರಿಯದವನೆಂದು ಹೇಳಿಕೊಳ್ಳುತ್ತಿದ್ದಾನೆ. ಆದರೆ ಅವನು ಷಟ್‌ಸ್ಥಲಗಳಲ್ಲಿರುವ ತೊಡಕಿನ ರೀತಿಗಳನ್ನು ಚನ್ನಾಗಿ ಅರಿತವನಾಗಿದ್ದು ಅವುಗಳನ್ನು ಸಾಧಿಸುವದು ತನ್ನಿಂದಾಗದ್ದರಿಂದ ಭಕ್ತಿ, ವಿಶ್ವಾಸಗಳು ತನ್ನಲ್ಲಿ ಉಂಟಾಗಲೆಂದು ಪರಮಾತ್ಮನನ್ನು ಕುರಿತು ಇದರಲ್ಲಿ ಬೇಡಿಕೊಳ್ಳುತ್ತಿದ್ದಾನೆ. ಇದರಲ್ಲಿ ಕುರಿಯ ಹಿಕ್ಕೆಯ ಉಲ್ಲೇಖವಿರುವವನ್ನು ವಾಚಕರು ಲಕ್ಷಿಸತಕ್ಕದ್ದು.

(೨) ಆಡು ಅರುದಿಂಗಳು ಹುಟ್ಟಿ, ಮೂರು ದಿನ ಬದುಕಿ, ಒಂದು ದಿನ ಸತ್ತಿತ್ತು. ಕುರಿ ಕುರುಹ ಮೇದು ಮರಿಗೆ ಮೊಲೆಗೊಟ್ಟಿತ್ತು. ಮರಿ ಮೊಲೆಯ ನುಂಗಿ, ಕುರುಹಿನೊಳಗಡಗಿತ್ತು. ಆಡು, ಕುರಿ, ಬಂದು ಬಟ್ಟೆಯ ಶೋಧಿಸಿಕೊಂಡು ತೋಳನ ತೊಡಕಿನಲ್ಲಿ ಸಾಯದೇ? ಅರಿ ವೀರಬೀರೇಶ್ವರಲಿಂಗವ.

ಇದು ಬೆಡಗಿನ ವಚನವು. ಸಂಸಾರದಲ್ಲಿ ಮಗ್ನನಾಗಿರದೆ ಪರಮಾತ್ಮನನ್ನು ಅರಿಯಬೇಕೆಂಬ ಅಭಿಪ್ರಾಯವು ಇದರಲ್ಲಿದೆ.

(೩) ಹೋತನ ಕೊಯ್ದು, ಕುರಿಯ ಸುಲಿದು, ಮರಿಯ ಕೊರಳನನೊತ್ತಿ, ಕಾವಲ ಕುನ್ನಿಯ ಕೆಡಹಿ, ತೋಳನ ಕುಲವ ಗೆದ್ದು ಕುರುಬನ ಕುರುಹಿನ ಕುಲವಡಗಿ ನೆರೆ ಅರಿವಿನ ಕುಲದಲ್ಲಿ ಅಡಗಬೇಕು ವೀರಬೀರೇಶ್ವರಾ.

ಇದು ಬೆಡಗಿನ ವಚನವು. ಕುರಿಗಳನ್ನು ಕಾಯುವ ತನ್ನ ಕಾಯಕಕ್ಕೆ ಆತ್ಮಿಕಾರ್ಥವನ್ನು ಕೊಟ್ಟಿದ್ದಾನೆ.

(೪) ಹೋತನ ಹೊಡೆದು ಆಡ ಕೂಡಿ, ಕುರಿಯ ನಿರಿಸಿ, ಟಗರ ತರಿದು ಹಿಂಡನೊಬ್ಬುಳಿತೆಯ ಮಾಡಿ, ಹುಲಿ, ತೋಳ, ಚೋರರ ಭಯವಂ ಕಳೆದು ಹಿಂಡಿಗೊಡೆಯನಾಗಿ ಕಾವ ಗೊಲ್ಲಾಳ ನೀನೇ ವೀರಬೀರೇಶ್ವರಾ.

ಈ ವಚನದಲ್ಲಿ ಗೊಲ್ಲಾಳನು ಪರಮಾತ್ಮನ ಸ್ವರೂಪವನ್ನು ವರ್ಣಿಸುತ್ತ ಅವನನ್ನು ಕುರಿತು ಪ್ರಾರ್ಥನೆ ಮಾಡುತ್ತಾನೆ. ಕುರುಬನು ಹೇಗೆ ಪ್ರಾರ್ಥನೆ ಮಾಡಬೇಕೋ ಹಾಗೆಯೇ ಇದು ಇದೆ.

(೫) ಕ್ರಿಯೆ ಹಿಡಿದಲ್ಲಿ ಸಂದೇಹಕ್ಕೊಳಗಾಗಿ ನಿಃಕ್ರಿಯೆ ಎಂದಲ್ಲಿ ಆತ್ಮಂಗೆ ಗೊತ್ತುಗಾಣದೆ, ಫಲವಿಳಿದ ವೃಕ್ಷದ ಹೂವ ಕಂಡು ವಿಹಂಗಕುಲ ಚರಿಸದೆ ಮಚ್ಚಿದಂತೆ ಕಡೆಯಲ್ಲಿ ಪೊಲಬುಗೆಡದೆ ಅರಿ. ನಿಜವಸ್ತು ಬಂದಿತೆಂದು ಕುರಿತ ಕುರುಹಿನಲ್ಲಿ ಕುಲಗೆಡದೆ ಕೂಡು ವೀರಬೀರೇಶ್ವರಲಿಂಗವ.

(೬) ಕೊರಡು ಕೊನರುವಲ್ಲಿ ಬರಡ ಕರೆವಲ್ಲಿ, ಕಲ್ಲಿನ ಶಿಲೆಯೊಡೆದು ರೂಪುದೋರುವಲ್ಲಿ, ಬಳ್ಳವಲ್ಲಾಡದೆ ಲಿಂಗವಾಹಲ್ಲಿ ಇಂತಿವುಗಳಲ್ಲಿಯ ಗುಣವೋ, ಇಂತಿವೆಲ್ಲವನರಿವ ಕಲ್ಲೆದೆಯವನ ಗುಣವೋ? ಇಂತಿವ ಬಲ್ಲಡೆ ವಿಶ್ವಾಸದಲ್ಲಿಯೇ ವೀರಬೀರೇಶ್ವರ ಲಿಂಗವು ತಾನಾಗಿಪ್ಪ.

ಈ ವಚನಗಳಿಂದ ಗೊಲ್ಲಾಳನು ಇಷ್ಟಲಿಂಗ ಧಾರಕನೂ, ಷಟ್‌ಸ್ಥಲಜ್ಞಾನಿಯೂ, ಲಿಂಗಾಂಗಸಾಮರಸ್ಯದ ರೀತಿಯನ್ನು ಅರಿತವನೂ ಆಗಿದ್ದನೆಂದು ತೋರುತ್ತದೆ. ಮೇಲೆ ೩ನೇ ೪ನೇ ವಚನಗಳಿಂದಲೂ ಬೇರೆ

ವಚನಗಳಲ್ಲಿರುವ ಕುರಿ, ಹೋತು, ಆಡುಗಳ ಉಲ್ಲೇಖಗಳಿಂದಲೂ ಗೊಲ್ಲಾಳನು ಗೊಲ್ಲರ ಜಾತಿಯವನಿರದೆ ಕುರಿ ಕಾಯುವ ಕಾಯಕ ವನ್ನು ಮಾಡುತ್ತಿದ್ದ ಕುರುಬನಾಗಿದ್ದನೆಂದು ನಮಗೆ ತೋರುತ್ತದೆ. ಆದರೆ ಈ ಎಲ್ಲ ವಚನಗಳು ಎಷ್ಟು ಆಳವಾದ ವಿಚಾರಗಳುಳ್ಳವೂ ಗಂಭೀರವಾದವುಗಳೂ ಇರುತ್ತವೆಂಬುದನ್ನು ವಾಚಕರು ಲಕ್ಷಿಸತಕ್ಕದ್ದು. ಇವುಗಳಿಂದ ಗೊಲ್ಲಾಳನು ಅರಿಯದ ತೀರ ಕುರುಬನಾಗಿರದೆ, ಜ್ಞಾನಿ ಯಾಗಿದ್ದನೆಂಬುದು ಗೊತ್ತಾಗುತ್ತದೆ.

---

# ಪಿಟ್ಟವ್ವೆ

ಕರಿಕಾಲ ಚೋಳನೆಂಬ ಚೋಳರಾಜನು ಕಾಂಚೀ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಅವನು ಕ್ರಿ॥ ಶ॥ ೧೦೭೦ ರಿಂದ ೧೧೨೦ ರ ವರೆಗೆ ಬಹು ಘನತೆಯಿಂದ ರಾಜ್ಯವಾಳಿದನು. ಅವನ ರಾಜ್ಯದಲ್ಲಿ ಮುದು ಗೊಂಡೆ ಎಂಬ ಗ್ರಾಮವಿದ್ದು ಅಲ್ಲಿ ಪಿಟ್ಟವ್ವೆಯೆಂಬ ಹೆಸರಿನ ಶಿವಶರ ಣೆಯು ವಾಸಮಾಡುತ್ತಿದ್ದಳು. ಅವಳು ಲಿಂಗಾನುಭವಿಯು, ಶಿವಶರ ಣರ ನಡೆಯಂತೆ ನಡೆಯುವವಳು. ಆವಳು ಮುಪ್ಪಾಗುವ ವರೆಗೂ ಬಹು ಭಕ್ತಿಯಿಂದ ಆಚರಿಸುತ್ತ ಮುಪ್ಪಿನ ಕಾಲದಲ್ಲಿ ಅವಳ ಪರಿ ಪಾಲನೆ ಮಾಡುವಂಥವರು ಯಾರೂ ಉಳಿಯಲಿಲ್ಲ. ಆದ್ದರಿಂದ ಅವಳು ದಿನಾಲು ದೋಸೆಗಳನ್ನು ಮಾಡುವ ಕಾಯಕವನ್ನು ಕೈಕೊಂಡು ಅವು ಗಳನ್ನು ಮಾರಿ ಇದರಿಂದ ಬಂದ ಹಣದಿಂದ ತಾನು ಉಪಜೀವಿಸುತ್ತ ಉಳಿದದ್ದನ್ನು ಗುರು ಲಿಂಗ ಜಂಗಮ ದಾಸೋಹಕ್ಕೆ ಅರ್ಪಿಸುತ್ತ ಬಂದಳು.

ಕರಿಕಾಲ ಚೋಳನು ತನ್ನ ರಾಜ್ಯದಲ್ಲಿ ತನ್ನ ತಾಯಿಯ ಸ್ಮರ ಣಾರ್ಥವಾಗಿ ನದಿಗೆ ಒಂದು ಬಹು ಬಲವಾದ ಮತ್ತು ವಿಸ್ತಾರವಾದ ಕಟ್ಟೆ ಯನ್ನು ಕಟ್ಟಿ ನದಿಯ ನೀರು ಹೊಲಗಳಲ್ಲಿ ಹಾಯ್ದು ಬರುವಂತೆ ಮಾಡಿದ್ದನು. ಆದರೆ ಒಂದು ದಿವಸ ವಿಪರೀತ ಮಳೆಯಾಗಲು ಕೆರೆಯ ಕಟ್ಟೆಯು ಒಡೆದು ಹೋಯಿತು. ಆಗ ಚೋಳರಾಜನು ತನ್ನ ರಾಜ್ಯ

ದಲ್ಲಿ ಬಹು ಜನರನ್ನು ಬಿಟ್ಟಿಯಾಗಿ ಹಿಡಿದು ಅವರಿಂದ ಮಣ್ಣು
ಅಗಿಸಿ ಕಟ್ಟೆಗೆ ಅದನ್ನು ಹಾಕಿಸಲು ಪ್ರಾರಂಭಿಸಿದನು. ಅವನ ರಾಜ್ಯ
ದಲ್ಲಿ ಎಂದೆಂದು ಮಣ್ಣು ಅಗಿಯದಂಥ ಮಾಂಡಲಿಕರೂ ನಿಯೋಗಿ
ಗಳೂ ಇದ್ದರು. ಆದರೂ ಅವರನ್ನು ಸಹ ಬಿಡದೆ ಸರತಿಯ ಮೇಲೆ
ಎಲ್ಲರಿಂದಲೂ ಮಣ್ಣನ್ನು ಅಗಿಸುತ್ತ ಬಿದ್ದುಹೋದ ಕಟ್ಟೆಯ ಭಾಗವನ್ನು
ತುಂಬಿಸುತ್ತ ಬಂದನು. ಅವನ ಆಜ್ಞೆಗೆ ವಿರುದ್ಧವಾಗಿ ಹೋಗಲು
ಯಾರಿಗೂ ಧೈರ್ಯವಾಗಲಿಲ್ಲ. ಹೀಗಿರಲು ಮಣ್ಣನ್ನು ಹೊತ್ತು ಹಾಕುವ
ಸರತಿಯು ಪಿಟ್ಟವ್ವೆಗೆ ಬಂದಿತು. ಆಗ ರಾಜನ ಸೇವಕರು ಅವಳ
ಮನೆಗೆ ಬಂದು ಕಟ್ಟೆಯ ಕೆಲಸಕ್ಕೆ ಬಿಟ್ಟಿಬಾರೆಂದು ಅವಳಿಗೆ ಹೇಳಿ
ದರು. ಆಗ ಅವಳು– ಶಿವಶಿವಾ, ನಾನು ಮುಪ್ಪಿನವಳು. ಇದು ನನ
ಗಾಗದು ಎನ್ನಲು ಅವರು ಮಣ್ಣು ಹೊತ್ತಲ್ಲದೆ ಕಟ್ಟೆಯ ಕೆಲಸವಾಗದು,
ನಡೆ ಎಂದು ಅವಳ ಮೇಲೆ ಬಲಾತ್ಕಾರ ಮಾಡಹತ್ತಿದರು. ಆಗ
ಅವಳು—ಅಯ್ಯೋ, ಈ ಮಣ್ಣಿನ ಕೆಲಸ ನನ್ನಿಂದಾಗದು. ನಾನು
ಬರುವದಿಲ್ಲೆಂದು ಅನ್ನಲು ಅವರು—ಹಾಗಿದ್ದರೆ ನಿನ್ನ ಸಲುವಾಗಿ ಬೇರೊ
ಬ್ಬರನ್ನು ಕೊಡು ಎಂದು ಹೇಳಿದರು. ಅದಕ್ಕೆ ಅವಳು– ಮನೆಯಲ್ಲಿ
ರುವವಳು ನಾನೊಬ್ಬಳೇ. ನನಗೆ ಬೇರೆ ಯಾರೂ ಇಲ್ಲ ಎಂದೆನ್ನಲು
ಅವರು—ಹಾಗಾದರೆ ನಾವು ಬಿಡುವದಿಲ್ಲ, ನಡೆ ಎಂದು ಅವಳನ್ನು
ಬಲಾತ್ಕಾರದಿಂದ ದಬ್ಬಿಕೊಂಡು ಹೋಗಹತ್ತಿದರು.

ಆಗ ಪರಮಾತ್ಮನು ಈ ಅನ್ಯಾಯವನ್ನು ನೋಡಿ ಸಹಿಸಲಾರದೆ
ಒಬ್ಬ ರಡ್ಡಿಯ ವೇಷವನ್ನು ಹಾಕಿಕೊಂಡು ಗುದ್ದಲಿಯನ್ನು ಕಯ್ಯಲ್ಲಿ
ಹಿಡಿದುಕೊಂಡು ಬಂದು ಪಿಟ್ಟವ್ವೆಗೆ—ನಿನ್ನ ಬಿಟ್ಟಿಯನ್ನು ನಾನು ಮಾಡು
ತ್ತೇನೆ. ಅದಕ್ಕೆ ನೀನು ನಿನ್ನ ಕಾಯಕದ ಹರುಕು ಮುರುಕು ದೋಸೆ
ಯನ್ನು ಕೊಡುವೆಯಾ? ಎಂದು ಕೇಳಲು ಅವಳು—ಹಾಗೆಯೇ ಆಗಲಿ
ಎಂದೆನ್ನಲು, ಅವನು ಆ ರಾಜಸೇವಕರೊಡನೆ ಕೆರೆಗೆ ಬಂದು ಮಣ್ಣನ್ನು
ಅಗಿಯುತ್ತ ಕಟ್ಟೆಗೆ ಅದನ್ನು ಪಿಟ್ಟವ್ವೆಯ ಸಲುವಾಗಿ ಹಾಕಹತ್ತಿದನು.

ಶಿವನು ಮಣ್ಣನ್ನು ಅಗಿಯುವಾಗ ಎಲ್ಲರಕ್ಕಿಂತಲೂ ಹೆಚ್ಚಾಗಿ
ಕೆಲಸ ಮಾಡುತ್ತಾ ಬಂದನು. ಆದರೆ ಅವನು ಮಧ್ಯದಲ್ಲಿ ಕೆಲಸವನ್ನು ನಿಲ್ಲಿಸಿ
ನಾನಾತರದ ವಿನೋದಗಳನ್ನೂ ನೃತ್ಯಗಳನ್ನೂ ವಿಪರೀತವಾಗಿ ಮಾಡ

ಹತ್ತುವನು. ಅರಸನ ಬಲ್ಲಾಳುಗಳು ಅವನು ಬಹಳ ಕೆಲಸಮಾಡಿದ್ದನ್ನು ಅಲಕ್ಷಿಸಿ ನೀನು ಇನ್ನಿಷ್ಟು ಕೆಲಸಮಾಡೆಂದು ಬಯ್ದು ಬೆತ್ತದಿಂದ ಅವನನ್ನು ಹೊಡೆಯುಹತ್ತಿದರು. ಆದರೆ ಆ ಪೆಟ್ಟುಗಳು ಅವನಿಗೆ ಹತ್ತದೆ ಅವು ಅರಸನ ಆಳುಗಳಿಗೆಯೇ ಹತ್ತಲು ಅವರು ನೋವಿನಿಂದ ಬಳಲಹತ್ತಿದರು. ಕಟ್ಟೆಯ ಮೇಲೆ ಕೆಲಸ ಮಾಡುವವರೆಲ್ಲ ಇದನ್ನು ನೋಡಿ ಇದು ಬಹು ಚೋದ್ಯವೆಂದು ಶಿವನ ಸುತ್ತಲೂ ಗುಂಪಾಗಿ ನೆರೆದು ಗದ್ದಲಮಾಡಹತ್ತಿದರು. ಅಷ್ಟರಲ್ಲಿ ಕಟ್ಟೆಯ ಮೇಲೆ ಏನೋ ಗಲಾಟೆ ನಡೆದಿದೆಂದು ಕರಿಕಾಲ ಚೋಳನಿಗೆ ತಿಳಿಯಲು ಅವನು ತನ್ನ ನಿಯೋಗಿಗಳೊಂದಿಗೆ ಕೂಡಲೆ ಅಲ್ಲಿಗೆ ಬಂದು ವಿಚಾರಿಸಲು ಒಬ್ಬ ವಣ್ಣಹೊರುವವನನ್ನು ಹೊಡೆಯಲು ಹೀಗಾಯಿತೆಂದು ಅವನಿಗೆ ತಿಳಿಯಬಂದಿತು. ಆಗ ರಾಜನು ಇದು ಅವನ ಕೃತಕ ವಿರಬೇಕೆಂದು ತಿಳಿದು ಸೇವಕರಿಗೆ—ಅವನನ್ನು ಇನ್ನೊಮ್ಮೆ ಚನ್ನಾಗಿ ಹೊಡೆಯಿರೆಂದು ಹೇಳಲು ಅವರು ಹಾಗೆಯೇ ಹೊಡೆಯಲು ಆ ಹೊಡೆತಗಳೆಲ್ಲ ಈ ಸಾರೆ ಅರಸನ ನಿಯೋಗಿಗಳಿಗೆಯೇ ತಾಕಿದವು.

ಹೀಗಾಗಲು ಚೋಳರಾಜನು ಆಶ್ಚರ್ಯಬಟ್ಟು ಹೀಗೇಕಾಯಿತೆಂದು ಕೇಳುತ್ತಿರುವಾಗ ಈ ರಡ್ಡಿಯು ಪಿಟ್ಟವ್ವೆಯ ಸಲುವಾಗಿ ಕೆಲಸ ಮಾಡುತ್ತಿದ್ದಾನೆ, ಇಂಥ ಅದ್ಭುತವಾಗಬೇಕಾದರೆ ಅವಳ ಸಲುವಾಗಿ ಪರಮಾತ್ಮನೇ ಅವನ ರೂಪಿನಿಂದ ಇಲ್ಲಿಗೆ ಬಂದು ದುಡಿಯುತ್ತಿರಬೇಕು ಎಂದು ಅವನಿಗೆ ತೋರಿತು. ಆಗ ಅವನು ಭಕ್ತೆಯಾದ ಒಬ್ಬ ಮುದುಕಿಯನ್ನು ಬಿಟ್ಟಿಗೆ ಹಚ್ಚಿದ್ದಕ್ಕೋಸ್ಕರ ಹೀಗಾಯಿತು. ಹೀಗೆ ಬಿಟ್ಟಿ ಕೆಲಸ ತೆಗೆದುಕೊಳ್ಳುವದು ಬಹಳ ಅನ್ಯಾಯವಾದುದು ಇದರಲ್ಲಿ ನಾನೇ ತಪ್ಪುಗಾರನು ಎಂದು ತಿಳಿದು ಅವನು ಅವಳಿದ್ದಲ್ಲಿಗೆ ಹೋಗಿ ಅವಳ ಕ್ಷಮೆಯನ್ನು ಬೇಡಿಕೊಂಡನು. ರಡ್ಡಿಯ ವೇಷದಲ್ಲಿ ಅಲ್ಲಿ ನಿಂತಿದ್ದ ಶಿವನು ಪಿಟ್ಟವ್ವೆಯ ಕಾಯಕದ ಮಹಿಮೆಯನ್ನು ಚೋಳರಾಜನಿಗೆ ಹೇಳಿ ಅಲ್ಲಿಯೇ ಅಂತರ್ಧಾನನಾದನು.

ಕರಿಕಾಲಚೋಳನು ಚೋಳರಾಜರಲ್ಲಿ ಬಹು ಬಲಾಢ್ಯನು. ಇಂಥವನ ಬಿಟ್ಟಿಯನ್ನು ತಿರಸ್ಕರಿಸಿದ್ದಕ್ಕೋಸ್ಕರ ಮತ್ತು ಅವನನ್ನು ಕಡೆಗೆ ತನಗೆ ಶರಣಾಗತನಾಗಿ ಮಾಡಿದ್ದಕ್ಕೋಸ್ಕರ ಪಿಟ್ಟವ್ವೆಯು ಶಿವಶರಣರಲ್ಲಿ ಬಹು ಪ್ರಸಿದ್ಧಳಾಗಿದ್ದಾಳೆ.

ಪಿಟ್ಟವ್ವೆಯ ಕಾಯಕವು ಕರ್ನಾಟಕದ ಶಿವಶರಣರ ಕಾಯಕವನ್ನು ಹೋಲುತ್ತದೆ. ಅವಳು ತಮಿಳು ನಾಡಿನಲ್ಲಿದ್ದರೂ ಅವಳು ಅಲ್ಲಿ ಪ್ರಸಿದ್ಧಳಾಗಿಲ್ಲ. ಆದರೆ ಕರ್ನಾಟಕದ ಶಿವಶರಣರಲ್ಲಿ ಅವಳ ಸ್ಥಾನವು ಬಹಳ ಹೆಚ್ಚಿನದಿರುತ್ತದೆ. ವೀರಶೈವ ಗ್ರಂಥಕಾರರು ಅವಳನ್ನು ಆಗಿಂದಾಗ್ಗೆ ಸ್ಮರಿಸುತ್ತಾರೆ. ಆದ್ದರಿಂದ ಅವಳು ಮೊದಲು ಕರ್ನಾಟಕಸ್ತ್ರೀಯಿದ್ದು ಹಿಂದುಗಡೆ ಅನೇಕ ಶಿವಶರಣರಂತೆ ತಮಿಳು ದೇಶಕ್ಕೆ ಹೋಗಿ ಚೋಳರಾಜ್ಯದಲ್ಲಿ ವಾಸಿಸಿರಬಹುದೆಂದು ತೋರುತ್ತದೆ.

ಕರಿಕಾಲ ಚೋಳನು ಬಸವೇಶ್ವರನಕಿಂತಲೂ ಸ್ವಲ್ಪ ಮೊದಲಿನವನಿದ್ದಾನೆ. ಆದ್ದರಿಂದ ಪಿಟ್ಟವ್ವೆಯೂ ಕೂಡ ಅವನಕಿಂತ ಮೊದಲನೆಯವಳಾಗುತ್ತಾಳೆ. ಈಕೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆಕೆಯನ್ನು ದೇವಿಯರ ತ್ರಿವಿದಿಯಲ್ಲಿ ಸ್ತುತಿಸಿರುವದು ಹೇಗೆಂದರೆ—

ಕರಿಕಾಲಚೋಳನಾ। ಕೆರೆಗೆ ಮಣ್ಣಡಕಲ್ಕೆ
ಹರಗುಣಲಿಕ್ಕಿ ಬಿಟ್ಟಿಯವ್ವೆ ಮಾಡಿಸಿದ
ಶಿವಶರಣೆ ಪಿಟ್ಟವ್ವೆ ಶರಣಾಗು

---

## ಒಕ್ಕಲು ಮುದ್ದಯ್ಯ.

ಕರ್ನಾಟಕದಲ್ಲಿ ಚೋಳದಹಾಳೆಂಬ ಪುರವಿದ್ದು ಅಲ್ಲಿ ಒಕ್ಕಲು ಮುದ್ದಯ್ಯನೆಂಬ ಒಕ್ಕಲಿಗನು ವಾಸ ಮಾಡುತ್ತಿದ್ದನು. ಅವನು ಒಕ್ಕಲುತನವನ್ನು ಮಾಡುತ್ತ ಹದಿನೆಂಟು ತೆರದ ಧಾನ್ಯಗಳನ್ನು ಬೆಳೆದು ರಾಜಪಾಲೆಂದು ಕೋರನ್ನು ಮತ್ತು ಸುಂಕಸೊದಿಗೆಯನ್ನು ಸಹ ಅರಸನಿಗೆ ಕೊಟ್ಟು ಸುಖದಿಂದ ಇರುತ್ತಿದ್ದನು. ಆದರೆ ಅವನು ಗುರುಕಾರುಣ್ಯವನ್ನು ಹೊಂದಿ ಲಿಂಗಭಕ್ತಿಯನ್ನು ಹೊಂದಬೇಕೆಂಬ ಉತ್ಕಟೇಚ್ಛೆಯುಳ್ಳವನಾಗಿದ್ದನು. ಆದ್ದರಿಂದ ಅವನು ಯಾವಾಗಲೂ ಈ ಚಿಂತೆಯಲ್ಲಿಯೇ ಮಗ್ನನಾಗಿರುತ್ತಿದ್ದನು.

ಹೀಗಿರುವಲ್ಲಿ ಅವನು ಒಂದುದಿನ ಬತ್ತವನ್ನು ಬಿತ್ತುವದಕ್ಕೋಸ್ಕರ ನೆಲವನ್ನು ಹದಮಾಡಬೇಕೆಂದು ನೇಗಿಲೆಯನ್ನು ಹೊಡೆಯುವಾಗ

ಅದರ ತುದಿಗೆ ಏನೋ ಒಂದು ತಟ್ಟಿಕೊಂಡು ನೇಗಿಲೆಯು ಮುಂದೆ ಹೋಗದ ಹಾಗಾಯಿತು. ನೆಲದೊಳಗಿದ್ದ ಒಂದು ಕೊರಡು ಅದಕ್ಕೆ ತಟ್ಟಿ ಹೀಗಾಗಿರಬೇಕೆಂದು ತಿಳಿದು, ಮುದ್ದಯ್ಯನು ಅದನ್ನು ಕಡಿಯಬೇಕೆಂದು ಕೊಡಲಿಯನ್ನು ತೆಗೆದುಕೊಂಡು ಬಂದು, ಮಣ್ಣನ್ನು ತೆಗೆಯುವಾಗ ನೆಲದೊಳಗಿಂದ— ಮುದ್ದಯ್ಯ, ನಾನು ಜನರಿಗೆ ಮುಕ್ತಿಯನ್ನು ಕೊಡುವಂಥ ಆದಿನಾಥ ಲಿಂಗವು. ಕೊಡಲಿಯಿಂದ ನನ್ನನ್ನು ಕಡಿಯಬೇಡ. ಹಾರಿಯಿಂದ ಮೆಲ್ಲನೆ ಅಗಿದು ಮಣ್ಣನ್ನು ಹೊರಗು ಮಾಡು ಎಂಬ ಶಬ್ದಗಳು ಹೊರಟವು. ಮುದ್ದಯ್ಯನು ಆಶ್ಚರ್ಯಪಟ್ಟು ಅವನು ಅದರಂತೆಯೇ ಹಾರಿಯಿಂದ ಮಣ್ಣನ್ನು ಸರಿಸಿ ನೋಡಲು, ಒಳಗೆ ಒಂದು ಸ್ವಯಂಭುಲಿಂಗವಿದ್ದದ್ದನ್ನು ಕಂಡನು. ಅವನು ಅದನ್ನು ಹೊರಗೆ ತೆಗೆದು ಅಲ್ಲಿಯೇ ಅದನ್ನು ಬಹು ಭಕ್ತಿಯಿಂದ ಸ್ಥಾಪಿಸಿ ಅದಕ್ಕೆ ಜೋಳದ ಅಂಬಲಿಯನ್ನೂ ತುಂಬಿಯ ಸೊಪ್ಪನ್ನೂ ಪಾಕಮಾಡಿ ನೈವೇದ್ಯಮಾಡಿ, ಅದನ್ನು ಲಿಂಗದೆದುರಿಗೆ ಇಟ್ಟು ಅದನ್ನು ಉಣ್ಣಬೇಕೆಂದು ಲಿಂಗಕ್ಕೆ ಪ್ರಾರ್ಥಿಸಿ, ಆ ನೈವೇದ್ಯವನ್ನು ಅಲ್ಲಿಯೇ ಮುಡಿಗಿದನು. ಆಗ ಅವನು ಬಹಳ ದಣಿದದ್ದರಿಂದ ಅಲ್ಲಿ ಇದ್ದ ಎಕ್ಕೆಯ ಗಿಡದಡಿಯಲ್ಲಿ ವಿಶ್ರಮಿಸಲು, ಕೂಡಲೆ ಅವನಿಗೆ ನಿದ್ರೆಹತ್ತಿತು.

ಮುಂದೆ ಅವನು ಎಚ್ಚತ್ತು ನೋಡುತ್ತಾನೆಯೇ, ತನ್ನ ಮುಂದೆ ಗುರುರೂಪವನ್ನು ಧರಿಸಿದ ಜಂಗಮನೊಬ್ಬನನ್ನು ಕಂಡನು. ಅವನು ಅಲ್ಲಿದ್ದ ಎಕ್ಕೆಯ ಮರವನ್ನೇ ದೀಕ್ಷಾಮಂಟಪವಾಗಿಯೂ ಮರದ ಪುಷ್ಪ ಫಲಗಳನ್ನೇ ಪಂಚಕಳಶವಾಗಿಯೂ ಮಾಡಿ, ಮುದ್ದಯ್ಯನಿಗೆ ಅವನ ಅಪೇಕ್ಷೆಯಂತೆ ವೀರಶೈವ ದೀಕ್ಷೆಯನ್ನಿತ್ತು ಲಿಂಗಾಚಾರವನ್ನು ಬೋಧಿಸಿ ಆ ಆದಿನಾಥ ಲಿಂಗದಲ್ಲಿಯೇ ಐಕ್ಯನಾದನು. ಮುದ್ದಯ್ಯನು ಹೀಗೆ ಆದಿನಾಥಲಿಂಗದಿಂದ ದೀಕ್ಷೆಯನ್ನು ಹೊಂದಿ ತನ್ನ ಒಕ್ಕಲುತನದ ಕಾಯಕವನ್ನು ಮಾಡುತ್ತ ದಾಸೋಹಭಾವದಿಂದ ಇರಹತ್ತಿದನು.

ಹೀಗಿರುವಲ್ಲಿ ಒಂದುದಿನ ರಾಜಸೇವಕರು ಮುದ್ದಯ್ಯನಲ್ಲಿಗೆ ಬಂದು ರಾಜನಿಗೆ ಕೊಡಬೇಕಾದ ತೆರುಗೆಯನ್ನು ಬೇಡಲು ಅವನು ಅದನ್ನು ಕೊಟ್ಟನು. ಆಮೇಲೆ ಆ ಸೇವಕರು ಮತ್ತೆಯೂ ಬೇಡಹತ್ತಲು, ಅವನು ಕೊಡಲಿಲ್ಲಾದ್ದರಿಂದ ಸೇವಕರು ಅವನನ್ನು ತುಡುಕಿ

ನಿರ್ಬಂಧಿಸಹತ್ತಿದರು. ಆದರೆ ಮುಗ್ಧಯ್ಯನು ಅವರಿಂದ ಬಿಡಿಸಿಕೊಂಡು ರಾಜನ ಸಭೆಗೆ ಓಡಿ ಬಂದು— ನನ್ನ ಸೇವಕರಿಗೆ ಮೂವತ್ತು ಕೊಳಗದ ಭೂಮಿಗೆ ಅರುವತ್ತು ಹೊನ್ನು ಕೊಟ್ಟಿದ್ದೇನೆ. ಮತ್ತೆಯೂ ಅವರು ನನ್ನ ಕಡೆಯಿಂದ ಬೇಡುತ್ತಾರಲ್ಲಾ, ಎಂದು ತಿಳಿಸಿದನು. ಅದಕ್ಕೆ ರಾಜನು ಉದಾಸೀನನಾಗಿರಲು, ಮುದ್ದಯ್ಯನು ಅಲ್ಲಿಂದ ಹೊರಟು ಬಂದು ತನ್ನ ಗ್ರಾಮಪಲ್ಲಿಗರ ಮುಂದೆ ಇದನ್ನು ಇಟ್ಟು, ಗುತ್ತಿಗೆಯ ಪ್ರಕಾರ ನಾನು ಕೊಡತಕ್ಕ ಪಟ್ಟಿಯನ್ನು ಕೊಟ್ಟಿದ್ದೇನೆ, ಅರಸನ ಅಪ್ಪಣೆಯನ್ನು ನಾನು ಮೀರಿಲ್ಲ, ಎಂದು ಅವರಿಂದ ಬರೆಯಿಸಿಕೊಂಡು ತನ್ನ ಮನೆಗೆ ಬಂದನು. ಅರಸನು ಮುಂದೆ ಹೆಚ್ಚಿನ ಪಟ್ಟಿಯನ್ನು ಊರಿನವರೆಲ್ಲ ಕೊಡಬೇಕೆಂದು ಅನ್ಯಾಯವಾಗಿ ಎಲ್ಲರ ಮೇಲೆ ಒತ್ತಾಯ ಮಾಡಹತ್ತಿದನು. ಆಗ ಮುದ್ದಯ್ಯನು ತನ್ನ ಲಿಂಗದೊಡನೆ ಹೇಳಿಕೊಂಡದ್ದೇನೆಂದರೆ— "ನಾನು ಮೂರಡಿ ಭೂಮಿಗೆ ಆರು ಹೊನ್ನಿನಂತೆ ೬೦ ಹೊನ್ನು ರಾಜನಿಗೆ ಕೊಟ್ಟೆನು. ಇದನ್ನು ಊರವರ ಮುಂದೆ ಇಡಲು ಅವರು ರಾಜನ ಅಪ್ಪಣೆಯನ್ನು ನಾನು ಮೀರಲಿಲ್ಲವೆಂದು ಪಟ್ಟಿಯನ್ನು ಬರೆದುಕೊಟ್ಟಿದಾರೆ. ಆದರೆ ರಾಜನು ಈಗ ಊರಗೂಡಿ ಹೆಚ್ಚಿನದನ್ನು ಎಲ್ಲರಿಂದಲೂ ಬೇಡಹತ್ತಿದ್ದಾನೆ. ಎಲೆ ಲಿಂಗವೇ, ನಾನು ಅದನ್ನು ಕೊಡುವದಿಲ್ಲ. ಅವನು ಈ ಪಡಿಕೆಯನ್ನು ಪುನಃ ಬೇಡಿದ್ದಾದರೆ ನಾನು ಸೆರೆ ಸಂಕೋಲೆಯ ವೇದನೆಯನ್ನು ಸಹಿಸಲು ಸಿದ್ಧನು. ಇನ್ನುಮೇಲೆ ರಾಜನಿಗೆ ಹೆಚ್ಚಿಗೆ ಕೊಟ್ಟೆನಾದರೆ, ಪರಮಾತ್ಮನೇ ನೀನು ನನ್ನ ಹಟ್ಟಿ, ಕೊಟ್ಟಿಗೆಯ ಒಡೆಯನಾದ್ದರಿಂದ ನಿನ್ನಾಣೆ. ನಾನು ಕೊಡತಕ್ಕ ತೆರುಗೆಯನ್ನು ಮಾತ್ರ ಅವನಿಗೆ ಕೊಡುವೆನು. ಹೀಗೆ ಕೊಟ್ಟು ನನಗೆ ಉಳಿದ ಧನಧಾನ್ಯದಲ್ಲಿ ದಾಸೋಹ ಮಾಡುತ್ತೇನೆ. ಹೀಗೆ ನಾನು ದಾಸೋಹವನ್ನು ಮಾಡುವಂತೆ ವರವನ್ನು ನಿನ್ನಲ್ಲಿ ನಾನು ಬೇಡಿಕೊಳ್ಳುತ್ತೇನೆ. ನನಗೆ ಬೇರೊಂದು ವರವು ಬೇಡ, ನಿನ್ನಗೋಸ್ಕರ ಭಕ್ತಿಯಿಂದಿರುವಿದೇ ನಾನು ಬೇಡುವ ವರವು. ನನ್ನ ಮನವೆಂಬ ಧನವನ್ನು ನಿನಗೆ ಸಲ್ಲಿಸುತ್ತೇನೆಯೇ ಹೊರತು ಇನ್ನೊಬ್ಬರಿಗೆ ಅದನ್ನು ಸಲ್ಲಿಸಲಾರೆನು" ಎಂದು ತನ್ನ ಇಷ್ಟಲಿಂಗದಲ್ಲಿ ಭಾಷೆಯನ್ನು ಬಿನ್ನೈಸಿಕೊಂಡನು. ಈ ರೀತಿಯಾಗಿ ಅವನು ಮುಂದೆ ಆಚರಿಸುತ್ತ ಲಿಂಗಾಂಗ ಸಾಮರಸ್ಯವನ್ನು ಹೊಂದಿದನು.

ಈ ಪ್ರಕಾರ ಒಕ್ಕಲು ಮುದ್ದಯ್ಯನು ತನ್ನ ಒಕ್ಕಲುತನ ಕಾಯಕವನ್ನು ಮಾಡುತ್ತ ತನಗೆ ದೊರಕಿದ್ದರಲ್ಲಿ ಅರಸನಿಗೆ ಕೊಡತಕ್ಕದ್ದನ್ನು ಕೊಟ್ಟು ಅವರಲ್ಲಿ ನ್ಯಾಯವಾದ ರೀತಿಯಿಂದಲೇ ಉಳಿಸಿಕೊಂಡು ಹೀಗೆ ಉಳಿದುದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುತ್ತ ತನ್ನ ಇಷ್ಟಲಿಂಗದಲ್ಲಿ ಬೆರೆತಿದ್ದಾನೆ. ಇದು ಮುದ್ದಯ್ಯನ ಒಂದು ಹೊಸ ರೀತಿಯ ಕಾಯಕದ ಮತ್ತು ದಾಸೋಹದ ಬಗೆಯು ಇರುತ್ತದೆ.

ಒಕ್ಕಲುಮುದ್ದಯ್ಯನು ವಚನಕಾರನು. ಅವನ ಕೆಲವು ವಚನಗಳನ್ನು ನಾವು ಕೆಳಗೆ ಉದಹರಿಸುತ್ತೇವೆ. ಅವನ ಮುದ್ರಿಕೆಯು "ಕಾಮ ಭೀಮ ಜೀವದನದೊಡೆಯ" ಎಂದಿದೆ. ಪರಮಾತ್ಮನು ಪ್ರಿಯಕರನೂ ಬಲಶಾಲಿಯೂ ಆಗಿದ್ದು ಅವನು ಜಗತ್ತಿನಲ್ಲಿರುವ ಜೀವಿಗಳಿಗೆ ಮತ್ತು ದನಗಳಿಗೆ ಒಡೆಯ, ಎಂಬ ಭಾವವು ಈ ಮುದ್ರಿಕೆಯಲ್ಲಿದೆ. ವಚನಕಾರರ ಮುದ್ರಿಕೆಗಳಲ್ಲಿ ಇದು ತೀರ ಹೊಸತರದ್ದು. ಅಲ್ಲದೆ ಅವನ ಕಾಯಕದ ಮತ್ತು ದಾಸೋಹದ ರೀತಿಯು ನಮ್ಮ ಆಧುನಿಕರು ವಿಚಾರ ಮಾಡುವಂತಹದಿದೆ.

## ವಚನಗಳು

(೧) ಅಂಗವೇ ಭೂಮಿಯಾಗಿ, ಲಿಂಗವೇ ಬೆಳೆಯಾಗಿ, ವಿಶ್ವಾಸವೆಂಬ ಬತ್ತ ಬಲಿದು ಉಂಡು ಸುಖಿಯಾಗಿರಬೇಕೆಂದ ಕಾಮ ಭೀಮ ಜೀವ ದನದೊಡೆಯ.

(೨) ವೇದ ಶಾಸ್ತ್ರವನೋದುವದಕ್ಕೆ ಹಾರುವನಲ್ಲ. ಇರಿದು ಮೆರೆವುದಕ್ಕೆ ಕ್ಷತ್ರಿಯನಲ್ಲ. ವ್ಯವಹರಿಸುವುದಕ್ಕೆ ವೈಶ್ಯನಲ್ಲ. ಉಳುವ ಒಕ್ಕಲು ಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯ ಕಾಮ ಭೀಮ ಜೀವದನದೊಡೆಯ. ನೀನೇ ಬಲ್ಲೆ.

(೩) ಅರುಣನ ಕಿರಣದಿಂದ ಅಪ್ಪುವಿನ ನಾರ ಪೃಥ್ವಿಯೊಳಗಡಗಿದ್ದು ಪೃಥ್ವಿಯ ತಪ್ಪಿಸಿ ತಾನೊಪ್ಪದಲ್ಲಿ ತೆಗೆವಂತೆ ಅರಿವು ಮರವೆ ಪೃಥ್ವಿಯಪ್ಪುವಿನಂತೆ ಇಪ್ಪ ಭೇದವ ತಾನರಿದು ಜಡ ಅಜಡವೆಂಬುಭಯ ಯುವನರಿವುದು ಸಕಲವೋ ? ನಿಃಕಲವೋ ? ಬೇರೊಂದು ಹೊಲಬೋ? ಇದರ ಹೊಲಬ ನೀನೇ ಬಲ್ಲೆ. ಕಾಮ ಭೀಮ ಜೀವ ದನದೊಡೆಯ ನಾನೆಂದೂ ಅರಿಯೆ.

(೪) ಆವ ವರ್ಣವ ಕೂಡಿದಡೂ ಅಪ್ಪುವುಯು ತಪ್ಪಿದಂತೆ ಸರ್ವಗುಣ ಸಂಪನ್ನನಾದಲ್ಲಿ ಭಕ್ತನೆಂದಡೂ ತಾನಾಗಿ, ಮಹೇಶ್ವರ ನೆಂದಡೂ ತಾನಾಗಿ, ಪ್ರಸಾದಿ ಎಂದದೂ ತಾನಾಗಿ, ಪ್ರಾಣಲಿಂಗಿ ಎಂದಡೂ ತಾನಾಗಿ, ಶರಣನೆಂದಡೂ ತಾನಾಗಿ, ಐಕ್ಯನೆಂದಡೂ ತಾನಾಗಿ, ಒಂದನಹುದು ಒಂದನಲ್ಲ ಎನ್ನದೆ, ಕತ್ತಲೆಯಲ್ಲಿ ಹಾಲ ಕೊಂಡಡೆ ಸಿಹಿ ತಪ್ಪುವುದೇ ? ಸತ್ತು ಚಿತ್ತಾನಂದವೆಂಬ ಗೊತ್ತು ಹರಿ ದವಂಗೆ ತಟ್ಟು ಮುಟ್ಟು ಹತ್ತುವ ಭಾವ ಒಂದೂ ಇಲ್ಲ. ಕಾಮ ಭೀಮ ಜೀವ ದನ ದೊಡೆಯು ತಾನು ತಾನೇ.

(೫) ಪೈರಿಗೆ ನೀರು ಬೇಕೆಂಬಲ್ಲಿ ಉಚಿತವನರಿದು ಬಿಡಬೇಕು. ಕ್ರಿಗರಿವು ಬೇಕೆಂಬಲ್ಲಿ ಉಭಯುವನರಿದು ಘಟಿಸಬೇಕು. ಏರಿ ಹಿಡಿವನ್ನಕ್ಕ ನೀರ ಒಡಿದಡೆ ಸುಖವಲ್ಲದೆ ನಿಮಾರಿದರುಂಟೇ ? ಕ್ರಿಯೆ ಬಿಡಲಿಲ್ಲ. ಅರಿವ ಮರೆಯುಲಿಲ್ಲ. ಬೆಳೆಯು ಕಾಯ್ದು ಮತ್ತೆ ಹೊಲಕ್ಕೆ ಕಾವಲುಂಟೇ? ಪವನ ಹೊತ್ತ ಬೆಳೆಯುಂತೆ, ಬೆಳೆಯುನೊಳಕೊಂಡ ಫಲದಂತೆ, ಅರಿವು ಆಚರಣೆಯಲ್ಲಿ ನಿಂದು ಆಚರಣೆ ಅರಿವಿನಲ್ಲಿ ಲೇಪವಾದ ಮತ್ತೆ ಕಾಮ ಭೀಮ ಜೀವದನದೊಡೆಯುನೆಂಬುದ ಭಾವಿಸಲಿಲ್ಲ.

ಮೇಲಿನ ವಚನಗಳಲ್ಲಿ ಒಕ್ಕಲು ಮುದ್ದಯ್ಯನು ಒಕ್ಕಲುತನ ಮಾಡುವ ರೀತಿಗಳನ್ನು ವಿವರಿಸುತ್ತ ಅವುಗಳ ಮೂಲಕ ಉಚ್ಚತರದ ಪಾರಮಾರ್ಥಿಕ ವಿಚಾರಗಳನ್ನು ಹೇಗೆ ನಿರೂಪಿಸಿದ್ದಾನೆಂಬುದನ್ನು ವಾಚಕರು ಅವಶ್ಯವಾಗಿ ಲಕ್ಷಿಸಬೇಕು. ಕೆಳಗೆ ಕಾಣಿಸಿದ ವಚನದಲ್ಲಿ ಆವನು ತನ್ನ ಅರಸನೊಡನೆ ಉಂಟಾದ ವಿರೋಧವನ್ನು ಕುರಿತು ಹೇಳುತ್ತಾನೆ.

(೬) ಅಯ್ಯಾ, ಮೂರಡಿ ಮಣ್ಣಿಂಗೆ ಆರು ಹೊನ್ನ ತೆತ್ತೆ. ನಿಮಾರಿ ಹಡಿಕೆಯು ಬೇಡೆ, ಗ್ರಾಮದವರ ಮುಂದಿಟ್ಟು ನಿಮಾರಲಿಲ್ಲ ಎಂದು ಪಟ್ಟೆಯು ಕೊಟ್ಟೆ ಮತ್ತೂರಗೂಡಿ ಹಡಿಕೆಯು ನೀ ಬೇಡಿದಡೆ ನಾ ಕೊಡ ಲಿಲ್ಲ. ನೀ ಕೊಟ್ಟ ಪಟ್ಟೆ ನಮ್ಮ ನಟ್ಟ ನಡುಮನೆಯು ನೆಲನಲ್ಲಿ ಕಟ್ಟಿ ಯಿದೆ ಕೋ. ನೀ ತಪ್ಪಿದಡೆ ನಿನಗೆ ಹೇಳುವ ಒಡೆಯುರುಂಟೆ? ನಾನೊ ಕ್ಕಲು, ನೀನೊಡೆಯು. ನಿಮಾರಿಕೊಂಡಿಹೆನೆಂದರೆ ಮುನ್ನವೇ ಸೆರೆ ಸಂಕೊಲೆ

ಗೊಳಗು. ಗುತ್ತಿಗೆಗಾರಂಗೆ ಮತ್ತೆ ಕುಳವುಂಟೆ? ಇನ್ನು ಕೊಟ್ಟೆನಾದರೆ
ಎನ್ನ ಪಟ್ಟಿ ಕೊಟ್ಟಿಗೆಗೊಡೆಯ ಕಾವ ಭೀಮ ಜೀವ ದನದಾಣೆ.

ಭಾವ:— ಈ ವಚನವನ್ನು ಒಕ್ಕಲು ಮುದ್ದಯ್ಯನು ತನ್ನ ರಾಜನಿಗೆ ಉದ್ದೇಶಿಸಿ ಹೇಳುತ್ತಾನೆ. ಅವನು ಹೇಳುವದೇನೆಂದರೆ— ನನ್ನ ಭೂಮಿಗೋಸ್ಕರ ಮೂರಡಿಗೆ ಆರು ಹೊನ್ನಿನಂತೆ ರಾಜನಿಗೆ ಕಂದಾಯವನ್ನು ಕೊಟ್ಟಿದ್ದೇನೆ. ಕೊಟ್ಟರೂ ಹೆಚ್ಚಿಗೆ ಅವನು ಕೊಡಬೇಕೆಂದು ಬೇಡುತ್ತಾ ಇದ್ದಾನೆ. ಇಂಥ ಹಡಿಕೆಯ ಹಣವನ್ನು ಕೊಡುವ ವಿಷಯವನ್ನು ಗ್ರಾಮದವರ ಮುಂದಿಡಲು, ಅವರು ನಾ ಕೊಟ್ಟ ಕಂದಾಯವು ಸರಿಯಾದದ್ದು, ಅರಸನ ಅಪ್ಪಣೆಯನ್ನು ನಾನು ಮೀರಲಿಲ್ಲ ಎಂದು ಬರಹವನ್ನು ನನಗೆ ಕೊಟ್ಟಿದ್ದಾರೆ. ಆದರೂ ರಾಜನು ಊರವರನ್ನೊಡಗೊಂಡು ಪುನಃ ನನ್ನಿಂದ ಹಡಿಕೆಯನ್ನು ಬೇಡುತ್ತಾನೆ. ಅದನ್ನು ನಾನು ಕೊಡಲಿಲ್ಲ. ಅರಸನು ಕೊಟ್ಟಂಥ ಪಟ್ಟಿಯು ನನ್ನ ಮನೆಯಲ್ಲಿದೆ. ಆದರೂ ಅವನು ಹೆಚ್ಚಿಗೆ ಬೇಡಿದರೆ ಅವನಿಗೆ ತಿಳಿಸಿ ಹೇಳುವ ಒಡೆಯರಾರು? ಯಾಕಂದರೆ ನಾನು ಒಕ್ಕಲು ಆಗಿದ್ದೇನೆ. ಮತ್ತು ಅವನು ನನ್ನ ಒಡೆಯನು. ಆದರೂ ಅವನು ಮೀರಿ ಕಂದಾಯವನ್ನು ತೆಗೆದುಕೊಳ್ಳುವೆನೆಂದರೆ, ನಾನು ಅವನ ಸೆರೆ ಸಂಕೊಲೆಯ ಬಂಧನವನ್ನು ಹೊಂದಲು ಸಿದ್ಧನಿದ್ದೇನೆ. ಆದರೆ ಇದರಿಂದ ಗುತ್ತಿಗೆಗಾರರಿಗೆ ಕುಳಗಳು ಉಳಿಯಲಾರವು. ರಾಜನೇ, ನಾನು ನಿನಗೆ ಈ ಹೆಚ್ಚಿನ ಕಂದಾಯವನ್ನು ಕೊಟ್ಟೆನಾದರೆ, ನನ್ನ ಹಟ್ಟಿ ಕೊಟ್ಟಿಗೆಗೆ ನಿಜವಾದ ಒಡೆಯನಾದ ಪರಮಾತ್ಮನ ಆಣೆ ಎಂದು ಹೇಳುತ್ತಾನೆ. ಅಂದರೆ ತನ್ನ ಹಟ್ಟಿ ಕೊಟ್ಟಿಗೆಯ ಒಡೆಯನು ರಾಜನಲ್ಲ, ಆದರೆ ಪರಮಾತ್ಮನು, ಎಂಬ ಭಾವವನ್ನು ಇಟ್ಟುಕೊಂಡು ವಚನಕಾರನು ಈ ವಚನವನ್ನು ಪ್ರತಿಜ್ಞಾಪೂರ್ವಕವಾಗಿ ನುಡಿದಿದ್ದಾನೆ.

ಈ ಕಡೆಯ ಆರನೆಯ ವಚನದಿಂದ ಮುದ್ದಯ್ಯನಿದ್ದ ಕಾಲದಲ್ಲಿ ರಾಜರು ಕಂದಾಯವನ್ನು ಹೇಗೆ ವಸೂಲು ಮಾಡುತ್ತಿದ್ದರೆಂಬುದು ಕೆಲಮಟ್ಟಿಗೆ ತಿಳಿದು ಬರುತ್ತಿದೆ. ಅವರು ಪ್ರತಿಯೊಬ್ಬ ಒಕ್ಕಲಿಗನು ಕಂದಾಯವನ್ನು ಎಷ್ಟು ಕೊಡಬೇಕೆಂಬುದನ್ನು ಈಗಿನಂತೆ ನಿರ್ಧರಿಸದೆ ಗ್ರಾಮದವರೆಲ್ಲರೂ ಕೂಡಿ ಒಟ್ಟಾಗಿ ಎಷ್ಟು ಕೊಡಬೇ

ಕೆಂಬುದನ್ನು ಅವರು ಗೊತ್ತುಪಡಿಸಿ ಅದನ್ನು ವಸೂಲು ಮಾಡಲಿಕ್ಕೆ ಗುತ್ತಿಗೆಗಾರರನ್ನು ನೇಮಿಸುತ್ತಿದ್ದಂತೆ ತೋರುತ್ತದೆ. ಈ ಗುತ್ತಿಗೆ ಗಾರರು ಹಳ್ಳಿಯ ಪಂಚರ ಸಹಾಯದಿಂದ ಕಂದಾಯವನ್ನು ವಸೂಲು ಮಾಡಿ ರಾಜರಿಗೆ ಅದನ್ನು ಕಳಿಸಿಕೊಡುವರು. ಅವರು ಈ ಕಂದಾ ಯವಲ್ಲದೆ ಅನ್ಯಾಯವಾಗಿ ಹೆಚ್ಚಿಗೆ ಹಣವನ್ನು ತಮ್ಮಗೋಸ್ಕರ ಎತ್ತು ತ್ತಿದ್ದುದನ್ನು ಈ ವಚನದಲ್ಲಿ ಹೇಳಿದೆ. ಹೀಗೆ ಅವರು ಎತ್ತುವದನ್ನು ಒಕ್ಕಲು ಮುದ್ದಯ್ಯನು ವಿರೋಧಿಸಿದ್ದಾನೆ. ಅವನು ವಿರೋಧಿಸುವ ಪೂರ್ವದಲ್ಲಿ ನ್ಯಾಯವಾಗಿ ತಾನೆಷ್ಟು ರಾಜನಿಗೆ ಕೊಡಬೇಕೆಂಬುವದನ್ನು ಊರವರಿಗೆ ರಾಜನು ಕೊಟ್ಟ ಪಟ್ಟಿಯ ಮೂಲಕ ಮೊದಲು ಗೊತ್ತು ಪಡಿಸಿಕೊಳ್ಳುತ್ತಾನೆ. ಇದರಿಂದ ರಾಜರು ಊರವರು ಕೊಡತಕ್ಕ ಕಂದಾಯದ ವಿಷಯವಾಗಿ ಕೆಲವೊಂದು ಬರಹವನ್ನು ತಯಾರಿಸು ತ್ತಿದ್ದು ಇದಕ್ಕೆ 'ಪಟ್ಟಿ' ಎಂಬ ಹೆಸರಿದ್ದಹಾಗೆ ತೋರುತ್ತದೆ. ಗುತ್ತಿಗೆ ಗಾರನು ಇದರಲ್ಲಿ ನಿರ್ದೇಶವಾದದ್ದಕ್ಕಿಂತಲೂ ಹೆಚ್ಚು ಹಣ ಬೇಡಲು ಮುದ್ದಯ್ಯನು ಮೊದಲು ಅರಸನನ್ನುಕಂಡು ಅವನಿಗೆ ಈ ವಿಷಯ ವಾಗಿ ದೂರು ಹೇಳಿದ್ದಾನೆ. ಆದರೆ ಅರಸನು ಅದನ್ನು ಅಲಕ್ಷಿಸಿದ ಹಾಗೆ ತೋರುತ್ತದೆ. ಆ ಮೇಲೆ ಮುದ್ದಯ್ಯನು ಅರಸನ ಅನ್ಯಾಯ ವನ್ನು ಊರವರ ಮುಂದೆ ಇಡಲು ಅವರು ಅವನನ್ನು ಸಮರ್ಥಿಸಿ ದ್ದಾರೆ. ಇದರ ತರುವಾಯ ಅರಸನು ಹೆಚ್ಚಿನ ಹಣವನ್ನು ಅನ್ಯಾ ಯವಾಗಿ ಊರಿನ ಎಲ್ಲ ಜನರಿಂದ ಬೇಡಿದ ಹಾಗೆ ಈ ವಚನದಲ್ಲಿ ಹೇಳಿದೆ. ಆಗ ಒಕ್ಕಲು ಮುದ್ದಯ್ಯನು ಅದನ್ನು ತಾನು ಕೊಡುವ ವದಿಲ್ಲೆಂದು ಇಲ್ಲಿ ಪ್ರತಿಜ್ಞೆಮಾಡಿದ್ದಾನೆ. ಅವನು ಹೀಗೆ ಕಂದಾಯ ವನ್ನು ಕೊಡದಿದ್ದರ ಪರಿಣಾಮವೇನಾಯಿತೆಂಬುದು ಮಾತ್ರ ಈ ವಚನ ದಲ್ಲಾಗಲಿ ಇಲ್ಲವೆ ಅವನ ಚರಿತ್ರೆಯುಲ್ಲಾಗಲಿ ಹೇಳಿಲ್ಲ. ಅವನು ತನ್ನ ಪ್ರತಿಜ್ಞೆಯನ್ನು ನಡಿಸಿದಂತೆ ತೋರುತ್ತದೆ. ಹೀಗೆ ತನ್ನ ಒಕ್ಕಲುತನ ಕಾಯಕವನ್ನು ನಡಿಸುತ್ತ ಮುದ್ದಯ್ಯನು ತನ್ನ ಇಷ್ಟಲಿಂಗದಲ್ಲಿ ಐಕ್ಯ ವಾದನೆಂದು ಈ ವಚನದಿಂದ ತಿಳಿದು ಬರುತ್ತಿದೆ.

ಕಾಯಕ ಮಾಡುವಲ್ಲಿ ಶರಣನು ನ್ಯಾಯವಾದದ್ದಕ್ಕೋಸ್ಕರ ಮಾತ್ರ ಹಣವನ್ನು ವೆಚ್ಚ ಮಾಡತಕ್ಕದ್ದು, ಅನ್ಯಾಯವಾದದ್ದಕ್ಕೋ ಸ್ಕರ ವೆಚ್ಚಮಾಡಬಾರದೆಂಬ ಭಾವವು ಇದರಲ್ಲಿದೆ. ಹೀಗೆ ಮಾಡು

ವಲ್ಲಿ ಏನಾದರೂ ಹಣ ಉಳಿದರೆ ಅದನ್ನು ಅವನು ದಾಸೋಹಕ್ಕೆ. ಅಂದರೆ ಗುರು ಲಿಂಗ ಜಂಗಮಕ್ಕೋಸ್ಕರ ಮತ್ತು ತಾನು ಮಾಡತಕ್ಕ ಸತ್ಕಾರ್ಯಗಳಿಗೋಸ್ಕರ ವಿನಿಯೋಗಿಸತಕ್ಕದ್ದು. ಇದು ಶಿವಶರಣರ ನಡೆಯಾಗಿರುತ್ತದೆ. ಈ ತತ್ವಗಳು ಒಕ್ಕಲು ಮುದ್ದಯ್ಯನ ಚರಿತ್ರೆಯಲ್ಲಿ ಅಡಕವಾಗಿರುತ್ತವೆ.

ಪಿಟ್ಟವ್ವೆಯಾದರೂ ಒಕ್ಕಲು ಮುದ್ದಯ್ಯನಂತೆ ಅರಸನ ಅನ್ಯಾಯದ ಕಾರ್ಯಗಳನ್ನು ವಿರೋಧಿಸಿದ್ದಾಳೆ. ಅವಳು ಹೀಗೆ ವಿರೋಧ ಮಾಡುತ್ತಿರುವಲ್ಲಿ ಕಡೆಗೆ ಅವಳಿಗೆ ಜಯವು ಪ್ರಾಪ್ತವಾಗಿರುತ್ತದೆ. ಕಡೆಗೆ ಒಬ್ಬ ಬಲಾಢ್ಯರಾಜನು ಸಹ ಅವಳಿಗೆ ಸನ್ಮಾನಮಾಡುವ ಪ್ರಸಂಗವು ಬಂದಿತು.

ಶಿವಶರಣರು ಬಹುತರವಾಗಿ ಬಡವರು. ಅವರು ತಮ್ಮ ಶಿವಾನುಭವದಂತೆ ನಡೆಯುವಲ್ಲಿ ಉಚ್ಚವರ್ಗದವರ ಹಗೆತನಕ್ಕೆ ಗುರಿಯಾಗುವ ಪ್ರಸಂಗಗಳು ಅವರಿಗೆ ಆಗಿಂದಾಗ್ಗೆ ಬರುತ್ತಿದ್ದವು. ಅರಸರ ಬಲಾತ್ಕಾರಗಳನ್ನೂ ಸಹ ವಿರೋಧಿಸುವ ಪ್ರಸಂಗಗಳು ಅವರಿಗೆ ಬಂದಿವೆ. ಆಗ ಅವರು ಹೇಗೆ ನಡೆದರೆಂಬುದನ್ನು ಒಕ್ಕಲು ಮುದ್ದಯ್ಯ ಮತ್ತು ಪಿಟ್ಟವ್ವೆ ಇವರ ಚರಿತ್ರೆಗಳಿಂದ ನಾವು ಚನ್ನಾಗಿ ಅರಿತುಕೊಳ್ಳಬಹುದಾಗಿದೆ.

ಕೆಲವು ಚರಿತ್ರೆಗಳಲ್ಲಿ ಒಕ್ಕಲು ಮುದ್ದಯ್ಯ ಎಂಬ ಹೆಸರಿನ ಬದಲಾಗಿ ಒಕ್ಕಲು ಮುಗ್ಧಯ್ಯನೆಂಬ ಹೆಸರು ಬಂದಿರುತ್ತದೆ. ಆದರೆ ಅವನು ಮುಗ್ಧನಾಗಿರದೆ ಜ್ಞಾನಿಯೂ ಶಿವಾನುಭವಿಯೂ ಆಗಿ ಲೌಕಿಕ ವ್ಯವಹಾರದಲ್ಲಿ ಜಾಣನಾಗಿದ್ದನೆಂದು ಅವನ ವಚನಗಳಿಂದ ತಿಳಿದು ಬರುತ್ತಿದೆ. ಆದ್ದರಿಂದ ಒಕ್ಕಲು ಮುದ್ದಯ್ಯನೆಂಬ ಹೆಸರೇ ನಿಜವಾದುದೆಂದು ನಮಗೆ ತೋರುತ್ತದೆ.

---

# ವೈಜವ್ವೆ.

ವೈಜವ್ವೆಯ ಚರಿತ್ರೆಯು ನಿಜಾಮನ ರಾಜ್ಯದಲ್ಲಿರುವ 'ಪರಳಿ ವೈಜನಾಥ' ಎಂಬ ಹೆಸರಿನ ಪ್ರಸಿದ್ಧ ದೇವಾಲಯಕ್ಕೆ ಸಂಬಂಧಿಸಿರುತ್ತದೆ. ಆಕೆಯ ಮೂಲಕವಾಗಿಯೇ ಈ ದೇವಾಲಯವು ಉಂಟಾಗಿರುತ್ತದೆ.

ಪರಳೀಗ್ರಾಮವು ನಿಜಾಮ ಇಲಾಖೆಯಲ್ಲಿ ಬೀಡ ಜಿಲ್ಲೆಯಲ್ಲಿರುವ ಮೋಮಿನಾಬಾದ ಎಂಬ ತಾಲೂಕಿನಲ್ಲಿರುತ್ತದೆ. ಇದು ಗೋದಾವರೀ ತೀರ ಪ್ರದೇಶದಲ್ಲಿ ಅದರ ಬಲಭಾಗದಲ್ಲಿದೆ. ಇದು ಸೊಲ್ಲಾಪುರ ಪಟ್ಟಣದ ಉತ್ತರಕ್ಕೆ ಸುಮಾರು ೧೩೦ ಮೈಲು ದೂರವಿರುತ್ತದೆ. ಗೋದಾವರಿಯು ಪರಳಿಯಿಂದ ಉತ್ತರಕ್ಕೆ ೧೫-೨೦ ಮೈಲುಗಳ ಮೇಲೆ ಹರಿಯುತ್ತಿದೆ. ಇದರ ಪೂರ್ವದ ಹೆಸರು ಪರಿವಳಿಗೆ ಎಂಬುದಾಗಿತ್ತು.

ಈ ಪರಿವಳಿಗೆಗೆ ಸಮೀಪವಾಗಿ ಒಂದು ಶಿವಪುರವಿದ್ದು ಅಲ್ಲಿ ಒಬ್ಬ ಶಿವಭಕ್ತನು ತನ್ನ ಹೆಂಡತಿಯೊಡನೆ ಸುಖವಾಗಿ ವಾಸ ಮಾಡುತ್ತಿದ್ದನು. ಉಭಯ ದಂಪತಿಗಳು ಶಿವನಲ್ಲಿ ಪೂರ್ಣ ವಿಶ್ವಾಸವುಳ್ಳವರು. ಯಾವಾಗಲೂ ಲಿಂಗಪೂಜೆಯಲ್ಲಿ ನಿರತರಾದವರು. ಅವರಿಗೆ 'ವೈಜವ್ವೆ' ಎಂಬ ಹೆಸರಿನ ಮಗಳು ಹುಟ್ಟಿದಳು. ಅವಳು ತನ್ನ ತಾಯಿತಂದೆಗಳಂತೆಯೇ ಲಿಂಗ ಭಕ್ತಿಯುಳ್ಳವಳಾಗಿ ಲಿಂಗಾನುಭವಿಯಾಗಿ ಆಚರಿಸುತ್ತ ಬಂದಳು. ಅವಳು ಹೀಗೆ ಬೆಳೆಯುತ್ತ ಯೌವ್ವನಾವಸ್ಥೆಯನ್ನು ಹೊಂದಿದಳು.

ಹೀಗಿರಲಾಗಿ ವೈಜವ್ವೆಯ ತಂದೆಯ ತಂಗಿಯು ಪರಿವಳಿಗೆ ಗ್ರಾಮದಲ್ಲಿರುತ್ತಿದ್ದಳು. ಅವಳು ಒಂದು ದಿನ ತನ್ನ ಅಣ್ಣನನ್ನು ಕಾಣಲಿಕ್ಕೆಂದು ಅವನಿದ್ದ ಗ್ರಾಮಕ್ಕೆ ಬಂದಳು. ಅವಳು ವೈಜವ್ವೆಯನ್ನು ನೋಡಿ ಅವಳನ್ನು ತನ್ನ ಮಗನಾದ ನೇಮಿಸೆಟ್ಟಿಗೆ ಕೊಡಬೇಕೆಂದು ತನ್ನ ಅಣ್ಣನಿಗೆ ಕೇಳಿದಳು. ಅದಕ್ಕೆ ಅವನು-- ನೀವು ಜೈನರು. ನಾವು ಶಿವಭಕ್ತರು. ನೇಮಿಸೆಟ್ಟಿಯು ನನಗೆ ಸೋದರಳಿಯನಾದರೇನಾಯಿತು? ನಾನು ನನ್ನ ಮಗಳನ್ನು ಶ್ರವಣರಿಗೆ ಕೊಡುವದಿಲ್ಲ ಎಂದು ಹೇಳಿದನು. ಅದಕ್ಕೆ ಅವನ ತಂಗಿಯು-- ಅಣ್ಣನೇ, ನೀನು

ನಿನ್ನ ಬೆನ್ನುಬಿದ್ದ ತಂಗಿಗೆ ಲೇಸು ಮಾಡಿದೆ. ನಾನು ವೈಜವ್ವೆಯನ್ನು ಎಂದೂ ಬಿಡುವವಳಲ್ಲ. ಅವಳನ್ನು ನನ್ನ ಮಗನಿಗೆ ನೀನು ಕೊಡಲೇ ಬೇಕೆಂದು ಛಲ ಹಿಡಿದು ಮನೆಯಲ್ಲಿ ಕುಳಿತಳು. ಆದರೂ ಅವಳ ಅಣ್ಣನು ಅದಕ್ಕೆ ಒಪ್ಪದಿರಲು ಅವಳು ಎರಡು ಮೂರು ದಿವಸಗಳ ವರೆಗೂ ಉಪವಾಸವಿದ್ದಳು. ಆಗ ಬಂಧುಬಳಗದವರು ಅದನ್ನು ನೋಡಿ ಅಣ್ಣನ ಮನೆಯಲ್ಲಿ ನೆರೆದು ಅಪ್ಪನಿಗೆ— ನೀನು ಹೀಗೆ ಕ್ರೂರತನ ಮಾಡಬೇಡ. ಹಿರಿಯರಲ್ಲಿ ನೆಂಟರಲ್ಲಿ ಹೀಗೆ ಛಲವಿರಬಾರದು. ನಿನ್ನ ತಂಗಿಯು ಜೈನಳಾದರೇನಾಯಿತು? ಅವಳ ಮಗನಿಗೆ ನಿನ್ನ ಮಗಳನ್ನು ಕೊಡುವದೇ ಉಚಿತವಾದದ್ದು ಎಂದು ಹೇಳಲು, ಅವನು ಅದಕ್ಕೆ ಒಪ್ಪಿ ತನ್ನ ತಂಗಿಗೆ— ನನ್ನ ಮಗಳನ್ನು ನಿನ್ನ ಮಗನಿಗೆ ಕೊಟ್ಟೆನು ಎಂದು ಅವಳಿಗೆ ಮಾತನ್ನು ಕೊಟ್ಟನು. ಆಮೇಲೆ ಉಭಯತರು ಲಗ್ನದ ಸಿದ್ಧತೆಯಲ್ಲಿ ತೊಡಗಿದರು.

ಆದರೆ ವೈಜವ್ವೆಯು ಹರನಲ್ಲಿ ಪೂರ್ಣ ಭಕ್ತಿಯುಳ್ಳವಳು. ಅವಳು ತನ್ನನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನಮಾಡುತ್ತಾರೆಂಬುದನ್ನು ಕೇಳಿ, ಮನದಲ್ಲಿ ಅತ್ಯಂತವಾಗಿ ನೊಂದು ತನ್ನಲ್ಲಿ— ಈಗ ನಾನೇನು ಮಾಡಲಿ? ನಾನು ಭವಿಯನ್ನು ಸೋಂಕದೆ ಹೇಗಿರಲಿ? ತಿಳಿವಿನಲ್ಲಿ ಹುಟ್ಟಿದ ನಾನು ಮರವೆಯಲ್ಲಿ ಹೇಗೆ ಇರಲಿ? ಪರಮಾತ್ಮನೇ, ನಿನ್ನನ್ನು ಇನ್ನುಮೇಲೆ ನಾನು ಹೇಗೆ ನೆನೆವೆನು? ನೀನು ನನ್ನನ್ನು ರಕ್ಷಿಸು, ರಕ್ಷಿಸು ಎಂದು ಶೋಕಿಸಹತ್ತಿದಳು. ಹೀಗಿರಲು ಆ ದಿನ ರಾತ್ರಿ ಅವಳ ಕನಸಿನಲ್ಲಿ ಪರಮಾತ್ಮನು ಬಂದು— ವೈಜವ್ವೆಯೇ, ನೀನು ಚಿಂತೆ ಮಾಡಬೇಡ. ನಾನು ಯಾವಾಗಲೂ ನಿನ್ನ ಸಮೀಪದಲ್ಲಿರುವೆನು. ನನ್ನನ್ನು ನಂಬು. ನೀನು ನೇಮಿಸೆಟ್ಟಿಯನ್ನು ಮದುವೆಯಾಗು. ಜಗತ್ತಿನಲ್ಲಿ ನಿನ್ನ ಹೆಸರು ಕಡೆಯ ವರೆಗೆ ಉಳಿಯುವಂತೆ ಮಾಡುವೆನು ಎಂದು ಹೇಳಿದನು. ಮರುದಿವಸ ಲಗ್ನಕಾರ್ಯವು ಪ್ರಾರಂಭವಾಯಿತು. ಲಗ್ನವು ಮುಗಿಯಿತು. ತಂದೆಯು ಮಗಳನ್ನು ಅಳಿಯನಿಗೆ ಒಪ್ಪಿಸಿದನು. ಅಳಿಯನು ಅವಳನ್ನು ಕರೆದುಕೊಂಡು ತನ್ನ ಗ್ರಾಮವಾದ ಪರಿವಳಿಗೆಗೆ ಬಂದನು.

ಆದರೆ ವೈಜವ್ವೆಗೆ ಗಂಡನ ಮನೆಯಲ್ಲಿ ಎಲ್ಲವೂ ಕತ್ತಲೆಯಾದಂತೆ ತೋರಹತ್ತಿತು. ಅವಳ ಮನಸ್ಸಿನಲ್ಲಿ ಎಷ್ಟುಮಾತ್ರವೂ ಸಮಾಧಾನವಿರಲಿಲ್ಲ. ಅಲ್ಲಿ ತನ್ನ ಲಿಂಗಪೂಜೆಯಲ್ಲಿರಲು ಅವಳಿಗೆ ಎಷ್ಟುಮಾತ್ರವೂ ಅವಕಾಶವಿರಲಿಲ್ಲ. ಆದರೂ ಅವಳು ಯಾವಾಗಲೂ ಲಿಂಗಧ್ಯಾನದಲ್ಲಿಯೇ ಇರುವಳು. ಹರಿಹರ ಮಹಾಕವಿಯು ಅವಳ ಲಿಂಗಾಚರಣೆಯನ್ನು ವರ್ಣಿಸಿರುವದು ಹೇಗೆಂದರೆ--- ಆಗ ಅವಳು ಭಸಿತ ರುದ್ರಾಕ್ಷಿಗಳನ್ನು ತನ್ನ ಮನವೆಂಬ ಶರೀರದಲ್ಲಿ ಧರಿಸಿದಳು. ಅದರಲ್ಲಿಯ ಹುಸಿ, ಲೋಭಗಳೆಂಬ ಕಸವನ್ನು ಉಡುಗಿಬಿಟ್ಟಳು. ತನ್ನ ಹೃದಯಕಮಲದ ಕರ್ಣಿಕಾಪೀಠದಲ್ಲಿ ಸದಮಳ ಪ್ರಕಾಶ ರೂಪವಾದ ಲಿಂಗವನ್ನು ಸ್ಥಾಪಿಸಿ ಅದು ಬೆಳಗುವಂತೆ ಮಾಡಿದಳು. ತನ್ನ ಮನಸ್ಸು ಎಂಬುದನ್ನು ಅದಕ್ಕೆ ಅರ್ಪಿಸಿದಳು. ಲಿಂಗದ ಬಗ್ಗೆ ಅವಳಲ್ಲಿ ಉಂಟಾದ ಪ್ರೀತಿಯು ಉಸಿರೇ ಅದಕ್ಕೆ ಧೂಪವಾಯಿತು. ತನ್ನ ನೆನಹಿನ ಅರಿವಿನ ಅಚ್ಚ ಬೆಳಗಿನ ಪ್ರಕಾಶವೇ ಅವಳಿಗೆ ದೀಪವಾಯಿತು. ಈ ತೆರದ ಭಕ್ತಿಯೋಗದಿಂದ ಪರಮಾತ್ಮನನ್ನು ಅವಳು ತಣಿಸುತ್ತ ಲಿಂಗಾಂಗ ಸಾಮರಸ್ಯದಲ್ಲಿ ಜೈನನಾದ ಗಂಡನ ಮನೆಯಲ್ಲಿ ಲಿಂಗ ಸುಖದಲ್ಲಿರಹತ್ತಿದಳು. ಅವಳು ಜೈನರಲ್ಲಿದ್ದರೂ ತಿಲದ ತೈಲದಂತೆ ಹೊದ್ದಿಯೂ ಹೊದ್ದದಂತೆ ಇದ್ದಳು. ಹೀಗೆ ಗುಪ್ತಭಕ್ತಿಯಿಂದ ಅವಳು ತನ್ನ ಪತಿಯ ಮನೆಯಲ್ಲಿ ಕಾಲ ಕಳೆಯಹತ್ತಿದಳು.

ಹೀಗಿರಲು ಒಂದು ದಿನ ನೇಮಿಸೆಟ್ಟಿಯು ವೈಜವ್ವೆಗೆ--- ನಾನು ಇಂದಿನ ದಿನ ಜೈನ ಮುನಿಗಳಿಗೆ ಊಟಹಾಕುತ್ತೇನೆ. ಅವರಿಗೆ ನಾನಾ ತರಹದ ಸೊಗಸಾದ ಅಡಿಗೆಯನ್ನು ಮಾಡು, ಎಂದು ಹೇಳಿ ಆಹಾರ ಪದಾರ್ಥಗಳನ್ನು ತಂದು ಅವಳಿಗೆ ಕೊಡಲು, ಅವಳು ಹಾಲೋಗರ, ಹಾಲುಂಡೆ, ಹಾಲುಮಂಡಿಗೆ, ತರಗು, ಲಡ್ಡುಗೆ, ಇಡ್ಡಲಿಗೆ, ಹಾಲು ಪಾಯಸ, ಬೋನ ಮೊದಲಾದ ರುಚಿ ಪದಾರ್ಥಗಳನ್ನು ಸಿದ್ಧಪಡಿಸಿದಳು. ಆಗ ಅವಳು ಮನಸ್ಸಿನಲ್ಲಿ--- ಅಕ್ಕಟಾ, ಈ ವಸ್ತುಗಳು ಶಿವನಿಗಾಗಲಿಲ್ಲ. ಅವುಗಳಿಂದ ನಾನು ಮಹೇಶ್ವರರನ್ನು ತೃಪ್ತಿಪಡಿಸಲಿಲ್ಲ. ಅವು ಭವಿಗಳಿಗೆ ಹೋಗುತ್ತವೆ. ನನ್ನ ತಂದೆಯು ನನ್ನನ್ನು ಭವಿಗಳಿಗೆ ಕೊಟ್ಟಿದ್ದರಿಂದ ಶಿವನೇ, ನಿನ್ನ ಭಕ್ತರ ಸೇವೆ ಮಾಡುವದು ನನ್ನಿಂದ ಆಗದಂತಾಗಿದೆ, ಎಂದು ಮನದಲ್ಲಿ ನೊಂದು ಕಣ್ಣೀರಿಡುತ್ತ ಕುಳಿತಳು.

ಹೀಗೆ ಅವಳು ಕುಳಿತಿರಲು ಶಿವನಿಗೆ ಕರುಣೆಯುಂಟಾಗಿ ಅವನು ಒಬ್ಬ ಜಂಗಮನ ವೇಷವನ್ನು ಧಾರಣ ಮಾಡಿ ನೇಮಿಸೆಟ್ಟಿ ಇದ್ದ ಮನೆಯ ಮುಂದೆ ಬಂದುನಿಂತು— ನಾವು ಪರವೂರಿಂದ ಬಂದಿದ್ದೇವೆ. ನಿಮಗೆ ಶಿವನ ಕರುಣವಾಗಲಿ ಎಂದು ನುಡಿಯಲು ವೈಜವ್ವೆಯು ಆ ಧ್ವನಿಯನ್ನು ಕೇಳಿ ಹೊರಗೆ ಬಂದು ಅಲ್ಲಿ ಒಬ್ಬ ಜಂಗಮನು ನಿಂತಿದ್ದನ್ನು ಕಂಡು ಅವಳು ಹರುಷಿತಳಾಗಿ— ನನ್ನ ಬಯಕೆಯು ಈಡೇರಿತು. ನೀವು ಒಳ್ಳೇ ಸಮಯಕ್ಕೆ ಬಂದಿರಿ ಎಂದು ನುಡಿಯುತ್ತ ಅವನಿಗೆ ಸಾಷ್ಟಾಂಗವೆರಗಿದಳು. ಆಮೇಲೆ ಅವಳು ತಾನು ಸಿದ್ಧಮಾಡಿದ್ದ ಪಕ್ವಾನ್ನಗಳನ್ನು ತಂದು ಅವನಿಗೆ ನೀಡಿ— ಇನ್ನುಮೇಲೆ ನೀವು ಇಲ್ಲಿ ನಿಲ್ಲಬೇಡಿರಿ. ಇಷ್ಟರಲ್ಲಿಯೇ ಶ್ರವಣರು ಬರತಕ್ಕವರಿದ್ದಾರೆ. ನೀವು ಅವರ ಕಣ್ಣಿಗೆ ಬೀಳದಂತೆ ಹೋಗಿರಿ, ಎಂದು ನುಡಿದಳು. ಹೀಗೆ ಅವಳು ನುಡಿಯುವಷ್ಟರಲ್ಲಿಯೇ ನೇಮಿಸೆಟ್ಟಿಯು ಜಿನ ಮುನಿಗಳನ್ನು ಕರೆದುಕೊಂಡು ಮನೆಯನ್ನು ಪ್ರವೇಶಿಸಿದನು. ಆ ಮುನಿಗಳು ವೈಜವ್ವೆಯು ಊಟದ ಪದಾರ್ಥಗಳನ್ನು ಒಬ್ಬ ಜಂಗಮನಿಗೆ ನೀಡುತ್ತಿರುವದನ್ನು ಕಂಡು ಅವರು ನೇಮಿಸೆಟ್ಟಿಗೆ— ನೀವು ಮಾಡಿದ ಅಡಿಗೆಯನ್ನು ನಾವು ಇನ್ನುಮೇಲೆ ಮುಟ್ಟಲಾರೆವು. ಆ ಗೊರವನು ಅದನ್ನು ಎಂಜಲು ಮಾಡಿದ್ದಾನೆ ಎಂದು ಅಂದು, ಅವರೆಲ್ಲರೂ ಮನೆಯನ್ನು ಬಿಟ್ಟು ಹೊರಟು ಹೋದರು.

ನೇಮಿಸೆಟ್ಟಿಯು ವೈಜವ್ವೆಯು ಮಾಡಿದ್ದನ್ನು ತಿಳಿದವನಾಗಿ ಅತ್ಯಂತ ಕುಪಿತನಾಗಿ ಅವಳಿಗೆ— ನೀನೇನು ಮಾಡಿದೆ? ಅನ್ನವನ್ನು ಜಂಗಮನಿಗೆ ನೀಡಿ ಕೆಡಿಸಿಬಿಟ್ಟೆಯಾ? ಮುನಿಗಳು ಹಸಿದುಕೊಂಡು ಹೊರಟು ಹೋದರು, ಅರುಹನ ವ್ರತಕ್ಕೆ ನೀನು ಭಂಗತಂದೆ, ಎಂದು ನುಡಿದನು. ಅದಕ್ಕೆ ಅವಳು— ಜನರೆಲ್ಲ ಅಡಿಗೆ ಮಾಡುವದು ಅಗ್ನಿಯಿಂದ. ಆದರೆ ಆ ಅಗ್ನಿಯು ಶಿವನ ಹಣೆಗಣ್ಣಿನ ಎಂಜಲು. ಅಂಥ ಎಂಜಲಿಂದಾದ ಆಹಾರವನ್ನು ನೀವೆಲ್ಲ ಉಣ್ಣುವಿರಿ. ಅದನ್ನು ಜಂಗಮನಿಗೆ ನೀಡಿದಲ್ಲಿ ಎಂಜಲು ಹೇಗೆ? ನೀವು ಅರುಹನೆಂದು ಪೂಜಿಸುವ ವಸ್ತುವು ಭೂಮಿಯೊಳಗಿಲ್ಲ. ಅದು ವೇದದಲಿಲ್ಲ. ಶಾಸ್ತ್ರದಲಿಲ್ಲ. ಬತ್ತಲೆಯ ಬೊಂಬೆಗಳನ್ನು ನೀವು ಪೂಜಿಸಿ ಬಳಲುವದೇಕೆ, ಎಂದು ನಿಷ್ಠುರವಾಗಿ ನುಡಿದಳು. ಅದನ್ನು ನೇಮಿಸೆಟ್ಟಿಯು ಕೇಳಿ ಕೆರಳಿದವನಾಗಿ ಅವಳನ್ನು ಹೊಡೆದು

ಬಡೆದು ಘಾಸಿಮಾಡಹತ್ತಿದನು. ಆ ಅಬಲೆಯನ್ನು ಮುಟ್ಟಿ ಮುಟ್ಟಿ ಒಳಿತಾಗಿ ಬಡಿಯಹತ್ತಿದನು. ಆದರೆ ಅವಳನ್ನು ಹೊಡೆದ ಹಾಗೆ ಆ ಹೊಡೆತಗಳು ಪಟ್ಟಣದಲ್ಲಿದ್ದ ಜೈನರಿಗೆಲ್ಲ ತಾಕಹತ್ತಿದವು. ಆದರೆ ಅವರಿಗೆ ಹೀಗೇಕಾಯಿತೆಂಬದು ಮಾತ್ರ ಆಗ ಏನೂ ತಿಳಿಯದೆ ಗಟ್ಟಿಯಾಗಿ ಮೊರೆ ಇಡಹತ್ತಿದರು. ಅಷ್ಟರಲ್ಲಿ ಸೂರ್ಯಾಸ್ತಮಯವಾಯಿತು.

ಮೈಜವ್ವೆಯು ಪತಿಯು ಹೊಡೆದ ಪೆಟ್ಟುಗಳಿಂದ ಬಹಳ ನೊಂದು ದುಃಖ ಪಡುತ್ತ ಪರಮಾತ್ಮನ ಸ್ಮರಣೆಯಲ್ಲಿಯೇ ಮಲಗಿದಳು. ಆಗ ರಾತ್ರಿಯಲ್ಲಿ ಶಿವನು ಆಕೆಯ ಕನಸಿನಲ್ಲಿ ಬಂದು—ಮೈಜವ್ವೆಯೇ ಅಂಜಬೇಡ, ಚಿಂತಿಸಬೇಡ- ನಾಳೆ ಪಟ್ಟಣದಲ್ಲಿ ಒಂದು ಅದ್ಭುತವಾಗುವದು. ನಾನು ಪಟ್ಟಣದಲ್ಲಿಯ ಜಿನನ ಶಿರವನ್ನೊಡೆದು ಅಲ್ಲಿ ಮೂಡುವೆನು, ಅಂಜಬೇಡ, ಎಂದು ಸಮಾಧಾನ ಹೇಳಿ ಅಂತರ್ಧಾನನಾದನು. ಮೈಜವ್ವೆಯು ಅದನ್ನು ಕೇಳಿ—ನನ್ನಮೇಲೆ ಶಿವನ ಕರುಣವಿದೆ ಎಂದು ತಿಳಿದು ಹರುಷಿತಳಾಗಿ ಬೆಳಗಿನಲ್ಲೆದ್ದು ಶಿವನನ್ನು ಸ್ಮರಿಸುತ್ತ ಕುಳಿತಳು.

ಮರುದಿನ ಮುಂಜಾವಿನಲ್ಲಿ ಶ್ರವಣರು ಎಂದಿನಂತೆ ಬಸದಿಗೆ ಹೋಗಿ ಅದರ ಕದವನ್ನು ತೆರೆಯಲು ಪ್ರಯತ್ನಿಸಿದರು. ಆದರೆ ಅದು ತೆರೆಯದೆ ಹೋಯಿತು. ಅವರು ಎಷ್ಟು ಪ್ರಯತ್ನಮಾಡಿದರೂ, ಅದು ತೆರೆಯಲಿಲ್ಲ. ಇದೇನು ಕಂಟಕ ಬಂದಿತೆಂದು ಅವರು ನುಡಿಯುತ್ತಿರಲು ಅವರಲ್ಲೊಬ್ಬನು—ನೇಮಿಸೆಟ್ಟಿಯು ನಿನ್ನೆ ಮೈಜವ್ವೆಯನ್ನು ಹೊಡೆದ ಮೂಲಕ ನಾವೆಲ್ಲರೂ ಗಾಸಿಯಾದೆವು. ಆ ಪೆಟ್ಟುಗಳು ನಮ್ಮ ಮೇಲೆ ಬಿದ್ದವು, ಎಂದು ಹೇಳಲು ಅಲ್ಲಿ ನೆರೆದವರು—ನಮಗೂ ಪೆಟ್ಟು ಬಿದ್ದಿವೆ. ಬಸದಿಯ ಬಾಗಿಲು ತೆರೆಯದ್ದಕ್ಕೆ ಮೈಜವ್ವೆಯನ್ನು ಹೊಡೆದದ್ದೇ ಕಾರಣವಿರಬಹುದೆಂದು ಅವರಿಗೆ ತೋರಿತು. ಆಗ ಅವರೆಲ್ಲರೂ ಕೂಡಿಕೊಂಡು ಮೈಜವ್ವೆ ಇದ್ದಲ್ಲಿಗೆ ಬಂದು ಅವಳಿಗೆ—ನಿನಗಾದ ನೋವಿನಿಂದ ನಾವು ಬಳಲಿದೆವು. ನಮ್ಮನ್ನು ಕ್ಷಮಿಸು. ಅಲ್ಲದೆ ಅರುಹನು ಕದವನ್ನಿಕ್ಕಿಕೊಂಡು ನಮ್ಮನ್ನು ಕಾಡಹತ್ತಿದ್ದಾನೆ. ನೀನು ಅಲ್ಲಿಯ ವರೆಗೆ ಬಂದು ಕದವು ತೆರೆಯುವಂತೆ ಮಾಡು ಎಂದು ಹೇಳಿಕೊಂಡರು.

ಆಗ ವೈಜವ್ವೆಯು ಪರಮಾತ್ಮನ ಕರುಣೆಯು ನನ್ನ ಮೇಲೆ ಇದೆ ಎಂಬ ನಂಬುಗೆಯಿಂದ ಅವಳು ಅವರೊಡನೆ ಜಿನಾಲಯಕ್ಕೆ ಹೋದಳು. ಅದರ ಬಾಗಿಲಲ್ಲಿ ನಿಂತು ಶಿವನನ್ನು ಕುರಿತು—ಸಕಲ ಭುವನ ತಿಮಿರ ಹರನೇ ಕರುಣಿಸು, ಕರುಣಿಸು. ದುರಿತ ಹರನೇ, ಕರುಣಿಸು, ಕರುಣಿಸು. ಹೀಗೆ ಸ್ತುತಿಸುತ್ತ ಆ ಚೈತ್ಯಾಲಯದ ಬಾಗಿಲನ್ನು ಮುಟ್ಟಿದಳು. ಅವಳು ಮುಟ್ಟಿದ ಕೂಡಲೆ ಆ ಬಾಗಿಲು ಫಕ್ಕನೆ ತೆರೆದು ಬಿಟ್ಟಿತು. ಆದರೆ ಒಳಗೆ ನೋಡುತ್ತಾರೆಯೇ, ಜಿನನ ಶಿರವು ಒಡೆದು ಬಿದ್ದಿತ್ತು, ಅದರ ಸ್ಥಳದಲ್ಲಿ ಶಿವಲಿಂಗವು ಮೂಡಿತ್ತು ಮತ್ತು ಸುತ್ತಲಿದ್ದ ಬತ್ತಲೆ ಗೊಂಬೆಗಳು ಅಲ್ಲಲ್ಲಿ ಉರುಳಿ ಬಿದ್ದಿದ್ದವು.

ಅಲ್ಲಿ ನೆರೆದಿದ್ದ ಜೈನರು ದೇವಾಲಯದಲ್ಲಿ ಈ ಅದ್ಭುತವಾದ ದ್ದನ್ನು ಕಂಡು ಅವರು ವೈಜವ್ವೆಗೆ ನಮಿಸಿ, ಇನ್ನು ಮೇಲೆ ನಾವು ಜಿನ ಧರ್ಮವನ್ನು ಬಿಡುವೆವು. ನಮಗೆ ಲಿಂಗದೀಕ್ಷೆ ಮಾಡೆಂದು ಅವಳಿಗೆ ಹೇಳಿಕೊಂಡರು. ನೇಮಿಸೆಟ್ಟಿಯು ಸಹ ಲಿಂಗದೆದುರಿನಲ್ಲಿ ನಮಸ್ಕರಿಸಿ, ವೈಜವ್ವೆಗೆ—ನಾನು ಪಾಪಿಷ್ಠನು, ನಿನ್ನನ್ನು ನೋಯಿಸಿ ದೆನು. ಇದಕ್ಕೋಸ್ಕರ ನನ್ನನ್ನು ಕ್ಷಮಿಸು ಎಂದು ಬೇಡಿಕೊಂಡನು. ಅದಕ್ಕೆ ವೈಜವ್ವೆಯು—ನೀನು ನನ್ನ ಪತಿಯಾದುದರಿಂದ ನಿನಗೆ ಪಾಪವು ಉಂಟಾಗಲಾರದು ಎಂದು ನುಡಿದು ಎಲ್ಲರಿಗೆ ಗುರುಲಿಂಗಜಂಗಮದ ರೀತಿಯನ್ನು ತಿಳಿಸಿ ಲಿಂಗದೀಕ್ಷೆಯನ್ನು ಮಾಡಿದಳು. ಆಗ ನೇಮಿ ಸೆಟ್ಟಿಯು ನನಗೇನಪ್ಪಣೆ ಎಂದು ಕೇಳಲು, ಅವಳು— ಪರಮಾತ್ಮನು ಲಿಂಗವಾಗಿ ಇಲ್ಲಿ ಮೂಡಿದ್ದಾನೆ. ಈ ದೇವನನ್ನು ನೀನು ಅರ್ಚಿ ಸುತ್ತ ಪರಮಾತ್ಮನಲ್ಲಿ ಬೆರೆ ಎಂದು ನುಡಿಯುತ್ತ ತಾನು ಆ ಲಿಂಗ ದಲ್ಲಿಯೇ ಐಕ್ಯಳಾದಳು. ಆ ಲಿಂಗವು ಅಂದಿನಿಂದ ವೈಜನಾಥಲಿಂಗವೆಂಬ ಹೆಸರಿನಿಂದ ನಾಡಿನಲ್ಲೆಲ್ಲ ಪ್ರಸಿದ್ಧವಾಯಿತು.

ವೈಜನಾಥ ಲಿಂಗವು ಉತ್ತರ ಕರ್ನಾಟಕದಲ್ಲಿಯೂ ಮಹಾರಾ ಷ್ಟ್ರದೇಶದಲ್ಲಿಯೂ ಪುಣ್ಯಾಕರವಾದ ಅತ್ಯಂತ ಪವಿತ್ರವಾದ ದೇವಸ್ಥಾನ ವೆಂದು ಪ್ರಸಿದ್ಧವಾಗಿರುತ್ತದೆ. ಈ ಪ್ರಕಾರ ಪರಳೀ ವೈಜನಾಥ ಲಿಂಗವು ಶಿವಶರಣಿಯರಲ್ಲಿ ಅತ್ಯಂತ ಖ್ಯಾತಿಯನ್ನು ಪಡೆದ ವೈಜವ್ವೆಯದಾಗಿ ರುತ್ತದೆ. ಈ ಶಿವಾಲಯಕ್ಕೆ ಎಲ್ಲ ಸಮಾಜದವರು ಈಗಲೂ ಬಹು ಭಕ್ತಿ ಯಿಂದ ನಡೆದುಕೊಳ್ಳುತ್ತಾರೆ.

ಕಥಾಂತರಗಳು:—— ವೈಜವ್ವೆಯ ವಿಷಯವಾಗಿ ಕೆಲವು ಗ್ರಂಥ ಗಳಲ್ಲಿ ಕಥಾಂತರಗಳಿವೆ. ಅವುಗಳಲ್ಲಿ ಮುಖ್ಯವಾದುದು ಯಾವದೆಂದರೆ- ವೈಜವ್ವೆಯು ಜೈನ ಮುನಿಗಳಿಗೆಂದು ಸಿದ್ಧಮಾಡಿದ ಆಹಾರಪದಾರ್ಥ ಗಳನ್ನು ಒಬ್ಬ ಜಂಗಮನಿಗೆ ಕೊಟ್ಟದ್ದನ್ನು ಅವಳ ಗಂಡನು ನೋಡಿ ಬಹಳ ಕೋಪಗೊಂಡು ಅವಳನ್ನು ಬಹಳ ಹೊಡೆದು ಬಡಿದು ಮನೆಯ ಹೊರಗೆ ಹಾಕಿದನು. ಆಗ ಅವಳು ದುಃಖಿಸುತ್ತ ಬೀದಿಯಿಂದ ಹೋಗು ತ್ತಿರಲು ಮಧ್ಯದಲ್ಲಿ ಒಂದು ದೇವಾಲಯವನ್ನು ಕಂಡು ಅದು ಹರನ ಗುಡಿ ಎಂದು ತಿಳಿದು ಒಳಗೆ ಪ್ರವೇಶಿಸಿದಳು. ಆದರೆ ಅದು ಒಂದು ಚೈತ್ಯಾಲಯವಾಗಿತ್ತು. ದುಃಖದ ಭರದಲ್ಲಿ ಅವಳ ಕಣ್ಣಿಗೆ ಎಲ್ಲವೂ ಮಬ್ಬಾಗಿದ್ದು ಆವುದೂ ನಿಚ್ಚಳವಾಗಿ ಕಾಣುತ್ತಿದ್ದಿಲ್ಲ. ಅವಳು ದೇವಾ ಲಯವನ್ನು ಪ್ರವೇಶಿಸಿ ಅಲ್ಲಿಯ ಜಿನಮೂರ್ತಿಯು ಲಿಂಗವೆಂದು ಭಾವಿಸಿ ನಮಸ್ಕರಿಸಿದಳು. ಆಗ ಅವಳ ಭಾವನೆಯ ಮೂಲಕ ಆ ಮೂರ್ತಿಯು ಒಡೆದು ಹೋಗಿ ಅದರ ಸ್ಥಳದಲ್ಲಿ ಒಂದು ಲಿಂಗವು ಉದ್ಭವಿಸಿತು. ಅದೇ ವೈಜನಾಥ ಲಿಂಗವಾಯಿತು. ಗ್ರಾಮದಲ್ಲಿದ್ದ ಜೈನರು ಈ ಅದ್ಭುತ ವನ್ನು ಕಂಡು ವೈಜವ್ವೆಯು ಮಹಾತ್ಮಳೆಂದು ಭಾವಿಸಿ ಅವರೆಲ್ಲರೂ ಲಿಂಗಧಾರಿಗಳಾದರು.

ವೈಜವ್ವೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಅವಳು ಪುರಾತನಳು. ಅವಳು ವೀರಶೈವ ಚಳವಳಿಯ ಆರಂಭಕಾಲದಲ್ಲಿ ಇದ್ದಂತೆ ತೋರುತ್ತದೆ. ಬಹುಶಃ ಬಸವೇಶ್ವರನಕಿಂತಲೂ ಕೆಲಕಾಲ ಹಿಂದಿನವಳಿರಬಹುದು. ಆಗ ಜೈನ, ವೀರಶೈವ ಮತ್ತು ಬ್ರಾಹ್ಮಣ ಸಮಾಜಗಳಲ್ಲಿ ಮತಾಂತರಗಳು ಪರಸ್ಪರ ಬಹಳ ಹೆಚ್ಚಾಗಿ ಆಗುತ್ತಿ ದ್ದವು. ಆದ್ದರಿಂದಲೇ ವೈಜವ್ವೆಯ ತಂದೆಯು ಅವಳನ್ನು ಒಬ್ಬ ಜೈನ ನಿಗೆ ಕೊಟ್ಟು ಲಗ್ನ ಮಾಡಿದ್ದಾನೆ. ಇಂಥ ಉದಾಹರಣೆಗಳು ಹಿಂದಿನ ಕಾಲದಲ್ಲಿರುವ ಶಿವಶರಣರಲ್ಲಿ ಅನೇಕವಿರುತ್ತವೆ. ಆದರೆ ಬಸವೇ ಶ್ವರನ ಕಾಲದಲ್ಲಿ ಶಿವಶರಣರ ಉದಾರ ತತ್ವಗಳು ದೇಶದಲ್ಲಿ ಪ್ರಸಾ ರವಾಗುತ್ತ ಹೋದಹಾಗೆ ಕೆಲಕಾಲದ ಮೇಲೆ ಈ ಮೂರು ಸಮಾಜ ಗಳು ತೀರ ಭಿನ್ನ ಭಿನ್ನವಾದವೆಂದು ತೋರುತ್ತದೆ.

ಈ ಕಾಲದಲ್ಲಿ ಗೋದಾವರೀತೀರ ಪ್ರದೇಶದಲ್ಲಿ ಉರಿಲಿಂಗದೇವ, ಉರಿಲಿಂಗಪೆದ್ದಿ, ಕಾಳವ್ವೆ, ಕೋಲಂಬೆ ಮೊದಲಾದ ಶಿವಶರಣ ಶಿವ

ಶರಣೆಯರು ಆಗಿಹೋಗಿದ್ದಾರೆ. ಕುಂಬಾರ ಗುಂಡಯ್ಯನು ಇದ್ದ ಬಲ್ಲುಕಿ ಅಥವಾ ಭಾಲ್ಕಿ ಗ್ರಾಮವಾದರೂ ಈ ಪ್ರಾಂತಕ್ಕೆ ಸಮೀಪವಾಗಿಯೇ ಇದೆ. ಇದರಿಂದ ಶಿವಶರಣರ ತತ್ವಗಳು ಈ ಭಾಗದಲ್ಲೆಲ್ಲ ಪ್ರಸಾರವಾಗುತ್ತಲಿದ್ದದರಿಂದ ವೀರಶೈವ ಸಮಾಜದ ಉದಯವು ಈ ಉತ್ತರ ಭಾಗದಲ್ಲಿ ಉಂಟಾಗಿರುತ್ತದೆ.

ಈ ಭಾಗದಲ್ಲಾದ ಶಿವಶರಣ ಶರಣೆಯರಲ್ಲಿ ಕೆಲವರು ಕನ್ನಡ ವಚನಕಾರರಿದ್ದಾರೆ. ಈಗಲೂ ಇಲ್ಲಿಯ ಅನೇಕ ಗ್ರಾಮಗಳ ಹೆಸರುಗಳೂ ಕೂಡ ಕನ್ನಡವಿರುತ್ತವೆ. ಆದ್ದರಿಂದ ೧೧ನೇ ಮತ್ತು ೧೨ನೇ ಶತಮಾನಗಳಲ್ಲಿ ಈ ಗೋದಾವರೀ ತೀರ ಪ್ರದೇಶವು ೯ನೇ ಶತಮಾನದಲ್ಲಿ ಆಳಿದ ರಾಷ್ಟ್ರಕೂಟ ಅರಸನಾದ ನೃಪತುಂಗನ ಕಾಲದಲ್ಲಿದ್ದಂತೆ ಕನ್ನಡನಾಡಾಗಿತ್ತೆಂದು ತೋರುತ್ತದೆ.

ದೇವಿಯರ ತ್ರಿವಿದಿಯಲ್ಲಿ ಮೈಜವ್ವೆಯ ಉಲ್ಲೇಖವಿರುವದು ಹೇಗೆಂದರೆ:—

ರಾಜಾನ್ನದಡಿಗೆಯನ್ನಾ । ರ ಜೈನರಿಗುಣಿಸದೆ
ರಾಜಶೇಖರಗೆ ಉಣಿಸಿ ನಿತ್ಯವ ಪಡೆದ
ಮೈಜಕ್ಕವ್ವೆಯೆ ಶರಣಾಗು ॥

---

## ಏಕಾಂತದ ರಾಮಯ್ಯ.

ನಿಜಾಮನ ರಾಜ್ಯದಲ್ಲಿ ಕಲಬುರ್ಗಿ ಜಿಲ್ಲೆಯಲ್ಲಿ ಆಲ್ದಿ ಎಂಬ ಗ್ರಾಮವಿದೆ. ಅದು ಈಗ ಒಂದು ತಾಲೂಕಿನ ಸ್ಥಳವಾಗಿರುತ್ತದೆ. ಅದು ಸೊಲ್ಲಾಪುರ ಪಟ್ಟಣದ ಪೂರ್ವಕ್ಕೆ ೨೨ ಮೈಲುಗಳ ಮೇಲೆ ಇರುವ ಅಕ್ಕಲಕೋಟೆಯಿಂದ ೩೨ ಮೈಲು ದೂರವಿರುತ್ತದೆ. ಈ ಗ್ರಾಮದ ಪೂರ್ವದ ಹೆಸರು 'ಆಲಂದೆ' ಎಂಬುದಾಗಿತ್ತು.

ಈ ಆಲಂದೆ ಗ್ರಾಮದಲ್ಲಿ ವತ್ಸಗೋತ್ರದ 'ಪುರುಷೋತ್ತಮ ಭಟ್ಟ' ಎಂಬ ಹೆಸರಿನ ಬ್ರಾಹ್ಮಣನು ಅಲ್ಲಿಯ ಬ್ರಹ್ಮಪುರಿ ಅಂದರೆ ಬ್ರಾಹ್ಮಣರ ಕೇರಿಯಲ್ಲಿ ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು

ಸೀತಾದೇವಿಯು. ಅವರಿಗೆ ಮಕ್ಕಳಿದ್ದಿಲ್ಲ. ಅವರು ತಮ್ಮ ಗ್ರಾಮದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ಸೋಮನಾಥ ದೇವರಿಗೆ ೧ ಉಭಯ ದಂಪತಿಗಳು ತಮಗೆ ಒಬ್ಬ ಮಗನಾಗಬೇಕೆಂದು ಬೇಡಿಕೊಂಡು ಆ ದೇವರನ್ನು ಯಾವಾಗಲೂ ಪೂಜಿಸುವರು. ಹೀಗಿರಲು ಅವರಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ಅವರು 'ರಾಮ' ಎಂಬ ಹೆಸರನ್ನಿಟ್ಟರು.

ರಾಮನು ದೊಡ್ಡವನಾದ ಹಾಗೆ ಅವನಲ್ಲಿ ಶಿವಭಕ್ತಿಯು ಹೆಚ್ಚುತ್ತಲೇ ಬಂದಿತು. ಅವನು ನುಡಿದ ನುಡಿಯಲ್ಲಿ ಎಂದೂ ತಪ್ಪನು. ಹಿಡಿದ ಭಾಷೆಯನ್ನು ಬಿಡನು. ಅತ್ಯಂತ ನಿಸ್ಪೃಹವೃತ್ತಿಯುಳ್ಳವನು. ಶಿವಜ್ಞಾನಿಯಾಗಿ ಶಿವಯೋಗದಲ್ಲಿ ಯಾವಾಗಲೂ ನಿರತನು. ಅವನು ತನ್ನ ಶಿವಯೋಗಾಚರಣೆಯನ್ನು ಪಾಲಿಸುತ್ತ ಏಕಾಂತದಲ್ಲಿ ಧ್ಯಾನಮಗ್ನನಾಗಿ ಕಾಲಕಳೆಯುವನು. ಅವನ ಈ ಅಚಲವಾದ ಗುಪ್ತಭಕ್ತಿಯನ್ನು ಜನರು ನೋಡಿ ಅವನನ್ನು 'ಏಕಾಂತದ ರಾಮಯ್ಯ'ನೆಂಬ ಹೆಸರಿನಿಂದ ಕರೆಯಹತ್ತಿದರು. ಈ ಹೆಸರಿನಿಂದಲೇ ಅವನು ನಾಡಿನಲ್ಲಿ ಪ್ರಸಿದ್ಧನಾದನು.

ಆಲಂದೆ ಗ್ರಾಮದಲ್ಲಿ ಏಕಾಂತದ ರಾಮಯ್ಯನು ಶಿವಯೋಗಾಚರಣೆಯಲ್ಲಿ ಕಾಲಕಳೆಯುತ್ತಿರಲು ಅವನ ಮನಸ್ಸಿನಲ್ಲಿ ಶಿವಶರಣರು ತಮ್ಮ ಮಹಾತ್ಮೆಯನ್ನು ತೋರಿಸಿದ ಸ್ಥಳಗಳನ್ನು ನೋಡಬೇಕೆಂಬ ಕುತೂಹಲವು ಉಂಟಾಯಿತು. ಆಗ ಅವನು ಮೊದಲು ತನ್ನ ಗ್ರಾಮದಿಂದ ೩೬ ಮೈಲು ದೂರವಿರುವ ಕಲ್ಯಾಣ ಪಟ್ಟಣಕ್ಕೆ ಹೋಗಿ ಅದಕ್ಕೆ ಸಮೀಪವಾಗಿದ್ದ 'ಶಿವಪುರ' ಎಂಬ ಗ್ರಾಮಕ್ಕೆ ಬಂದನು. ಅದು ಕಲ್ಯಾಣಕ್ಕೆ ಹೋಗಿಬರುವ ಶಿವಶರಣರ ಮುಖ್ಯ ಆವಾಸಸ್ಥಾನವಾಗಿತ್ತು. ಅಲ್ಲಿ ಅವನು ಶಿವಾನುಭವ ಗೋಷ್ಠಿಯಲ್ಲಿ ಕೆಲಕಾಲವಿದ್ದು ಅಲ್ಲಿಂದ ದಕ್ಷಿಣ ದೇಶಕ್ಕೆ ಹೊರಟು, ಅಲ್ಲಲ್ಲಿಯ ಶಿವಶರಣರನ್ನು ಕಾಣುತ್ತ 'ಪುಲಿಗೆರೆ' ಅಂದರೆ ಈಗಿನ ಲಕ್ಷ್ಮೇಶ್ವರಕ್ಕೆ ಬಂದನು. ಅದು ಸೋಮಯ್ಯನ ಸ್ಥಾನವು. ಅಲ್ಲಿ ಅವನಿಂದುಂಟಾದ 'ಹುಲಿಗೆರೆಯ ಸೋಮನಾಥ'ನನ್ನು ಸಂದರ್ಶಿಸಿ

(೧, ಸೋಮನಾಥ ದೇವಾಲಯವನ್ನು ಉಲ್ಲೇಖಿಸುವ ಶಿಲಾಶಾಸನವು ಈ ಗ್ರಾಮದಲ್ಲಿ ಈಗಲೂ ಇದೆ. ಡಾ॥ ದೇಸಾಯಿ ಪಾಂಡುರಂಗರಾವ ಇವರ ಲೇಖನವನ್ನು ಶರಣ ಸಾಹಿತ್ಯ ೪-೫, ೬-೧೨೮ ರಲ್ಲಿ ನೋಡಿರಿ )

ಅಲ್ಲಿಂದ ಹೊರಟು ಅನೇಕ ಶಿವಶರಣರು ವಾಸಮಾಡುತ್ತಿದ್ದ ಬನವಾಸಿ ಪ್ರಾಂತದ ಕಡೆಗೆ ಹೊರಟನು. ಈ ನಾಡಿನಲ್ಲಿ ಬಳ್ಳಿಗಾವಿ, ಅಲ್ಲದೆ ಬನವಾಸಿಯ ಈಶಾನ್ಯ ದಿಕ್ಕಿಗೆ ೨೪ ಮೈಲುಗಳ ಮೇಲೆ ಇರುವ 'ರೇವಣಸಿದ್ಧಗಿರಿ' ಮುತ್ತಿಗಿ, ಹಿರೇಜಂಬೂರು ಇವೇ ಮೊದಲಾದ ಶಿವಶರಣರ ಕ್ಷೇತ್ರಗಳನ್ನು ಸಂದರ್ಶಿಸಲು ಹೊರಟು ಮಾರ್ಗದಲ್ಲಿ ಪುಲಿಗೆರೆಯಿಂದ ದಕ್ಷಿಣಕ್ಕೆ ४೦ ಮೈಲುಗಳ ಮೇಲಿರುವ ಅಬ್ಬಲೂರು ಎಂಬ ಗ್ರಾಮವಿದ್ದು ಅಲ್ಲಿಗೆ ಬಂದನು. ಈ ಗ್ರಾಮವು ಬನವಾಸಿ ಪಟ್ಟಣದ ಪೂರ್ವ ದಿಕ್ಕಿಗೆ ೨೪ ಮೈಲು ದೂರವಿರುತ್ತದೆ.

ಅವನು ಈ ಅಬ್ಬಲೂರು ಗ್ರಾಮವನ್ನು ಪ್ರವೇಶಿಸಲಾಗಿ ಅಲ್ಲಿ ಎಲ್ಲೆಲ್ಲಿಯೂ ಜೈನರ ಸಂಚಾರವೂ ಅವರ ಬಸದಿಗಳೂ ಕಂಡುಬಂದವು. ಅಲ್ಲಿ ಶಿವಭಕ್ತರಾರೂ ಅವನಿಗೆ ಕಾಣಬರಲಿಲ್ಲ. ಅವನು ಆ ದಿನ ಗ್ರಾಮದಲ್ಲಿ ಬಿಡಾರಬಿಡಬೇಕೆಂದು ಯೋಚಿಸಿ ಶಿವಾಲಯವನ್ನು ಹುಡುಕುತ್ತ ಹೊರಟನು. ಹೀಗೆ ಹೋಗುವಲ್ಲಿ ಮಾರ್ಗದಲ್ಲಿ ಒಂದು ಶಿವಾಲಯವು ಅವನ ದೃಷ್ಟಿಗೆ ಬಿದ್ದಿತು. ಅದನ್ನು ನೋಡಿ ಅವನು ಅದರ ಪ್ರವೇಶ ಮಾಡಿದನು.

ಅವನು ಒಳಗೆ ಪ್ರವೇಶಿಸಲಾಗಿ ಅದು 'ಬ್ರಹ್ಮೇಶ್ವರ ದೇವಾಲಯ' ವಿರುತ್ತದೆಂದು ಅವನಿಗೆ ತಿಳಿದುಬಂದಿತು. ಗರ್ಭಗುಡಿಯೊಳಗೆ ಹೋಗಿ ನೋಡುತ್ತಾನೆಯೇ ಒಳಗಿದ್ದ ಶಿವಲಿಂಗಕ್ಕೆ ಅರ್ಚನೆ ಪೂಜಾದಿ ಕಾರ್ಯಗಳು ಯಾವವೂ ನಡೆದಂತೆ ತೋರಲಿಲ್ಲ. ದೇವಾಲಯದಲ್ಲಿ ಎಲ್ಲೆಲ್ಲಿಯೂ ಕಸವೂ ದೂಳೂ ತುಂಬಿಹೋಗಿದ್ದವು. ರಾಮಯ್ಯನು ಅದನ್ನು ನೋಡಿ ಖಿನ್ನಮನಸ್ಕನಾಗಿ ದೇವಾಲಯವನ್ನೆಲ್ಲ ಶುಚಿಮಾಡಿ ನಿಟ್ಟುಸಿರುಬಿಡುತ್ತ ಉಮ್ಮಳಿಸುತ್ತ ಲಿಂಗದ ಪೂಜೆ ಮಾಡಬೇಕೆಂದು ಪುಷ್ಪಗಳನ್ನು ತರಲು ಹೊರಗೆಹೊರಟನು. ಅಷ್ಟರಲ್ಲಿ ಸಂಕರಗೌಡನೆಂಬ ಗ್ರಾಮದ ಜೈನ ಅಧಿಪತಿಯು ಕೆರಹುಗಾಲಿನಿಂದ ಗಳಗಳನೆ ಒಳಗೆ ಬಂದು ಮಧ್ಯ ಗುಡಿಯಲ್ಲಿ ಬಂದು ನಿಂತನು. ಆಗ ಏಕಾಂತದ ರಾಮಯ್ಯನು ಕ್ರೋಧಾವಿಷ್ಟನಾಗಿ ಅವನಿಗೆ— ಶಿವದ್ರೋಹಿಯೇ, ಹೀಗೆ ನೀನು ಕೆರಹುಗಾಲಿನಿಂದ ಶಿವಾಲಯದ ಒಳಗೆ ಪ್ರವೇಶಿಸಬಹುದೇ? ಎಂದು ನುಡಿಯಲು, ಜೈನನು—ಗೊರವನೇ, ಇಲ್ಲೆಲ್ಲಿಯ ನಿನ್ನ ಶಿವನು; ಅವನಾರು?

ಬೊಗಳದಿರು. ಜಿನನೇ ದೈವವು. ಶಿವನೆಂಬುದು ಸುಳ್ಳು. ಆ ನಿನ್ನ ಶಿವನು ಯಾರಿಗೆ ಏನು ಕೊಟ್ಟಿದ್ದಾನೆ? ಎಂದು ನುಡಿದನು. ಅದಕ್ಕೆ ಏಕಾಂತದ ರಾಮಯ್ಯನು— ಎಲೋ ಕುನ್ನಿಯೇ, ಪಂವಳಗೆಯಲ್ಲಿ ಶಿವನು ವೈಜವ್ವೆಗೋಸ್ಕರ ಜಿನನನ್ನು ಒಡೆದು ಲಿಂಗವನ್ನಾಗಿ ಮಾಡಿ ವೈಜನಾಥನಾದನೆಂಬುದು ನಿನಗೆ ಗೊತ್ತಿಲ್ಲವೇ? ಹುಲಿಗೆರೆಯಲ್ಲಿ ಸೋಮಯ್ಯನಿಗೋಸ್ಕರ ಶಿವನು ಜಿನನಲ್ಲಿ ಮೂಡಿ ಸೋಮನಾಥನಾದ ನೆಂಬುದನ್ನು ನೀನು ಅರಿಯೆಯಾ? ಪೊಟ್ಟಲಕೆರೆಯಲ್ಲಿ ದೇವರ ದಾಸಿಮಯ್ಯನಿಗೆ ಶಿವನು ಲಿಂಗವಾಗಿ ತೋರಿ ಅವನಿಗೆ ತವನಿಧಿಯನ್ನು ಕೊಟ್ಟಿದನ್ನು ಅರಿಯೆಯಾ? ಎಂದು ಕೇಳಿದನು. ಅದಕ್ಕೆ ಆ ಜೈನನು— ಆ ಹಿಂದಿನವರ ಕಥೆಗಳನ್ನು ನನಗೆ ಹೇಳಬೇಡ. ಈಗ ನೀನು ನಿನ್ನ ತಲೆಯನ್ನು ಕತ್ತರಿಸಿಕೊಂಡು ಅದನ್ನು ಮರಳಿ ಪಡೆದರೆ ನಿನ್ನ ಶಿವನು ನಿಜವೆಂದು ನಾನು ನಂಬುತ್ತೇನೆ. ಹಾಗೆ ಮಾಡಿದಲ್ಲಿ ನಮ್ಮ ಗ್ರಾಮದ ಬಸದಿಯಲ್ಲಿಯ ಜಿನಮೂರ್ತಿಯನ್ನು ತೆಗೆದುಹಾಕಿ ಅದರ ಸ್ಥಳದಲ್ಲಿ ಲಿಂಗವನ್ನು ನಾವು ಸ್ಥಾಪಿಸುವೆವು ಎಂದು ಹೇಳಿದನು. ಅದಕ್ಕೆ ರಾಮಯ್ಯನು— ಇದು ನಿಜವೇ? ಹಾಗಾದರೆ ನನ್ನ ಕತ್ತನ್ನು ಕತ್ತರಿಸಿಕೊಳ್ಳಲು ಒಪ್ಪುತ್ತೇನೆ. ಆದರೆ ಜಿನಮೂರ್ತಿಯನ್ನು ತೆಗೆದು ಅದರ ಸ್ಥಳದಲ್ಲಿ ಲಿಂಗವನ್ನು ಪ್ರತಿಷ್ಠಿಸುವೆವೆಂದು ನೀವು ಒಂದು ಭಾಷಾಪತ್ರವನ್ನು ನನಗೆ ಬರೆದುಕೊಡಬೇಕು. ಇದಕ್ಕೆ ಒಪ್ಪುವಿರೋ ಎಂದು ಕೇಳಲು, ಅಷ್ಟರಲ್ಲಿ ಅಲ್ಲಿ ನೆರೆದಿದ್ದ ಜೈನರು ಅದಕ್ಕೆ ಒಪ್ಪಿ ಆ ರೀತಿಯಾಗಿ ಅವರು ಏಕಾಂತದ ರಾಮಯ್ಯನಿಗೆ ಒಂದು ಓಲೆಯನ್ನು ಬರೆದುಕೊಟ್ಟರು.

ಏಕಾಂತದ ರಾಮಯ್ಯನು ತನ್ನ ಕತ್ತನ್ನು ಕತ್ತರಿಸಿ ಪುನಃ ಅದನ್ನು ಪಡೆಯುವನೆಂಬ ಸುದ್ದಿಯು ಸುತ್ತಲಿನ ಗ್ರಾಮಗಳಲ್ಲಿ ಹಬ್ಬಿತು. ಆಗ ಈ ಕೌತುಕವನ್ನು ನೋಡಬೇಕೆಂದು ಅಸಂಖ್ಯ ಜನ ಭಕ್ತರೂ ಜೈನರೂ ಪಟ್ಟಣಕ್ಕೆ ಬಂದು ದೇವಾಲಯದ ಮುಂದೆ ನೆರೆದರು. ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾದ ಅಗ್ಗವಣೆಯ ಹೊನ್ನಯ್ಯನೂ ಕೂಡ ಅಲ್ಲಿಗೆ ಬಂದಿದ್ದನು.

ಹೀಗೆ ಜನರು ನೆರೆಯಲು ಏಕಾಂತದ ರಾಮಯ್ಯನು ವೀರಗಾಸೆಯನ್ನುಟ್ಟು, ಹಣೆಯಲ್ಲಿ ಭಸಿತವನ್ನಿಟ್ಟು, ನೆರೆದ ಮಹೇಶ್ವರರಿಗೆ

ನಮಿಸಿ— ನನ್ನ ಶಿರವನ್ನು ಪರಮಾತ್ಮನಿಗೆ ಅರ್ಪಿಸಿ ಅವನ್ನು ಅವನಿಂದ ಪಡೆದು ಶಿವಮತದ ಶ್ರೇಷ್ಠತೆಯನ್ನು ಬೆಳಗುವೆನು ಎಂದು ಉಚ್ಚರಿಸುತ್ತ, ಶಿವನನ್ನು ಧ್ಯಾನಿಸುತ್ತ ತನ್ನ ಶಿರವನ್ನು ಕತ್ತರಿಸಿ ಪರಮಾತ್ಮನಿಗರ್ಪಿಸಿದನು. ಆಗ ಅಗ್ಗವಣಿಯ ಹೊನ್ನಯ್ಯನು ಆ ಸಿರವನ್ನು ತನ್ನ ಕಯ್ಯಲ್ಲಿ ಹಿಡಿದು ಮುಂಡಕ್ಕೆ ಹಚ್ಚುವಷ್ಟರಲ್ಲಿ ನೆರೆದ ಜೈನರು— ಇದು ಕೃತಕವು. ಮದ್ದು ಮಂತ್ರ ಮಹೇಂದ್ರ ಜಾಲವು. ಇದು ಸುಳ್ಳು. ಆದರೆ ಇನ್ನೇಳು ದಿನಗಳ ವರೆಗೆ ಈ ತಲೆಯನ್ನು ನೀವು ಹೀಗೆಯೇ ಇಟ್ಟು ಆಮೇಲೆ ಮುಂಡಕ್ಕೆ ಹತ್ತಿಸಿದರೆ ನಾವು ಒಪ್ಪುತ್ತೇವೆ. ಆಗ ನಾವು ನಮ್ಮ ಜಿನದೇವತೆಯನ್ನು ತ್ಯಜಿಸುವೆವು, ಎಂದೆನ್ನಲು ಶಿವ ಶರಣನಾದ ಅಗ್ಗವಣಿಯ ಹೊನ್ನಯ್ಯನು— ಹಾಗೆಯೇ ಆಗಲಿ ಎಂದು ನುಡಿದು, ಅವನು ಆ ತಲೆಯನ್ನು ಒಂದು ಹರಿವಾಣದಲ್ಲಿ ವಿಭೂತಿಯೊಡನೆ ಇಟ್ಟು, ಅದರಮೇಲೆ ಪಾದೋದಕವನ್ನು ತಳಿದು ಏಳು ದಿನಗಳ ವರೆಗೆ ಅಲ್ಲಿಯೇ ಇಟ್ಟನು. ಮುಂದೆ ಏಳು ದಿನಗಳಾದ ಮೇಲೆ ಹೊನ್ನಯ್ಯನು ಆ ಸಿರವನ್ನು ಮುಂಡಕ್ಕೆ ಹಚ್ಚಲು ಏಕಾಂತದ ರಾಮಯ್ಯನಿಗೆ ಪ್ರಾಣವು ಬಂದು ಅವನು ಎದ್ದು ನಿಂತನು. ಅದನ್ನು ನೆರೆದ ಜನರು ನೋಡಿ ವಿಸ್ಮಿತರಾಗಿ ಶಿವನ ಮಹಿಮೆಯನ್ನು ಹೊಗಳುವವರಾದರು.

ಏಕಾಂತದ ರಾಮಯ್ಯನಿಗೆ ಹಾಗೆ ಪ್ರಾಣವು ಬಂದದ್ದನ್ನು ನೋಡಿ ಜೈನರು ತಮ್ಮ ಜಿನನಿಗೆ ಇನ್ನುಮೇಲೆ ಪ್ರಳಯವಾಗುವದೆಂದು ಭಯಭೀತರಾದರು. ಆಗ ಭಕ್ತರು ಕಯ್ಯಲ್ಲಿ ಖಡ್ಗಗಳನ್ನು ಹಿಡಿದುಕೊಂಡು ಇದಿರ್ಗೊಂಡ ಜೈನರನ್ನು ಸಂಹರಿಸುತ್ತ ಬಸದಿಯನ್ನು ಪ್ರವೇಶಿಸಿದರು. ಮತ್ತು ಅಲ್ಲಿದ್ದ ಜಿನಮೂರ್ತಿಯನ್ನು ಒಡೆದು ಬತ್ತಲೆ ಬೊಂಬೆಗಳನ್ನು ಕಿತ್ತುಹಾಕಿದರು. ಆಮೇಲೆ ರಾಮಯ್ಯನು ಒಂದು ಶ್ರೇಷ್ಠತರವಾದ ಲಿಂಗವನ್ನು ಆ ಜಿನನ ಸ್ಥಳದಲ್ಲಿ ಪ್ರತಿಷ್ಠಿಸಿದನು. ಹೀಗಾದ ಬಳಿಕ ಭಕ್ತ ಜನರೆಲ್ಲರೂ ರಾಮಯ್ಯನನ್ನು ಹೊಗಳುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೋಗುವವರಾದರು.

ಹೀಗೆ ಜಿನಾಲಯದಲ್ಲಿ ಲಿಂಗವನ್ನು ಪ್ರತಿಷ್ಠಿಸಿದ ಬಳಿಕ ಆ ಲಿಂಗಕ್ಕೆ 'ವೀರಸೋಮೇಶ'ನೆಂಬ ಹೆಸರು ಪ್ರಾಪ್ತವಾಯಿತು.

ಈ ಎಲ್ಲ ವಿವರಗಳು ಅಬಲೂರು ಗ್ರಾಮದಲ್ಲಿರುವ ಸೋಮನಾಥ ದೇವಾಲಯದ ಗೋಡೆಯಲ್ಲಿ ಈಗಲೂ ಇರುವ ಶಿಲಾಶಾಸನದಲ್ಲಿ ಲಿಖಿಸಲ್ಪಟ್ಟಿರುತ್ತವೆ. ೧ ಅವುಗಳನ್ನು ನಾವು ಮುಖ್ಯವಾಗಿ ಇಟ್ಟುಕೊಂಡು ಅವುಗಳಿಗೆ ವಿರೋಧವಲ್ಲದ ಸಂಗತಿಗಳನ್ನು ಬೇರೆ ಪುರಾಣ ಗ್ರಂಥಗಳಿಂದ ಎತ್ತಿ ಇಲ್ಲಿ ತೆಗೆದುಕೊಂಡಿರುತ್ತೇವೆ. ಈ ಶಿಲಾಶಾಸನದಲ್ಲಿ ಮುಂದೆ ಕಾಣಿಸಿದ ಐತಿಹಾಸಿಕ ಸಂಗತಿಗಳು ಹೇಳಲ್ಪಟ್ಟಿವೆ.

ಹೀಗೆ ಏಕಾಂತದ ರಾಮಯ್ಯನು ದೇವಾಲಯದಲ್ಲಿದ್ದ ಜಿನಪ್ರತಿಮೆಯನ್ನು ತೆಗೆದುಹಾಕಿದ ಬಳಿಕ ನಾಡಿನಲ್ಲೆಲ್ಲ ಹೀಗೆಯೇ ಮುಂದೆ ಜಿನಪ್ರಳಯವಾಗುವದೆಂದು ಜೈನರು ಭೀತಿಯುಳ್ಳವರಾಗಿ ಅವರು ಬಿಜ್ಜಳ ನೃಪನ ಕಡೆಗೆ ಹೋಗಿ ರಾಮಯ್ಯನು ಮಾಡಿದ ಈ ಕೃತ್ಯಗಳನ್ನು ಕುರಿತು ಬಹಳ ಹೆಚ್ಚಾಗಿ ಅವನ ಮುಂದೆ ದೂರು ಹೇಳಿದರು. ಬಿಜ್ಜಳನು ಈ ವೃತ್ತಾಂತವನ್ನು ಕೇಳಿ ಕುಪಿತನಾಗಿ ಏಕಾಂತದ ರಾಮಯ್ಯನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನಿಗೆ— ನೀನಿದೇನು ಮಾಡಿದೆ? ನೀನು ಹೀಗೇಕೆ ಮಾಡಿದೆ? ಎಂದು ಕೇಳಲು ಅವನು ಜೈನರು ತನಗೆ ಬರೆದುಕೊಟ್ಟ ಭಾಷಾಪತ್ರವನ್ನು ಅವನ ಮುಂದಿರಿಸಿ ಅವನಿಗೆ— ಈ ಓಲೆಯು ನಿನ್ನ ಭಾಂಡಾರದಲ್ಲಿರಲಿ. ಜೈನರು ಒಪ್ಪಿದಲ್ಲಿ ಈಗಲೂ ಸಹ ನಾನು ನನ್ನ ತಲೆಯನ್ನು ಪುನಃ ಕತ್ತರಿಸಿಕೊಂಡು ಅದನ್ನು ಪಡೆಯುವೆನು. ಆದರೆ ನಾನು ಹೀಗೆ ಪಡೆದದಾದರೆ ಜೈನರು ಈ ನಾಡಿನಲ್ಲಿರುವಂಥ ಆನೆಸೆಜ್ಜೆ ಬಸದಿ ಮೊದಲಾದ ಎಂಟುನೂರು ಬಸದಿಗಳನ್ನು ಪಣವಾಗಿ ಒಡ್ಡಿ ಅವುಗಳಲ್ಲಿರುವ ಜಿನಪ್ರತಿಮೆಗಳ ಬದಲಾಗಿ ಶಿವಲಿಂಗಗಳನ್ನು ಪ್ರತಿಷ್ಠಿಸುವೆವೆಂದು ಒಪ್ಪಿಕೊಳ್ಳಬೇಕು ಎಂದು ಹೇಳಿದನು. ಅದಕ್ಕೆ ಬಿಜ್ಜಳನು ಈ ಕೌತುಕವನ್ನು ನೋಡಬೇಕೆಂದು ಆ ಬಸದಿಗಳ ಒಡೆಯರನ್ನು ತನ್ನಲ್ಲಿಗೆ ಬರಮಾಡಿಕೊಂಡು; ಅವರಿಗೆ— ನೀವು ನಿಮ್ಮ ಬಸದಿಗಳನ್ನು ರಾಮಯ್ಯನಿಗೆ ಹೀಗೆ ಪಣವಾಗಿ ಇಡಲು ಒಪ್ಪಿಕೊಂಡು; ಹಾಗೆ ಓಲೆಯನ್ನು ಬರಕೊಡುವಿರಾ ಎಂದು ಕೇಳಲು ಅದಕ್ಕೆ ಅವರು— ನಾವು ಈ ಮೊದಲಿಗೆ ಒಡೆದುಹೋದ ಬಸದಿಯ ವಿಷಯವಾಗಿ ದೂರು ಹೇಳಲು ಬಂದಿರು

---

(೧) ಅಬಲೂರು ಶಾಸನದ ಪೂರ್ಣವಿವರಗಳು ಶಿವಾನುಭವ ಸಂಚಿಕೆ ೩—೧೨-೮ ಇದರಲ್ಲಿ ಬಂದಿರುತ್ತವೆ.

ತ್ತೇವೆಯೋ ಹೊರ್ತು ಉಳಿದ ಬಸದಿಗಳನ್ನು ಪಣವಾಗಿಟ್ಟುಕೊಂಡು ಅವುಗಳಿಗೆ ಪ್ರಳಯ ಮಾಡಲು ಬಂದಿಲ್ಲ, ಎಂದು ಹೇಳಲು ಬಿಜ್ಜಳರಾಯನು ನಕ್ಕು— ನೀವಿನ್ನು ಹಿಂದಿರುಗಿ ಹೋಗಿರಿ ಎಂದು ಹೇಳಿ, ಏಕಾಂತದ ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟನು. ಇಷ್ಟೇಅಲ್ಲ, ಏಕಾಂತದ ರಾಮಯ್ಯನು ತೋರಿಸಿದ ನಿರತಿಶಯವಾದ ಮಾಹೇಶ್ವರ ಭಕ್ತಿ ಮತ್ತು ಸಾಹಸಗಳನ್ನು ಹೊಗಳಿ ಮೆಚ್ಚಿದವನಾಗಿ ಅವನು ಸ್ಥಾಪಿಸಿದ ವೀರ ಸೋಮನಾಥ ದೇವರ ಪ್ರಸಾದ, ಜೀರ್ಣೋದ್ಧಾರ, ಅಂಗಭೋಗ, ನೈವೇದ್ಯ ಇವುಗಳ ಸಲುವಾಗಿ ಬನವಾಸೆ ೧೨ ಸಾವಿರ ಪ್ರಾಂತದಲ್ಲಿರುವ ಗೋಗಾವೆ ಎಂಬ ಗ್ರಾಮವನ್ನು ಅವನ ಪಾದಪೂಜೆ ಮಾಡಿ ಅವನಿಗೆ ಉಂಬಳಿ ಹಾಕಿ ಕೊಟ್ಟನು. ಈ ಗೋಗಾವೆ ಗ್ರಾಮಕ್ಕೆ ಈಗ ಭೋಗಾವಿ ಎಂಬ ಹೆಸರಿದ್ದು ಅದು ಅಬ್ಬಲೂರಿನ ಉತ್ತರಕ್ಕೆ ೨ ಮೈಲುಗಳ ಮೇಲೆ ಇರುತ್ತದೆ.

ಅಬ್ಬಲೂರು ಶಿಲಾಶಾಸನದಿಂದ ಏಕಾಂತದ ರಾಮಯ್ಯನು ತನ್ನ ಮಹಾತ್ಮೆಯನ್ನು ಮೆರೆಯಿಸಿದ್ದು ಬಿಜ್ಜಳರಾಯನು ಇನ್ನೂ ಚಕ್ರವರ್ತಿಯಾಗಿರದೆ ಕೇವಲ ಮಹಾಮಂಡಲೇಶ್ವರ ಎಂದರೆ ಮಾಂಡಲಿಕನಾಗಿದ್ದಾಗ ಎಂದು ತಿಳಿದುಬರುತ್ತಿದೆ. ಅವನು ಮಾಂಡಲಿಕನಾಗಿದ್ದದ್ದು ೧೧೩೮ ರಿಂದ ೧೧೫೬ ರ ವರೆಗೆ ಮಾತ್ರ. ಈ ಅವಧಿಯ ಆರಂಭಕಾಲದಲ್ಲಿ ಅವನು ಕೆಲಕಾಲ ಮಂಗಳವಾಡದಲ್ಲಿಯೂ, ಆ ಮೇಲೆ ಬನವಾಸಿ ನಾಡಿನಲ್ಲಿಯೂ ಚಾಲುಕ್ಯರಾಜರಿಗೆ ಮಾಂಡಲಿಕನಾಗಿ ರಾಜ್ಯವಾಳಿದನೆಂದು ಇತಿಹಾಸದಿಂದ ತಿಳಿದುಬರುತ್ತಿದೆ. ಆದರೆ ಈ ಅವಧಿಯ ತರುವಾಯ ಅವನು ಪ್ರಬಲನಾಗಿ ೧೧೫೬ ರಿಂದ ೧೧೬೨ ವರೆಗೆ ನೂರ್ಮಡಿ ತೈಲಪ ತ್ರಿಭುವನಮಲ್ಲ ಚಾಲುಕ್ಯರಾಜನ ಸರ್ವಾಧಿಕಾರಿಯಾಗಿ ಬನವಾಸಿಯಲ್ಲಿಯೂ ಆ ಮೇಲೆ ೧೧೬೨ ರಿಂದ ೧೧೬೮ ವರೆಗೆ ಈ ಚಾಲುಕ್ಯರಾಜನನ್ನು ತಳ್ಳಿ ಚಕ್ರವರ್ತಿಯಾಗಿ ಕಲ್ಯಾಣಪಟ್ಟಣದಲ್ಲಿಯೂ ರಾಜ್ಯವಾಳಿದನು.

ಈ ಸಂಗತಿಗಳನ್ನೆಲ್ಲ ಲಕ್ಷಿಸಿದಲ್ಲಿ ಏಕಾಂತದ ರಾಮಯ್ಯನ ಮಹಾತ್ಮೆಯು ಘಟಿಸಿದ್ದು ಬಿಜ್ಜಳನು ಬನವಾಸಿಯಲ್ಲಿ ಮಾಂಡಲಿಕನಾಗಿ ಆಳುತ್ತಿದ್ದಾಗ ಅಂದರೆ ೧೧೫೬ ರ ಕಿಂತಲೂ ಸ್ವಲ್ಪ ಮೊದಲು ಇರಬಹು

ವೆಂಬ ಅನುಮಾನವು ಉಂಟಾಗುತ್ತದೆ. ಆದರೆ ಬಸವೇಶ್ವರನು ಕಲ್ಯಾಣ ಪಟ್ಟಣಕ್ಕೆ ಬಂದು ಧರ್ಮಕ್ರಾಂತಿಯನ್ನು ಮಾಡಿದ್ದು ಬಿಜ್ಜಳನು ಚಕ್ರವರ್ತಿಯಾದಾಗ್ಗೆ, ಅಂದರೆ ೧೧೫೬ ಅಥವಾ ೧೧೬೨ ರ ತರುವಾಯ. ಆದ್ದರಿಂದ ಏಕಾಂತದ ರಾಮಯ್ಯನ ಕ್ರಾಂತಿಯ ಪ್ರಾರಂಭವು ಬಸವೇಶ್ವರನಕಿಂತಲೂ ಸ್ವಲ್ಪ ಮೊದಲು ಆಗುತ್ತದೆ.

ಬಿಜ್ಜಳನು ೧೧೬೮ ರ ವರೆಗೆ ರಾಜ್ಯವಾಳಿದ ಬಳಿಕ ಅವನ ವಂಶಜರು ೧೧೮೨ ರ ವರೆಗೆ ರಾಜ್ಯವಾಳಿದರು. ಆಮೇಲೆ ಚಾಲುಕ್ಯವಂಶದ ಸಾರ್ವಭೌಮ ತೈಲಪನ ಮಗನಾದ ೪ನೇ ಸೋಮೇಶ್ವರನು ತನ್ನ ಸೇನಾನಾಯಕನಾದ ಬರ್ಮದೇವನ ಸಹಾಯದಿಂದ ಬಿಜ್ಜಳನ ವಂಶದ ಕಡೆಯ ಅರಸನನ್ನು ಪಟ್ಟದಿಂದ ತಳ್ಳಿ, ಮೊದಲು ಅಣ್ಣಿಗೇರಿಯಲ್ಲಿ, ಆಮೇಲೆ ಕಲ್ಯಾಣದಲ್ಲಿ ರಾಜ್ಯವಾಳಹತ್ತಿದನು. ಹೀಗೆ ಈ ರಾಜನಿಗೆ ಸಹಾಯ ಮಾಡಿದ್ದಕ್ಕಾಗಿ ಬರ್ಮದೇವನಿಗೆ 'ಚಾಳುಕ್ಯರಾಜ್ಯ ಪ್ರತಿಷ್ಠಾಪಕ'ನೆಂಬ ಹೆಸರು ಬಂದಿರುತ್ತದೆ. ಮೇಲೆ ಉಲ್ಲೇಖಿಸಿದ ಅಬ್ಬಲೂರು ಶಿಲಾಶಾಸನದಿಂದ ತಿಳಿದುಬರುವ ಬೇರೆ ಸಂಗತಿಗಳು ಆವವೆಂದರೆ:—

ಈ ಬರ್ಮದೇವ ಸೇನಾಪತಿಯೂ ರಾಜನಾದ ಸೋಮೇಶ್ವರನೂ ಸೆಲಿಯಹಳ್ಳಿಯಕೊಪ್ಪ ಎಂಬ ಗ್ರಾಮದಲ್ಲಿ ಬಿಡಾರ ಬಿಟ್ಟಾಗ್ಗೆ ಅವರು 'ಧರ್ಮಗೋಷ್ಠಿ'ಯನ್ನು ಅಲ್ಲಿ ನಡಿಸುತ್ತಾ ಇದ್ದರು. ಆಗ ಹಿಂದಿನವರೂ ನೂತನರೂ ಆದ ಶಿವಭಕ್ತರ ಗುಣಸ್ತವನವು ಅವರ ಮುಂದೆ ನಡಿಯುತ್ತಾ ಇದ್ದಿತು. ಆ ಸಮಯದಲ್ಲಿ ಸೋಮೇಶ್ವರ ರಾಜನು ಅಬ್ಬಲೂರಲ್ಲಿ ಏಕಾಂತದ ರಾಮಯ್ಯನು ನಡಿಸಿದ ಮಹಾತ್ಮೆಯನ್ನು ಕೇಳಿ, ಅವನಿಗೋಸ್ಕರ ಪೂಜ್ಯಭಾವವನ್ನು ತಾಳಿದವನಾಗಿ ಅವನನ್ನು ತಾನಿದ್ದ ಸೆಲಿಯಹಳ್ಳಿಯಕೊಪ್ಪಕ್ಕೆ ಬರಮಾಡಿಕೊಂಡನು. ಆಗ ಅವನನ್ನು ಪೂಜಿಸಿ, ಅವನು ಸ್ಥಾಪಿಸಿದ ವೀರಸೋಮನಾಥ ದೇವಾಲಯದ ಜೀರ್ಣೋದ್ಧಾರಕ್ಕೂ ಅಂಗಭೋಗ, ರಂಗಭೋಗ, ನೈವೇದ್ಯಕ್ಕೂ, ಉತ್ಸವಾದಿ ಪರ್ವಗಳಿಗೂ, ಅನ್ನದಾನ ವಿದ್ಯಾದಾನಕ್ಕೂ ಬನವಸೆ ಹನ್ನೆರಡು ಸಾವಿರ ಪ್ರಾಂತದಲ್ಲಿದ್ದ ಅಬ್ಬಲೂರು ಗ್ರಾಮವನ್ನು ಅದರ ಮೇಲಾಳಿಕೆ, ಮನ್ನೆಯ ಸುಂಕ, ದಂಡ ದೋಷ, ನಿಧಿ ನಿಕ್ಷೇಪ ಸಹವಾಗಿ ಧಾರಾಪೂರ್ವಕವಾಗಿ ರಾಮಯ್ಯನಿಗೆ ಉಂಬಳಿ ಹಾಕಿಕೊಟ್ಟನು.

ಈ ಚಾಲುಕ್ಯ ಸೋಮೇಶ್ವರನು ೧೧೮೧ ರಿಂದ ೧೧೮೯ ವರೆಗೆ ಆಳಿದ್ದರಿಂದ ಈ ವರ್ಷಗಳ ಮಧ್ಯದಲ್ಲಿ ಈ ಉಂಬಳಿಯು ಏಕಾಂತ ರಾಮೇಶ್ವರನಿಗೆ ದೊರಕಿರಬಹುದೆಂದು ತೋರುತ್ತದೆ. ಆಗ ಅವನು ಇನ್ನೂ ಜೀವಂತ ಇದ್ದನೆಂಬುದು ಸ್ಪಷ್ಟವು.

೧೧೮೯ ರ ಸುಮಾರಿನಲ್ಲಿ ದೇವಗಿರಿ ಯಾದವರಾಜನಾದ ಭಿಲ್ಲಮನು ಚಾಲುಕ್ಯ ರಾಜ್ಯವನ್ನು ಅಧಿಯೋಗಿಸಿ ಈಗಿನ ಕಲಬುರ್ಗಿ ಮತ್ತು ವಿಜಾಪುರ ಜಿಲ್ಲೆಗಳನ್ನು ಆಕ್ರಮಿಸಿದನು. ಆದ್ದರಿಂದ ಕಲ್ಯಾಣ ಚಾಲುಕ್ಯರ ರಾಜ್ಯವು ಅಂದಿನಿಂದ ಪೂರ್ಣವಾಗಿ ನಿಂತುಹೋಯಿತು.

ಇದರ ತರುವಾಯ ಅಬ್ಬಲೂರು ಇದ್ದ ಪ್ರದೇಶವನ್ನು ಕದಂಬ ರಾಜನಾದ ಕಾಮದೇವನು ಹಾನಗಲ್ಲನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಮಾಂಡಲಿಕನಾಗಿ ರಾಜ್ಯವಾಳುತ್ತಿದ್ದನು. ಅವನು ಒಂದುದಿನ ಅಬ್ಬಲೂರಿಗೆ ಬಂದಾಗ್ಗೆ ಅಲ್ಲಿ ಬಹು ಉನ್ನತವೂ ವಿಸ್ತಾರವೂ ಆದ ವೀರಸೋಮನಾಥನ ದೇವಾಲಯವನ್ನು ಕಂಡು ಏಕಾಂತದ ರಾಮಯ್ಯನು ನಡಿಸಿದ ಮಹಾತ್ಮ್ಯೆಯನ್ನು ತಿಳಿದು, ಅವನನ್ನು ತನ್ನ ರಾಜಧಾನಿಯಾದ ಹಾನಗಲ್ಲಿಗೆ ಕರೆದುಕೊಂಡು ಬಂದು, ಅವನ ಕೂಡ ಶಿವಗೋಷ್ಠಿಗಳನ್ನು ನಡಿಸಿ, ಅವನಿಗೆ ಹಾನುಗಲ್ಲು ಐದುನೂರು ಪ್ರಾಂತದಲ್ಲಿದ್ದ ಮಲ್ಲವಳ್ಳಿ ಎಂಬ ಗ್ರಾಮವನ್ನು ವೀರಸೋಮನಾಥ ದೇವರ ದೇಗುಲದ ಜೀರ್ಣೋದ್ಧಾರಕ್ಕೂ ದೇವರ ಅಂಗಭೋಗ ರಂಗಭೋಗ ನೈವೇದ್ಯಕ್ಕೂ ಉತ್ಸವಾದಿ ಪರ್ವಗಳಿಗೂ ಅನ್ನದಾನಕ್ಕೂ ರಾಮಯ್ಯನ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ದಾನಮಾಡಿಕೊಟ್ಟನು. ಈ ಮಲ್ಲವಳ್ಳಿಯು ಈಗ ಮುಂಡುಗೋಡ ಗ್ರಾಮದ ನೈಋತ್ಯ ದಿಕ್ಕಿಗೆ ಮೂರು ಮೈಲುಗಳ ಮೇಲೆ ಇದೆ.

ಕಾಮದೇವನ ಶಿಲಾಶಾಸನಗಳು ೧೧೮೮ ರಿಂದ ೧೨೧೧ ವರೆಗೆ ಉಪಲಬ್ಧವಿರುತ್ತವೆ. ಆದ್ದರಿಂದ ಈ ಅವಧಿಯ ಮಧ್ಯದಲ್ಲಿ ಆವುದೇ ಒಂದು ವರ್ಷ ಮೇಲೆ ಕಾಣಿಸಿದ ಸಂಗತಿಯು ಘಟಿಸಿರಬಹುದು. ಈ ಕಾಲದಲ್ಲಿಯೂ ಏಕಾಂತದ ರಾಮಯ್ಯನು ಜೀವಿಸಿದ್ದನು.

ಈ ಬನವಾಸಿ ಭಾಗವನ್ನು ಕೆಲವುಕಾಲ ಕೇಶಿರಾಜ ದಂಡನಾಯಕನೆಂಬುವನು ಆಳುತ್ತಿದ್ದನು. ಅವನು ಅಬ್ಬಲೂರಿಗೆ ಬಂದಾಗ್ಗೆ

ಏಕಾಂತರಾಮಯ್ಯನ ಮಹಾತ್ಮೆಯನ್ನು ತಿಳಿದುಕೊಂಡು ಅದರ ವಿವರವನ್ನು 'ಶರಣ' ಎಂಬವನಿಂದ ಈ ಶಿಲಾಶಾಸನದಲ್ಲಿ ತಿದ್ದಿ ಬರೆಯಿಸಿದನೆಂದು ತಿಳಿಯುತ್ತದೆ. ಇದು ಯಾವ ವರ್ಷ ಎಂಬುದು ಶಾಸನದಲ್ಲಿ ಹೇಳಿಲ್ಲ. ಆದರೆ ಈ ಕಾಲದಲ್ಲಿ ಏಕಾಂತದ ರಾಮಯ್ಯನು ಜೀವಿಸಿದ್ದನೆಂದು ತೋರುವದಿಲ್ಲ. ಹಿಂದಿನ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಈ ಶಾಸನವನ್ನು ಬರೆಯಿಸಿದವನು ಈ ಕೇಶರಾಜನೆಂದು ತೋರುತ್ತದೆ.

ಕದಂಬವಂಶದ ಕಾಮದೇವನ ತರುವಾಯ ಅದೇ ವಂಶದ ಮಲ್ಲಿದೇವನೆಂಬ ರಾಜನು ಈ ಭಾಗವನ್ನು ಆಳುತ್ತಿದ್ದನು. ಅವನು ಸಹ ಈ ದೇವಾಲಯಕ್ಕೆ ಉಂಬಳಿಯನ್ನು ಹಾಕಿಕೊಟ್ಟದ್ದು ಈ ಅಬ್ಬಲೂರು ಶಾಸನದಲ್ಲಿ ಹೇಳಿದೆ. ಅವನ ಶಾಸನಗಳು ೧೨೧೯ ರಿಂದ ೧೨೩೧ ವರೆಗೆ ಉಪಲಬ್ಧವಿವೆ. ಆದರೆ ಈ ಕಾಲದಲ್ಲಿ ಏಕಾಂತದ ರಾಮಯ್ಯನು ಜೀವಿಸಿದ್ದಿಲ್ಲೆಂದು ತೋರುತ್ತದೆ. ಶಿಲಾಶಾಸನದ ಅಕ್ಷರಗಳು ಇಲ್ಲಿಯು ಮುಂದೆ ಅಳಿಸಿ ಹೋಗಿರುವದರಿಂದ ಈ ಉಂಬಳಿ ಹಾಕಿದ ವರ್ಷವು ತಿಳಿಯುವದಿಲ್ಲ.

ಈ ಪ್ರಕಾರ ಏಕಾಂತದ ರಾಮಯ್ಯನು ಬಿಜ್ಜಳನು ೧೧೫೬ ಅಥವಾ ಅದಕ್ಕೂ ಸ್ವಲ್ಪ ಮೊದಲು ಬನವಾಸಿನಾಡಿನಲ್ಲಿ ಆಳಹತ್ತಿದಂದಿನಿಂದ ಸುಮಾರು ೪೦–೫೦ ವರ್ಷಗಳ ವರೆಗೆ ಜೀವಿಸಿ ತನ್ನ ಶಿವಯೋಗ ಸಾಮರ್ಥ್ಯವನ್ನು ಜನರಲ್ಲಿ ತೋರಿಸಿ ಪ್ರಸಿದ್ಧನಾಗಿದ್ದಾನೆ. ಈ ಕಾಲದಲ್ಲಿ ಅವನು ಅನೇಕ ರಾಜರಿಂದಲೂ ಸಾಮಂತರಿಂದಲೂ ಮನ್ನಣೆಯನ್ನು ಹೊಂದಿದ್ದಾನೆ. ಅವನು ಬಸವೇಶ್ವರನ ಸಮಕಾಲೀನನು. ಆದರೂ ಅವನು ಅವನಕಿಂತಲೂ ಸ್ವಲ್ಪಕಾಲ ಹಿಂದಿನವನು ಮತ್ತು ಅವನ ತರುವಾಯ ಸಹ ಅನೇಕ ವರ್ಷ ಜೀವಿಸಿದನು. ಈ ಕಾಲದಲ್ಲಿ ಅವನು ಈ ಭಾಗದಲ್ಲಿ ವೀರಶೈವ ಧರ್ಮವನ್ನು ವಿಸ್ತರಿಸಿರಲಿಕ್ಕೆಬೇಕೆಂಬ ಅನುಮಾನವು ಉಂಟಾಗುತ್ತದೆ.

ಏಕಾಂತದ ರಾಮಯ್ಯನ ಕಾಲದಲ್ಲಿ ಬಸವೇಶ್ವರನಕಿಂತಲೂ ಮೊದಲು ಅನೇಕ ಶಿವಶರಣರು ಆಗಿಹೋಗಿದ್ದುದು ಈ ಶಿಲಾಶಾಸನದಲ್ಲಿ ಬರ್ಮದೇವ ಮತ್ತು ಸೋಮೇಶ್ವರರಾಜ ಇವರಿಗೆ ಸಂಬಂಧಪಟ್ಟ ಉಲ್ಲೇಖಗಳಲ್ಲಿ ಬಂದಿರುತ್ತದೆ. ಇದನ್ನು ನಾವು ಲಕ್ಷಿಸತಕ್ಕದ್ದು. ಇದರಿಂದ ಬಸವೇಶ್ವರನಕಿಂತಲೂ ಮೊದಲು ಶಿವಶರಣರಿದ್ದುದು ಸ್ಪಷ್ಟವಾಗುತ್ತದೆ.

ಏಕಾಂತದ ರಾಮಯ್ಯನು ಉಚ್ಚಸ್ಥಿತಿಯನ್ನು ಹೊಂದಿದ ಶಿವಯೋಗಿಯಾಗಿದ್ದನು. ಅವನು ಹೊಂದಿದ ಈ ಸ್ಥಿತಿಯಲ್ಲಿ ಶಿವಯೋಗಿಯ ದೇಹವು ಬಯಲು ಸ್ವರೂಪವನ್ನು ಹೊಂದುತ್ತದೆಂದು ಶಿವಾನುಭವದ ತತ್ವವಿರುತ್ತದೆ. ಆಗ ಅವನು ತನ್ನ ಅಂಗಚೈತನ್ಯವನ್ನು ತನ್ನ ಧೀನದಲ್ಲಿಟ್ಟುಕೊಂಡು ತನ್ನ ಶರೀರ ಭಾಗಗಳು ಕತ್ತರಿಸಿಹೋದರೂ ಅವುಗಳನ್ನು ಅವನು ಸಮಪಡಿಸಿಕೊಳ್ಳುವ ಸಾಮರ್ಥ್ಯವು ಅವನಲ್ಲಿ ಬರುತ್ತದೆಂಬುದು ಅನೇಕ ಶಿವಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆ. ಇದನ್ನು ನಂಬುವದು ಅಥವಾ ಬಿಡುವದು ವಾಚಕರ ತಿಳಿವಳಿಕೆ ಮತ್ತು ವಿಶ್ವಾಸದ ಮೇಲೆ ಅವಲಂಬಿಸಿದೆ. ಆದರೆ ಐತಿಹಾಸಿಕ ದೃಷ್ಟಿಯಿಂದ ನಾವು ವಿಚಾರಮಾಡಿದಲ್ಲಿ ಏಕಾಂತದ ರಾಮಯ್ಯನು ಬನವಾಸಿನಾಡಿನಲ್ಲಿ ಅಂದರೆ ಈಗಿನ ಧಾರವಾಡ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಅನೇಕ ವರ್ಷ ಇದ್ದುಕೊಂಡು ವೀರಶೈವ ಧರ್ಮವನ್ನು ಇಲ್ಲಿ ಪ್ರಸಾರಗೊಳಿಸಿದನೆಂಬುದು ನಿರ್ವಿವಾದವಾಗಿರುತ್ತದೆ.

ಏಕಾಂತದ ರಾಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

ಏಕಾಂತದ ರಾಮಯ್ಯನು ವಚನಕಾರನೂ ಇದ್ದಾನೆ. ಇದರಿಂದ ಅವನು ಮೊದಲು ಬ್ರಾಹ್ಮಣನಾಗಿದ್ದರೂ ಶಿವಶರಣರ ನಡೆಯಂತೆ ನಡೆಯುತ್ತ ಶಿವಾನುಭವದ ತತ್ವಗಳನ್ನು ಬನವಾಸಿನಾಡಿನಲ್ಲಿ ಪ್ರಸಾರ ಮಾಡಿದ್ದಾನೆಂದು ನಾವು ಊಹಿಸಬೇಕಾಗುತ್ತದೆ. ಅವನ ಮುದ್ರಿಕೆಯು 'ಎನ್ನಯ್ಯ ಚೆನ್ನರಾಮೇಶ್ವರ' ಎಂದಿರುತ್ತದೆ. ಅವನ ಆರು ವಚನಗಳು ಮಾತ್ರ ನಮಗೆ ದೊರೆತಿರುತ್ತವೆ. ಅವುಗಳನ್ನೆಲ್ಲ ನಾವು ಕೆಳಗೆ ಕೊಟ್ಟಿದ್ದೇವೆ.

## ವಚನಗಳು.

(೧) ಮನ ಲಿಂಗದಲ್ಲಿ ನಿಂದಿತ್ತೆಂಬಲ್ಲಿ ಆ ಮನ ಲಿಂಗಕ್ಕೆ ನೆಲೆಯೋ, ಲಿಂಗ ಮನದ ಸಂಗಿಯೋ, ಎಂಬುದ ತಿಳಿದೆನೆಂಬುದು ಸಂಗಿಯೋ, ನಿಸ್ಸಂಗಿಯೋ? ಬೀಜದೊಳಗಿನ ತಿರುಳು ಭೇದಿಸಿ ಪುಟ್ಟಿವಲ್ಲಿ ಅದು ತನ್ನಯ ಸುನಾದದಿಂದವೋ, ಅಪ್ಪುವಿನ ಬಿಂದುವಿನ ಭೇದದಿಂದವೋ? ಈ ಉಭಯ ನೆಲೆ ಘಟಿಸಿದಲ್ಲಿ ಯೋಗಕೂಟವಾತ್ಮ

ಲಿಂಗ ಭೇದಯುಕ್ತಿ. ಭೇದಾಭೇದ ನಿಂದಲ್ಲಿ ಎನ್ನಯ್ಯ ಚನ್ನರಾಮುನ ಕೂಟದ ಬೆಳಗು.

(೨) ಸಿಲೆ ಹಲವು ತೆರದಲ್ಲಿ ಹೊಲಬಿಗರಿಗೆ ಹೊಲಬಿಗನಾಗಿ, ಒಲವರವಿಲ್ಲದೆ ಅವರವರ ಭಾವದಲ್ಲಿ ನಿಲುವುದು ಸಿಲೆಯೋ, ಮನವೋ? ಆ ನಿಜದ ನೆಲೆಯು ತಿಳಿವುದು ದರ್ಪಣದ ತನ್ನೊಪ್ಪದ ಭಾವ ಎನ್ನಯ ಚನ್ನರಾಮುನನರಿವಲ್ಲಿ.

(೩) ಕಲ್ಪಿತಾಂತರವನುಂಬುದು ಕಾಯುವೋ? ಜೀವನ ಜೀವ ವೆಂದೊಡೆ ನಿರ್ನಾಮಭೇದ. ಕಾಯುವೆಂದಡೆ ಅಚೇತನ ಘಟ. ಉಭಯ ಸಂಗ ಸಂಬಂಧವಾದಲ್ಲಿ ಎನ್ನಯ್ಯ ಚನ್ನರಾಮುನ ಭೇದ.

(೪) ಕಾಯು ಪಲವು ಭೇದಗಳಾಗಿ ಆತ್ಮನನೇಕವೆಂಬುದದೇತರ ಮಾತು? ಬೆಂಕಿಯಿಂದಾದ ಬೆಳಗು ಸುಡಬಲ್ಲುದೇ ಬೆಂಕಿಯುಲ್ಲದೆ? ಹಲವು ಘಟದಲ್ಲಿ ಅವರವರ ಹೊಲಬಿನಲ್ಲಿ ಅನುಭವಿಸುತ್ತ ಮತ್ತೊಂದರಲ್ಲಿಯು ಕೂಟಸ್ಥವಪ್ಪ ಸುಖ ಉಂಟೇ? ಈ ಗುಣ ಎನ್ನಯ್ಯ ಚನ್ನರಾಮುನ ನರಿದಲ್ಲಿ.

(೫) ಗುರುಭಕ್ತನಾದಲ್ಲಿ ಘಟಧರ್ಮವಳಿದು, ಲಿಂಗಭಕ್ತನಾದಲ್ಲಿ ಸಂಚಲವಳಿದು, ಜಂಗಮಭಕ್ತನಾದಲ್ಲಿ ತ್ರಿವಿಧಾಂಗ ಸಲೆಸಂದು, ಇಂತೀ ತ್ರಿವಿಧಭಕ್ತಿಯುಲ್ಲಿ ತ್ರಿಕರಣ ಶುದ್ಧನಾದಾತ್ಮಂಗೆ ಮರ್ತ್ಯಕ್ಕೆ ಕೈಲಾಸ ವೆಂಬ ಕಾಳು ಮಾಡಿಲ್ಲ. ಆತ ನಿತ್ಯಮುಕ್ತನೆನ್ನಯ್ಯ ಚನ್ನರಾಮುನಾಗಿ.

(೬) ಅಶನ ವ್ಯಸನ ಸರ್ವವಿಷಯಾದಿಗಳಲ್ಲಿ ಹುಸಿದು ಪಿಸುಣ ತ್ವದಿಂದ ಗಸಣಿಗೊಂಡು ಮಾಡಿಸಿಕೊಂಬುದು ಶದ್ಗುರುವಿಗೆ ಸಂಬಂಧ ವಲ್ಲ. ತಿಲರಸ ವಾರಿಯು ಭೇದದಂತೆ ಮಣಿಯೊಳಗಿದ್ದ ಸೂತ್ರದಂತೆ ಅಂಗವ ತೀರ್ಚಿ ಪಾಯ್ದು ನಿಂದ ಅಹಿಯು ಅಂಗದಂತೆ ಗುರುಸ್ಥಲ ಸಂಬಂಧ ಎನ್ನಯ್ಯ ಚನ್ನರಾಮೇಶ್ವರಲಿಂಗವನರಿಯುಬಲ್ಲಡೆ.

ಈ ವಚನಗಳಲ್ಲಿ ಏಕಾಂತದ ರಾಮಯ್ಯನು ಲಿಂಗಾಂಗಸಾಮರ ಸ್ಯದ ತತ್ವಗಳನ್ನು ವಿವೇಚಿಸಿದ್ದಾನೆ.

---

# ಗಜೇಶ ಮಸಣಯ್ಯ.

ಅಕ್ಕಲಕೋಟೆ ಸಂಸ್ಥಾನದಲ್ಲಿ ಕರಜಿಗೆ ಎಂಬ ಹೆಸರಿನ ಒಂದು ಗ್ರಾಮವಿರುತ್ತದೆ. ಅದು ವಿಜಾಪುರ ಪಟ್ಟಣದಿಂದ ಈಶಾನ್ಯಕ್ಕೆ ೬೦ ಮೈಲುಗಳ ಮೇಲೆ ಮತ್ತು ಸೊಲ್ಲಾಪುರ ಪಟ್ಟಣದಿಂದ ಆಗ್ನೇಯಕ್ಕೆ ೨೦ ಮೈಲುಗಳ ಮೇಲೆ ಇರುತ್ತದೆ. ಈ ಗ್ರಾಮದಲ್ಲಿ ಗಜೇಶ ಮಸಣಯ್ಯ ನೆಂಬ ಶಿವಶರಣನು ವಾಸಮಾಡುತ್ತಿದ್ದನು.

ಎಲ್ಲ ಶಿವಶರಣರಲ್ಲಿ ಕೆಲವೊಂದು ಶಿವಾನುಭವದ ವಿಶಿಷ್ಟ ಗುಣ ವಿರುತ್ತದೆ. ಇಷ್ಟಲಿಂಗದ ಪೂಜೆಯನ್ನು ಸತಿಪತಿ ಭಾವದಿಂದ ಮಾಡು ವದೇ ಗಣೇಶ ಮಸಣಯ್ಯನ ವೈಶಿಷ್ಟ್ಯವಾಗಿತ್ತು. ಇದರಿಂದ ಅವನು ಶ್ರೇಷ್ಠನಾದ ಶಿವಯೋಗಿ ಎಂದು ಜನರಲ್ಲಿ ಪ್ರಸಿದ್ಧನಾದನು. ಲಿಂಗ ಪೂಜೆಯನ್ನು ಮಾಡುವಲ್ಲಿ ಅವನು ಅದರಲ್ಲಿಯೇ ಮೈಮರೆದು ಬಿಡು ವನು. ಆಗ ಅವನಿಗೆ ಚಳಿ, ಮಳೆ, ಬಿಸಿಲು, ಗಾಳಿ ಇವಾವೂ ಭಾಸ ವಾಗುತ್ತಿರಲಿಲ್ಲ. ಹೊರಗಿನದರ ಅರಿವು ಅವನಿಗೆ ಏನೂ ಉಳಿಯುತ್ತಿ ದ್ದಿಲ್ಲ. ಆಗ ಸರ್ಪ, ವೃಶ್ಚಿಕ, ಭೂತ ಪಿಶಾಚಿಗಳು, ಕಾಡು ಮೃಗಗಳು ಅವನನ್ನು ಸಮೀಪಿಸಲು ಹಿಂಜರಿಯುತ್ತಿದ್ದವು.

ವೀರಶೈವನು ಗುರೂಪದೇಶದಿಂದ ಇಷ್ಟಲಿಂಗವನ್ನು ಪಡೆದು ಕೊಂಡು, ಗುರುವಿನಿಂದ ಅದರ ನೆಲೆಕಲೆಗಳನ್ನು ಅರಿತುಕೊಂಡು ತನ್ನ ಇಷ್ಟಲಿಂಗದಲ್ಲಿ ಧ್ಯಾನಮಗ್ನನಾಗಬೇಕು. ಇಂಥ ಧ್ಯಾನದಿಂದ ಪ್ರಾಣ ಲಿಂಗವು ಅವನಲ್ಲಿ ಅರಳುವದು. ಹೀಗಾಗಲು ಅದು ಅವನ ಹೃದಯ ಕಮಲಮಧ್ಯದಲ್ಲಿ ವಾಸಮಾಡಹತ್ತುತ್ತದೆ. ಆಗ ಆ ಭಕ್ತನು ನಡೆವಲ್ಲಿ, ನುಡಿವಲ್ಲಿ, ಹೊಂದುವಲ್ಲಿ, ಉಸಿರುವಲ್ಲಿ, ಕಾಣುವಲ್ಲಿ, ಕೇಳುವಲ್ಲಿ, ಲಿಂಗ ಚೈತನ್ಯವೇ ಅವನದಾಗುತ್ತದೆ. ಹೀಗೆ ಪ್ರಾಣಲಿಂಗವು ಅವನಲ್ಲಿ ತೊಳಗಿ ಬೆಳಗಹತ್ತಲು ಅವನ ಭಾವಲಿಂಗವೂ ಕೂಡ ಪ್ರಜ್ವಲಿಸಹತ್ತುತ್ತದೆ. ಅದು ಓಂಕಾರ ರೂಪಾಗಿದ್ದು ಅನೇಕ ಪ್ರಣವಗಳ ದ್ವಾರಾ ಅವನ ಅಂಗೋಪಾಂಗಗಳಲ್ಲಿ ಚಲಿಸಹತ್ತುತ್ತದೆ. ಹೀಗೆ ಇಷ್ಟ ಪ್ರಾಣ ಭಾವ ಲಿಂಗಗಳನ್ನು ಭಕ್ತನು ಗ್ರಹಿಸಿ, ಅವುಗಳಾಚೆ ಇರುವ ತ್ರಿವೇಣಿಸಂಗ ಮವನ್ನು ಪ್ರವೇಶಿಸಿ ಅಲ್ಲಿಂದ ಮುಂದೆ ಹೋಗಿ, ನಿಷ್ಕಳಲಿಂಗ ಆಮೇಲೆ ಶೂನ್ಯಲಿಂಗ ಆಮೇಲೆ ನಿಶ್ಶೂನ್ಯಲಿಂಗ, ಇವುಗಳಲ್ಲಿದ್ದುಕೊಂಡು ಕಡೆಗೆ

ಬಯಲಲ್ಲಿ ಬೆರೆಯುವನು. ಹೀಗೆ ಬೆರೆತುಹೋಗುವದೇ ಲಿಂಗಪೂಜೆಯ ಉದ್ದೇಶವಿರುತ್ತದೆ. ಇದೇ ಶಿವಯೋಗವೆನಿಸಿಕೊಳ್ಳುತ್ತದೆ. ಹಾಗೆ ಆಚರಿಸುವವನಲ್ಲಿ ಕ್ರಮೇಣ ವಿಶ್ವಶಕ್ತಿಯು ತಲೆದೋರುತ್ತದೆ. ಇಂಥವನಿಗೆ ಬಾಹ್ಯಪೀಡೆಗಳು ತಗಲಲಾರವು. ಹೀಗೆ ಲಿಂಗಪೂಜೆಯನ್ನು ಸಾಧಿಸಿದ ಶಿವಶರಣರು ಹಿಂದಿನ ಕಾಲದಲ್ಲಿ ಅನೇಕರು ಆಗಿಹೋಗಿದ್ದಾರೆ. ಇಂಥವರಲ್ಲಿ ಗಜೇಶ ಮಸಣಯ್ಯನು ಒಬ್ಬನಾಗಿದ್ದಾನೆ.

ಹೀಗೆ ಗಜೇಶ ಮಸಣಯ್ಯನು ಇರುವಲ್ಲಿ ಅವನು ಒಂದು ದಿವಸ ಗುರುದರ್ಶನವನ್ನು ಹೊಂದಬೇಕೆಂದು ತನ್ನ ಗ್ರಾಮವಾದ ಕರಿಜಿಗೆಯಿಂದ ಹೊರಟನು. ಅವನು ಹೋಗುತ್ತಿರುವಾಗ ದಾರಿಯಲ್ಲಿ ಅವನಿಗೆ ಒಂದು ಮಹಾನದಿಯು ಹತ್ತಿತು. ಅದರ ವಿಶಾಲ ಪಾತ್ರವೂ, ಅದರ ಸುತ್ತಲೂ ಮೆರೆಯುತ್ತಿದ್ದ ಬನಗಳೂ, ಪಕ್ಷಿಗಳೂ ,ಸುಂದರವಾದ ಸೃಷ್ಟಿಯ ನೋಟವೂ, ಅವನನ್ನು ಲಿಂಗ ಪೂಜೆಗೆ ಎಳೆಸಿತು. ಆಗ ಅವನು ಅಲ್ಲಿ ಒಂದು ಏಕಾಂತ ಸ್ಥಳವನ್ನು ಆಯ್ದು ಅಲ್ಲಿ ತಳಿರು ಹಾಸಿಕೆಯನ್ನು ಹಾಸಿ, ಲಿಂಗಪೂಜೆಯನ್ನು ಮಾಡುತ್ತ ಅದರಲ್ಲಿಯೇ ಮಗ್ನನಾದನು.

ಹೀಗಿರಲು ಆಕಾಶದಲ್ಲಿ ಮೋಡಗವಿಯಿತು. ಸ್ವಲ್ಪ ವೇಳೆಯಲ್ಲಿ ಗಗನವು ಇಬ್ಭಾಗವಾಗುವದೋ ಏನೋ ಅನ್ನುವಂತೆ ಮಳೆಯು ಭೋರ್ಗರೆಯಹತ್ತಿತು. ಮೂರು ಜಾವದ ವರೆಗೂ ಅದು ಒಂದೇಸವನೇ ಸುರಿಯಿತು. ಆದರೆ ಗಜೇಶ ಮಸಣಯ್ಯನಿಗೆ ಅದರ ಅರಿವು ಆವುದೂ ಇರಲಿಲ್ಲ. ಅವನ ಶರೀರದ ಮೇಲೆ ಮಳೆ ಹನಿಗಳ ಬಲವಾದ ಹೊಡೆತಗಳು ಬೀಳುತ್ತಿದ್ದವು. ಅವನ ವಸ್ತ್ರಗಳು ನೆನೆದು ಹೋದವು. ಆದರೆ ಚಳಿಯೂ ಗಾಳಿಯೂ ಅವನಿಗೆ ಏನೂ ಅನಿಸಲಿಲ್ಲ. ಅವನು ಆ ಸ್ಥಳದಿಂದ ಕದಲಲಿಲ್ಲ. ಲಿಂಗಧ್ಯಾನದಲ್ಲಿ ಮಗ್ನನಾಗಿ ನಿಬ್ಬೆರಗಾಗಿ ಕುಳಿತು ಬಿಟ್ಟಿದ್ದನು. ಹೀಗೆ ಮೂರು ಜಾವಗಳು ಸಂದಿ ಹೋದವು. ಆಗ ನದಿಯ ನೀರು ಏರುತ್ತ ಏರುತ್ತ ಬಂದಿತು. ಅದು ಅವನ ಮೇಲೆ ಮುಸುಕಿ ಬರಹತ್ತಿತು. ಆದರೆ ಬಾಹ್ಯ ಸೃಷ್ಟಿಯು ಇಂಥ ಶಿವಯೋಗಿಗೆ ಏನು ಮಾಡಬಲ್ಲದು? ನದಿಯ ಹರಿಯುವ ನೀರು ಅವನನ್ನು ಸಮೀಪಿಸದೆ ಅವನ ಮಗ್ಗುಲಿನಿಂದ ಹಾಯ್ದು ಹೋಗಹತ್ತಿತು. ಮಸಣಯ್ಯನಲ್ಲಿದ್ದ ಲಿಂಗಶಕ್ತಿಯು ಅದನ್ನು ಬೇರೆ ಕಡೆಗೆ ನೂಕಿಬಿಟ್ಟಿತು. ಮುಂದೆ ಸ್ವಲ್ಪ

ಹೊತ್ತಿನಲ್ಲಿ ನದಿಯ ನೀರು ಹೆಚ್ಚೆಚ್ಚಾಗಿ ಬರಲು, ಅದು ಅವನ ಮೇಲೆ ಹಾಯ್ದು ಹೋಗದೆ ಅವನ ಹಿಂದೆ ಬಂದ ಕೂಡಲೆ ಅದು ಒಡೆದು ಇಬ್ಭಾಗವಾಗಿ ಅವನ ಸುತ್ತಲೂ ಎರಡು ಟಿಸಿಲುಗಳಾಗಿ ಹರಿದು ಹೋಗಿ, ಮುಂದೆ ಅವು ಪುನಃ ಕೂಡಿ ಹರಿದು ಹೋಗುತ್ತಿದ್ದವು. ಹೀಗೆ ನದಿಯು ತಾಳಮರದುದ್ದವಾಗಿ ಹರಿಯುತ್ತಿದ್ದರೂ ಅದು ಅವನ ಮೇಲೆ ಹಾಯದೆ ಮಗ್ಗುಲಿನಿಂದ ಹರಿದುಹೋಗುತ್ತಿತ್ತು ಇದನ್ನು ಸಮೀಪದ ಜನರು ನೋಡಿ ಅಚ್ಚರಿಗೊಂಡು, 'ಹರಪೂಜೆಯಲ್ಲಿರುವ ಭಕ್ತನಿಗೆ ಶರಧಿ ಯಂಜುವದೆ'ಂಬ ನಾಣ್ನುಡಿಯು ಇಂದು ದಿಟವಾಯಿತು ಎಂದು ಕೊಂಡಾಡಿದರು. ಕೆಲವು ಹೊತ್ತಿನ ಮೇಲೆ ಮಸಣಯ್ಯನಿಗೆ ಎಚ್ಚರಾ ಗಲು ಅವನಿಗೆ ನಡೆದ ಸಂಗತಿಗಳು ತಿಳಿದು ಬರಲು ಅದು ಕನಸಿ ನಲ್ಲಿದ್ದಂತೆ ಅವನಿಗೆ ಭಾಸವಾಯಿತು. ಹೀಗೆ ಮಸಣಯ್ಯನು ಲೋಕ ದಲ್ಲಿ ಆಚರಿಸುತ್ತ ಲಿಂಗಾಚರಣೆಯಂತೆ ನಡಿಯುತ್ತ ಲಿಂಗಾಂಗ ಸಾಮರ ಸ್ಯವನ್ನು ಹೊಂದಿದನು.

ಮಸಣಯ್ಯನು ಲಿಂಗದೊಡನೆ ಸತಿಪತಿ ಭಾವದಿಂದ ಆಚರಿಸುತ್ತ ಹೀಗೆ ಸಾಮರಸ್ಯವನ್ನು ಹೊಂದಿದ್ದಾನೆ. ಅವನು ವಚನಕಾರನಿದ್ದಾನೆ. ಅವನ ವಚನಗಳು ಅತ್ಯಂತ ಶ್ರೇಷ್ಠತರವಾದವುಗಳು. ಅವನ ೫೯ ವಚನ ಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ಅವೆಲ್ಲವೂ ಸತಿಪತಿ ಭಾವದ ವಚನಗಳು. ಮಹಾದೇವಿಯಕ್ಕನ ವಚನ ಗಳಂತೆಯೇ ಅವು ಸೌಂದರ್ಯಪೂರ್ಣವಾಗಿವೆ. ವಿಶ್ವದ ಸೌಂದರ್ಯವನ್ನು ಅವನು ಕಂಡವನಾಗಿ, ವಿಶ್ವದಲ್ಲಿ ಅವನು ಲಿಂಗವನ್ನು ಕಾಣುತ್ತಾನೆ. ವಿಶ್ವ ಶಕ್ತಿಯು ಅವನಲ್ಲಿ ಬೆರೆದು ಹೋದಂತೆ ಅವನ ವಚನಗಳಲ್ಲಿ ಭಾಸವಾಗುತ್ತದೆ. ಇಷ್ಟು ಭಾವ ಪೂರ್ಣವು ಅವಾಗಿರುತ್ತವೆ.

ಗಜೇಶಮಸಣಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಬಹುಶಃ ಬಸವೇಶ್ವರನ ಕಾಲದವನು. ಅವನ ವಚನಗಳನ್ನು ಹಿಂದಿನ ಕಾಲದ ವಚನಸಂಗ್ರಹಕಾರರು ಯಾವಾಗಲೂ ಉದಹರಿಸುತ್ತ ಬಂದಿ ದ್ದಾರೆ. ಇಷ್ಟು ಅವು ಮಹತ್ವದವಾಗಿವೆ. ಅವನ ಭಾಷೆಯು ಬಲು ಮೋಹಕವಾದದ್ದು, ಸವಿಯಾದದ್ದು, ಮೃದುವಾದದ್ದು. ಕನ್ನಡ ನುಡಿಯ ಸವಿಯು ಅವನ ವಚನಗಳಲ್ಲಿ ತುಂಬಿತುಳುಕುತ್ತದೆ. ಅವನ ಕೆಲವು ವಚನಗಳನ್ನು ಮಾದರಿಗಾಗಿ ಕೆಳಗೆ ಉದಹರಿಸುತ್ತೇವೆ.

ಕನ್ನಡನಾಡಿನಲ್ಲಿ ಧಾರವಾಡ ಜಿಲ್ಲೆ ಹಾವೇರಿ ತಾಲೂಕಿನಲ್ಲಿ ವರದಾನದಿಯ ದಂಡೆಯ ಮೇಲೆ ಒಂದು ಕರಜಿಗೆ ಮತ್ತು ಅಕ್ಕಲಕೋಟೆ ಸಂಸ್ಥಾನದಲ್ಲಿ ಬೇರೊಂದು ಕರಜಿಗೆ ಹೀಗೆ ಎರಡು ಕರಜಿಗೆ ಗ್ರಾಮಗಳಿವೆ. ಇವುಗಳಲ್ಲಿ ಅಕ್ಕಲಕೋಟೆ ಸಂಸ್ಥಾನದಲ್ಲಿಯ ಕರಜಿಗೆಯೇ ಮಸಣಯ್ಯನ ಗ್ರಾಮವೆಂದು ನಮಗೆ ತೋರುತ್ತದೆ. ಅವನ ಕಥೆಯನ್ನು ನೋಡಲಾಗಿ ಅವನು ಲಿಂಗಪೂಜೆಗೋಸ್ಕರ ಕುಳಿತ ನದಿಯು ಅವನ ಗ್ರಾಮವಿದ್ದ ನದಿಯ ದಂಡೆಯ ಮೇಲಿರದೆ ಅದರಿಂದ ದೂರವಾಗಿತ್ತೆಂದು ಕಂಡುಬರುತ್ತದೆ. ಹಾವೇರಿ ತಾಲೂಕಿನಲ್ಲಿಯ ಕರಜಿಗೆಯು ವರದಾನದಿಯ ದಂಡೆಯ ಮೇಲೆಯೇ ಇದೆ. ಆದ್ದರಿಂದ ಅದು ಮಸಣಯ್ಯನ ಗ್ರಾಮವೆಂದು ತೋರುವದಿಲ್ಲ. ಈಚೆಗೆ ಪ್ರಸಿದ್ಧವಾದ ಶಿಲಾಹಾರರ ಒಂದು ಶಿಲಾಶಾಸನದಿಂದ ಮಸಣಯ್ಯನ ಇಷ್ಟದೇವತೆಯಾದ 'ಗಜೇಶ್ವರ' ದೇವಾಲಯವು ಈ ಕರಜಿಗೆಯಲ್ಲಿಯೇ ಇದ್ದುದು ಗೊತ್ತಾಗುತ್ತದೆ.[೧] ಅಕ್ಕಲಕೋಟೆಯ ಹಿಂದಿನ ಅಧಿಪತಿಗಳು ತಮ್ಮಲ್ಲಿ ಸಂಗ್ರಹಿಸಿದ ಒಂದು ಶಿಲಾಶಾಸನದಿಂದ ತಿಳಿದುಬರುವದೇನೆಂದರೆ—"ತಗರ ಪುರವರಾಧೀಶ್ವರ, ಜೀಮೂತವಾಹನಾನ್ವಯ ಶರಚ್ಚಂದ್ರ ನಿಳಲಕುಳಕಮಳ ಮಾರ್ತಂಡ, ಚಾಮುಂಡಿಕಾದೇವೀ ಲಬ್ಧವರ ಪ್ರಸಾದ, ಮುಂತಾದ ಬಿರುದುಗಳಿಂದ ಅಂಕಿತನಾದ ಈ ಇಂದರಸನು ಮೇಲೆ ನಿರ್ದಿಷ್ಟವಾದ ದಿನ ರಾಜ್ಯಾಂಗದ ಇನ್ನಿಬ್ಬರು ಅಧಿಕಾರಿಗಳೊಡನೆ ಸೇರಿ ಕರಜಿಗೆಯ ಶ್ರೀಸಿದ್ಧಗಜ್ಜೇಶ್ವರ ದೇವರ ಅಂಗಭೋಗ ನಿವೇದ್ಯಾದಿಗಳ ನಿಮಿತ್ತವಾಗಿ ಆ ದೇವರ ಮಠದ ಆಚಾರ್ಯರಾದ ಶ್ರೀಜ್ಞಾನಸಿದ್ಧದೇವರ ಪಾದಗಳನ್ನು ತೊಳೆದು ಆಣನ್ನೂರು—ಮುನ್ನೂರು ಈ ಭಾಗಕ್ಕೆ ಸೇರಿದ ಅಂಕುಲಿಗೆ—ಐವತ್ತು ಈ ಪ್ರದೇಶದೊಳಗಣ ಕರಂಜಿಗೆ ಎಂಬ ಗ್ರಾಮದಲ್ಲಿ ಭೂಮಿಯೇ ಮೊದಲಾದ ವಸ್ತುಗಳನ್ನು ಸರ್ವನಮಸ್ಯವಾಗಿ ದತ್ತಿಬಿಡುವನು" ಎಂಬ ಭಾವವುಳ್ಳ ಬರೆಹವು ಈ ಶಿಲಾಶಾಸನದಲ್ಲಿದೆ. ಇದರಲ್ಲಿ ನಿರ್ದೇಶಿಸಲ್ಪಟ್ಟ ಅಣಂದೂರು ಈಗಿನ ಅಕ್ಕಲ

---

(೧) ಪಿ. ಪಾಂಡುರಂಗ ಭೀ. ದೇಸಾಯಿ ಎಮ್. ಎ. ಇವರು ಪ್ರಬುದ್ಧ ಕರ್ನಾಟಕ ಪತ್ರಿಕೆಯ ೨೭ನೇ ಸಂಪುಟ ಸಂಚಿಕೆ ೨ ಪುಟ ೬೫ (೧೯೪೫ ಡಿಸೆಂಬರ) ಇದರಲ್ಲಿ ಪ್ರಕಟವಾದ 'ಶಿಲಾಹಾರರ ಒಂದು ಪ್ರಾಚೀನ ಶಾಖೆ' ಎಂಬ ಶಿರೋಲೇಖವುಳ್ಳ ಬರಹ ನೋಡಿರಿ.

ಕೋಟಿ ಗ್ರಾಮದ ಉತ್ತರಕ್ಕೆ ೧೯ ಮೈಲು ದೂರವಿರುತ್ತದೆ. ಅಂಕುಲಿಗೆಯು ಈಗಿನ ಅಕ್ಕಲಕೋಟೆಯೇ ಇರುತ್ತದೆ. ಅಕ್ಕಲಕೋಟೆಯನ್ನು ಈಗಲೂ ಹಳ್ಳಿಯ ಜನರು ಅಂಕಲಕೋಟೆ ಎಂದು ಕರೆಯುತ್ತಾರೆ. ಕರಂಜಿಗೆಯು ಈ ಗ್ರಾಮಕ್ಕೆ ಸಮೀಪವಾಗಿರುವ ಕರಜಿಗೆಯು. ಇದೇ ಗಜೇಶ ಮಸಣಯ್ಯನ ಗ್ರಾಮವು. ಶಾಸನದಲ್ಲಿ ಉಲ್ಲೇಖವಾದ 'ಶ್ರೀಸಿದ್ಧಗಜ್ಜೇಶ್ವರ ದೇವರು' ಮಸಣಯ್ಯನ ಇಷ್ಟದೇವತೆಯಾದ 'ಗಜೇಶ್ವರ' ಎಂಬುದಿರುತ್ತದೆಂದು ನಮಗೆ ತೋರುತ್ತದೆ. ಗಜ್ಜೇಶ್ವರ ದೇವರು ಎಂಬುದರ ಬದಲು ಗಜೇಶ್ವರ ಎಂಬ ಹೆಸರು ಇವನ ವಚನಗಳಲ್ಲಿ ಬಂದಿರಬಹುದು. ಇದಲ್ಲದೆ ಈ ಕರಜಿಗೆಯ ಗ್ರಾಮದಲ್ಲಿ 'ಗಜ್ಜೇಶ್ವರ' ಎಂಬ ಹೆಸರಿನ ದೇವಾಲಯವು ಈಗಲೂ ಇರುತ್ತದೆ. ಈ ಗ್ರಾಮದಿಂದ ಪೂರ್ವಕ್ಕೆ ೪೦ ಮೈಲುಗಳ ಮೇಲೆ 'ಮನಹಳ್ಳಿ' ಎಂಬ ಗ್ರಾಮವಿದ್ದು ಅಲ್ಲಿ ಮಸಣಯ್ಯನ ದೇವಾಲಯವೂ ಉಂಟು. ಈಗ ಈ ಮನಹಳ್ಳಿ ಗ್ರಾಮವು ಕಲಬುರ್ಗಿ ಜಿಲ್ಲೆಯಲ್ಲಿ ತಾಲೂಕು ಸ್ಥಳವಾದ ಆಲ್ದಿಯ ಪೂರ್ವಕ್ಕೆ ಆರು ಮೈಲುಗಳ ಮೇಲಿರುತ್ತದೆ. ಈ ದೇವಾಲಯದ ಜಾತ್ರೆಯು ಪ್ರತಿವರುಷವಾಗುತ್ತದೆ. ಇಲ್ಲಿ ಮಸಣಯ್ಯನು ಕೆಲಕಾಲ ವಾಸಿಸಿರಬಹುದೆಂದು ತೋರುತ್ತದೆ. ಈ ಗ್ರಾಮದಿಂದ ಆರು ಮೈಲುಗಳ ಮೇಲೆ 'ತೊರೆ' ಅಥವಾ 'ಬೆಣ್ಣೆತೊರೆ' ಎಂಬ ಹೆಸರಿನ ಒಂದು ದೊಡ್ಡ ಹಳ್ಳವು ಹರಿಯುತ್ತಿದೆ. ಮಸಣಯ್ಯನು ಲಿಂಗಪೂಜೆಗೋಸ್ಕರ ಕುಳಿತ ನದಿಯು ಇದೇ ಆಗಿರಬಹುದೆಂದು ತೋರುತ್ತದೆ. ಇವೆಲ್ಲ ಸಂಗತಿಗಳನ್ನು ನಿರೀಕ್ಷಿಸಿದಲ್ಲಿ ಮಸಣಯ್ಯನ ಗ್ರಾಮವು ಅಕ್ಕಲಕೋಟೆಗೆ ಸಮೀಪವಿರುವ ಕರಜಿಗೆಯೇ ಇರುತ್ತದೆಂದು ತೋರುತ್ತದೆ. ಈ ಕರಜಿಗೆಯು ತರ್ದವಾಡಿ ಎಂದರೆ ಮಂಗಳವಾಡ ನಾಡಿನಲ್ಲಿ, ಮಂಗಳವಾಡದಿಂದ ಪೂರ್ವಕ್ಕೆ ೪೦ ಮೈಲುಗಳ ಮೇಲೆ ಇರುತ್ತದೆ. ಈ ಭಾಗದಲ್ಲಿಯೇ ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣರು ಆಗಿಹೋಗಿದ್ದಾರೆ.

ಮಸಣಯ್ಯನ ಕೆಲವು ವಚನಗಳನ್ನು ಮಾತ್ರ ನಾವು ಇಲ್ಲಿ ಉದಹರಿಸುತ್ತೇವೆ.

## ವಚನಗಳು.

(೧) ಆಲಿಕಲ್ಲು, ಮರದ ಗಿರಿಯಲಿಹ ಮಗಮಗಿಸುವ ಗಾಳಿ, ಉಂಡು ಉರವಣಿಸುವ ಪಕ್ಷಿಗಳು, ಸರಗೈವ ಕೋಗಿಲೆ, ಗಗನದ

ಚಂದ್ರಮ, ನೀವತ್ತ ಸಾರಿರೇ. ಆಗಲಲಾರೆನು ಸಖಿಯೇ. ಬೆಳುದಿಂಗಳು ಬಿಸಿಲಾಯಿತ್ತು. ಅಗಲಲಾರೆನು ಎನ್ನಿನಿಯನ. ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನನೂವಡೆ.

(೨) ಗಿಡುಮರದ ಕುರುಬಿತಿಯು ಜವ್ವನವಂತೆ ನುಡಿಯಲರಿಯದೆ ಮುಗ್ಧೆಯಾಗಿರ್ದೆನವ್ವಾ. ಹಗಲನರಿಯದ ಚಕ್ರಪಕ್ಕಿಯಂತೆ ಮನ ಬಯಸುತಿರ್ದೆನವ್ವಾ. ಹಲವು ಕಾಲ ಎಲವದ ಮರನ ನಾರಿರ್ದರಗಿಳಿಯಂತಾದೆನವ್ವಾ. ಇಂದೆಮ್ಮ ಮಹಾಲಿಂಗ ಗಜೇಶ್ವರನ ಬರವ ಕಾಣದೆ ಇವರೆಲ್ಲರ ವಿಧಿಯ ಹೊತ್ತೆನವ್ವಾ.

(೩) ಋತುಕಾಲ ಕೋಗಿಲೆಯಂತೆ ನುಡಿಯದಂತಿರ್ದಳಲ್ಲಾ. ಪರಿಮಳ ತಪ್ಪಿದ ಭ್ರಮರನಂತೆ ಸುಳಿ ನುಳಿಗೊಳುತಿರ್ದಳಲ್ಲಾ. ಫಲವು ತಪ್ಪಿದ ಬಂಜೆವನದೊಳಗಣ ಅರಗಿಳಿಯಂತಿರ್ದಳಲ್ಲಾ. ದರದುರದ ಜವ್ವನದಲ್ಲಿ ತೋರಣದೆಲೆಯಂತೆಯಾದಳಲ್ಲಾ. ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ಮರುಳುಗೊಂಡಳಲ್ಲಾ.

(೪) ಒಳಗೆ ಶೋಧಿಸಿ, ಹೊರಗೆ ಧವಳಿಸಿ, ಭಾವದಿಂದ ಗುಡಿ ತೋರಣವ ಕಟ್ಟಿದೆನಯ್ಯಾ. ಲಿಂಗ ಬಾರಯ್ಯಾ. ಎನ್ನ ದೇವ ಬಾರಯ್ಯಾ. ಎನ್ನಂತರಂಗದ ಪರಂಜ್ಯೋತಿಯೇ, ನಿಮ್ಮ ನಾನಿದಿರಗೊಂಬೆ. ನೀ ಬಾರಯ್ಯಾ. ಎನ್ನ ಮಹಾಲಿಂಗ ಗಜೇಶ್ವರಾ ನೀ ಬಾರಯ್ಯಾ.

(೫) ನೀನೊಲಿದು ಕೂರ್ತವರು, ನಿಮಗೊಲಿದು ಕೂರ್ತವರು, ನಿಮ್ಮ ಸರಿಯೇ ಅವರು, ನಿಮ್ಮ ರೂಪೇ ಅವರು. ಆಳಾರು, ಅರಸಾರೆಂದು ಅರಿಯಬಾರದು. ನಿಮ್ಮ ರೂಪೇ. ಮಹಾಲಿಂಗ ಗಜೇಶ್ವರನನೊಲಿದು ಪೂಜಿಸಿದವರು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಪದವಿಗಳ ಪಡೆದರು. ಎನಗೆ ನಿಮ್ಮ ತೊತ್ತು ಸೇವೆಯೇ ಸಾಕು.

(೬) ಮಾತಂಗಿಯ ಹೊಳೆಯಲಿ ಉತ್ತಮನ ನೆಳಲು ಸುಳಿದಡೆ ರೂಹು ಹೊಲೆಯನಾಗಬಲ್ಲುದೇ ಅಯ್ಯಾ ? ಮರ್ತ್ಯಲೋಕದ ಮಾನವರೊಳಗೆ ಶರಣ ಸುಳಿದಡೆ ಶರಣ ಸೂತಕಿಯಾಗಬಲ್ಲನೇ ಅಯ್ಯಾ? ಮರ್ತ್ಯರ ಭವಿತನವ ಅಗಿದೊಗೆಯದೆ ಮಾಬನೇ ಮಹಾಲಿಂಗ ಗಜೇಶ್ವರಯ್ಯಾ ?

(೭) ಮಾಗಿಯ ಹುಲ್ಲಿನ ಸೋಂಕಿನಂತೆ ತನು ಪುಳುಕಿತಳಾದ ಳವ್ವೆ. ನುಡಿ ತೊದಲು. ಆತನ ಒಲುಮೆ ಆಧಾರವಾಗಿದ್ದಳವ್ವೆ. ಬಿಳಿಯ ತುಂಬಿ ಕುಂಕುಮದ ರಜದಲ್ಲಿ ಬಂದುಂಡಂತೆ ಮಹಾಲಿಂಗ ಗಜೇ ಶ್ವರನಲ್ಲಿ ತನ್ನ ತಾನೆ ರತಿಯಾಗಿರ್ದಳವ್ವೆ.

(೮) ದೇವರ ನೆನೆದು ಮುಕ್ತರಾದೆವೆಂಬ ಯುಕ್ತಿಶೂನ್ಯರ ಮಾತು ಕೇಳಲಾಗದು. ಅದೇನು ಕಾರಣವೆಂದಡೆ, ದೇವರ ನೆನೆದವರಿಗೆ ದೇವ ರುಂಟೇ? ದೂರದೂರದಲ್ಲಿದ್ದವರ ನೆನೆವರಲ್ಲದೆ ಸಮೀಪದಲ್ಲಿದ್ದವರನಾರು ನೆನೆದವರಿಲ್ಲ. ಇದನರಿದು ನಿನ್ನೊಳಡಗಿ ನಾ ನಿನ್ನ ನೆನೆಯಲಿಲ್ಲ. ನನ್ನೊಳಡಗಿ ನೀನೆನಗೆ ಮುಕ್ತಿಯನೀಯಲಿಲ್ಲ. ಇದು ಕಾರಣ ನಾ ನಿನ್ನ ನೆನೆಯಲಿಲ್ಲ ಮಹಾಲಿಂಗ ಗಜೇಶ್ವರಾ.

(೯) ಬಾಲಕಿ ಹಾಲ ಸವಿದಂತೆ, ಮರುಳನ ಮನದ ನೆನಹಿನಂತೆ, ಮೂಗ ಕಂಡ ಕನಸಿನಂತೆ, ಮೆಯ್ಯರಿಯದ ನೆಳಲಿನಂತೆ, ಬಂಜೆಯ ಮನದ ಸ್ನೇಹದಂತೆ, ಮಹಾಲಿಂಗ ಗಜೇಶ್ವರನಲ್ಲಿ ಐಕ್ಯ. ವಾರಿಕಲ್ಲ ಪುತ್ಥಳಿ ಕರಗಿ ಅಪ್ಪುವ ಕೂಡಿದಂತಾಯಿತ್ತು.

(೧೦) ಹೊಸ ಮದುವೆಯ ಹಸೆಯಡಗದ ಮುನ್ನ, ಹೊಸದ ಅರಸಿನ ಬಿಸಿಲಿಂಗೆ ಹರಿಯದ ಮುನ್ನ, ತನು ಸಂಚಲವಡಗಿ ಮನವು ಗುರುಕಾರುಣ್ಯವ ಪಡೆದು ಹುಸಿಯಲ್ಲದಿರ್ದಡೆ ಭಕ್ತನೆಂಬೆ. ಹಿಡಿಯ ಲಿಲ್ಲದಿರ್ದಡೆ ಮಹೇಶ್ವರನೆಂಬೆ. ತನುವಿಲ್ಲದಿರ್ದಡೆ ಪ್ರಸಾದಿಯೆಂಬೆ. ಜೀವವಿಲ್ಲದಿರ್ದಡೆ ಪ್ರಾಣಲಿಂಗಿಯೆಂಬೆ. ಆಸೆ ಇಲ್ಲದಿರ್ದಡೆ ಶರಣ ನೆಂಬೆ. ಐದರ ಸಂಪರ್ಕ ವಿಯೋಗವಾದಡೆ ಐಕ್ಯನೆಂಬೆ. ಐಕ್ಯದ ಸಂತೋಷ ಹಿಂಗಿದಡೆ ಜ್ಯೋತಿರ್ಮಯನೆಂಬೆ. ಇಂತಾಗಬೇಕೆಂಬ ಈ ಮನದ ದೇಹವನಿರಿದಡರಿಯದು, ತರಿದಡರಿಯದು, ಬೈದಡರಿಯದು, ಹೊಯ್ದಡರಿಯದು, ನಿಂದಿಸಿದಡರಿಯದು, ಸ್ತುತಿಸಿದಡರಿಯದು, ಸುಖ ವನರಿಯದು, ದುಃಖವನರಿಯದು. ಈ ಚತುರ್ವಿಧದ ತಾಗುನಿರೋ ಧವನರಿಯದಿರ್ದಡೆ ಆತನೇ ಮಹಾಲಿಂಗ ಗಜೇಶ್ವರನೆಂಬೆ.

ಇವೆಲ್ಲವೂ ಅಮೋಘವಾದ ವಚನಗಳು. ಭಕ್ತಿಯ ಪ್ರವಾಹವು ಇವುಗಳಲ್ಲಿ ಹೇಗೆ ಪ್ರವಹಿಸುತ್ತದೆಂಬುದನ್ನು ವಾಚಕರು ಲಕ್ಷಿಸತಕ್ಕದ್ದು.

ಈ ವಚನಗಳನ್ನು ನೋಡಿದಲ್ಲಿ ಶಿವಶರಣರು ಕನ್ನಡವನ್ನು ಚನ್ನಾಗಿ ಬಲ್ಲವರು, ಅತ್ಯಂತ ವಿದ್ವಾಂಸರು, ಜ್ಞಾನಿಗಳು, ಶಿವಾನುಭವದಂತೆ ನಡೆದವರು, ಅನುಭವವನ್ನು ಹೊಂದಿ ನುಡಿದವರು, ಎಂಬುದು ಸ್ಪಷ್ಟವಾಗುತ್ತದೆ. ನಾವು ಮೇಲೆ ಕಾಣಿಸಿದ ೧೦ ನೆಯ ಒಂದೇ ಒಂದು ವಚನದಲ್ಲಿ ಷಟ್‌ಸ್ಥಲಗಳ ಮರ್ಮವನ್ನೆಲ್ಲ ಗಜೇಶಮಸಣಯ್ಯನು ಹೇಗೆ ಸ್ಪಷ್ಟಪಡಿಸಿದ್ದಾನೆಂಬುದನ್ನು ವಾಚಕರು ಲಕ್ಷಿಸತಕ್ಕದ್ದು.

---

## ನುಲಿಯ ಚಂದಯ್ಯ.

ಕಲ್ಯಾಣ ಪಟ್ಟಣದಲ್ಲಿ ನುಲಿಯ ಚಂದಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನು ದಿನಾಲು ಹಳ್ಳಕ್ಕೆ ಹೋಗಿ ಅಲ್ಲಿದ್ದ ಮೆದೆಯ ಹುಲ್ಲನ್ನು ಕೊಯ್ದು ಅದರಿಂದ ಹಗ್ಗ ಮತ್ತು ಕಣ್ಣಿಗಳನ್ನು ಮಾಡಿ ಅವುಗಳನ್ನು ಮಾರಿ, ಬಂದ ಹಣದಿಂದ ಜಂಗಮ ದಾಸೋಹವನ್ನು ನಡಿಸುತ್ತಿದ್ದನು. ಇದೇ ಅವನ ಕಾಯಕವಾಗಿತ್ತು. ಇದರಿಂದ ಅವನಿಗೆ 'ನುಲಿಯ ಚಂದಯ್ಯ'ನೆಂಬ ಹೆಸರು ಪ್ರಾಪ್ತವಾಗಿತ್ತು.

ಅವನು ಜಂಗಮ ದಾಸೋಹವು ಲಿಂಗಪೂಜೆಗಿಂತ ಅಧಿಕವು, ಲಿಂಗಕ್ಕೆ ಮಾಡುವ ಅಷ್ಟವಿಧ ಪೂಜೆ, ಷೋಡಶೋಪಚಾರಗಳು ಲಿಂಗ ಪೂಜೆಯಲ್ಲ, ಲಿಂಗ ಪೂಜೆಯು ಜಂಗಮ ಪೂಜೆಯಲ್ಲಿಯೇ ಅಡಕವಾಗಿರುತ್ತದೆ, ಎಂದು ಭಾವಿಸಿ, ಜಂಗಮ ಪೂಜೆಯಲ್ಲಿ ಮಗ್ನನಾಗಿರುತ್ತಿದ್ದನು. ಮತ್ತು ಲಿಂಗ ಪೂಜೆಗೆ ಯಾವ ಸ್ಥಾನವಿದೆಯೋ ಅದನ್ನು ಅವನು ಉಪೇಕ್ಷಿಸುತ್ತಿದ್ದನು.

ಶಿವಾನುಭವದ ಪ್ರಕಾರ ಜಂಗಮತ್ವವು ಲಿಂಗಕ್ಕೆ ಚೈತನ್ಯಾತ್ಮಕವಾಗಿರುತ್ತದೆ. ಆದ್ದರಿಂದ ಅವನು ಜಂಗಮ ತತ್ವವೇ ಶ್ರೇಷ್ಠವಾದುದು, ಗುರೂಪದೇಶವು ಇಷ್ಟಲಿಂಗದಲ್ಲಿ ರೂಪುಗೊಂಡಿರುವದರಿಂದ ಅದು ಕೇವಲ ಕ್ರಿಯೆಯ ಅಥವಾ ಆಚಾರದ ದ್ಯೋತಕವಾಗಿದೆ ಎಂತಲೂ ಜಂಗಮವು ಜ್ಞಾನಕ್ಕೆ ಸಂಬಂಧಿಸಿರುವದರಿಂದ ಅದು ಕ್ರಿಯೆಗಿಂತ ಅಧಿಕವಾದುದೆಂತಲೂ ತಿಳಿದು ಅದರಂತೆ ಆಚರಿಸುವವನಾಗಿದ್ದನು.

ಹೀಗಿರುವಲ್ಲಿ ಅವನು ಒಂದು ದಿವಸ ಹಳ್ಳಕ್ಕೆ ಹೋಗಿ ಮೊದೆಯ ಹುಲ್ಲನ್ನು ಕೊಯ್ಯುತ್ತಿರುವಾಗ ಅವನು ಧಾರಣಮಾಡಿಕೊಂಡಿದ್ದ ಇಷ್ಟ ಲಿಂಗವು ಅವನನ್ನು ಪರೀಕ್ಷಿಸುವ ಉದ್ದಿಶ್ಯವಾಗಿ ಅವನ ಪೆಜ್ಜೆಯೊಳಗಿಂದ ಹೊರಗೆ ಜಗುಳಿ ನೀರಿನಲ್ಲಿ ಬಿದ್ದಿತು. ಆದರೆ ಚಂದಯ್ಯನು ಅದನ್ನು ಎತ್ತಿ ತೆಗೆದುಕೊಂಡು ಧರಿಸಿಕೊಳ್ಳಲಿಲ್ಲ. ಅವನು ಹಾಗೆಯೇ ಮೊದೆಯ ಹುಲ್ಲನ್ನು ಕೊಯ್ದು ಹೊರೆಗಟ್ಟಿ ಹೊತ್ತುಕೊಂಡು ಮನೆಯ ಹಾದೀ ಹಿಡಿದನು.

ಲಿಂಗಕ್ಕೆ ಜಂಗಮವು ಪ್ರಾಣವಾದುದು. ಆದುದರಿಂದ ಜಂಗಮ ಪ್ರಾಣಿಯಾದ ಚಂದಯ್ಯನು ಲಿಂಗವನ್ನು ಬಿಟ್ಟು ಮನೆಗೆ ಹೊರಡಲು ಆ ಲಿಂಗವೂ ಕೂಡ ಅವನ ಬೆನ್ನುಹತ್ತಿ ಹೋಗಲು ಸಿದ್ಧವಾಯಿತು. ಆಗ ಅದು ಅವನಿಗೆ — ಎಲೋ ಚಂದಯ್ಯನೇ, ನಾನೂ ನಿನ್ನ ಕೂಡ ಮನೆಗೆ ಬರುತ್ತೇನೆ. ನಿನ್ನನ್ನು ಬಿಟ್ಟು ನಾನಿರಲಾರೆನು, ಎಂದು ನೀರಿನ ಹೊರಗೆ ಬಂದು ಧ್ವನಿಮಾಡಿತು. ಅದನ್ನು ಚಂದಯ್ಯನು ಕೇಳಿ, ಲಿಂಗಕ್ಕೆ—ನೀನು ನಿನ್ನ ಭಾವವು ಹೇಗೆ ಇದೆಯೋ ಹಾಗೆಯೇ ಮಾಡು. ಆದರೆ ನನಗೆ ಮಾತ್ರ ನನ್ನ ಜಂಗಮ ಸೇವೆಯೇ ಇರಲಿ, ಎಂದು ನುಡಿದು ಮುಂದೆ ಹೋಗುತ್ತಿರಲು, ಆ ಲಿಂಗವು ತನ್ನ ವೃತ್ತ, ಗೋಳಕ, ಗೋಮುಖಾಕಾರಗಳನ್ನು ಬಿಟ್ಟು ಪುರುಷಾಕಾರವನ್ನು ತಳೆದು—ಚಂದಯ್ಯನೇ, ನಾನು ಬಂದೆನು. ನನ್ನನ್ನು ಬಿಟ್ಟು ಹೋಗಬೇಡ ಎಂದೆನ್ನಲು, ಅದಕ್ಕೆ ಚಂದಯ್ಯನು—ಮೊದಲು ನನ್ನನ್ನು ಬಿಟ್ಟು ನೀನೇ ಹೋಗಿರುವಿ. ಈಗ ನನ್ನ ಕೂಡ ಬರುವೆನೆಂದರೆ ಅದಕ್ಕೆ ನಾನು ಒಪ್ಪುವದಿಲ್ಲ, ಎಂದು ನುಡಿದನು. ಅದಕ್ಕೆ ಆ ಲಿಂಗಪುರುಷನು—ನೀನೊಲ್ಲೆನೆಂದರೆ ನಾನು ನಿನ್ನನ್ನು ಬಿಡುವದಿಲ್ಲ, ಎಂದು ಅಂದು ಅವನ ಬೆನ್ನು ಹತ್ತಿ ಬರಹತ್ತಿದನು.

ಹೀಗೆ ಉಭಯತರು ಬರುತ್ತಾ ಇರುವಲ್ಲಿ, ದಾರಿಯಲ್ಲಿ ಶರಣಶ್ರೇಷ್ಠನಾದ ಮಡಿವಾಳ ಮಾಚಿದೇವನು ನದಿಯ ದಂಡೆಯ ಮೇಲೆ ಸೀರೆಗಳನ್ನು ಒಗೆಯುತ್ತ ನಿಂತದ್ದನ್ನು ಆ ಲಿಂಗದೇವನು ಕಂಡನು. ಆಗ ಅವನು ಚಂದಯ್ಯನಿಗೆ ಅಂದದ್ದು—ಇಲ್ಲಿ ಮಾಚಿದೇವನಿದ್ದಾನೆ. ಅವನ ಬಳಿಗೆ ನಾವು ಹೋಗುವಾ ಎಂದು ಹೇಳಲು, ಉಭಯತರು ಅವನಲ್ಲಿಗೆ ಬರಲು, ಮಾಚಿದೇವನು ಅವರಿಬ್ಬರಿಗೆ ನಮಸ್ಕರಿಸಿ—

ನೀವಿಬ್ಬರು ಇಲ್ಲೇಕೆ ಬಂದಿರೆಂದು ಕೇಳಲು, ಆ ಲಿಂಗದೇವನು--ನಾನು ಚಂದಯ್ಯನ ಸೆಜ್ಜೆಯಿಂದ ಹೊರಗೆ ಬಿದ್ದೆನು. ಇದೇ ನನ್ನ ತಪ್ಪಾಯಿತು. ಇಷ್ಟಕ್ಕೆ ಚಂದಯ್ಯನು ನನ್ನನ್ನು ಬಿಟ್ಟುಕೊಟ್ಟು ಹೋಗಬೇಕೇ? ಇವನಿಗೆ ತಾವು ತಿಳಿ ಹೇಳಬೇಕೆಂದು ಅವನಿಗೆ ಬಿನ್ನವಿಸಿಕೊಂಡನು.

ಆಗ ಮಾಚಯ್ಯನು ಚಂದಯ್ಯನಿಗೆ— ನಿನ್ನ ಇಷ್ಟಲಿಂಗವು ನಿನ್ನ ಬೆನ್ನಹತ್ತಿ ಬಂದರೆ, ಹೀಗೆ ನೀನು ಬಿಟ್ಟು ಹೋಗಬೇಕೇ? ಇದು ಶಿವಶರಣರ ನಡೆಯಲ್ಲ ಎಂದೆನ್ನಲು, ಚಂದಯ್ಯನು-- ಸೆಜ್ಜೆಯಿಂದ ಲಿಂಗವು ಬಿದ್ದಿತು ಮತ್ತು ಪುನಃ ಬಂದಿತು ಎಂಬುದಿಲ್ಲ. ಘನಲಿಂಗವು ಎಲ್ಲೆಡೆಯಲ್ಲಿಯೂ ಪರಿಪೂರ್ಣವಾಗಿರುತ್ತದೆ. ಆದ್ದರಿಂದ ಲಿಂಗವು ಹೋಯಿತು, ಬಂದಿತು ಎಂಬ ಸಂದೇಹವು ಇರಲಾಗದು. ಇಂಥ ಸಂದೇಹವು ಇದ್ದುದಾದರೆ, ಆ ಲಿಂಗವು ಹೇಗೆ ಉಳಿದೀತು? ಆತ್ಮನು ಹೋದರೆ ಈ ಘಟವು ಹೇಗೆ ಉಳಿದೀತು? ನನ್ನ ಜಂಗಮತ್ವದಲ್ಲಿಯೇ ಲಿಂಗವಿದೆ ಎಂದು ನುಡಿದನು.

ಅದಕ್ಕೆ ಮಾಚಯ್ಯನು-- ದೇಹಧರ್ಮವಿರುವ ತನಕ ಲಿಂಗಪೂಜೆಯನ್ನು ಬಿಡಕೂಡದು. ಗುರುಲಿಂಗಜಂಗಮಗಳಿಗೆ ಸಹ ಲಿಂಗವಿದೆ. ಅವೂ ಕೂಡ ತಮ್ಮ ತಮ್ಮ ಲಿಂಗಗಳನ್ನು ಪೂಜಿಸಬೇಕು. ತನ್ನನ್ನು ತಾನು ಅರಿಯಬೇಕಾದರೆ ಅಂಗದಲ್ಲಿ ಲಿಂಗವಿರಬೇಕು ಎಂದು ಹೇಳಿದನು.

ಅದಕ್ಕೆ ಚಂದಯ್ಯನು-- ಭಾವಶುದ್ಧವಾಗಿರುವದೇ ಗುರುಪೂಜೆ. ಜ್ಞಾನಶುದ್ಧವಾಗಿರುವದೇ ಲಿಂಗಪೂಜೆ. ತ್ರಿಕರಣಶುದ್ಧವಾಗಿರುವದೇ ಜಂಗಮಪೂಜೆ. ಇದೇ ಪರಮಾತ್ಮನಿಗೆ ಅರ್ಪಿತವು ಎಂದು ಅಂದನು.

ಅದಕ್ಕೆ ಮಾಚಯ್ಯನು— ಚಂದಯ್ಯನೇ, ಇದೊಂದು ದೊಡ್ಡ ತೊಡಕು. ಇದು ನನಗೆ ತಿಳಿಯದು. ಶಿವಾನುಭವಮಂಟಪದಲ್ಲಿ ಬಸವಾದಿ ಪ್ರಮಥರಿದ್ದಾರೆ. ಅಲ್ಲಿಗೆ ನಾವು ಮೂವರೂ ಹೋಗುವಾ ಎಂದು ನುಡಿದನು.

ಅದಕ್ಕೆ ಚಂದಯ್ಯನು-- ನನಗೆ ಜಂಗಮಾರ್ಚನೆಯ ವೇಳೆಯಾಗಿದೆ. ಅದನ್ನು ನಾನು ಬಿಡಲಾರೆನು. ಅದು ಮುಗಿದ ಬಳಿಕ ಶಿವಾನು

ಭವ ಮಂಟಪಕ್ಕೆ ಬರುವೆನು. ಅಷ್ಟರಲ್ಲಿ ನೀನೂ ಅಲ್ಲಿಗೆ ಬರಬೇಕೆಂದು ಬಿನ್ನವಿಸಿಕೊಂಡನು.

ಆಮೇಲೆ ಲಿಂಗದೇವನು ಚಂದಯ್ಯನಿಗೆ— ನಿನ್ನ ಜಂಗಮಾರ್ಚನೆಯಲ್ಲಿ ನಾನು ನಿನಗೆ ನೆರವಾಗುವೆನು. ನಿನ್ನ ಕೂಡ ಬರಲು ನನಗೆ ಅಪ್ಪಣೆಕೊಡಬೇಕು ಎಂದು ಕೇಳಿಕೊಳ್ಳಲು, ಚಂದಯ್ಯನು—ನೀನು ಬರುವವಾದರೆ, ನೀನು ನನ್ನ ಕಾಯಕ ಮಾಡಬೇಕು. ಇಗೋ, ಈ ನನ್ನ ಮೆದೆಯ ಹುಲ್ಲನ್ನು ಹೊತ್ತುಕೊಂಡು ನಡೆ. ಅದರಿಂದ ನೀನು ನುಲಿಯನ್ನು ಹೊಸೆದು ಕಣ್ಣಿಯನ್ನು ಮಾಡಿ ಅದನ್ನು ಮಾರಿ ಅದರಿಂದ ಬಂದ ಹಣದಿಂದ ನೀನು ನನ್ನ ಜಂಗಮದಾಸೋಹದಲ್ಲಿ ನೆರವಾಗಬೇಕು. ಇದಕ್ಕೆ ಒಪ್ಪಿದೆಯಾದರೆ ನನ್ನ ಕೂಡ ಬಾ ಎಂದು ಹೇಳಲು ಆ ಲಿಂಗದೇವನು ಅದಕ್ಕೆ ಒಪ್ಪಲು, ಉಭಯತರು ಮಡಿವಾಳಯ್ಯನನ್ನು ನಮಸ್ಕರಿಸಿ ಮನೆಯ ಕಡೆಗೆ ಹೊರಟರು.

ಅವರು ಮನೆಗೆ ಬಂದ ಬಳಿಕ ಲಿಂಗದೇವನು ತಾನು ಒಪ್ಪಿಕೊಂಡ ಪ್ರಕಾರ ನುಲಿಯನ್ನು ಹೊಸೆದು ಹಗ್ಗವನ್ನು ಮಾಡಹತ್ತಿದನು. ಅದರಿಂದ ಒಂದು ಕಣ್ಣಿಯನ್ನು ಮಾಡಿ ಅದನ್ನು ಅಂಗಡಿಗೆ ಮಾರಲಿಕ್ಕೆ ಹೋಗಲು ಅಂಗಡಿಯವನು ಈ ನುಲಿಯು ಬಹಳ ಗಂಟುಳ್ಳದ್ದಿದೆ ಎಂದು ಧಿಕ್ಕರಿಸಿಬಿಟ್ಟನು. ಆಗ ಅವನು ಪೇಟೆಯಲ್ಲಿಯ ಬೇರೆ ಅಂಗಡಿಗಳಿಗೆ ಹೋಗಿ ತೋರಿಸಲು, ಅಂಗಡಿಯವರಾರೂ ತೆಗೆದುಕೊಳ್ಳಲಿಲ್ಲ. ಆಗ ಲಿಂಗದೇವನು ಜಂಗಮಕಾಯಕವು ನನ್ನಿಂದ ಚಂದಯ್ಯನಿಗೆ ತಪ್ಪುವದೆಂದು ಭೀತಿಯುಳ್ಳವನಾಗಿ, ಕಡೆಗೆ ಉಪಾಯಗಾಣದೆ ಬಸವೇಶ್ವರನಲ್ಲಿಗೆ ಹೋಗಿ ಕಣ್ಣಿಯನ್ನು ಮಾರತೆಗೆದುಕೊಳ್ಳಲು ಆವನಿಗೆ ಕೇಳಿದನು. ಅವನು ನಡೆದ ಎಲ್ಲ ಸಂಗತಿಗಳನ್ನು ತನ್ನ ಲಿಂಗದಲ್ಲಿ ತಿಳಿದು, ಆ ಕಣ್ಣಿಗೆ ಒಂದು ಸಾವಿರ ಹೊನ್ನುಗಳನ್ನು ಕೊಟ್ಟು ಅದನ್ನು ತೆಗೆದುಕೊಂಡನು. ಆಗ ಲಿಂಗದೇವನು ಬಹಳ ಹರುಷಿತನಾಗಿ ಆ ಹಣವನ್ನು ತೆಗೆದುಕೊಂಡು ಚಂದಯ್ಯನಲ್ಲಿಗೆ ಬಂದು ಆ ಹಣವನ್ನೆಲ್ಲ ಅವನ ಮುಂದೆ ಸುರಿಯಲು ಅದನ್ನು ಚಂದಯ್ಯನು ಕಂಡು ಇಷ್ಟು ಹಣ ನಿನಗೆ ಎಲ್ಲಿಂದ ಬಂದಿತು? ಇದನ್ನು ನೀನು ಕಳವು ಮಾಡಿ ತಂದೆಯಾ? ಎಂದು ಕೇಳಲು, ಲಿಂಗದೇವನು ನಡೆದ ಎಲ್ಲ ಸಂಗತಿಗಳನ್ನು ತಿಳಿ

ಸಲು ಚಂದಯ್ಯನು— ಇದು ಕಾಯಕದ ರೀತಿಯಲ್ಲ. ಈ ಕಣ್ಣಿಯ ಬೆಲೆಯು ಒಂದು ಹಾಗ ಮಾತ್ರ. ಆದ್ದರಿಂದ ಈ ಹೊನ್ನುಗಳನ್ನು ಬಸವೇಶ್ವರನಿಗೆ ತಿರುಗಿ ಕೊಟ್ಟು ಒಂದು ಹಾಗದಷ್ಟು ರೊಕ್ಕ ಮಾತ್ರ ತಂದುಕೊಡು ಎಂದು ಹೇಳಿದನು.

ಆಗ ಲಿಂಗದೇವನು ಖಿನ್ನಮನಸ್ಕನಾಗಿ ಬಸವೇಶ್ವರನಲ್ಲಿ ತಿರುಗಿ ಬಂದು ಹೊನ್ನುಗಳನ್ನೆಲ್ಲ ಅವನಿಗೆ ಕೊಟ್ಟು ಅವನಿಂದ ಕಣ್ಣಿಯ ಬೆಲೆ ಒಂದು ಹಾಗ ಮಾತ್ರ ತಂದು ಚಂದಯ್ಯನಿಗೆ ತಂದೊಪ್ಪಿಯಾಗಿ ಸಿದನು. ಚಂದಯ್ಯನು ಅದರಿಂದ ಜಂಗಮಾರ್ಚನೆಯ ಪದಾರ್ಥಗಳನ್ನು ತಂದು ಜಂಗಮನಿಗೆ ನೀಡಿ ಅಂದಿನ ದಿನ ತನ್ನ ಶಿವಭಕ್ತಿಯನ್ನು ಆಚರಿಸಿದನು.

ಆಮೇಲೆ ಚಂದಯ್ಯನು ತಾನು ಮಡಿವಾಳಮಾಚಿದೇವನಿಗೆ ಮಾತು ಕೊಟ್ಟಂತೆ ಲಿಂಗದೇವನೊಡನೆ ಶಿವಾನುಭವಮಂಟಪಕ್ಕೆ ಬಂದು ಅಲ್ಲಿ ನೆರೆದಿದ್ದ ಪ್ರಭುದೇವ, ಬಸವ, ಮಡಿವಾಳಮಾಚಿದೇವ, ಚನ್ನಬಸವ ಮೊದಲಾದ ಶಿವಜ್ಞಾನಿಗಳಿಗೆ ಸಾಷ್ಟಾಂಗವೆರಗಿದನು ಮತ್ತು ಅವರಿಗೆ ನಡೆದ ಸಂಗತಿಗಳನ್ನೆಲ್ಲ ಅವರಿಗೆ ನಿವೇದಿಸಿದನು.

ಚಂದಯ್ಯನು ತನ್ನ ಆಚರಣೆಯನ್ನು ಕುರಿತು ಶಿವಶರಣರೊಡನೆ ಅಂದದ್ದೇನೆಂದರೆ— ಗುರುಸೇವೆಯಿಂದ ಇಹದಲ್ಲಿ ಮತ್ತು ಲಿಂಗಸೇವೆಯಿಂದ ಪರದಲ್ಲಿ ಸುಖವಿದೆ. ಆದರೆ ಜಂಗಮಸೇವೆ ಮಾಡಿದಲ್ಲಿ ಇಹಪರವೆರಡೂ ಸಾಧಿಸುತ್ತವೆ. ಗುರುಪೂಜಕರು ಲಿಂಗವನ್ನರಿಯರು ಮತ್ತು ಲಿಂಗಪೂಜಕರು ಜಂಗಮವನ್ನರಿಯರು. ಆದರೆ ಭಕ್ತರು ಜಂಗಮದಾಸೋಹದಿಂದ ಗುರು ಮತ್ತು ಲಿಂಗ ಇವರರಡನ್ನೂ ಅರಿತುಕೊಂಡು ಅವುಗಳನ್ನು ತಮ್ಮ ಒಳಗು ಮಾಡಿಕೊಳ್ಳಲು ಸಾಮರ್ಥ್ಯವನ್ನು ಹೊಂದುವರು. ಗುರು ಲಿಂಗ ಜಂಗಮ ಈ ಮೂವರೂ ಜಂಗಮದಲ್ಲಿರುತ್ತಾರೆ. ಆದ್ದರಿಂದ ಜಂಗಮ ದಾಸೋಹವೇ ಘನತರವಾದದ್ದೆಂದು ವಾದಿಸಿದನು.

ಆದರೆ ಪ್ರಭುದೇವ, ಮಡಿವಾಳ ಮಾಚಿದೇವ ಮೊದಲಾದ ಶಿವಶರಣರು ಚಂದಯ್ಯನ ಅಭಿಪ್ರಾಯವನ್ನು ಒಪ್ಪದೆ, ಅದನ್ನು ಖಂಡಿ

ಸುತ್ತ ನುಡಿದದ್ದೇನೆಂದರೆ— ಅಂಗವಿರುವ ವರೆಗೆ ಲಿಂಗ ಪೂಜೆಯನ್ನು ಮಾಡಲೇಬೇಕು. ರತ್ನ ವಿಶೇಷವಿದ್ದರೂ ಅದು ಕುಂದಣದಲ್ಲಿ ಸಂದಿರುವಂತೆ, ಭಕ್ತನು ಲಿಂಗದಲ್ಲಿ ಸಂದಿರಬೇಕು. ಭಕ್ತನು ಜಂಗಮ ದಾಸೋಹದಲ್ಲಿದ್ದರೂ ಅವನು ಲಿಂಗದಿಂದ ದೂರನಾಗಿರಬಾರದು. ಗುರು ಲಿಂಗ ಜಂಗಮಗಳು ಈ ಮೂವರೂ ಪರಸ್ಪರಾವಲಂಬಿಗಳು. ಅವು ಒಂದನ್ನೊಂದು ಬಿಟ್ಟು ಇರಲಾರವು ಎಂದು ವಾದಿಸಿದರು.

ಹೀಗೆ ಎಲ್ಲರೂ ಅನೇಕ ರೀತಿಯಿಂದ ವಾದಮಾಡಿ ಕೊನೆಗೆ ಅವರೆಲ್ಲರೂ ಗುರುಲಿಂಗ ಜಂಗಮದ ರೀತಿಯನ್ನು ಶಿವಜ್ಞಾನಿಯಾದ ಚನ್ನಬಸವಣ್ಣನು ಬಲ್ಲನು, ಅವನು ಅದನ್ನು ತಿಳುಹಬೇಕೆಂತಲೂ ಅವನು ಹೇಳಿದ್ದನ್ನು ಎಲ್ಲರೂ ಒಪ್ಪಬೇಕೆಂತಲೂ ಎಲ್ಲರೂ ಒಡಂಬಡಲು, ಚನ್ನಬಸವಣ್ಣನು ಇವುಗಳ ಮರ್ಮವನ್ನು ಹೇಳುವಲ್ಲಿ ವಿವರಿಸಿದ್ದೇನೆಂದರೆ:—ಗುರುಲಿಂಗ ಜಂಗಮಗಳು ಒಂದನ್ನು ಬಿಟ್ಟು ಒಂದು ಇರಲಾರವು. ಈ ತ್ರಿವಿಧವು ಕೂಡಿದರೆ ಮಾತ್ರ ಅದು ಜಂಗಮದಾಸೋಹವಾಗುವದು. ಗುರು ಕರುಣವೇ ಲಿಂಗವು. ಆ ಲಿಂಗದ ನಿಜತ್ವವೇ ಜಂಗಮವು. ಹೀಗೆ ಭಾವಿಸಿ ಆಚರಿಸುವದೇ ಬಹಿರಂಗದ ವರ್ತನೆಯು. ಇವುಗಳಿಗೆ ಅಂತರಂಗದ ವರ್ತನೆಯೂ ಕೂಡ ಇದೆ. ಆಗ ಸುಜ್ಞಾನವೇ ಜಂಗಮವು. ಆ ಜಂಗಮದ ನಡೆಯೇ ಲಿಂಗವು. ಈ ಎರಡರ ಏಕತ್ವಸಿದ್ಧಿಯೇ ಗುರುವು. ಆದ್ದರಿಂದ ಜಂಗಮ ದಾಸೋಹವಿಲ್ಲದಿದ್ದರೆ ಲಿಂಗತೃಪ್ತಿಯಾಗಲಾರದು. ಹಾಗೆಯೇ ಅಂಗದ ಮೇಲೆ ಲಿಂಗವಿಲ್ಲದಿದ್ದರೆ ಜಂಗಮ ಸೇವೆಯೂ ಘಟಿಸಲಾರದು. ಯಾಕಂದರೆ ಜಂಗಮದ ಅಂಗವು ಲಿಂಗವಾಗಿರುತ್ತದೆ. ಆ ಲಿಂಗ ಚೈತನ್ಯದ ಅರಿವೇ ಜಂಗಮವಾಗಿರುತ್ತದೆ. ಹೀಗೆ ಅವುಗಳ ಪರಸ್ಪರ ಸಂಬಂಧವಿದೆಂದು ಹೇಳಿ ಇದಕ್ಕೆ ಅವನು ಉದಾಹರಣೆಯನ್ನು ಕೊಟ್ಟದ್ದೇನಂದರೆ ಅಂಗವೇ ಮಣ್ಣು, ಲಿಂಗವೇ ಮರವು, ಫಲವೇ ಜಂಗಮವು, ಫಲದ ರುಚಿಯೇ ಪ್ರಸಾದವು ಎಂದು ಹೇಳಬಹುದು. ಗುರು ಲಿಂಗ ಜಂಗಮದ ಪರಸ್ಪರ ಸಂಬಂಧವು ಹೀಗೆ ಇದೆ, ಎಂದು ವಿವರಿಸಿ ನುಡಿದನು. ಇದನ್ನು ಅಲ್ಲಿ ನೆರೆದ ಎಲ್ಲ ಶಿವಶರಣರು ಒಪ್ಪಿದರು. ಅಲ್ಲದೆ ಚಂದಯ್ಯನೂ ಕೂಡ ಒಪ್ಪಿಕೊಂಡು ಇಷ್ಟಲಿಂಗವನ್ನು ಆದರಿಸುವವನಾದನು. ಅಂದಿನಿಂದ ನುಲಿಯ ಚಂದಯ್ಯನು ಕ್ರಿಯಾಜ್ಞಾನ

ಗಳ ಭೇದವನ್ನು ಅರಿತುಕೊಂಡು ಗುರು ಲಿಂಗ ಜಂಗಮಗಳನ್ನು ಸೇವಿಸುವವನಾಗಿ ದಾಸೋಹಿಯಾಗಿ ಅಂತ್ಯದಲ್ಲಿ ಲಿಂಗಾಂಗ ಸಾಮರಸ್ಯವನ್ನು ಹೊಂದಿದನು.

ಶಿವಶರಣರು ಸ್ವತಂತ್ರ ವಿಚಾರಿಗಳು. ಅವರು ತಮ್ಮ ಅನುಭವದಂತೆ ನಡೆಯುವವರು, ಮತ್ತು ನುಡಿಯುವವರು. ಆದ್ದರಿಂದ ಅವರು ಸಮಾಜದಲ್ಲಿ ಉಚ್ಚಸ್ಥಿತಿಯನ್ನು ಹೊಂದಿದವರಾದರು. ಅವರು ಅನುಭವಿಗಳಾದರೂ ಪಠವಾದಿಗಳಾಗಿರಲಿಲ್ಲ. ಅವರು ನಿರಾತಂಕವಾಗಿ ತಮ್ಮ ಅನುಭವಗಳನ್ನು ಇತರ ಶರಣರೊಡನೆ ಹೇಳಿ ಪರಸ್ಪರ ವಿಚಾರವಿನಿಮಯ ಮಾಡುವರು. ಹೀಗೆ ಎಲ್ಲರೂ ಕೂಡಿ ವಿಚಾರಮಾಡಿದ್ದನ್ನು ಅವರು ತಮ್ಮ ತಮ್ಮ ವಚನಗಳ ಮೂಲಕ ಎಲ್ಲ ಕಡೆಗೂ ಪ್ರಸಾರಮಾಡುವರು. ಇದರಿಂದ ವೀರಶೈವ ವಾಙ್ಮಯದಲ್ಲಿ ಅತ್ಯಂತ ಶ್ರೇಷ್ಠವಾದ ವಚನ ವಾಙ್ಮಯವು ಉಂಟಾಗಿರುತ್ತದೆ.

ಬಸವೇಶ್ವರನ ಕಾಲದಲ್ಲಿ ಗುರು ಲಿಂಗ ಜಂಗಮ ಇವುಗಳ ವಿಷಯವಾಗಿ ಬಹು ದೀರ್ಘವಾದ ವಿಚಾರಗಳು ನಡೆದಿದ್ದು ಕಂಡುಬರುತ್ತದೆ. ಭಕ್ತನು ತನ್ನಲ್ಲಿಯೇ ಗುರುತತ್ವ ಲಿಂಗತತ್ವ ಜಂಗಮತತ್ವಗಳನ್ನು ಉಂಟುಮಾಡಿಕೊಂಡು ಲಿಂಗಾಂಗ ಸಾಮರಸ್ಯವನ್ನು ಹೊಂದತಕ್ಕದ್ದು. ಇದೇ ಅವನ ಆಚರಣೆಯಾಗಿರತಕ್ಕದ್ದು. ಈ ವಿವರಗಳು ನುಲಿಯ ಚಂದಯ್ಯನ ಚರಿತ್ರೆಯಲ್ಲಿ ಬಂದಿರುತ್ತವೆ. ಇದಲ್ಲದೆ ಶಿವಶರಣರು ಶಿವಾನುಭವ ಮಂಟಪದಲ್ಲಿ ನೆರೆದು ತಮಗುಂಟಾದ ಅನುಭವಗಳನ್ನು ಹೇಗೆ ಪರಸ್ಪರ ಚರ್ಚಿಸಿ ತಮ್ಮ ನಡೆಗಳನ್ನು ಸರಿಪಡಿಸಿಕೊಳ್ಳುತ್ತಿದ್ದರೆಂಬುದೂ ಈ ಚರಿತ್ರೆಯಿಂದ ತಿಳಿದು ಬರುತ್ತದೆ.

ನುಲಿಯ ಚಂದಯ್ಯನು ವಚನಕಾರನಿದ್ದಾನೆ. ಅವನ ನಾಲ್ಕು ವಚನಗಳು ಮಾತ್ರ ನಮಗೆ ದೊರೆತಿವೆ. ಆದರೆ ಅವನ ಅನೇಕ ವಚನಗಳು ಶೂನ್ಯ ಸಂಪಾದನೆ ಗ್ರಂಥದಲ್ಲಿ ಉದಹರಿಸಲ್ಪಟ್ಟಿವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಇಲ್ಲಿ ಉದಹರಿಸಿದ್ದೇವೆ. ಇವನ ಮುದ್ರಿಕೆಯು 'ಚಂದೇಶ್ವರ' ಎಂದಿದೆ.

ಕಲ್ಯಾಣ ಪಟ್ಟಣಕ್ಕೆ ಬಂದು 'ಬೊಂತಾದೇವಿ' ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ಅವಳು ವಚನಕಾರಳೂ ಇದ್ದಾಳೆ.

ಹೀಗಿರಲು ಒಂದಾನೊಂದು ದಿವಸ ಮಹಾದೇವರಸನ ಗುರುವಿನ ಒಡಹುಟ್ಟಿದವರು ಕಲ್ಯಾಣ ಪಟ್ಟಣದಿಂದ ಕಾಶ್ಮೀರಕ್ಕೆ ತಿರುಗಿ ಬಂದು ಅವನನ್ನು ಕಾಣಲು, ಅವನು ಅವರಿಗೆ ಹಣವನ್ನು ಕಾಣಿಕೆಯಾಗಿ ಕೊಡ ಹೋದನು. ಆದರೆ ಅವರು:—ಈ ಹಣವು ನಮಗೆ ಬೇಡ ಎಂದೆನ್ನಲು, ಅರಸನು—ಹಾಗಾದರೆ ನಿಮಗೇನು ಬೇಕು? ಎಂದು ಕೇಳಲು ಅವರು—ಈ ರಾಜ್ಯದಿಂದ ನಿನಗೆ ಬಂದುದು ನಮಗೆ ಬೇಡ. ಆದರೆ ನಿನ್ನ ಉದ್ಯೋಗದಿಂದ ಬಂದ ಹಣವಿದ್ದರೆ ಅದನ್ನು ಕೊಡು ಎಂದು ಹೇಳಿದರು. ಇಂಥ ಹಣವು ಅರಸನಲ್ಲಿ ಇಲ್ಲದ್ದರಿಂದ ಅವನು ತನ್ನ ವೇಷವನ್ನು ಬದಲಿಸಿಕೊಂಡು ಒಬ್ಬ ಕಮ್ಮಾರನ ಕುಲುಮೆಯಲ್ಲಿ ಹೋಗಿ ಅಲ್ಲಿ ಕೂಲಿಯನ್ನು ಮಾಡುತ್ತ ನಿಂತುಕೊಂಡು ಕಬ್ಬಿಣವನ್ನು ಬಡಿಯಲಿಕ್ಕೆ ಹತ್ತಿದನು. ಹೀಗೆ ಕಾಯಕವನ್ನು ಮಾಡಿ ಆ ಕಮ್ಮಾರನ ಕಡೆಯಿಂದ ಒಂದು ಕಬ್ಬಿಣದ ಗಟ್ಟಿಯನ್ನು ಕೂಲಿಯಾಗಿ ತೆಗೆದುಕೊಂಡು ಬಂದು ಅದನ್ನು ತನ್ನ ಗುರುವಿನ ಒಡಹುಟ್ಟಿದವರಿಗೆ ಕಾಣಿಕೆಯಾಗಿ ತಂದು ಕೊಟ್ಟನು. ಅವರು ಅದನ್ನು ಆನಂದದಿಂದ ಸ್ವೀಕರಿಸಿ ತೆಗೆದುಕೊಂಡು ಹೋಗಲು ಅದು ಅವರಲ್ಲಿ ಚಿನ್ನವಾಯಿತು!

ರಾಜನು ತಾನು ಕೂಲಿಯಾಗಿ ಕೊಟ್ಟ ಕಬ್ಬಿಣದ ತುಂಡು ಹೀಗೆ ಚಿನ್ನವಾದುದನ್ನು ಕೇಳಿ ಅವನಲ್ಲಿ ವಿರಕ್ತಿಯುಂಟಾಯಿತು. ಅವನಲ್ಲಿ ರಾಜ್ಯಮೋಹವು ತಪ್ಪಿತು. ಅವನು—ಈ ರಾಜ್ಯವು ಅನಿತ್ಯವಾದುದು, ಇದರಲ್ಲಿ ಹುರುಳಿಲ್ಲ ಎಂದು ಭಾವಿಸಿ ತನ್ನ ಪಟ್ಟಣವನ್ನು ತನ್ನ ಮಗನಾದ 'ಲಿಂಗಾರತಿ'ಗೆ ಕೊಟ್ಟು, ಶಿವಶರಣರಿಂದ ಶಿವಾನುಭವವನ್ನು ಅರಿಯಬೇಕೆಂದು ಕಲ್ಯಾಣ ಪಟ್ಟಣಕ್ಕೆ ಹೊರಟನು. ಅವನೊಡನೆ ಸಾಧ್ವಿಯಾದ ಅವನ ಹೆಂಡತಿ ಗಂಗಾಂಬಿಕೆಯೂ ಹೊರಟಳು.

ಕಲ್ಯಾಣ ಪಟ್ಟಣವು ಕಾಶ್ಮೀರ ದೇಶದಿಂದ ಬಹು ದೂರವಾಗಿರುತ್ತದೆ. ಆದರೆ ಉಭಯತರು ಮಾರ್ಗಕ್ರಮಣ ಮಾಡುವಲ್ಲಿ ಅವರಿಗೆ ಶಿವಭಕ್ತಿಯೇ ರಥವಾಯಿತು. ಜ್ಞಾನವೇ ಅವರಿಗೆ ಚತ್ತರಿಗೆಯಾಯಿತು. ಲಿಂಗಾಂಗ ಸಮರಸಾಚರಣೆಯೇ ಅವರಿಗೆ ಸಕಲೋಪಚಾರವಾಯಿತು.

ಪಂಚೇಂದ್ರಿಯಗಳೇ ಅವರಿಗೆ ಚತುರಂಗಬಲವಾಯಿತು. ಹೀಗೆ ಅವರು ಮಾರ್ಗಾಯಾಸವಿಲ್ಲದೆ ಆನಂದದಿಂದ ಮಾರ್ಗ ಕ್ರಮಣ ಮಾಡುತ್ತ ಭೂ ಕೈಲಾಸವೆನಿಸಿಕೊಂಡ ಕಲ್ಯಾಣ ಪಟ್ಟಣಕ್ಕೆ ಬಂದು ಮುಟ್ಟಿದರು.

ಅವರು ಕಲ್ಯಾಣಕ್ಕೆ ಬಂದಬಳಿಕ ಅವರು ತಾವಾರೆಂಬುದನ್ನು ಯಾರಿಗೂ ತಿಳಿಯಗೊಡಲಿಲ್ಲ. ಮಹಾದೇವರಾಜನು ತಾನು ಮೋಳಿಗೆಯ ಮಾರಯ್ಯನೆಂತಲೂ, ಗಂಗಾಂಬಿಕೆಯು ತಾನು ಮಹಾದೇವಿಯಮ್ಮ ನೆಂತಲೂ ಹೆಸರು ಇಟ್ಟುಕೊಂಡರು. ರಾಜನು ಕಟ್ಟಿಗೆಯ ಕಾಯಕವನ್ನು ಕೈಕೊಂಡು, ದಿನಾಲು ಕಾಂತಾರಕ್ಕೆ ಹೋಗಿ ಕೊಡಲಿಯಿಂದ ಕಟ್ಟಿಗೆ ಗಳನ್ನು ಕಡಿದು ತಂದು, ಅಂಗಡಿಗಳಲ್ಲಿ ಮಾರಿ, ಇದರಿಂದ ಬಂದ ಹಣ ದಿಂದ ಜಂಗಮ ದಾಸೋಹ ಕಾರ್ಯಗಳನ್ನು ನಡಿಸಹತ್ತಿದನು. ಅವನು ಹೀಗೆ ಕಾಯಕವನ್ನು ಮಾಡುತ್ತ ಶಿವಾನುಭವದ ಆಚರಣೆಯಲ್ಲಿ ನಿರತ ನಾಗಿ ಪಟ್ಟಣದಲ್ಲಿ ಒಬ್ಬ ಶ್ರೇಷ್ಠ ಶಿವಾನುಭವಿ ಎಂದು ಹೆಸರು ಹೊಂದಿ ದನು. ಅವನಿಗೆ ಈ ಮಾರ್ಗವು ರಾಜವೈಭವದ ಉಪಭೋಗಕ್ಕಿಂತಲೂ ಹೆಚ್ಚಿಗೆ ಸುಖವೆನಿಸಿತು.

ಕಲ್ಯಾಣ ಪಟ್ಟಣದಲ್ಲಿದ್ದ ಜಂಗಮರು ಮೋಳಿಗೆ ಮಾರಯ್ಯನ ಈ ಉನ್ನತವಾದ ಶಿವಾನುಭವದ ನಡೆಯನ್ನು ತಿಳಿದವರಾಗಿ ಅವರು ಅವ ನನ್ನು ಬಸವೇಶ್ವರನ ಮುಂದೆ ಬಹಳ ಹೊಗಳಹತ್ತಿದರು. ಗುಣ ಗ್ರಾಹಿಯಾದ ಬಸವೇಶ್ವರನು ಅದನ್ನು ಕೇಳಿ ಮಾರಯ್ಯನನ್ನು ನೋಡ ಬೇಕೆಂದು ಒಂದು ದಿವಸ ತನ್ನ ಮಂತ್ರಿಯ ಉಡುಪುಗಳನ್ನು ತೆಗೆ ದಿಟ್ಟು ಒಬ್ಬ ಸಾಮಾನ್ಯ ಭಕ್ತನ ವೇಷವನ್ನು ಧರಿಸಿಕೊಂಡು ಅವನ ಮನೆಗೆ ಬಂದನು. ಆಗ ಮಾರಯ್ಯನು ಮನೆಯಲ್ಲಿ ಇದ್ದಿದ್ದಿಲ್ಲ. ಅವನು ಕಟ್ಟಿಗೆ ಕಡಿಯಲಿಕ್ಕೆ ಅಡವಿಗೆ ಹೋಗಿದ್ದನು. ಆದರೆ ಮನೆಯಲ್ಲಿ ಅವನ ಹೆಂಡತಿ ಮಹಾದೇವಿಯಮ್ಮನು ಇದ್ದದ್ದನ್ನು ನೋಡಿ ಬಸವೇ ಶ್ವರನು ಅವಳಿಗೆ ನಮಸ್ಕರಿಸಲು, ಅವಳು ಇವನೊಬ್ಬ ದೇಶಾಂತರಿ ಎಂದು ಭಾವಿಸಿ, ಅವನಿಗೆ ಲಿಂಗಾರ್ಚನೆಯನ್ನು ಮಾಡಿಸಿ ಬಹಳ ಸತ್ಕರಿ ಸಿದಳು. ಬಸವೇಶ್ವರನು ಅವರ ಮನೆಯನ್ನು ನೋಡುತ್ತಾನೆಯೋ, ಒಳಗೆ ಸೌಕರ್ಯದ ಪದಾರ್ಥಗಳೇನೂ ಕಾಣಲಿಲ್ಲ. ಇದರಿಂದ ಮಾರ ಯ್ಯನು ಅತ್ಯಂತ ಬಡವನಾಗಿರುತ್ತಾನೆಂದು ಅವನಿಗೆ ಕಂಡು ಬಂದಿತು.

ಆದ್ದರಿಂದ ಅವನು ಪ್ರಸಾದವನ್ನು ಭುಂಜಿಸಿ ಹೊರಗೆ ಹೋಗುವ ಕಾಲ ದಲ್ಲಿ ಪ್ರತಿಯೊಂದರಲ್ಲಿ ಸಾವಿರ ಹೊನ್ನು ತುಂಬಿದ ಎರಡು ಜಾಳಿಗೆಗಳನ್ನು ಮಹಾದೇವಿಯಮ್ಮನಿಗೆ ತಿಳಿಯದಂತೆ ಮನೆಯಲ್ಲಿರಿಸಿ ಅವಳಿಗೆ ಕೈ ಮುಗಿದು 'ಶರಣಾರ್ಥಿ' ಎಂದು ಹೇಳಿ ಹೊರಟು ಹೋದನು.

ಮೋಳಿಗೆಯ ಮಾರಯ್ಯನು ಮಧ್ಯಾಹ್ನ ಸಮಯದಲ್ಲಿ ಕಾಡಿನಿಂದ ಕಟ್ಟಿಗೆಯ ಹೊರೆಯನ್ನು ಹೊತ್ತು ತಂದು ಮನೆಯ ಬಾಗಿಲಲ್ಲಿ ಚಲ್ಲಿ ಸ್ನಾನಕ್ಕೆಂದು ಮಜ್ಜನ ಶಾಲೆಗೆ ಹೋದನು. ಅಲ್ಲಿ ನೋಡುತ್ತಾನೆಯೋ, ಅಲ್ಲಿ ಒಂದು ಮೂಲೆಯಲ್ಲಿ ಹೊನ್ನು ತುಂಬಿದ ಎರಡು ಜಾಳಿಗೆಗಳನ್ನು ಕಂಡನು. ಅದರ ವಿಷಯವಾಗಿ ಸತಿಯನ್ನು ಕೇಳಲಾಗಿ ಅವಳು ಒಬ್ಬ ಭಕ್ತನು ಇಲ್ಲಿಗೆ ಬಂದಿದ್ದನು, ಅವನು ಶಿವಾರ್ಚನೆ ಮಾಡಿ ಹೋದನು, ಎಂದು ತಿಳಿಸಿದಳು. ಆಗ ಮಾರಯ್ಯನು ಹಾಗೆ ಬಂದು ಹೋದವನು ಮತ್ತು ಹಣವನ್ನಿಟ್ಟವನು ಬಸವೇಶ್ವರನೇ ಅಹುದು ಎಂದು ಆಗಲೇ ತಿಳಿ ದವನಾಗಿ—ನಾವು ದುಡಿದದ್ದು ನಮಗೆ ಸಾಲುತ್ತದೆ. ನಾವು ಸುಖಿಗಳು. ನಮಗೆ ಈ ದುಡ್ಡಿನ ಹೆಮ್ಮೆ ಬೇಡ. ಆದರೆ ಬಸವೇಶ್ವರನು ನಾವು ನಿರ್ಧನಿಕ ರೆಂದು ಈ ಹೊನ್ನನ್ನು ನಮಗೆ ಕೊಟ್ಟು ಹೋಗಿದ್ದಾನೆಯೋ? ನಾವು ಬಡವರೇ? ಎಂದು ಕೋಪಿಸಿಕೊಂಡಿರಲು, ಅಷ್ಟರಲ್ಲಿ ಇಬ್ಬರು ಜಂಗ ಮರು ಮನೆಗೆ ಬಂದರು. ಮಾರಯ್ಯನು ಅವರನ್ನು ಮನೆಯಲ್ಲಿ ಬರ ಮಾಡಿಕೊಂಡು ಅವರಿಗೆ ಆ ಹೊನ್ನಿನ ಎರಡೂ ಜಾಳಿಗೆಗಳನ್ನು ಕೊಟ್ಟು ಬಿಟ್ಟನು. ಮತ್ತು ಅವರ ಪಾದತೀರ್ಥವನ್ನು ತೆಗೆದುಕೊಂಡು ಕಾಯ ಕದಿಂದ ತಾನು ತಂದಿದ್ದ ಕಟ್ಟಿಗೆಗಳ ಮೇಲೆ ಆ ತೀರ್ಥವನ್ನು ಚೆಲ್ಲ ಲಾಗಿ ಅವು ಹೊನ್ನದಂಡಗಳಾದವು. ಮಾರಯ್ಯನು ಅವುಗಳನ್ನು ಕಡಿ ಕಡಿದು ತನ್ನ ಮನೆಗೆ ಬರುತ್ತಿದ್ದ ಜಂಗಮರಿಗೆ ಕೊಟ್ಟು ಬಿಡಹತ್ತಿದನು. ಹೀಗೆ ಅವನು ಬಹುಜನ ಜಂಗಮರಿಗೆ ಕಾಣಿಕೆಗಳನ್ನು ಕೊಟ್ಟನು.

ಈ ಸಂಗತಿಯು ಬಸವೇಶ್ವರನಿಗೆ ತಿಳಿಯಲಾಗಿ, ಅವನು—ನಾನು ತಪ್ಪು ಮಾಡಿದೆನೆಂದು ಅವನಿಗೆ ಎನಿಸಿತು. ಅವನಿಗೆ ಪಶ್ಚಾತ್ತಾಪವಾ ಯಿತು. ಅವನು ಕೂಡಲೆ ಮೋಳಿಗೆಯ ಮಾರಯ್ಯನ ಮನೆಗೆ ಹೋಗಿ ಅವನಿಗೆ—ನಾನು ನಿಮಗೆ ತಪ್ಪು ಮಾಡಿದೆನು, ನನ್ನನ್ನು ಕ್ಷಮಿಸಬೇಕು, ಎಂದು ಸತಿಪತಿಗಳೀರ್ವರ ಚರಣಕ್ಕೆರಗಿದನು.

ಅಂದಿನಿಂದ ಮೋಳಿಗೆಯ ಮಾರಯ್ಯನ ಮಹಿಮೆಯು ಕಲ್ಯಾಣ ಪಟ್ಟಣದಲ್ಲೆಲ್ಲ ಮತ್ತಿಷ್ಟು ಹೆಚ್ಚಿಗೆ ಎಲ್ಲರಿಗೂ ಅರಿಕೆಯಾಗಹತ್ತಿತು. ಅವನಿಗೆ ಶಿವಾನುಭವಮಂಟಪದಲ್ಲಿ ಶ್ರೇಷ್ಠಸ್ಥಾನವು ಉಂಟಾಯಿತು. ಅವನು ಅತ್ಯಂತ ಜ್ಞಾನಿಯು ಮತ್ತು ಶಿವಾನುಭವಿಯು. ಆದ್ದರಿಂದ ಮಂಟಪದಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳಲ್ಲಿ ಅವನು ನುಡಿದ ವಿಚಾರಗಳನ್ನು ಎಲ್ಲ ಶಿವಶರಣರು ಅತ್ಯಂತವಾಗಿ ಮನ್ನಿಸಹತ್ತಿದರು.

ಮೋಳಿಗೆಯ ಮಾರಯ್ಯನು ಶ್ರೇಷ್ಠತರಗತಿಯ ವಚನಕಾರನಿದ್ದಾನೆ. 'ನಿಷ್ಕಳಂಕ ಮಲ್ಲಿಕಾರ್ಜುನ' ಎಂಬುದು ಅವನ ಮುದ್ರಿಕೆಯು. ಅವನು ರಚಿಸಿದ ವಚನಗಳಲ್ಲಿ ಶಿವಾನುಭವದ ಉಚ್ಚ ವಿಚಾರಗಳು ತುಂಬಿ ಹೋಗಿರುತ್ತವೆ. ಅವನ ಏಳೆಂಟು ನೂರು ವಚನಗಳು ಈಗ ಉಪಲಬ್ಧವಿರುತ್ತವೆ. ಅವನ ಉಕ್ತಿಗಳನ್ನು ಉದಹರಿಸದ ಯಾವ ವಚನ ಸಂಗ್ರಹಕಾರನೂ ಇರುವದಿಲ್ಲ. ಅವನ ಅನೇಕ ವಚನಗಳನ್ನು ನಾವು ವಚನಶಾಸ್ತ್ರಸಾರ ಭಾಗ ೧ ಈ ಗ್ರಂಥದಲ್ಲಿ ಹೇರಳವಾಗಿ ಉದಹರಿಸಿದ್ದೇವೆ. ಆದುದರಿಂದ ಅವುಗಳನ್ನು ನಾವು ಇಲ್ಲಿ ಮಾದರಿಗಾಗಿ ಬೇರೆ ಉದಹರಿಸಿರುವದಿಲ್ಲ.

ಮೋಳಿಗೆಯ ಮಾರಯ್ಯನು ಬಸವೇಶ್ವರನ ಅಂತ್ಯಕಾಲದ ವರೆಗೂ ಕಲ್ಯಾಣಪಟ್ಟಣದಲ್ಲಿಯೇ ಇದ್ದನು. ಶಿವಶರಣರು ಉಳಿವಿಗೆ ಹೋದ ಬಳಿಕ ಸಹ ಅವನು ಅವರೊಡನೆ ಕಲ್ಯಾಣಬಿಟ್ಟು ಬೇರೆಕಡೆಗೆ ಹೋದಂತೆ ತೋರುವದಿಲ್ಲ. ಅವನು ಕಲ್ಯಾಣಪಟ್ಟಣದ ಸಮೀಪದಲ್ಲಿಯೇ ವಾಸ ಮಾಡಿಕೊಂಡು ಅಲ್ಲಿಯೇ ಐಕ್ಯಹೊಂದಿದನೆಂದು ತೋರುತ್ತಿದೆ. ಅವನ ಹೆಸರಿನ ಒಂದು ಸ್ಥಾನವು ಕಲ್ಯಾಣದಿಂದ ಹುಮನಾಬಾದಿಗೆ ಹೋಗುವ ದಾರಿಯಲ್ಲಿ ೮-೧೦ ಮೈಲುಗಳ ಮೇಲೆ ಈಗಲೂ ಇರುತ್ತದೆ. ಅಲ್ಲಿಯೇ ಅವನು ಶಿವೈಕ್ಯನಾಗಿರಬಹುದೆಂದು ತೋರುತ್ತದೆ.

ಈಪ್ರಕಾರ ಮೋಳಿಗೆಯ ಮಾರಯ್ಯನು ತನ್ನ ರಾಜಪದವಿಯನ್ನು ಬದಿಗೊತ್ತಿ, ಕಲ್ಯಾಣಕ್ಕೆ ಬಂದು ಅಲ್ಲಿ ಒಂದು ಕಾಯಕವನ್ನು ಕೈಕೊಂಡು ನಾದಾವೃತ್ತಿಯವನೂ, ಶ್ರೇಷ್ಠ ಶಿವಜ್ಞಾನಿಯೂ, ಉಚ್ಚತರದ ವಚನಕಾರನೂ ಎನಿಸಿಕೊಂಡು ಶಿವಶರಣರಲ್ಲಿ ಉನ್ನತಸ್ಥಾನವನ್ನು ಹೊಂದಿದ್ದಾನೆ.

ಅವನ ವಚನಗಳು ಅತ್ಯಂತ ಉದಾತ್ತವಾದವುಗಳು. ಅವು ಕನ್ನಡ ವಾಙ್ಮಯದಲ್ಲಿ ಉಚ್ಚ ಸ್ಥಾನವನ್ನು ಹೊಂದಿರುತ್ತವೆ.

---

# ಮಹಾದೇವಿಯಮ್ಮ

ಮಹಾದೇವಿಯಮ್ಮನು ಮೋಳಿಗೆಯ ಮಾರಯ್ಯನ ಹೆಂಡತಿಯು. ಮೋಳಿಗೆಯ ಮಾರಯ್ಯನು ಕಾಶ್ಮೀರದೇಶದಲ್ಲಿ ಮಹಾದೇವರಾಜನೆಂಬ ಹೆಸರಿನಿಂದ ಮಾಂಡವ್ಯಪುರದಲ್ಲಿ ರಾಜ್ಯವನ್ನಾಳುವಾಗ ಮಹಾದೇವಿಯಮ್ಮನು ರಾಜವೈಭವವನ್ನು ಅನುಭವಿಸಿದವಳು. ಅವಳ ಮೊದಲಿನ ಹೆಸರು ಗಂಗಾದೇವಿ ಎಂಬುದಾಗಿತ್ತು. ಆದರೆ ಮುಂದೆ ಅವಳೂ ಅವಳ ಪತಿಯಾದ ಮೋಳಿಗೆಯ ಮಾರಯ್ಯನೂ ಮಾರಯ್ಯನ ತಂಗಿಯಾದ ಬೊಂತಾದೇವಿಯೂ ಶಿವಾನುಭವಕ್ಕೆ ಪ್ರೀತಿಯನ್ನು ವಹಿಸಿದವರಾದರು. ಅವರಲ್ಲಿ ಬೊಂತಾದೇವಿಯು ಲಗ್ನವನ್ನು ತ್ಯಜಿಸಿ ಶಿವಶರಣರನ್ನು ಕಾಣಬೇಕೆಂದು ಕಲ್ಯಾಣಪಟ್ಟಣಕ್ಕೆ ಹೋದಳು. ಆಮೇಲೆ ಮೋಳಿಗೆಯಮಾರಯ್ಯನೂ ಅದೇರೀತಿಯಾಗಿ ಕಲ್ಯಾಣಕ್ಕೆ ಹೊರಡಲು ಗಂಗಾದೇವಿಯೂ ಕೂಡ ಪತಿಯೊಡನೆ ಹೋಗಲು ಸಿದ್ಧಳಾದಳು. ಅವಳು ಕಲ್ಯಾಣಕ್ಕೆ ಹೋದಬಳಿಕ ಮಹಾದೇವಿಯಮ್ಮನೆಂದು ಹೆಸರನ್ನಿಟ್ಟುಕೊಂಡಳು. ಅಲ್ಲಿ ಉಭಯದಂಪತಿಗಳು ಶಿವಾನುಭವದಲ್ಲಿ ಕಾಲಕಳೆಯಹತ್ತಿದರು. ರಾಜವೈಭವಕ್ಕಿಂತಲೂ ದಿನಾಲು ಕಾಯಕವನ್ನು ಮಾಡಿ ಅದರಿಂದ ಬಂದುದರಲ್ಲಿ ತೃಪ್ತರಾಗಿರುವದೇ ಅವರಿಗೆ ಸುಖವೆನಿಸಿತು. ಬಸವೇಶ್ವರನ ಸನ್ನಿಧಿಯಲ್ಲಿ ಶಿವಶರಣರು ನಡಿಸುತ್ತಿದ್ದ ಶಿವಾನುಭವಗೋಷ್ಠಿಗಳಲ್ಲಿರುವರು. ಉಭಯತರೂ ವಚನಗಳನ್ನು ರಚಿಸಿದ್ದಾರೆ. ಮಹಾದೇವಿಯಮ್ಮನ ಮುದ್ರಿಕೆಯು 'ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ' ಎಂದಿದೆ. ಅವಳ ೪೧ ವಚನಗಳು ಮಾತ್ರ ನಮಗೆ ಉಪಲಬ್ಧವಿವೆ. ಅವುಗಳಲ್ಲಿ ಕ್ರಿಯಾಜ್ಞಾನಗಳ ಸಂಬಂಧ, ಇಷ್ಟಲಿಂಗ ಪ್ರಾಣಲಿಂಗಗಳ ಪರಸ್ಪರ ಸಂಬಂಧ, ಷಟ್‌ಸ್ಥಲಗಳ ಸ್ವರೂಪ, ಇವುಗಳನ್ನು ಬಹು ಮಾರ್ಮಿಕವಾಗಿ ವಿವೇಚಿಸಿದ್ದಾಳೆ. ಈಕೆಯ ವಚನಗಳಲ್ಲಿ ಕೆಲವುಗಳನ್ನು ಮಾತ್ರ ಮಾದಿರಿಗಾಗಿ ಇಲ್ಲಿ ಉದಹರಿಸಿದ್ದೇವೆ.

## ವಚನಗಳು.

(೧) ಮಣ್ಣನಿತ್ತು ನಿನ್ನ ಕಂಡಿಹೆನೆಂದರೆ ಜಗಭರಿತ ನೀನು. ಹೊನ್ನನಿತ್ತು ನಿಮ್ಮ ಕಂಡಿಹೆನೆಂದರೆ ಹಿರಣ್ಯಮೂರ್ತಿ ನೀನು. ಹೆಣ್ಣುಕೊಟ್ಟು ನಿಮ್ಮ ಕಂಡಿಹೆನೆಂದರೆ ತ್ರಿವಿಧಶಕ್ತಿಮೂರ್ತಿ ನೀನು. ಮನವ

ನಿತ್ತು ಕಂಡಿಹೆನೆಂದರೆ ಮನೋಮೂರ್ತಿ ನೀನು. ಎನಗೇನು ನಿನಗಿತ್ತ ಕಾಂಬ ಕಾಣಿಕೆ? ನೀನು ಶಿಕ್ಷವುದಕ್ಕೆ ಕ್ರಿಯಲ್ಲಿ ನಿರತ, ಸದ್ಭಾವದಲ್ಲಿ ಶುದ್ಧ. ಹಿಡಿಮದ ಬಿಡದೆ ಬಿಟ್ಟುದ ಹಿಡಿಯದೆ, ನಿಷ್ಠೆಯುವಹ ನಿಜಜ್ಞಾನಿಗಳಲ್ಲಿ ಬೆಚ್ಚಂತಿದ್ದರೆ ನೀನು ಅಲ್ಲಿ ತಪ್ಪದಿಪ್ಪೆ ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ.

(೨) ಹೃತ್ಕಮಲ ಮಧ್ಯದಲ್ಲಿ ಲಿಂಗವ ಸರ್ವಾಂಗದಲ್ಲಿ ವೇಧಿಸಿ ಪರಿಪೂರ್ಣವಪ್ಪ ಲಿಂಗವ ಅಂತರ್ಮುಖದಿಂದ ಬಾಹ್ಯಮುಖಕ್ಕೆ ತಂದಲ್ಲಿ ಪಂಚಸ್ಥಾನದಲ್ಲಿಪ್ಪ ಲಿಂಗವ ಕರಸ್ಥಲದಲ್ಲಿ ಮೂರ್ತಿಗೊಳಿಸಲಿಕ್ಕಾಗಿ ಕಂಗಳ ತುಂಬಿ ಬಾಹ್ಯದೃಷ್ಟಿಯುರತು ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ ದೃಕ್ಕಿಂಗೆ ತೋರುವದೆಲ್ಲವೂ ಲಿಂಗಮಯವಾಗಿ ಏನ ಮುಟ್ಟಿ ಹಿಡಿದಲ್ಲಿಯೂ, ಪುಷ್ಪಮಯವಾಗಿ ಜಿಹ್ವೆಯಲ್ಲಿ ತೋರಿದ ಅಪ್ಪರಸ ಮುಂತಾದುದೆಲ್ಲವೂ ಅರ್ಪಿತಮಯವಾಗಿ ಇಂತಪ್ಪ ವ್ಯವಧಾನ, ಸರ್ವಾಂಗಲಿಂಗಿಯ ವಿವರ. ಇಷ್ಟ ಅರಿವೆಂದು ಉಭಯದ ದೃಷ್ಟ ಕೆಟ್ಟಲ್ಲಿ ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನೆಂಬುವಕ್ಕೆ ಇದಿರೆಡೆಯಿಲ್ಲ.

(೩) ಮೂಲದ ಬೇರಿನ ಸುಗಂಧ ಎಲೆಬಳ್ಳಿಯನೇತಕ್ಕೆ ವೇಧಿಸದು? ಕುಸುಮದ ಸುವಾಸನೆ ತನ್ನಯ ತೊಟ್ಟು ಎಲೆ ಕೊನರು ಬೇರುವನೇಕೆ ವೇಧಿಸದು? ಇದು ಇಷ್ಟಪ್ರಾಣಯೋಗದ ಭೇದ. ಗಿಡು ಗಿಡುವಿಗೆ ಕುರುಹಲ್ಲದೆ ಗಂಧ ಗಂಧ ಕೂಡಿದಲ್ಲಿ ದ್ವಂದ್ವವಡಗಿ ಬೆರೆದಲ್ಲಿ ಕದಂಬಗಂಧವಲ್ಲದೆ ಒಂದರ ಗಂಧವೆಂದು ಸಂಧಿಸಿ ತೆಗೆಯಲಿಲ್ಲ. ಅವರು ನಿಂದ ಸ್ಥಲಕ್ಕೆ ಸಂಬಂಧವಾಗಿಪ್ಪರು. ಇದು ದೃಷ್ಟಾನುಭಾವ ಸಿದ್ಧ, ಸರ್ವಸ್ಥಲಭೇದ, ವಿಶ್ವತೋಮುಖರೂಪು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳ ಮಲ್ಲಿಕಾರ್ಜುನನು ತತ್ವಭಕ್ತಿ ಸ್ವರೂಪನು.

(೪) ನೀರು ನೆಲನಿಲ್ಲದೆ ಇರಬಹುದೇ? ಬೀಜ ನೆಲೆಯಿಲ್ಲದೆ ಹುಟ್ಟಬಹುದೇ? ಜ್ಞಾನ ಕ್ರಿ ಇಲ್ಲದೆ ಅರಿಯಬಹುದೇ? ಚಿತ್ತು ಚಿತ್ತವಿಲ್ಲದೆ ವಸ್ತು ಲಕ್ಷಿಸಿ ಗ್ರಹಿಸಬಹುದೇ? ಇಂತೀ ಕ್ರಿಜ್ಞಾನ ಸಂಬಂಧಸ್ಥಲ ಭಾವ. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಉಭಯಸ್ಥಲಭೇದ.

---

# ಸೊಡ್ಡಳ ಬಾಚರಸ.

ಸೊಡ್ಡಳ ಬಾಚರಸನು ಬಿಜ್ಜಳನ ಆನೆ ಮತ್ತು ಕುದುರೆಗಳಿಗೆ ಧಾನ್ಯವನ್ನು ಅಳೆದು ಕೊಡುವ ಅರಮನೆಯ ಅಧಿಕಾರಿಯಾಗಿದ್ದನು. ಅವನು ಅರಮನೆಯಲ್ಲಿ ಧಾನ್ಯದ ಕಣಜಗಳನ್ನು ಇಟ್ಟುಕೊಂಡು ಅವುಗಳಲ್ಲಿದ್ದ ಧಾನ್ಯಗಳನ್ನು ದಿನಾಲು ಸೇವಕರಿಗೆ ಅಳೆದು ಕೊಡುವನು. ತಾನು ಹೀಗೆ ಅಳೆದು ಕೊಟ್ಟದ್ದರ ಲೆಕ್ಕವನ್ನು ಗಣಕರಿಂದ ಬರೆಯಿಸುತ್ತ ಬಿಜ್ಜಳರಾಜನಲ್ಲಿ ಬಹು ದಿವಸಗಳಿಂದಲೂ ಊಳಿಗವನ್ನು ಮಾಡುತ್ತಬಂದನು. ಅವನು ಮೊದಲು ಬಲದೇವ ಮಂತ್ರಿಯಿಂದ ಈ ಸ್ಥಳಕ್ಕೆ ನೇಮಿಸಲ್ಪಟ್ಟು ಅವನಿಗೆ ಅತ್ಯಂತ ನಂಬಿಗಸ್ತನಾಗಿದ್ದನು. ಮುಂದೆ ಬಸವೇಶ್ವರನು ಬಿಜ್ಜಳನ ಭಂಡಾರದ ಮೇಲೆ ಕೋಶಾಧಿಪತಿಯಾಗಿ ನೇಮಿಸಲ್ಪಟ್ಟ ಬಳಿಕ ಅವನ ನಿದರ್ಶನದಲ್ಲಿ ಸೊಡ್ಡಳ ಬಾಚರಸನು ಪಡಿಯನ್ನು ಅಳೆದು ಕೊಡುವ ತನ್ನ ಕಾಯಕವನ್ನು ನಡಿಸುತ ಬಂದನು. ಬಸವೇಶ್ವರನು ಅವನ ಸತ್ಯತೆಯನ್ನೂ ನಿಷ್ಠೆಯನ್ನೂ ನೋಡಿ ಅವನಲ್ಲಿ ಅತ್ಯಂತ ಅನುರಾಗವನ್ನು ತಾಳಿದವನಾಗಿದ್ದನು.

ಸೊಡ್ಡಳ ಬಾಚರಸನು ಸೌರಾಷ್ಟ್ರ ಅಂದರೆ ಗುಜರಾಥ ದೇಶದಲ್ಲಿ ಅತ್ಯಂತ ಪ್ರಸಿದ್ಧಿಹೊಂದಿದ ಸೋಮನಾಥನ ಕೇವಲ ಭಕ್ತನಾಗಿದ್ದನು. ಅವನು ದಿನಾಲು ಸೋಮನಾಥನನ್ನು ಬಹು ಭಕ್ತಿಯಿಂದ ಭಜಿಸುವನು. ಅಲ್ಲದೆ ಅವನು ಶ್ರೇಷ್ಠತರಗತಿಯ ಶಿವಾನುಭವಿಯೂ ಆಗಿದ್ದನು. ಬಸವೇಶ್ವರನ ಸಮ್ಮುಖದಲ್ಲಿ ನಡಿಯುತ್ತಿದ್ದ ಶಿವಾನುಭವ ಗೋಷ್ಠಿಗಳಲ್ಲಿ ಯಾವಾಗಲೂ ನಿರತನಾಗಿ ಇತರ ಶಿವಶರಣರಂತೆ ತಾನೂ ತನ್ನ ಅನುಭವಗಳನ್ನು ವಚನಗಳ ಮೂಲಕ ನಿರೂಪಿಸುವನು. ಅವನ ವಚನಗಳ ಮುದ್ರಿಕೆಯು 'ಸೊಡ್ಡಳಾ' ಅಥವಾ 'ದೇವರಾಯ ಸೊಡ್ಡಳಾ' ಎಂದಿದೆ. ನಮಗೆ ದೊರೆತ ಅವನ ೫೬ ವಚನಗಳನ್ನು ನಾವು ಶಿವಾನುಭವ ಗ್ರಂಥ ಮಾಲೆಯಲ್ಲಿ ಪ್ರಕಟಿಸಿದ್ದೇವೆ.

ಈ ಪ್ರಕಾರ ಸೊಡ್ಡಳ ಬಾಚರಸನು, ಬಸವೇಶ್ವರನೊಡನೆ ಶಿವಾನುಭವ ಗೋಷ್ಠಿಗಳಲ್ಲಿರುವದನ್ನು ಬಸವೇಶ್ವರನ ವಿರೋಧಿಗಳು ಕಂಡು ಅದನ್ನು ಸಹಿಸಲಾರದೆ ಉಭಯತರ ವಿಷಯವಾಗಿ ಅನೇಕ ಸುಳ್ಳು

ಆರೋಪಗಳನ್ನು ಹುಟ್ಟಿಸಿ ಅವುಗಳನ್ನು ಬಿಜ್ಜಳನಿಗೆ ನಿವೇದಿಸಹತ್ತಿದರು. ಬಿಜ್ಜಳನು ಅವುಗಳನ್ನು ನಂಬಿ ಉಭಯತರ ವಿಷಯವಾಗಿ ಕಲುಷಿತ ಮನಸ್ಕನಾಗಿ ಅವರೊಡನೆ ವರ್ತಿಸಹತ್ತಿದನು.

ಹೀಗಿರಲು ಶಿವರಾತ್ರಿಯ ದಿವಸವು ಸಮೀಪಕ್ಕೆ ಬರಲು ಸೊಡ್ಡಳ ಬಾಚರಸನು ಒಂದು ದಿವಸ ಬಿಜ್ಜಳನಿಗೆ — ನಾನು ಸೋಮೇಶ್ವರನ ದರ್ಶನವನ್ನು ಹೊಂದಲು ಸೌರಾಷ್ಟ್ರಕ್ಕೆ ಹೋಗಬೇಕೆಂದಿದ್ದೇನೆ. ಅಲ್ಲಿಗೆ ಹೋಗಲು ದಯಮಾಡಿ ಅಪ್ಪಣೆ ಕೊಡಬೇಕೆಂದು ಅವನಿಗೆ ಕೇಳಿಕೊಂಡನು. ಆದರೆ ಬಿಜ್ಜಳನು ಅವನ ವಿನಂತಿಯನ್ನು ಮಾನ್ಯಮಾಡದೆ ತಿರಸ್ಕರಿಸುತ್ತ ಅಂದದ್ದೇನಂದರೆ—ಬಾಚರಸನೇ, ನಿನ್ನ ಶಿವಭಕ್ತಿಯು ಎಂತಹದು? ಸೂಳೆಯ ಉಳಿಗದಂತೆ ನಿನ್ನ ಶಿವಭಕ್ತಿಯೋ? ನಿನಗೆ ಅಲ್ಲೊಬ್ಬ, ಇಲ್ಲೊಬ್ಬ ಶಿವನೇ? ನೀವು ದೊಡ್ಡ ಶಿವಶರಣರು, ಮಹಾಮಹಿಮರು. ನಿಮ್ಮ ಸೋಮೇಶ್ವರನನ್ನು ಇಲ್ಲಿಯೇ ಬರಿಸಿಕೊಳ್ಳಿರಿ. ನೀವು ಹೋದರೆ ಇಲ್ಲಿ ಪಡಿಯನ್ನು ಅಳೆಯುವವರಾರು? ಎಂದು ನುಡಿದನು. ಸೊಡ್ಡಳ ಬಾಚರಸನು ಬಿಜ್ಜಳನ ಅಣಕದ ಈ ನುಡಿಗಳನ್ನು ಕೇಳಿ ಶಿವನ ನಿಂದೆಯನ್ನು ಬಿಜ್ಜಳನು ಈ ಪ್ರಕಾರ ಮಾಡುತ್ತಾನಲ್ಲಾ ಎಂದು ಖೇದಗೊಂಡು ಶಿವನು ಎಲ್ಲೆಲ್ಲಿಯೂ ಇದ್ದಾನೆಂಬ ಶಿವಶರಣರ ತತ್ವವನ್ನು ಜಗತ್ತಿನಲ್ಲಿ ಸಾರುವೆನೆಂದು ನಿಶ್ಚಯಿಸಿ ಸೋಮನಾಥನನ್ನು ಇಲ್ಲಿಯೇ ಬರಿಸಿಕೊಳ್ಳುವೆನೆಂಬ ದೃಢಭಾವವುಳ್ಳವನಾಗಿ ಕಣಜದಲ್ಲಿ ಪಡಿಯನ್ನು ಅಳೆಯುತ್ತ ಗುಜರಾಥಕ್ಕೆ ಹೋಗುವದನ್ನು ನಿಲ್ಲಿಸಿದನು.

ಸೊಡ್ಡಳ ಬಾಚರಸನು ತನ್ನ ಕಾಯಕದ ರೀತಿಯಂತೆ ಪರಮಾತ್ಮನಲ್ಲಿ ನಿಷ್ಠೆಯನ್ನಿಟ್ಟುಕೊಂಡು ಉಳಿಗವನ್ನು ನಡಿಸುತ್ತಾ ಇರಲು ಪರಮಾತ್ಮನಿಗೆ ಅದರ ಅರಿಕೆಯಾಗಿ ಅವನು ಒಬ್ಬ ಪಡಿಹಾರಿಯ ರೂಪವನ್ನು ಧರಿಸಿ ಬಾಚರಸನು ಧಾನ್ಯವನ್ನು ಅಳೆಯುತ್ತಿದ್ದ ಕಣಜದ ಸಮೀಪಕ್ಕೆಯೇ ಬಂದು ಅವನಿಗೆ ತನ್ನನ್ನು ತೋರಿಸಿಕೊಂಡು ನಾಳೆ ಶಿವರಾತ್ರಿಯ ದಿನ ಸೌರಾಷ್ಟ್ರ ಸೋಮನಾಥನು ಇಲ್ಲಿಗೆ ಬರುವದು ನಿಶ್ಚಯವು. ಅವನನ್ನು ನೀನು ಇಲ್ಲಿಯೇ ಕಾಣುವಿ. ನೀನು ಅವನಿಗೆ ಒಂದು ದೇವಾಲಯವನ್ನು ಕಟ್ಟಿಸು, ಎಂದು ಹೇಳಿ ಹೊರಟು ಹೋದನು. ಪರಮಾತ್ಮನು ಹೀಗೆ ಹೇಳಿದ್ದನ್ನು ಬಾಚರಸನು ಕೇಳಿ ಅಲ್ಲಿದ್ದ ಕಣಜಗಳನ್ನು ಬರಿದು

ಮಾಡಿ ಇಡೀ ದಿವಸ ಸೋಮೇಶ್ವರನ ಧ್ಯಾನದಲ್ಲಿಯೇ ಉಳಿದನು. ಮರುದಿನ ಸೌರಾಷ್ಟ್ರ ಸೋಮೇಶ್ವರನು ಬಿಜ್ಜಳನ ಅರಮನೆಯಲ್ಲಿ ಪ್ರಕಟವಾಗುವನೆಂಬ ಸುದ್ದಿಯು ಪಟ್ಟಣದಲ್ಲಿ ಹಬ್ಬಲು, ಬಸವ, ಚೆನ್ನಬಸವ ಮೊದಲಾದ ಶಿವಶರಣರೂ ಪಟ್ಟಣದಲ್ಲಿಯ ಬಹು ಜನರೂ ಅಲ್ಲಿಗೆ ಬಂದು ಪರಮಾತ್ಮನು ಹೇಗೆ ಉದಯಿಸುವನೆಂಬದನ್ನು ನಿರೀಕ್ಷಿಸುತ್ತ ನಿಂತುಕೊಂಡರು. ಶಿವರಾತ್ರಿಯ ಆ ದಿವಸ ಸಕಾಲದಲ್ಲಿ ದೇವ ದುಂದುಭಿಗಳು ಮೊಳಗಹತ್ತಿದವು. ಅಷ್ಟರಲ್ಲಿ ಸೌರಾಷ್ಟ್ರ ಸೋಮನಾಥನು ಕಣಜಗಳಿದ್ದ ಆ ಕೊಟ್ಟಾರದಲ್ಲಿ ಝುಗ್ಗನೆ ಪ್ರಕಾಶಮಾನನಾಗಿ ಹೊರಬಿದ್ದು ಲಿಂಗರೂಪವಾಗಿ ಹೊಳೆಯಹತ್ತಿದನು. ಬಿಜ್ಜಳನು ತನ್ನ ಅರಮನೆಯಲ್ಲಿ ಹೀಗಾದದ್ದನ್ನು ಕೇಳಿ ಅವನೂ ಅಲ್ಲಿಗೆ ಬಂದು ನಡೆದ ಸಂಗತಿಗಳನ್ನು ತಿಳಿದುಕೊಂಡು ಬಾಚರಸನು ನಿಜವಾಗಿಯೇ ಮಹಿಮನು ಎಂದು ಅವನನ್ನು ಕೊಂಡಾಡುವವನಾದನು. ಆ ಮೇಲೆ ಬಸವಾದಿ ಪ್ರಮಥರು ಆ ಸ್ಥಳದಲ್ಲಿ ಒಂದು ದಿವ್ಯವಾದ ದೇವಾಲಯವನ್ನು ಕಟ್ಟಿಸಿದರು. ಈ ದೇವಾಲಯಕ್ಕೆ ಅಂದಿನಿಂದ 'ಕೊಟ್ಟಾರದ ಸೋಮನಾಥ'ನೆಂಬ ಹೆಸರು ಪ್ರಾಪ್ತವಾಯಿತು.

ಮೇಲಿನ ಘಟನೆಯ ಮೂಲಕ ಬಾಚರಸನ ಮತ್ತು ಬಸವೇಶ್ವರನ ಮಹತ್ವವು ಕಲ್ಯಾಣಪಟ್ಟಣದಲ್ಲಿ ಮೊದಲಿನಕಿಂತಲೂ ಹೆಚ್ಚಿಗೆ ಬೆಳೆಯಿತು. ಬಸವೇಶ್ವರನ ವೈರಿಗಳು ಇದನ್ನು ನೋಡಿ ಸಹಿಸಲಾರದೆ ಅವರನ್ನು ಕುಗ್ಗಿಸಲು ಹೊಸದೊಂದು ಉಪಾಯವನ್ನು ಯೋಜಿಸಿದರು. ಸೊಡ್ಡಳ ಬಾಚರಸನು ಲೆಕ್ಕವನ್ನು ಬರಿಯುವಾಗ ಶಿವಶರಣರ ಪದ್ಧತಿಯ ಪ್ರಕಾರ ಮೊದಲು 'ಓಂ ನಮಃ ಶಿವಾಯ' ಎಂಬ ಷಡಕ್ಷರ ಮಂತ್ರವನ್ನು ಬರೆದು ಕಾರ್ಯಾರಂಭ ಮಾಡುವನು. ಬಸವೇಶ್ವರನ ವಿರೋಧಿಗಳು ಇದನ್ನು ನೋಡಿ ಸಹಿಸಲಾರದವರಾದರು. ಆಗ ಅವರಲ್ಲಿ ೩೬ ಜನರು ಒಂದು ಕಪಟೋಪಾಯವನ್ನು ರಚಿಸಿ ಬಿಜ್ಜಳನಲ್ಲಿಗೆ ಹೋಗಿ, ಬಾಚರಸನು ಧಾನ್ಯದ ಲೆಕ್ಕವನ್ನು ಬರೆಯುವದಿಲ್ಲ. ಅವನು ಲೆಕ್ಕವನ್ನು ಬರಿಯುವದರ ಬದಲು 'ಕೊಟ್ಟುದು ನಮಃಶಿವಾಯ, ಕೊಂಡುದು ನಮಃಶಿವಾಯ, ಉಂಡುದು ನಮಃಶಿವಾಯ, ಉಟ್ಟುದು ನಮಃಶಿವಾಯ, ಹೊದ್ದುದು ನಮಃಶಿವಾಯ,

ಹೋದುದು ಬಂದುದು ನಮಃಶಿವಾಯ' ಎಂದು ಲೆಕ್ಕವನ್ನು ಬರೆಯುತ್ತಿದ್ದಾನೆ. ಬಸವೇಶ್ವರನು ಭಂಡಾರಿಯಾಗಿದ್ದರೂ ಅವನು ಇದನ್ನು ಲಕ್ಷಿಸುವದಿಲ್ಲ. ಅವನೂ ಬಾಚರಸನೂ ಕೂಡಿಕೊಂಡು ನಿನ್ನ ಬೊಕ್ಕಸವನ್ನು ಹಾಳುಮಾಡುತ್ತಿದ್ದಾರೆ, ಎಂದು ಮೊದಲಾಗಿ ಕೊಂಡೆಯುವನ್ನು ಹೇಳಿದರು.

ಬಿಜ್ಜಳನು ಅದನ್ನು ಕೇಳಿ ೬೬ ಜನ ಕರಣಿಕರನ್ನು ಕರಿಸಿ ಅವರಿಗೆ-- ನೀವು ಬಾಚರಸನ ಕೈಯಿಂದ ಒಂದು ದಿನದೊಳಗೆ ಲೆಕ್ಕವನ್ನು ತೆಗೆದುಕೊಳ್ಳಿರಿ ಎಂದು ಆಜ್ಞಾಪಿಸಿದನು. ಆಗ ಅವರೆಲ್ಲರು ಬಾಚರಸನಲ್ಲಿಗೆ ಹೋಗಿ ಲೆಕ್ಕವನ್ನು ಒಪ್ಪಿಸಲು ಕೇಳಲಾಗಿ ಅವನು ಬಸವೇಶ್ವರನನ್ನು ಕಂಡು ಲೆಕ್ಕವನ್ನು ಸಿದ್ಧಪಡಿಸಿ ಒಪ್ಪಿಸಲು ನನಗೆ ೧೧ ದಿನಗಳು ಬೇಕು, ಸಾಯಂಕಾಲದೊಳಗಾಗಿ ಇದು ನನಗೆ ಆಗದು, ಎಂದು ಹೇಳಿದನು. ಆಗ ಬಸವೇಶ್ವರನು ಈ ಅನ್ಯಾಯುವನ್ನು ನೋಡಿ---ಹಾಗಾದರೆ ೧೧ ದಿವಸಗಳ ವರೆಗೆ ನಾನು ಸೂರ್ಯನು ಚಲಿಸದಂತೆ ಅವನನ್ನು ತಡೆದುಬಿಡುವೆನು, ಅಷ್ಟರಲ್ಲಿ ನೀನು ನಿನ್ನ ಲೆಕ್ಕವನ್ನು ಸಿದ್ಧಪಡಿಸಿ ಒಪ್ಪಿಸು, ಎಂದು ಹೇಳಿದನು. ಬಸವೇಶ್ವರನ ಲಿಂಗಶಕ್ತಿಯು ಮೂಲಕ ಸೂರ್ಯನು ೧೧ ದಿನಗಳ ವರೆಗೆ ಚಲಿಸದೆ ಹೋದನು. ಈ ಅವಧಿಯಲ್ಲಿ ಬಾಚರಸನು ತನ್ನ ಲೆಕ್ಕವನ್ನೆಲ್ಲ ಸಿದ್ಧಪಡಿಸಿ ಅದನ್ನು ಕರಣಿಕರಿಗೆ ಒಪ್ಪಿಸಲು ಅವರು ಅದು ಸರಿಯಾಗಿರುವದನ್ನು ನೋಡಿ ಹಾಗೆಯೇ ಅವರು ಬಿಜ್ಜಳನಿಗೆ ತಿಳಿಸಿ ಹೇಳಿದರು. ಬಿಜ್ಜಳನು ತನಗೆ ಕೊಂಡೆಯುವನ್ನು ಹೇಳಿದವರ ಮೇಲೆ ಕೋಪಗೊಂಡು ಅವರನ್ನು ಬೈದನು. ಬಾಚರಸನನ್ನೂ ಬಸವೇಶ್ವರನನ್ನೂ ತನ್ನಲ್ಲಿಗೆ ಬರಮಾಡಿಕೊಂಡು ಅವರನ್ನು ಅತ್ಯಂತವಾಗಿ ಮನ್ನಿಸಿ ಕಳುಹಿಸಿಕೊಟ್ಟನು.

ಈ ಪ್ರಕಾರ ಸೊಡ್ಡಳ ಬಾಚರಸನು ಏಕನಿಷ್ಠೆಯಿಂದ ತನ್ನ ಕಾಯಕವನ್ನು ನಡಿಸುತ್ತಾ ಬಸವೇಶ್ವರನ ಸನ್ನಿಧಿಯಲ್ಲಿ ಶಿವಾನುಭವದಲ್ಲಿ ಕಾಲಕಳೆಯುತ್ತ ಶಿವಶರಣರಲ್ಲಿ ಪ್ರಸಿದ್ಧನಾದನು.

ಸೊಡ್ಡಳ ಬಾಚರಸನು ಸೌರಾಷ್ಟ್ರ ಸೋಮೇಶ್ವರನ ಭಕ್ತನಾದ್ದರಿಂದ ಅವನು ಗುಜರಾಥ ದೇಶದವನಿರಬೇಕೆಂದು ನಮಗೆ ತೋರುತ್ತದೆ. ಅವನು ಪುಲಿಗೆರೆಯ ಆದಯ್ಯನಂತೆ ವ್ಯವಹಾರಕ್ಕೋಸ್ಕರ

ಕರ್ನಾಟಕಕ್ಕೆ ಬಂದು, ಕಲ್ಯಾಣದಲ್ಲಿ ವಾಸಿಸುವವನಾದನು. ಅಲ್ಲಿ ಬಿಜ್ಜಳನ ಆನೆ ಕುದುರೆಗಳಿಗೆ ಧಾನ್ಯವನ್ನು ಪೂರೈಸಿ ಕೊಡುವ ಕಾರ್ಯ ವನ್ನು ಕೈಕೊಂಡನು.

'ಸೊಡ್ಡಳ' ಅಥವಾ 'ಸೊಡ್ಡಾಳು' ಇದು 'ಸೊಡ್ಡ' ಮತ್ತು 'ಆಳು' ಈ ಎರಡು ಶಬ್ದಗಳು ಕೂಡಿ ಆಗಿರುತ್ತದೆಂದು ತೋರುತ್ತದೆ. 'ಸೊಡ್ಡ' ಇದು 'ಸೌರಾಷ್ಟ್ರ' ಈ ಶಬ್ದದ ತದ್ಭವವು. ಸೊಡ್ಡಳ ಅಥವಾ ಸೊಡ್ಡಾಳು ಎಂದರೆ ಸೌರಾಷ್ಟ್ರ ದೇಶದವ ಎಂದು ಅರ್ಥವಾಗುತ್ತದೆ. ಈ ಶಬ್ದವು ಸೌರಾಷ್ಟ್ರ ಅಥವಾ ಗುಜರಾಥ ದೇಶದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ಸೌರಾಷ್ಟ್ರ ಸೋಮನಾಥನ ಅಥವಾ ಬಾಚರಸನ ದ್ಯೋತಕ ವಾಗಿರಬಹುದು. ಆದರೆ ಅವನ ವಚನಗಳ ಭಾವವನ್ನು ನೋಡಿದಲ್ಲಿ ಸೌರಾಷ್ಟ್ರ ಸೋಮನಾಥನಿಗೆ ಈ ಮುದ್ರಿಕೆಯು ಅನ್ವಯಿಸುತ್ತದೆಯೇ ಹೊರ್ತು ಬಾಚರಸನಿಗೆ ಅನ್ವಯಿಸುವದಿಲ್ಲ. ಆದ್ದರಿಂದ ಬಾಚರಸನು ಸೌರಾಷ್ಟ್ರ ಸೋಮನಾಥನನ್ನು ಕನ್ನಡ ನುಡಿಯಲ್ಲಿ 'ಸೊಡ್ಡಳಾ' ಎಂದು ಸಂಬೋಧಿಸುತ್ತ ತನ್ನ ವಚನಗಳನ್ನು ನುಡಿದ ಹಾಗೆ ನಮಗೆ ತೋರುತ್ತದೆ.

ಸೊಡ್ಡಳ ಬಾಚರಸನ ವಚನಗಳು ಬಹು ಸುಂದರವಾದವುಗಳು. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಮಾದರಿಗಾಗಿ ಇಲ್ಲಿ ಕೊಟ್ಟಿದ್ದೇವೆ.

## ವಚನಗಳು.

(೧) ಜವನಿದ್ದಾನೆ. ಜವನ ಪಟ್ಟಣವಿದೆ. ಮಾಮರ ಹೂಮರ ನಿದೆ, ತೋಮರನಿದೆ ನೋಡಯ್ಯ. ಆವ ಕಾರ್ಯವಾದಡೂ ದೇವ ಕಾರ್ಯವ ಮಾಡುವುದು. ಸಾವ ಕಾರ್ಯ ತಪ್ಪದು. ನೀನು ಕೆಡಬೇಡ ಕಂಡಾ. ಬೇಗ ನಂಬಿ ಪೂಜಿಸು ಸೊಡ್ಡಳ ದೇವನ ಮರುಳೇ.

(೨) ಶಿವಾ ಎಂದು ಓದದವನ ಓದು ಗಿಳಿಯೋದು. ಶಿವ ನಿಮ್ಮನಾರಾಧಿಸದವನ ಮನೆ ಕೆಮ್ಮನೆ. ಶಿವ ನಿಮ್ಮ ನೋಡದವನ ಕಣ್ಣು ಹೀಲಿಯ ಕಣ್ಣು. ಶಿವ ನಿಮ್ಮ ಹಾಡದವನ ಬಾಯಿ ಕನ್ನದ

ಬಾಯಿ. ಶಿವ ನಿಮ್ಮ ಹೊಗಳದವನ ನಾಲಿಗೆ ಭವಿಯ ನಾಲಿಗೆ, ಬಚ್ಚಲ ತಂಪಿನ ಚೌಗಿನಲ್ಲಿ ಹುಟ್ಟಿದ ಜಿಗುಣೆಯಯ್ಯಾ. ಶಿವ ನಿಮಗೆರಗದ ಕರ್ವಿ ಶೂಲದ ಮೇಲಣ ಹೆಣನು. ಶಿವ ನಿಮ್ಮ ನೆನೆಯದವನ ದೇಹ ಸಂದೇಹ. ಶಿವ ನಿಮ್ಮ ಭಕ್ತನಲ್ಲದವನ ಭೋಗವು, ವಿದ್ಯೆಯು, ಕುಲವು, ಶ್ರೀಯು, ಸಾಹಸವು, ಯಶಸ್ಸು, ವಿಮಾನದ ಮೇಲಣ ಶವದ ತೋರಿಕೆಯಯ್ಯ. ಅವನೇತಕ್ಕೆ ಬಾತೆ? ಇದು ಕಾರಣ ಭವರೋಗ ನರಕಕ್ಕಾರದೆ ಶರಣು ಹೊಕ್ಕೆನಯ್ಯಾ ಸೊಡ್ಡಳಾ.

(೩) ಹುತ್ತು ಹೋರಿನೊಳಗೆ ಕೈಯ್ಯನಿಕ್ಕುಗು ಎನ್ನ ಶಿಶುವೆಂದು ಹೆತ್ತತಾಯಿ ಮಗನ ಬೆಂಬತ್ತಿ ಬಪ್ಪಂತೆ ಬೆಂಬತ್ತಿ ಬಿಡದಿರಿಂ ಭೋ. ಅಯ್ಯಾ ಎಂದರೆ ಓ ಎಂಬೆ. ಅನ್ಯವಿಷಯಕ್ಕೆ ಹರಿಯಲೀಯದೆ ಎತ್ತಿತ್ತ ನೋಡಿದತ್ತತ್ತ ಸೊಡ್ಡಳಾ.

(೪) ನಿಮ್ಮಿಂದ ನಾನಾದೆನು. ಎನಗೆ ದೇಹೇಂದ್ರಿಯ ಮನಃ ಪ್ರಾಣಾದಿಗಳಾದವು. ಆ ದೇಹೇಂದ್ರಿಯ ಮನಃ ಪ್ರಾಣಾದಿಗಳಿಗೆ ಕರ್ತನು ನೀನೆ. ಅವರ ಆರುಚಿಗೆ ಸುಖದುಃಖವೆಲ್ಲವು ನೀನೆ. ಒಳಗು ನೀನೆ, ಹೊರಗು ನೀನೆ. ನಾನೆಂಬುದು ನಡುವಣ ಭ್ರಾಂತು. ನಿನ್ನ ವಿನೋದ ನೀನೇ ಬಲ್ಲೆ ದೇವರಾಯ ಸೊಡ್ಡಳಾ.

(೫) ನಿನ್ನಿಂದಲಾನಾದೆನು. ಎನಗೆ ದೇಹೇಂದಿಯ ಮನಃ ಪ್ರಾಣಾದಿಗಳಿಗೆ ಕರ್ತೃ ನೀನೆ. ಅವರಾಗು ಚೇಗು ಸುಖದುಃಖವೆಲ್ಲವು ನೀನೆ. ಒಳಗೂ ನೀನೆ, ಹೊರಗೂ ನೀನೆ. ನಾನೆಂಬುದು ನಡುವಣ ಭ್ರಾಂತು. ನಿನ್ನ ವಿನೋದ, ನೀನೇ ಬಲ್ಲೆ ದೇವರಾಯ ಸೊಡ್ಡಳಾ.



# ಶಿವನಾಗಮಯ್ಯ.

ಶಿವನಾಗಮಯ್ಯನು 'ಹಿರಿಯಕುಲ' ಎಂದರೆ ಹೊಲೆಯರಲ್ಲಿ ಹುಟ್ಟಿದವನಾಗಿದ್ದನು. ಆದರೂ ಅವನು ಶಿವಭಕ್ತಿಯುಳ್ಳವನೂ ಸದಾಚಾರಿಯೂ ಸದ್ಗುಣಿಯೂ ಆಗಿದ್ದನು. ಹೇಗೆ ಕಾಡಿನಲ್ಲಿ ಚಂದನವು, ಬಾಳೆಯಲ್ಲಿ ಕರ್ಪೂರ ಬಾಳೆಯು, ಚಿಪ್ಪಿನೊಳಗೆ ಮುತ್ತು, ಇರುವವೋ ಹಾಗೆ ಹೊಲೆಯ ಕುಲದೊಳಗೆ ಹುಟ್ಟಿದರೂ ಅವನು ನಿಜವಾದ ದೇವಭಕ್ತಿಯುಳ್ಳವನೆಂದು ಜನರಲ್ಲಿ ಹೆಸರಾಗಿದ್ದನು.

ಹೀಗಿರಲು ಶಿವನಾಗಮಯ್ಯನು ಲಿಂಗ ದೀಕ್ಷೆಯನ್ನು ಹೊಂದಿ ಕಲ್ಯಾಣಕ್ಕೆ ಬಂದು ಬಸವೇಶ್ವರನ ಸನ್ನಿಧಿಯಲ್ಲಿ ಒಬ್ಬ ದೊಡ್ಡ ಶಿವಯೋಗಿ ಎಂದು ಶಿವಶರಣರಲ್ಲಿ ಪ್ರಸಿದ್ಧನಾದನು. ಬಸವೇಶ್ವರನು ಜಂಗಮ ಪೂಜೆಯನ್ನು ಮಾಡುವಾಗ ಶಿವನಾಗಮಯ್ಯನ ಕರುಣ ಪ್ರಸಾದವನ್ನು ಹೊಂದಿ ಅವನಲ್ಲಿ ಸಮರಸಾಚರಣೆಯಿಂದ ವರ್ತಿಸುವನು. ಬಸವೇಶ್ವರನು ಅವನಿಗೆ ಶಿವಾನುಭವ ಮಂಟಪದಲ್ಲಿ ಉಚ್ಚ ಸ್ಥಾನವನ್ನು ಕೊಟ್ಟು ಎಲ್ಲರ ಸಮಕ್ಷಮದಲ್ಲಿ ಅವನನ್ನು ಸನ್ಮಾನಿಸಿ ಅವನಿಗೆ ಸಾಷ್ಟಾಂಗ ವೆರಗುವನು.

ಬಸವೇಶ್ವರನು ಒಬ್ಬ ಚಾಂಡಲನ ಕೂಡ ಹೀಗೆ ವರ್ತಿಸುವದನ್ನು ಪಟ್ಟಣದಲ್ಲಿಯ ವಿಪ್ರರು ನೋಡಿ ಸಹಿಸಲಾರದೆ ಬಿಜ್ಜಳ ಕಡೆಗೆ ಹೋಗಿ ಬಸವೇಶ್ವರನು ಶ್ರೇಷ್ಠಕುಲದವನು, ಬ್ರಾಹ್ಮಣನು, ಅಲ್ಲದೆ ಮುಖ್ಯಪ್ರಧಾನನಾಗಿದ್ದಾನೆ. ಆದರೆ ಅವನ ರೀತಿ, ನೀತಿ, ನಡೆಗಳನ್ನು ತಾವು ನೋಡಿದಿರಾ? ಅವನಿಗೆ ಜಾತಿ ಎಂಬುದಿಲ್ಲ, ನೀತಿ ಎಂಬುದು ಇಲ್ಲ. ಕಲ್ಯಾಣನಗರದಲ್ಲಿ ಅವನಿಂದ ಕುಲವೆಲ್ಲವು ಕೊಲೆಗಲಿಸಿ ಹೋಯಿತು. ಅವನು ಮಾಡುವ ಭಕ್ತಿ ಎಂಬುದು ಬೇರೆ ಇರಲಿ. ಆದರೆ ನಾವು ಅವನು ಮಾಡುವದನ್ನು ಉಚ್ಚರಿಸಿ ಹೇಳಿದರೆ ನಮಗೆ ಮಹಾ ಪಾಪವು ಸಂಭವಿಸುವದು. ಬಸವನು ಬ್ರಾಹ್ಮಣನಾಗಿ ಬ್ರಾಹ್ಮಣರಿಗೆ ಉಚಿತವಾದ ಭಕ್ತಿಯನ್ನು ಮಾಡಿದ್ದರೆ ಅದು ಎಷ್ಟು ಫಲಕಾರಿಯಾಗುತ್ತಿತ್ತೋ! ಅವನು ಕುಲಹೀನನಾದ ಶಿವನಾಗನೆಂಬ ಹೊಲೆಯನನ್ನು ತನ್ನ ಗುಂಪಿಗೆ ಸೇರಿಸಿಕೊಂಡು ನಿತ್ಯ ಅವನನ್ನು ಪೂಜಿಸಿ ನಮಸ್ಕರಿಸುತ್ತಾನೆ. ಬಸವನು ಸರ್ವೋತ್ತಮನೆಂದು ಪ್ರಭುಗಳು ಅವನಿಗೆ ಪ್ರಧಾನಿ ಕೆಲಸವನ್ನು ಕೊಟ್ಟರಿ. ಆದರೆ ಧರ್ಮ ಎಂಬುದು

ಅವನಿಂದ ಎಲ್ಲಿ ಉಳಿಯಿತು? ಈ ಹೊಲೆಯ ನಾಗನೆಂಬುವನು ಉಂಡು ಮಿಕ್ಕದನ್ನು ಅವನು ಉಣ್ಣುತ್ತಿದ್ದಾನೆ. ಹೀಗಾದಲ್ಲಿ ಧರ್ಮವೆಲ್ಲಿ ಉಳಿಯುವದು? ಸಂಪತ್ತು ಹೇಗೆ ಉಂಟಾಗುವದು? ಎಂದು ಪಟ್ಟಣದಲ್ಲಿಯ ಬ್ರಾಹ್ಮಣರೆಲ್ಲರು ಬಿಜ್ಜಳನಲ್ಲಿಗೆ ಹೋಗಿ ದೂರು ಹೇಳಿದರು.

ಬಿಜ್ಜಳನು ಇವನ್ನೆಲ್ಲ ಕೇಳಿ ಖತಿಗೊಂಡು ಒಬ್ಬ ಚಾರನನ್ನು ಕರೆದು—ನೀನು ಬಸವನಲ್ಲಿ ಹೋಗಿ ಅವನಿಗೆ ಶಿವನಾಗಮಯ್ಯನನ್ನು ಕರೆದುಕೊಂಡು ಆ ಸ್ಥಾನಕ್ಕೆ ಬರಹೇಳೆಂದು ಕಳಿಸಿದನು. ಆಗ ಬಸವನು ಶಿವನಾಗಮಯ್ಯನನ್ನು ದಂಡಿಗಿಯ ಮೇಲೆ ಕುಳ್ಳಿರಿಸಿ ಉತ್ಸವದಿಂದ ಕರೆದುಕೊಂಡು ಬಿಜ್ಜಳನಲ್ಲಿಗೆ ಬಂದನು.

ಹೀಗೆ ಬಸವೇಶ್ವರನು ಒಬ್ಬ ಅಂತ್ಯಜನನ್ನು ಉತ್ಸವದಿಂದ ಕರೆದುಕೊಂಡು ಸಭೆಯಲ್ಲಿ ಎಲ್ಲರ ಮಧ್ಯದಲ್ಲಿ ಬಂದು ಕುಳ್ಳಿರಲು, ಅಲ್ಲಿದ್ದ ಬ್ರಾಹ್ಮಣರು ಬಿಜ್ಜಳನಲ್ಲಿ—ಇದು ಎಂಥ ಅನ್ಯಾಯವು! ಬಸವೇಶ್ವರನು ಜಾತಿಯನ್ನೂ ನೀತಿಯನ್ನೂ ಬಿಟ್ಟು ಹೇಗೆ ನಡೆಯುತ್ತಾನೆ ನೋಡಿರಿ. ಅಂದಮೇಲೆ ರಾಜ್ಯದಲ್ಲಿರುವವರೆಲ್ಲರು ಹೇಗೆ ನಡೆಯಬೇಕು? ಎಂದು ನಿಷ್ಠುರವಾಗಿ ನುಡಿದರು.

ಬಸವೇಶ್ವರನು ಇದನ್ನು ಕೇಳಿ ಬಿಜ್ಜಳನಿಗೆ ಅಂದಿದ್ದೇನಂದರೆ—ಬಿಜ್ಜಳನೇ ಕೇಳು. ಗುರುವು ಮುಟ್ಟಿ ಶುದ್ಧನಾದ ಬಳಿಕ ಭಕ್ತರ ಕುಲವನ್ನು ನೋಡಬಹುದೇ? ಲಿಂಗಕ್ಕೆ ಪ್ರಾಣಪ್ರತಿಷ್ಠೆಯಾಗಲು ಅದು ಲಿಂಗವಲ್ಲದೆ ಪಾಷಾಣವೆಂದು ತಿಳಿಯಬಹುದೇ? ಪರುಷ ಸೋಂಕಿದ ಕಬ್ಬಿನ ಸುವರ್ಣವಲ್ಲದೆ ಅದು ಕಬ್ಬಿನವೇ? ವೀರಶೈವ ದೀಕ್ಷೆಯನ್ನು ಹೊಂದಿದ ಬಳಿಕ ಶಿವಶರಣರ ಅಂಗವು ಮಂತ್ರಮಯವಾದದ್ದು. ಅಲ್ಲಿ ಹೊಲೆ ಎಂಬುದು ಹೇಗೆ ಉಂಟಾದೀತು? ಹೀಗೆ ನುಡಿಯುತ್ತ, ಬಸವನು ಅಜಾಮಿಳ ವಿದಳ ಮೊದಲಾದವರ ಕಥೆಗಳನ್ನು ಹೇಳಿ, ಇದಕ್ಕೆ ಧರ್ಮಶಾಸ್ತ್ರಗಳ ಆಧಾರಗಳೂ ಉಂಟು ಎಂದು ಶಿವಧರ್ಮ, ಶಿವರಹಸ್ಯ, ಶಿವಪುರಾಣ, ಶಿವಾಗಮಗಳಲ್ಲಿರುವ ಆಧಾರಗಳನ್ನು ಹೇಳಿದನು.

ಆದರೆ ಬಿಜ್ಜಳನು ಬಸವೇಶ್ವರನ ಮಾತಿಗೆ ಒಪ್ಪದೆ ಮತ್ತಿಷ್ಟು ಸಂತಾಪಗೊಂಡು— ಬಸವನೇ, ಹೊಲೆಯನು ಎಂದಾದರೂ ಕುಲಜನಾಗಬಹುದೇ? ಬ್ರಾಹ್ಮಣರನ್ನು ಚಿವುಟಿದರೆ ರಕ್ತ ಬಂದೀತು. ಆದರೆ ಶಿವಭಕ್ತರನ್ನು ಚಿವುಟಿದರೆ ಹಾಲು ಎಂದಾದರೂ ಅವರೊಳಗಿಂದ ಬಂದೀತೇ,

ಎಂದು ಕೋಪದಿಂದ ನುಡಿದನು. ಅದನ್ನು ಬಸವೇಶ್ವರನು ಕೇಳಿ ಅಂದದ್ದು— ಶಿವಭಕ್ತರನ್ನು ಚಿವುಟಿದರೆ ಹಾಲು ನಿಜವಾಗಿ ಬರುವದು. ಇದನ್ನು ಪ್ರತ್ಯಕ್ಷಮಾಡಿ ತೋರಿಸುವೆನು ಎಂದು ನುಡಿದನು. ಆಗ ಬಿಜ್ಜಳನೂ ಅಲ್ಲಿ ನೆರೆದಿದ್ದ ಬ್ರಾಹ್ಮಣರೂ ಹಾಗೆ ಮಾಡಿ ತೋರಿಸು ಎಂದು ನುಡಿಯಲು ಬಸವೇಶ್ವರನು ಶಿವನಾಗಮಯ್ಯನ ಕೈಯನ್ನು ಹಿಡಿದೆತ್ತಿ ಅವನ ಐದು ಬೆರಳುಗಳನ್ನೊತ್ತಲು ಅವುಗಳ ತುದಿಗಳೊಳಗಿಂದ ಹಾಲು ಧಾರೆಗಟ್ಟಿ ಸುರಿಯುತ್ತಿತು!

ಅದನ್ನು ಬಿಜ್ಜಳನು ನೋಡಿ ಆಶ್ಚರ್ಯಬಟ್ಟನು. ಆಗ ಬಸವೇಶ್ವರನು ಬಿಜ್ಜಳನಿಗೆ— ಈಗಲಾದರೂ ಉತ್ತಮರು ಯಾರು, ಹೊಲೆಯರು ಯಾರು, ಎಂಬುದನ್ನು ನೀವು ನೋಡಿದಿರಾ? ಎಂದು ಕೇಳಿದನು. ಈ ಅದ್ಭುತವನ್ನು ಬಿಜ್ಜಳನು ನೋಡಿ ತಲೆದೂಗಿ— ಭಕ್ತರೇ ಕುಲಜರು ಎಂಬುದನ್ನು ನಾನು ಈಗ ಮನಗಂಡೆನು. ನಾನು ಬ್ರಾಹ್ಮಣರ ಮಾತನ್ನು ಕೇಳಿ ವಿಚಾರ ಮಾಡದೆ ನಿಮ್ಮಿಬ್ಬರನ್ನು ಕರೆಯಿಸಿ ದೂಷಿಸಿ ಅಪರಾಧ ಮಾಡಿದೆನು. ನನ್ನನ್ನು ಕ್ಷಮಿಸಬೇಕು ಎಂದು ನುಡಿದು ಅಲ್ಲಿದ್ದ ದ್ವಿಜರ ಗುಂಪನ್ನು ನೋಡಿ— ಈಗಲಾದರೂ ನೀವು ನೋಡಿದಿರಾ? ನಿಮ್ಮ ಹಸ್ತವನ್ನು ಹಿಂಡಿದರೆ ರಕ್ತವು ಬರುವದು. ಆದರೆ ಹಾಲು ಬಂದೀತೆ? ಬರಲಾರದು. ಅಂದ ಬಳಿಕ ಭಕ್ತರ ರಕ್ತವು ಪವಿತ್ರವಾದದ್ದೋ ಅಥವಾ ನಿಮ್ಮಲ್ಲಿಯದೋ ಎಂಬುದನ್ನು ಹೇಳಿರಿ. ಶಿವನಾಗಮಯ್ಯನೇ ಕುಲಜನು. ಇದು ಇಂದು ನನಗೆ ತೋರಿಬಂದಿತು ಎಂದು ನುಡಿದನು.

ಆಮೇಲೆ ಅವನು ಶಿವನಾಗಮಯ್ಯನಿಗೆ ಉಡುಗೊರೆಯನ್ನು ಕೊಟ್ಟು ಅವನನ್ನು ಆನೆಯ ಮೇಲೆ ಕುಳ್ಳಿರಿಸಿ ಬೀಳ್ಕೊಟ್ಟನು. ಆ ಕಾಲದಲ್ಲಿ ಶಿವನಾಗಮಯ್ಯನ ಸುತ್ತಲೂ ಅಸಂಖ್ಯ ಭಕ್ತರು ನೆರೆದರು. ಆಮೇಲೆ ಅವರು ಅವನನ್ನು ಸಂಭ್ರಮದ ಮೆರವಣಿಗೆಯಲ್ಲಿ ಕರೆದುಕೊಂಡು ಕಲ್ಯಾಣಪಟ್ಟಣದ ಬೀದಿಗಳೊಳಗಿಂದ ಹಾಯ್ದು ಬಸವೇಶ್ವರನ ಶಿವಾನುಭವ ಮಂಟಪಕ್ಕೆ ಬಂದರು. ಅಲ್ಲಿ ಅವರು ಶಿವನಾಗಮಯ್ಯನನ್ನು ನಮಸ್ಕರಿಸಿ ತಮ್ಮ ತಮ್ಮ ಮಂದಿರಗಳಿಗೆ ಹೋದರು. ಶಿವನಾಗಮಯ್ಯನು ಬಸವೇಶ್ವರನ ಸನ್ನಿಧಿಯಲ್ಲಿ ಉಚ್ಚತರದ ಶಿವಾನುಭವಿಯಾಗಿ ಶಿವಶರಣರಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿರುತ್ತಾನೆ.

ಶಿವನಾಗಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಶಿವಭಕ್ತರು ತಮ್ಮ ಲಿಂಗಪೂಜಾ ಕಾಲದಲ್ಲಿ ಅವನ ಹೆಸರನ್ನು ಪಠಿಸುತ್ತ ಅವನನ್ನು ಸ್ಮರಿಸುವದುಂಟು. ಶಿವನಾಗಮಯ್ಯನು ವಚನಕಾರನೂ ಇದ್ದಾನೆ. ಅವನ ಮುದ್ರಿಕೆಯು 'ನಾಗಯ್ಯ ಪ್ರಿಯ ಚನ್ನರಾಮೇಶ್ವರಾ' ಎಂದಿದೆ. ಅವನು ಅನೇಕ ವಚನಗಳನ್ನು ರಚಿಸಿರಬಹುದು. ಆದರೆ ಅವುಗಳಲ್ಲಿ ಎರಡು ವಚನಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವುಗಳನ್ನು ನಾವು ಇಲ್ಲಿ ಉದಹರಿಸಿದ್ದೇವೆ.

ಬಸವೇಶ್ವರನು ಅಂತ್ಯಜರಿಗೆ ಶಿವಾನುಭವದ ಜ್ಞಾನವನ್ನು ಮಾಡಿಕೊಟ್ಟು ಅವರಿಗೆ ವೀರಶೈವ ದೀಕ್ಷೆಯನ್ನಿತ್ತು ಆಮೇಲೆ ಅವರಲ್ಲಿ ಸಾಮರಸ್ಯದಿಂದ ನಡೆದಿದ್ದು ಕಂಡುಬರುತ್ತದೆ. ಅವನು ಈಪ್ರಕಾರ ಅವರಲ್ಲಿ ಉಚ್ಚ ವರ್ತನೆಯನ್ನುಂಟು ಮಾಡಲು ಪ್ರಯತ್ನಿಸಿದ್ದಾನೆ. ಕೇವಲ ಅಂತ್ಯಜರಿದ್ದಮಾತ್ರದಿಂದ ಅವನು ಅವರೊಡನೆ ಬೆರೆದಿಲ್ಲ. ಸದಾಚಾರವಿಲ್ಲದ ಲಿಂಗಭಕ್ತರನ್ನು ಅವನು ಯಾವಾಗಲೂ ಹೀಯಾಳಿಸುತ್ತಾನೆ. ಆದರೆ ಶಿವಾನುಭವಿಗಳು ಯಾವ ಕುಲದವರಿದ್ದರೂ ಅವರು ಶ್ರೇಷ್ಠ ವರ್ಣದವರೆಂದು ಅವನು ಭಾವಿಸಿದ್ದಾನೆ. ಈ ತಾರತಮ್ಯವನ್ನು ವಾಚಕರು ಲಕ್ಷಿಸುವದು ಅವಶ್ಯವೆಂದು ನಮಗೆ ತೋರುತ್ತದೆ.

## ವಚನಗಳು.

(೧) ಅಂಗದ ಮೇಲೆ ಲಿಂಗವಿದ್ದ ಬಳಿಕ ಲಿಂಗಹೀನರ ಬೆರಸಲಾಗದು. ಅಂಗದ ಮೇಲೆ ಲಿಂಗವಿದ್ದ ಬಳಿಕ ಲಿಂಗ ಮುಂತಾಗಿ ಎಲ್ಲ ಕ್ರಿಗಳನ್ನು ಗಮಿಸಬೇಕಲ್ಲದೆ, ಅಂಗ ಮುಂತಾಗಿ ಗಮಿಸಲಾಗದು. ಲಿಂಗ ಸಂಬಂಧಿಯಾಗಿ ಅಂಗ ಮುಂತಾಗಿ ಇರ್ಪವರು ಲಿಂಗಕ್ಕೆ ದೂರವಯ್ಯ ನಾಗಪ್ರಿಯ ಚನ್ನರಾಮೇಶ್ವರಾ.

(೨) ಘನ ಸುಖ ಮಹಾ ಸುಖವ ಮುಟ್ಟಲು ಸಮಸುಖಂಗಳ ಸುಖಿಯಿಸಬಲ್ಲ. ಸುಖವನಲ್ಲಿಯೆ ಕೊಯ್ದು ಸೂಡ ಕಟ್ಟಲಿಲ್ಲ. ನಾಗಪ್ರಿಯ ಚನ್ನರಾಮೇಶ್ವರಾ ನಿಮ್ಮ ಶರಣ ಸುಖಿಸಬಲ್ಲ ಸುಖವನು.

ಇವು ಎರಡೇ ವಚನಗಳಿದ್ದರೂ ಅರ್ಥಬೋಧಕವಾಗಿವೆ.

# ಕೋವೂರು ಬ್ರಹ್ಮಯ್ಯ.

ಉತ್ತರ ದೇಶದಲ್ಲಿ ಕೋವೂರೆಂಬ ಪುರವಿದ್ದು ಅಲ್ಲಿ ಬ್ರಹ್ಮಯ್ಯ ನೆಂಬ ಚಾಳುಕ್ಯರಾಜನು ರಾಜ್ಯವಾಳುತ್ತಿದ್ದನು. ಚಾಲುಕ್ಯರ ಕುಲದಲ್ಲಿ ಅವನೊಬ್ಬನೇ ಶಿವಭಕ್ತನು. ಕೋವೂರಿಗೆ ಸಮೀಪವಾಗಿ 'ಅಂಬು ಧಾರಾ ರಾಮನಾಥ' ಎಂಬ ಹೆಸರಿನ ಈಶ್ವರನ ದೇವಾಲಯವು ಪ್ರಸಿದ್ಧ ವಾಗಿತ್ತು. ಬ್ರಹ್ಮಯ್ಯನು ಈ ರಾಮನಾಥನಲ್ಲಿ ಅತ್ಯಂತ ಭಕ್ತಿಯುಳ್ಳ ವನಾಗಿದ್ದನು. ಅವನ ಹೆಂಡತಿಯ ಹೆಸರು ಕಳಾವತಿಯು. ಅವಳೂ ತನ್ನ ಗಂಡನಂತೆ ಕೇವಲ ಶಿವಭಕ್ತಳಾಗಿದ್ದಳು.

ಈ ಕೋವೂರು ಗ್ರಾಮವು ವಿಜಾಪುರ ಪಟ್ಟಣದ ಪಶ್ಚಿಮಕ್ಕೆ ೪೦ ಮೈಲುಗಳ ಮೇಲೆ ಈಗ ಜತ್ತಿ ಸಂಸ್ಥಾನದಲ್ಲಿರುತ್ತದೆ. ಇಲ್ಲಿಂದ ನಾಲ್ಕು ಮೈಲುಗಳ ಮೇಲೆ 'ರಾಮತೀರ್ಥ' ಎಂಬ ಹೆಸರಿನ ಅತ್ಯಂತ ಪ್ರಸಿದ್ಧವಾದ ಈಶ್ವರನ ದೇವಾಲಯವು ಈಗಲೂ ಇರುತ್ತದೆ. ಈ ಕೋವೂರು ಗ್ರಾಮವು ಮೊದಲು ದೊಡ್ಡ ಪಟ್ಟಣವಾಗಿದ್ದು ಈಗ ಸಣ್ಣ ಗ್ರಾಮವಾಗಿರುವದರಿಂದ ಅದಕ್ಕೆ 'ಕೋವಳ್ಳಿ' ಎಂಬ ಹೆಸರು ಪ್ರಾಪ್ತವಾಗಿರುತ್ತದೆಂದು ತೋರುತ್ತದೆ. ಈ ಗ್ರಾಮದಿಂದ ೩೦-೪೦ ಮೈಲುಗಳ ಸುತ್ತಳತೆಯಲ್ಲಿ ವರದಾನಿಗುಡ್ಡಮ್ಮನ ಗುಡ್ಡಾಪುರವು, ಹಾವಿನಹಾಳ ಕಲ್ಲಯ್ಯನ ಹಾವಿನಹಾಳ ಗ್ರಾಮವು, ರೇವಣಸಿದ್ಧೇಶ್ವರ ಸಿದ್ಧ ಮಂಗಳವಾಡವು, ಹೀಗೆ ಅನೇಕ ಶಿವಶರಣರ ಸ್ಥಾನಗಳಿವೆ. ಬಸವೇಶ್ವರನ ಕಾಲದಲ್ಲಿ ಮಂಗಳವಾಡದಲ್ಲಿಯೂ ಮಾಡಗಿಹಾಳ, ಪ್ರಚಲಿತ ಹೆಸರು 'ಮಾಡ್ಯಾಳ'ದಲ್ಲಿಯೂ ಕೆಲವು ಚಿಕ್ಕ ರಾಜಮನೆತನ ಗಳು ರಾಜ್ಯವಾಳುತ್ತಿದ್ದವು. ಹೀಗೆಯೇ ಕೋವೂರಲ್ಲಿ ಚಾಲುಕ್ಯ ರಾಜರ ಒಂದು ಶಾಖೆಯು ಈಕಾಲದಲ್ಲಿ ಈ ಭಾಗವನ್ನು ಆಳುತ್ತಿರಬಹುದು.

ಬೊಮ್ಮಯ್ಯನು ಕೋವೂರಲ್ಲಿ ರಾಜ್ಯವಾಳುತ್ತಿರುವಾಗ ಗ್ರಾಮದ ಲ್ಲೆಲ್ಲ ಜೈನರೇ ವಾಸವಾಗಿದ್ದರು. ರಾಜನ ಮುಖ್ಯ ದಳಪತಿಯೂ ಮಾವು ತರೂ, ರಾಹುತರೂ, ಸೈನಿಕರೂ, ಮಂತ್ರಿಗಳೂ ಜೈನರೇ ಆಗಿದ್ದರು. ಅವನ ಕುಲಗೋತ್ರ ಬಂಧುಗಳು ಸಹ ಜೈನರು. ಆದರೆ ಅವರಲ್ಲಿ ಮುನ್ನೂರು ಜನರು ಮಾತ್ರ ಶಿವಭಕ್ತರಾಗಿ ಅರಸನೊಡನೆ ವಾಸವಾ

ಗಿದ್ದರು. ಇದರಿಂದ ಅರಸನ ಅರಮನೆಗೆ 'ಶಿವಪುರ'ವೆಂಬ ಹೆಸರು ಪ್ರಾಪ್ತವಾಗಿತ್ತು.

ಹೀಗಿರುವಲ್ಲಿ ರಾಜನಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ಮಲ್ಲಿದೇವನೆಂಬ ಹೆಸರನ್ನಿಟ್ಟರು. ಅವನೂ ಕೂಡ ತನ್ನ ತಾಯಿತಂದೆಗಳಂತೆ ಶಿವಭಕ್ತಿಯಲ್ಲಿ ಬೆಳೆಯುತ್ತ ಅವನಿಗೆ ೧೬ ವರ್ಷಗಳು ತುಂಬಿದವು. ಅರಸನೂ ಕಳಾವತಿಯೂ ಅವನನ್ನು ಪ್ರೀತಿಯಿಂದ ಪಾಲಿಸುತ್ತ ಸಂತೋಷದಿಂದ ರಾಜ್ಯವನ್ನಾಳುತ್ತ ಬಂದರು.

ಹೀಗಿರುವಲ್ಲಿ ಒಂದು ದಿನ ಕೆಲವು ಭಕ್ತರು ಅರಸನಲ್ಲಿಗೆ ಬಂದು ಅವನನ್ನು ಕಾಣಲು ಅರಸನು ಅವರಿಗೋಸ್ಕರ ಆದರವುಳ್ಳವನಾಗಿ ಸಂತೋಷಬಟ್ಟು ಅವರಿಗೆ ನಮಸ್ಕರಿಸಿ ಅವರನ್ನು ಕೆಲವು ದಿವಸ ತನ್ನ ಅರಮನೆಯಲ್ಲಿಟ್ಟುಕೊಂಡು ಶಿವಾನುಭವ ಗೋಷ್ಠಿಯಲ್ಲಿ ಕಾಲಕಳೆದನು. ಅವೇಳೆ ಆ ಭಕ್ತರು ಊರಿಂದ ಹೋಗಿಬಿಡಲು, ಅರಸನ ಮನಸ್ಸಿನಲ್ಲಿ ಅಂಬುಧಾರಾ ರಾಮನಾಥನಲ್ಲಿಗೆ ಹೋಗಿ ಅಲ್ಲಿ ಗಣಪರ್ವವನ್ನು ಮಾಡುತ್ತ ಶಿವನ ಧ್ಯಾನದಲ್ಲಿರಬೇಕೆಂಬ ಆಕಾಂಕ್ಷೆಯುಂಟಾಯಿತು. ಹೀಗಾಗಲು ಅವನು ತನ್ನ ಹೆಂಡತಿಯನ್ನೂ ಮಗನನ್ನೂ ಭಕ್ತಮಹೇಶ್ವರರನ್ನೂ ಸಚಿವರನ್ನೂ ತನ್ನಲ್ಲಿಗೆ ಬರಮಾಡಿಕೊಂಡು ಅವರಿಗೆನಾನು ಆರುತಿಂಗಳುಗಳವರೆಗೆ ರಾಮನಾಥ ದೇವಾಲಯದಲ್ಲಿ ಶಿವಭಕ್ತಿಯಲ್ಲಿರುವೆನು. ಆ ವರೆಗೆ ನಾನು ಒಡ್ಡೋಲಗಕ್ಕೆ ಬರುವದಿಲ್ಲ. ನೀವೂ ನನ್ನನ್ನು ಕಾಣಬಾರದು. ರಾಜ್ಯದಲ್ಲಿ ಏನು ನಡೆದರೂ ನಾನು ಪಟ್ಟಣಕ್ಕೆ ಬಾರೆನು. ನನ್ನ ಮಗ, ಪಟ್ಟದಾನೆ, ಇಷ್ಟೇ ಅಲ್ಲ, ರಾಜ್ಯವೂ ಕೂಡ ಕೆಟ್ಟು ಹೋದರೂ ಕೂಡ ನಾನು ಇಲ್ಲಿಗೆ ಬಾರೆನು. ಇಷ್ಟೇ ಅಲ್ಲ, ನೀವು ನನಗೆ ಯಾವುದನ್ನೂ ಸಹ ಹೇಳಿ ಕಳಿಸಬಾರದು. ನಾನು ಶಿವನ ಸೇವೆಯಲ್ಲಿರುವೆನು, ಎಂದು ಹೇಳಿ ಎಲ್ಲರಿಗೂ ಹೇಳತಕ್ಕದ್ದನ್ನು ಹೇಳಿ, ತನ್ನ ಮುನ್ನೂರು ಜನ ಭಕ್ತರನ್ನು ಕರೆದುಕೊಂಡು ಅಂಬುಧಾರಾ ರಾಮನಾಥನ ಸನ್ನಿಧಿಯಲ್ಲಿ ಬಂದು ಅಲ್ಲಿಯೇ ಇರಲಿಕ್ಕೆ ಹತ್ತಿದನು. ಅಲ್ಲಿ ಅವನು ಪರಮಾತ್ಮನನ್ನು ಬಹುಭಕ್ತಿಯಿಂದ ಭಜಿಸುವನು, ಧ್ಯಾನಿಸುವನು, ಅಲ್ಲಿದ್ದ ಶಿವಭಕ್ತರೊಡನೆ ಶಿವಾನುಭವಗೋಷ್ಠಿಯನ್ನಾಡುವನು. ಹೀಗೆ ದೇವಾಲಯದ ನೆರೆಯಲ್ಲಿ ಅವನು ಕಾಲಕಳೆಯಹತ್ತಿದನು.

ಹೀಗೆ ಅರಸನು ರಾಜಧಾನಿಯನ್ನು ಬಿಟ್ಟುಹೋಗಲು ಜೈನರು ಅವನ ಶಿವಭಕ್ತಿಯನ್ನು ನೋಡಿ ಅತ್ಯಂತ ಸಂತಾಪಗೊಂಡು ಅವರು ತಮ್ಮ ಮನದಲ್ಲಿ ಒಂದು ದುರ್ಬುದ್ಧಿಯನ್ನು ನೆನೆದು. ಒಬ್ಬ ಶ್ರವಣನಿಗೆ ಭಕ್ತನ ವೇಷವನ್ನು ಹಾಕಿ, ಅವನನ್ನು ಅರಮನೆಗೆ ಕಳಿಸಿದರು. ಅವನು ಅರಮನೆಯನ್ನು ಪ್ರವೇಶಿಸಿ ಮಲ್ಲಿದೇವನನ್ನು ಕಾಣಲು, ರಾಜಕುಮಾರನು ಅವನು ಶಿವಭಕ್ತನೆಂದು ತಿಳಿದು ಅತ್ಯಂತ ಭಕ್ತಿಯಿಂದ ಮಣಿದು ನಮಸ್ಕಾರವನ್ನು ಮಾಡಲು, ಆ ಕಪಟ ವೇಷಧಾರಿಯಾದ ಜೈನನು ಆ ಸ್ಥಳದಲ್ಲಿ ಯಾರೂ ಇಲ್ಲದ್ದನ್ನು ಕಂಡು ತನ್ನಲ್ಲಿ ಗುಪ್ತವಾಗಿ ಇಟ್ಟುಕೊಂಡಿದ್ದ ಕಠಾರಿಯನ್ನು ತೆಗೆದು ಅದರಿಂದ ಆ ಕುಮಾರನನ್ನು ಇರಿದು ಕೊಂದುಹಾಕಿದನು. ಹೀಗೆ ಮಾಡಿ ಕೂಡಲೆ ಅವನು ಅರಮನೆಯಿಂದ ಜಾರಿ ಹೋಗಿಬಿಟ್ಟನು.

ಸ್ವಲ್ಪ ಹೊತ್ತಿನ ಮೇಲೆ ಕಳಾವತಿಯು ತನ್ನ ಕುಮಾರನು ಸತ್ತು ಬಿದ್ದ ಸ್ಥಳಕ್ಕೆ ಬಂದಳು. ಮಗನ ಮೃತದೇಹವನ್ನು ನೋಡಿ ಅವಳಿಗುಂಟಾದ ದುಃಖಕ್ಕೆ ಪಾರಾವಾರವಿರಲಿಲ್ಲ. ಆದರೆ ಅವಳು ಶಿವಾನುಭವಿಯು. ಅವಳು ತನ್ನ ದುಃಖವನ್ನು ಕೂಡಲೆ ನುಂಗಿಕೊಂಡು ಈ ಅನಾಹುತವನ್ನು ಮಾಡಿದವರಾರೆಂಬುದನ್ನು ಶೋಧಿಸಹತ್ತಿದಳು. ಆಗ ಈ ಘೋರ ಕಾರ್ಯವನ್ನು ಮಾಡಿದವರು ಜೈನರು, ರಾಜನು ನಡಿಸಿರುವ ಧರ್ಮಕಾರ್ಯವನ್ನು ಕೆಡಿಸಲು ಅವರು ಹೀಗೆ ಮಾಡಿದ್ದಾರೆ, ಎಂದು ಅವಳಿಗೆ ತಿಳಿದುಬಂದಿತು. ಅವಳ ಮನಸ್ಸಿನಲ್ಲಿ ದುಃಖವು ಉಕ್ಕೇರಿ ಬಂದಿತ್ತು. ಆದರೆ ಅವಳು ಅದನ್ನು ತಡೆದು ಯೋಚಿಸಿದ್ದೇನೆಂದರೆ— ಹೀಗಾದುದನ್ನು ಅರಸನಿಗೆ ತಿಳಿಸಿದರೆ ಅವನು ನಡಿಸಿರುವ ಮಹಾಪರ್ವಕ್ಕೆ ಹಾನಿಬರುವದು. ಅವನು ಉದ್ವಿಗ್ನನಾಗುವನು. ರಾಜ್ಯದಲ್ಲಿ ಏನು ಘಟಿಸಿದರೂ ತನಗೆ ತಿಳಿಸಕೂಡದು ಎಂದು ಅವನು ಕಟ್ಟಪ್ಪಣೆಯನ್ನಿತ್ತಿದ್ದಾನೆ ಎಂಬುದನ್ನು ಸ್ಮರಿಸಿ, ಆ ಶಿವಶರಣೆಯು ತನ್ನ ಮಗನು ಮಡಿದನೆಂಬುವದರ ದುಃಖವನ್ನು ತಡೆದು ಅರಮನೆಯನ್ನು ಶೃಂಗರಿಸಿದಳು ಮತ್ತು ತನ್ನ ಮಗನ ಶವವನ್ನು ತನ್ನ ಪತಿಯು ಬರುವ ವರೆಗೆ ಹಾಗೆಯೇ ಇಡಬೇಕೆಂದು ಯೋಚಿಸಿ ಅದನ್ನು ಅರಮನೆಯಲ್ಲಿಯೇ ಒಂದು ಭದ್ರವಾದ ಉಚಿತಸ್ಥಳದಲ್ಲಿ ಇರಿಸಿದಳು. ಮರಣವಾದರೆ ದುಃಖಿಸಕೂಡದೆಂಬ ಶಿವಶರಣರ ನಡೆಯು ಇದೆ. ಇದರಂತೆಯೇ ಆ ಸಾಧ್ವಿಯು ಆ ಕಾಲದಲ್ಲಿ ಆಚರಿಸಿದಳು.

ಈ ಪ್ರಕಾರ ಕಳಾವತಿಯು ತನ್ನ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು ತನ್ನ ಪತಿಯು ಗಣಪರ್ವಕ್ಕೋಸ್ಕರ ಹೋಗುವ ಕಾಲದಲ್ಲಿ ಅವನು ಕೊಟ್ಟ ಸಲಹೆಗಳಂತೆ ಮಂತ್ರಿಗಳೊಡನೆ ರಾಜ್ಯಭಾರ ನಡಿಸಹತ್ತಿದಳು. ಹೀಗೆ ಆರು ತಿಂಗಳುಗಳು ಕಳೆದುಹೋದವು.

ಈ ಅವಧಿಯು ಮುಗಿದ ತರುವಾಯ ಅರಸನು ಅಂಬುಧಾರಾ—ರಾಮನಾಥನ ದೇವಾಲಯದಿಂದ ರಾಜಧಾನಿಗೆ ಬರಲು ಉದ್ಯುಕ್ತನಾದನು. ಈ ಸುದ್ದಿಯನ್ನು ಜೈನರು ಕೇಳಿ ಅವರು ತಮ್ಮ ಋಷಿಗಳನ್ನು ಕೂಡಿಕೊಂಡು ಅರಸನನ್ನು ಕಾಣಬೇಕೆಂದು ದೇವಸ್ಥಾನಕ್ಕೆ ಬಂದರು. ಆಗ ಅರಸನು ತನ್ನ ೩೦೦ ಜನ ಭಕ್ತರೊಂದಿಗೆ ಒಂದು ವಿಶಾಲವಾದ ವಟ ವೃಕ್ಷವಡಿಯಲ್ಲಿ ದೇವಾಲಯದ ಬಳಿಯಲ್ಲಿಯೇ ಕುಳಿತುಕೊಂಡು ಶಿವಾನುಭವ ಸದ್ಗೋಷ್ಠಿಯಲ್ಲಿದ್ದನು. ಜೈನರು ಅವನ ಸಮೀಪದಲ್ಲಿ ಬಂದು ಕಾಣಿಕೆಗಳನ್ನು ಅರ್ಪಿಸಿ ಅವನಿಗೆ ನಮಿಸಿ ಅಲ್ಲಿಯೇ ಕುಳಿತರು. ಅವರು ಅಲ್ಲಿದ್ದ ಪ್ರಶಾಂತವಾದ ಉಚ್ಚ ಶಿವಾನುಭವದ ವಾತಾವರಣವನ್ನು ನೋಡಿ ಸೈರಿಸದೆ ಅರಸನಿಗೆ— ರಾಜನೇ, ನೀನು ಈ ವರೆಗೆ ನಡಿಸುತ್ತಿದ್ದ ಪರ್ವವು ಕ್ಷೇಮದಿಂದ ಮುಗಿಯಿತೇ? ಆದರೆ ಇದರಿಂದ ನಿನಗೆ ಆದ ಪ್ರಯೋಜನವೇನು? ಇದರಲ್ಲಿ ನೀನು ಯಾವ ಪ್ರತ್ಯಕ್ಷ ಫಲವನ್ನು ಹೊಂದಿದೆ? ಎಂದು ವಿಡಂಬಿಸಿ ನುಡಿದರು. ಅರಸನು ಅದನ್ನು ಕೇಳಿ ಕೆರಳಿದವನಾಗಿ—ಮರುಳುಗಳಿರಾ, ನಿಮಗೆ ಭಕ್ತಿಯೆಂಬುದು ತಿಳಿಯದು. ನಿಮಗೆ ದೇವರ ಕಲ್ಪನೆ ಇಲ್ಲ. ಮನುಷ್ಯನು ೮೪ ಲಕ್ಷ ಜನ್ಮಗಳನ್ನು ತಾಳಿ ಆ ಮೇಲೆ ಶಿವಭಕ್ತನಾಗಿ ಹುಟ್ಟುತ್ತಾನೆ. ನಾನು ಈಗ ಭಕ್ತನಾಗಿ ಜೀವಿಸಿರುವದೇ ನನಗೆ ದೊರೆತ ಪ್ರತ್ಯಕ್ಷ ಫಲವು. ಇದಕ್ಕಿಂತಲೂ ಹೆಚ್ಚಿನ ಪ್ರಯೋಜನವು ದೊರಕಬೇಕಾದುದಾದರೂ ಆವುದು? ಎಂದು ನುಡಿದನು. ಅದಕ್ಕೆ ಜೈನ ಋಷಿಗಳು ಅವನಿಗೆ— ನೀವು ೬ ತಿಂಗಳುಗಳ ವರೆಗೆ ಏಕಾಂತವಾಸ ಮಾಡಿ ಆವ ಮಹಿಮೆಗಳನ್ನು ಮಾಡಲು ಕಲಿತಿರುವಿರಿ ಎಂದು ಕೇಳಿದರು. ಇದಕ್ಕೆ ಅರಸನು— ಶಿವಾನುಭವಿಗಳ ಅದ್ಭುತ ಶಕ್ತಿಯನ್ನು ನೀವೇನು ಬಲ್ಲಿರಿ? ಅವರು ಸೃಷ್ಟಿಸಬಲ್ಲರು, ಸೃಷ್ಟಿಸಿದ್ದನ್ನು ಅಳಿಸಬಲ್ಲರು, ಎಂದು ನುಡಿದನು. ಇದನ್ನು ಜೈನರು ಕೇಳಿ ಬೇರೊಂದೆಡೆಗೆ ಹೋಗಿ, ಒಂದು ಉಪಾಯವನ್ನು ನೆನೆದು ಅರಸನಿದ್ದಲ್ಲಿಗೆ ಬಂದು – ಅರಸನೇ, ಇಗೋ

ನೋಡು ನಮ್ಮ ಸಾಮರ್ಥ್ಯವನ್ನು, ಎಂದು ಹೇಳಿ ಕುಟಿಲ ಮಂತ್ರಗಳನ್ನು ಉಚ್ಚರಿಸುತ್ತ ಅಕ್ಷತೆಗಳನ್ನು ಅರಸನು ಕುಳಿತಿದ್ದ ಆ ವಟವೃಕ್ಷದ ಮೇಲೆ ಚಲ್ಲಲು, ಆ ಕ್ಷಣಾವೇ ಅದು ಧಗ ಧಗನೆ ಉರಿಯುಹತ್ತಿತು. ಮತ್ತು ಅದು ನಿಮಿಷಾರ್ಧದಲ್ಲಿ ಭಸ್ಮವಾಯಿತು. ಹೀಗಾದುದನ್ನು ಜೈನರು ಅರಸನಿಗೆ ತೋರಿಸಿ— ನೋಡಿದೆಯಾ ನಮ್ಮ ಈ ಅದ್ಭುತ ಸಾಮರ್ಥ್ಯವನ್ನು? ಎಂದು ಗರ್ವದಿಂದ ನುಡಿಯಲು, ಅರಸನು—ನಿಮಗೆ ಶಿವಶರಣರ ಮಹಿಮೆಯು ರೀತಿಯು ತಿಳಿದಿಲ್ಲ. ಅದನ್ನು ಶಿವಾನುಭವಿಗಳೇ ಬಲ್ಲರು. ಈ ವೃಕ್ಷವನ್ನು ನೀವು ಭಸ್ಮ ಮಾಡಿದ ಬಳಿಕ, ಇಗೋ ಅದರ ಶೇಷವು ಈ ಬೂದಿಯಲ್ಲಿದೆ. ಈ ಶೇಷದ ಮೂಲಕವೇ ನಾನು ಈ ವೃಕ್ಷವನ್ನು ಪುನಃ ಮೊದಲಿನಂತೆ ಚಿಗಿಯಿಸಬಲ್ಲೆನು, ಎಂದು ನುಡಿದು ಅರಸನು ಶಿವನನ್ನು ನೆನೆಯಲಾಗಿ ಆಕ್ಷಣಾವೇ ಆ ವೃಕ್ಷವು ಬೂದಿಯೊಳಗಿಂದ ಅಂಕುರಿಸಿತು, ಅಂಕುರಿಸಿ ಪಲ್ಲವಿಸಿತು, ಮತ್ತು ಮೊದಲಿನಂತೆ ಒಂದು ವಿಶಾಲವಾದ ಮರನಾಯಿತು, ಮುಂದೆ ಅದಕ್ಕೆ ಪುಷ್ಪ ಫಲಗಳಾದವು. ಜೈನರು ಅರಸನಲ್ಲಿ ಈ ಅಗಾಧವಾದ ಶಕ್ತಿಯು ಉಂಟಾದದ್ದನ್ನು ನೋಡಿ, ಅಂಜಿ ಓಡಿ ಹೋಗಹತ್ತಿದರು. ಆದರೆ ಅರಸನು ನಗುತ್ತ ಅವರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವರಿಗೆ — ಶಿವಾನುಭವಿಯು ಯಾರನ್ನೂ ನಿಷ್ಕಾರಣವಾಗಿ ಕ್ಲೇಶಪಡಿಸುವದಿಲ್ಲ. ನೀವು ಜಿನಧರ್ಮವನ್ನು ಬಿಟ್ಟು ಭಕ್ತರಾಗಿರಿ ಎಂದು ಹೇಳಿದನು. ಹೀಗೆ ಹೇಳಿದ್ದಕ್ಕೆ ಜೈನ ಋಷಿಗಳು ಮತ್ತಿಷ್ಟು ಕೆರಳಿದವರಾಗಿ ರಾಜಧಾನಿಗೆ ಹೊರಟು ಹೋದರು.

ಇಷ್ಟಾದಮೇಲೆ ಅರಸನು ತನ್ನ ಮುನ್ನೂರು ಜನ ಭಕ್ತರನ್ನು ಕೂಡಿಕೊಂಡು ಅರಮನೆಗೆ ಬಂದು ಅಲ್ಲಿದ್ದ ಸಿಂಹಾಸನದ ಮೇಲೆ ಕುಳಿತುಕೊಂಡನು. ಆಗ ಅರಮನೆಯಲ್ಲಿಯ ಸ್ತ್ರೀಯರು ಅವನಿಗೆ ಆರತಿಯನ್ನು ಬೆಳಗಿ ಅವನನ್ನು ಸ್ವಾಗತಿಸಿದರು. ಅವರಲ್ಲಿ ಅವನ ಹೆಂಡತಿಯಾದ ಕಳಾವತಿಯೂ ಇದ್ದಳು. ಆದರೆ ಅವಳು ಆರತಿಯನ್ನು ಬೆಳಗುತ್ತಿರುವಾಗ್ಗೆ, ಆಕೆಯ ಮನದಲ್ಲಿ ಮಗನು ಮಡಿದ ದುಃಖವು ಉಕ್ಕೇರಿ ಬಂದಿತು. ಅವಳ ಕಣ್ಣೊಳಗಿಂದ ಅಶ್ರುಗಳು ದಳದಳನೆ ಸುರಿಯುಹತ್ತಿದವು. ಅದನ್ನು ಅರಸನು ನೋಡಿ ಇದೇನೆಂದು ಭಯಪಟ್ಟು ಕೇಳಲು, ರಾಣಿಯು— ನಾನೇನು ಹೇಳಲಿ ಎಂದು ರೋದಿಸ

ಹತ್ತಿದಳು. ಅವಳು ಅವನಿಗೆ— ಅರಮನೆಯಲ್ಲಿ ನಿಮ್ಮ ಮಗನಿದ್ದರೆ, ಅವನು ಇಲ್ಲಿಗೆ ಬಂದು ನಿಮ್ಮನ್ನು ಕಾಣದೆ ಉಳಿಯುತ್ತಿದ್ದನೇ ಎಂದು ಅನ್ನಲು, ಅರಸನು ಗಾಬರಿಗೊಂಡು— ಕುಮಾರನೇನಾದನು ಎಂದು ಕೇಳಲು, ರಾಣಿಗೆ ಹೇಳುವವಾಗದಿರಲು— ಅರಸನು ಬಾಗಿಲಿನ ರಕ್ಷಕ ನನ್ನು ಕರೆದು ಕೇಳಲು ಅವನು ಒಬ್ಬ ಜೈನನು ಭಕ್ತನ ವೇಷ ವನ್ನು ಧರಿಸಿಕೊಂಡು ಅರಮನೆಯನ್ನು ಪ್ರವೇಶಿಸಿ ಬಾಲಕನನ್ನು ಕಠಾ ರಿಯಿಂದ ತಿವಿದು ಕೊಂದ ಹಾಕಿದನೆಂದು ಹೇಳಿದನು.

ಅರಸನು ಈ ಸುದ್ದಿಯನ್ನು ಕೇಳಿದ ಕೂಡಲೆ ಉದ್ರೇಕಗೊಂಡು ಘುಡಿಘುಡಿಸುತ್ತ— ಬಾಲಕನ ಮೃತಶರೀರವೆಲ್ಲದೆ ಎಂದು ಕೇಳಲು ಸೇವಕರು ಆ ಶರೀರವನ್ನು ಇಟ್ಟಿಷ್ಟ ಸ್ಥಳಕ್ಕೆ ಅರಸನನ್ನು ಕರೆದುಕೊಂಡು ಬಂದು ಅದನ್ನು ಅವನಿಗೆ ತೋರಿಸಿದರು.

ಅರಸನು ಬಾಲಕನ ಮೃತದೇಹವನ್ನು ನೋಡಿ ಬಾಲಕನಿಗೆ— ನಿನಗೆ ಶ್ರವಣರು ಈ ರೀತಿ ಮಾಡಿದರೇ ಎಂದೆನ್ನುತ್ತ, ಪರಮಾತ್ಮನನ್ನು ಮಂತ್ರಪೂರ್ವಕವಾಗಿ ಧ್ಯಾನಿಸುತ್ತ— ಏಳೇಳು ಕುಮಾರನೇ, ಈ ಮೃಡಪದ ಸಮಾಧಿಯು ನಿನಗೆ ಸಾಕು ಎಂದೆನ್ನಲು, ಕುಮಾರನು ನಿದ್ರೆಯಿಂದ ಎಚ್ಚತ್ತವನಂತೆ ಎದ್ದು ಕುಳಿತು, ಇದಿರಿಗೆ ತನ್ನ ತಂದೆ ಯನ್ನು ಕಂಡು ಅವನನ್ನು ಬಿಗಿದಪ್ಪಿದನು. ಆಗ ಕಳಾವತಿಗೂ ಭಕ್ತಜನರಿಗೂ ಆನಂದವು ಉಕ್ಕೇರಿಬಂದಿತು. ಎಲ್ಲರಿಗೂ ಹರ್ಷವಾ ಯಿತು. ಇದನ್ನು ನೋಡಿ ಅರಸನು— ನಾಳಿನ ಸೋಮವಾರ ಪಟ್ಟಣ ದಲ್ಲಿ ಅದ್ಭುತವಾಗಿ ಗಣಪರ್ವವು ಸಾಗಲಿ ಎಂದು ಅಪ್ಪಣೆಯನ್ನಿತ್ತನು.

ಈ ಗಣಪರ್ವಕ್ಕೆ ಬೇಕಾಗುತ್ತಿದ್ದ ನೆಲ್ಲು ಮೊದಲಾದ ಧಾನ್ಯಗ ಳನ್ನು ಕುಟ್ಟಬೇಕೆಂದು ಪಡಿಯರರು ಪಟ್ಟಣಿಗರಿಗೆ ಹೇಳಿದರು. ಆದರೆ ಅವರು ಜೈನರೇ ಇದ್ದದರಿಂದ ಅವರಲ್ಲಿ ಯಾರೂ ಅರಸನಿಗಾಗಿ ಈ ಕೆಲಸವನ್ನು ಮಾಡಲು ಒಪ್ಪಲಿಲ್ಲ. ಆಗ ಮಾರಿಮುಕಣಿಗಳು ಬೊಮ್ಮ ತಂದೆಯು ಮುಂದೆ ಬಂದು ನಿಂತು ಅವನಿಗೆ— ನಿನ್ನ ಈ ಸೇವೆಯನ್ನು ನಾವು ಮಾಡುವೆವು. ಆದರೆ ಇದಕ್ಕೋಸ್ಕರ ಶಿವಪುರವೆಂದೆಣಿಸಿಕೊಂಡ ನಿನ್ನ ಅರಮನೆಯನ್ನು ನಾವು ಪ್ರವೇಶಮಾಡಲು ಅಂಜುತ್ತೇವೆ. ನಾವು

ಬೇರೆ ಕಡೆಗೆ ಹೋಗಿ ಕಾಳನ್ನೆಲ್ಲ ಕುಟ್ಟುತಿರುವೆವು ಎಂದು ಹೇಳಲು ಅರಸನು ಅದಕ್ಕೆ ಒಪ್ಪಲಾಗಿ ಅವು ಮರುದಿನ ಮುಂಜಾವಿನೊಳಗಾಗಿ ಕೊಟ್ಟ ಕಾಳುಗಳನ್ನೆಲ್ಲ ಹಸನುಮಾಡಿ ಕುಟ್ಟಿ ಅರಮನೆಯ ಇದಿರಿಗೆ ತಂದುಹಾಕಿದವು. ಆಮೇಲೆ ಪಟ್ಟಣದಲ್ಲಿ ಮಹತ್ತರವಾದ ಸಮಾರಂಭದಿಂದ ಗಣಪರ್ವವು ನಡೆಯಿತು.

ಈ ರೀತಿ ಅರಸನ ಕಾರ್ಯಗಳು ವಿಜೃಂಭಣೆಯಿಂದ ನಡೆದದ್ದನ್ನು ಪಟ್ಟಣದಲ್ಲಿಯ ಶ್ರಮಣರು ನೋಡಿ ಮತ್ತಷ್ಟು ಕೆರಳಿದವರಾಗಿ ಅರಸನಿಗೆ— ಪರ್ವಪರ್ವವೆಂದು ನಿಮ್ಮ ಭಕ್ತರು ಉಂಡುಂಡು ಹೋಗುತ್ತಿದ್ದಾರೆ. ಆದರೆ ನೀವು ಪರಮಾತ್ಮನು ಸರ್ವವ್ಯಾಪಿಯು ಎಂದು ಹೇಳುತ್ತೀರಿ. ಇದು ಒಂದುವೇಳೆ ನಿಜವಾದರೆ ನಿಮ್ಮ ಅಂಬುಧಾರಾ—ರಾಮನಾಥನನ್ನು ಇಲ್ಲಿಯೇ ಈ ಪಟ್ಟಣದಲ್ಲಿ ತಂದು ತೋರಿಸಬೇಕು, ಎಂದು ಅನ್ನಲು ಇದಕ್ಕೆ ಅರಸನು— ಏಕಾಗವೊಲ್ಲದು ಎಂದು ನುಡಿದು ಹರನು ಇಲ್ಲಿಗೆ ಬರಬೇಕೆಂದು ನೆನೆಯುತ್ತ ಒಬ್ಬ ಪಡಿಹಾರಿಯನ್ನು ಕರೆದು— ನೀನು ಅಂಬುಧಾರಾ—ರಾಮನಾಥನಲ್ಲಿಗೆ ಹೋಗಿ ಅವನಿಗೆ ಪಟ್ಟಣದಲ್ಲಿ ಬರಹೇಳು ಎಂದು ಹೇಳಿಕಳಿಸಿದನು. ಅವನು ಹಾಗೆಯೇ ದೇವಾಲಯದಲ್ಲಿ ಹೋಗಿ ಉಚ್ಚರಿಸಲು ಸ್ವಲ್ಪ ಹೊತ್ತಿನಲ್ಲಿಯೇ ಅರಮನೆಯ ಪ್ರವೇಶದ್ವಾರದಲ್ಲಿಯೇ ಕೋಟಿ ಸೂರ್ಯ ಪ್ರಕಾಶದಿಂದ ಬೆಳಗುತ್ತ ರಾಮನಾಥನು ಝಗ್ಗನೆ ಕಾಣಿಸಿಕೊಂಡನು. ಅರಸನು ಆ ಮೂರ್ತಿಯನ್ನು ನೋಡಿ ಅದಕ್ಕೆ ನಮಸ್ಕರಿಸಿ ಭಕ್ತರೊಂದಿಗೆ ಪರಮಾತ್ಮನನ್ನು ಸ್ತುತಿಸುವವನಾದನು. ಆದರೆ ಪಟ್ಟಣದಲ್ಲಿಯ ಜೈನರು ಪರಮಾತ್ಮನು ವಿಶ್ವವ್ಯಾಪಿಯು ಎಂದು ಅರಸನು ಹೇಳಿದ್ದು ಸತ್ಯವಾಯಿತೆಂಬದನ್ನು ನೋಡಿ ಮನಸ್ಸಿನಲ್ಲಿ ಮತ್ತಷ್ಟು ತಳಮಳಗೊಂಡರು.

ಬ್ರಹ್ಮಯ್ಯನು ಪಟ್ಟಣದಲ್ಲಿ ಜೈನರು ಹೀಗೆ ಅನೇಕ ರೀತಿಯಿಂದ ತನ್ನನ್ನು ವಿರೋಧಿಸುತ್ತಿರುವದನ್ನು ನೋಡಿ ಅವರಿಗೆ ಅಂದದ್ದು— ನೀವು ನನ್ನ ಬಾಲಕನನ್ನು ಕೊಂದುಹಾಕಿದಿರಿ. ಇದು ನಿಮ್ಮ ಮೊದಲನೆಯ ಅಪರಾಧವು. ಆಮೇಲೆ ನಾನು ರಾಮನಾಥನ ದೇವಾಲಯದಲ್ಲಿದ್ದಾಗ್ಗೆ ಭಕ್ತರ ಮಹತ್ವವನ್ನು ನೀವು ಹೀಯಾಳಿಸಿ ನುಡಿದಿರಿ. ಇದು ನಿಮ್ಮ ಎರಡನೆಯ ಅಪರಾಧವು. ಈಗ ನೀವು ವಿಶ್ವವ್ಯಾಪಿಯಾದ ಪರಮಾ

ತ್ಮನನ್ನು ನಂಬದೆ ಅವನನ್ನು ನಿಂದಿಸಿ ನುಡಿದಿರಿ. ಇದು ನಿಮ್ಮ ಮೂರನೆಯ ಮಹಾಪರಾಧವು. ನೀವು ಭಕ್ತರ ಮತ್ತು ಪರಮಾತ್ಮನ ಮಹಿಮೆಯನ್ನು ಪ್ರತ್ಯಕ್ಷ ಕಂಡರೂ ಹೀಗೆ ನಡೆಯುತ್ತೀರಿ. ನಿಮ್ಮದು ಶಿವದ್ರೋಹವು ಎಂದೆನ್ನಲು ಪಟ್ಟಣದಲ್ಲಿದ್ದ ಎಂಟುಸಾವಿರ ಶ್ರವಣರು ಇದನ್ನು ಕೇಳಿ, ಒಟ್ಟಾರೆ ಸೇರಿ, ಭಕ್ತರನ್ನೆಲ್ಲ ಸಂಹರಿಸಬೇಕೆಂದು ನಿಶ್ಚಯಿಸಿ, ಶಸ್ತ್ರಾಸ್ತ್ರಗಳನ್ನು ಧರಿಸಿಕೊಂಡು ಶಿವಪುರವೆಂದೆನಿಸಿಕೊಳ್ಳುತ್ತಿದ್ದ ಅರಸನ ಅರಮನೆಯ ಮೇಲೆ ಸಾಗಿಬಂದು ಅದಕ್ಕೆ ಮುತ್ತಿಗೆಯನ್ನು ಹಾಕಿ ಯುದ್ಧವನ್ನು ಆರಂಭಿಸಿದರು.

ಬೊಮ್ಮತಂದೆಯು ಇದನ್ನು ನೋಡಿ ಮನಮರುಗಿ— ಈ ಶ್ರವಣರ ಬುದ್ಧಿಯು ಮಸುಳಿಸಿದೆ. ಇದಕ್ಕೆ ತಕ್ಕ ಪ್ರತೀಕಾರ ಮಾಡದೆ ಬಿಡೆನೆಂದು ಕೆಲಬಲದಲ್ಲಿದ್ದ ತನ್ನ ಮುನ್ನೂರು ಜನ ಭಕ್ತರಿಗೆ ಕಣ್ಣಾಸನ್ನೆ ಮಾಡಲು ಅವರು ಅರಸನ ಇಂಗಿತವನ್ನರಿತು ತಮ್ಮ ಶಸ್ತ್ರಗಳನ್ನು ಝಳಪಿಸುತ್ತ ಜೈನರ ಪಡೆಯ ಮೇಲೆ ನುಗ್ಗಿ ಇದಿರಿಗೆ ಬಂದವರನ್ನು ಸಂಹರಿಸುತ್ತ ಮುಂದುವರಿದರು. ಆಗ ಅವರೆಲ್ಲರೂ ಓಡಿಹೋದರು. ಆಮೇಲೆ ಭಕ್ತರು ಬಸದಿಗಳಲ್ಲಿ ನುಗ್ಗಿ ಜಿನಪ್ರತಿಮೆಗಳನ್ನು ಕಿತ್ತು ಬಿಸುಟಿಹಾಕಿದರು. ಆಮೇಲೆ ಅವರು ಅರಸನಿಗೆ— ಅವುಗಳ ಸ್ಥಳದಲ್ಲಿ ಶಿವಲಿಂಗಗಳನ್ನು ಸ್ಥಾಪಿಸಬಹುದೇ ಎಂದು ಕೇಳಲು ಅರಸನು ಇಂಥ ದೇವಾಲಯಗಳನ್ನು ಶಿವಭಕ್ತರು ಪ್ರವೇಶಿಸಕೂಡದು, ಅವು ಶಿವನಿಗೆ ಸಲ್ಲವು ಎಂದು ಹೇಳಲು ಅವರು ಆ ಬಸದಿಗಳನ್ನೆಲ್ಲ ಕೆಡವಿ ನೆಲಸಮಮಾಡಿಬಿಟ್ಟರು.

ಕೋವೂರಲ್ಲಿ ಈ ಪ್ರಕಾರ ಘಟನೆಗಳು ನಡೆದ ಬಳಿಕ ಎಲ್ಲವೂ ಶಾಂತವಾಯಿತು. ಅಲ್ಲಿ ಶಿವಾನುಭವ ಸದ್ಗೋಷ್ಠಿಗಳು ನಿರಾತಂಕವಾಗಿ ನಡೆಯಹತ್ತಿದವು. ಯಾವಾಗಲೂ ಶಿವಗೀತಗಳು ಕೇಳಬರಹತ್ತಿದವು ಅರಸನು ಅವುಗಳಿಗೆ ಮೆಚ್ಚಿ ಉದಾರಭಾವದಿಂದ ಗಾಯಕರಿಗೂ ಮಹೇಶ್ವರರಿಗೂ ಮೆಚ್ಚುಗಳನ್ನು ಹೇರಳವಾಗಿ ಕೊಡಹತ್ತಿದನು. ಹೀಗೆ ಕೆಲವು ದಿವಸಗಳು ಗತಿಸಿದ ಮೇಲೆ ಒಂದಾನೊಂದು ದಿವಸ ಶರಣ ಗೋಷ್ಠಿಗಳು ನಡೆದ ಕಾಲದಲ್ಲಿ ನಂದಿಯುಂಡಿಗೆಯು ಇದ್ದ ಒಂದು ಶಿವಲಿಖಿತವು ಸಭಾಮಧ್ಯದಲ್ಲಿ ಅರಸನ ಇದಿರಿಗೆ ಮೇಲಿನಿಂದ ಕೇಳಕ್ಕೆ ಬಂದು ಬಿದ್ದಿತು.

ಆದನ್ನು ಅರಸನು ತೆಗೆದುಕೊಂಡು ತನ್ನ ತಲೆಯ ಮೇಲೆ ಇಟ್ಟು ಆದನ್ನು ಓದಿಸಿ ನೋಡಲು, ಆದರಲ್ಲಿ ರಾಜನಿಗೆ--ನಿನ್ನ ಮುನ್ನೂರು ಜನ ಭಕ್ತರನ್ನು ಕೂಡಿಕೊಂಡು ನನ್ನ ಸನ್ನಿಧಿಗೆ ಬರಬೇಕು ಎಂದು ಬರೆದದ್ದಿತ್ತು. ಬ್ರಹ್ಮಯ್ಯನು ಅದನ್ನು ನೋಡಿ ನಾನು ಈ ವರೆಗೆ ಭಕ್ತರ ಕೂಡ ಶಿವಾನ ಭವದಲ್ಲಿ ಸುಖವಾಗಿ ಕಾಲ ಕಳೆದೆನು. ಇನ್ನು ಮೇಲೆ ನಾನು ಈ ಸಂಸಾರವನ್ನು ನೀಗಿ ಶಿವನ ಅಪ್ಪಣೆಯಂತೆ ಅವನ ಸಾನ್ನಿಧ್ಯವನ್ನು ಸೇರುವೆನು, ಎಂದು ಸಂತೋಷಬಟ್ಟನು. ಆ ಮೇಲೆ ಅವನು ತನ್ನ ಮುನ್ನೂರು ಜನ ಭಕ್ತರಿಗೆ ಪತ್ರದಲ್ಲಿದ್ದ ಈ ಸಂಗತಿಯನ್ನು ತಿಳಿಸಲು ಅವರು ಸಹ ಅರಸನ ಕೂಡ ಶಿವನ ಸಾನ್ನಿಧ್ಯವನ್ನು ಹೊಂದಬೇಕೆಂದು ಅಪೇಕ್ಷೆಬಟ್ಟರು.

ಆಮೇಲೆ ಬ್ರಹ್ಮಯ್ಯನು ತನ್ನ ಮಗನನ್ನು ಕರೆದು ಅವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಅವನಿಗೆ--ನೀನು ಯಾವಾಗಲೂ ಶಿವಭಕ್ತನಾಗಿರು, ಈ ಕೋವೂರು ಪುರವನ್ನು ಚನ್ನಾಗಿ ಪಾಲಿಸು, ಶಿವಭಕ್ತರ ವಚನಗಳನ್ನು ನಂಬು, ನಂಬಿ ಅವುಗಳಂತೆ ನಡೆ, ಎಂದು ಉಪದೇಶಿಸಿ ತನ್ನ ಮುನ್ನೂರು ಜನ ಭಕ್ತರೊಂದಿಗೆ ಅಂಬುಧಾರಾ--ರಾಮನಾಥನ ದೇವಾಲಯದ ಕಡೆಗೆ ಹೊರಟನು. ಆಗ ಅವರೆಲ್ಲರ ಕೈಯ್ಯಲ್ಲಿ ಕಠಾರಿಗಳೂ ಮಸೆದ ಆಯುಧಗಳೂ ಹೊಳೆಯುತ್ತಿದ್ದವು. ಕಹಳೆಗಳು ಸುತ್ತಲೂ ಭೋರ್ಗರೆಯುತ್ತಿದ್ದವು. ಹೀಗೆ ಅವರು ದೇವಾಲಯಕ್ಕೆ ಹೋಗಿ ರಾಮನಾಥನ ಇದಿರಿಗೆ ಎಲ್ಲರೂ ನಿಂತು-ದೇವದೇವನೇ, ನಾವು ಈ ನಶ್ವರ ತನುವಿನಲ್ಲಿ ಇನ್ನುಮೇಲೆ ಇರಲು ಇಚ್ಛೆಸುವದಿಲ್ಲ. ನಾವು ಅದನ್ನು ನಿನಗೆ ಅರ್ಪಿಸಲು ಸಿದ್ಧರಾಗಿದ್ದೇವೆ ಎಂದು ನುಡಿದರು. ಅಷ್ಟರಲ್ಲಿ ಬೊಮ್ಮಯ್ಯನು ತನ್ನ ಖಡ್ಗವನ್ನು ಕೈಯ್ಯಲ್ಲಿ ಹಿಡಿದುಕೊಂಡು ತನ್ನ ಕತ್ತನ್ನು ಕತ್ತರಿಸಿ ಅದನ್ನು ರಾಮನಾಥನ ಇದಿರಿಗೆ ಇಟ್ಟನು. ಆ ಮೇಲೆ ಉಳಿದ ಭಕ್ತರು ತಮ್ಮ ಸುರಿಗೆಗಳಿಂದ ತಮ್ಮ ಹೊಟ್ಟೆಯನು ಬಗಿದುಕೊಂಡು ಹೊರಬಿದ್ದ ಕರುಳುಗಳನ್ನು ಈಶ್ವರನ ಮುಂದಿಟ್ಟರು. ಅವರಲ್ಲಿ ಕೆಲವರು ಪರಶುವಿನಿಂದ ತಮ್ಮನ್ನು ಕಡಿದುಕೊಂಡರು. ಆ ಕಾಲದಲ್ಲಿ ರಾಮನಾಥನ ಇದಿರಿಗೆ ರಕ್ತದ ಪ್ರವಾಹವು ಹರಿಯಿತು. ಅಷ್ಟರಲ್ಲಿ ಮುನ್ನೂರು ಪುಷ್ಪಕ ವಿಮಾನಗಳು ಆಕಾಶ ಮಾರ್ಗದಿಂದ ದೇವಾಲಯದಲ್ಲಿ ಇಳಿದು ಅಲ್ಲಿದ್ದ ೩೦೦ ಜನ ಭಕ್ತರನ್ನು ತೆಗೆದುಕೊಂಡು

ಗಗನದಲ್ಲಿ ಹಾರಿ ಹೋದವು. ಈ ಪ್ರಕಾರ ಕೋವೂರ ಬ್ರಹ್ಮಯ್ಯನೂ ಅವನ ೩೦೦ ಜನ ಭಕ್ತರೂ ಶಿವಪದವನ್ನು ಹೊಂದಿ ಶಿವಶರಣರಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದಾರೆ.

ಕೋಹೂರು ಬ್ರಹ್ಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಅವನು ಹಿಂದಿನ ಕಾಲದ ಶಿವಶರಣನು. ಆದರೆ ಅವನು ಬಸವೇಶ್ವರನಕಿಂತಲೂ ಹಿಂದಿನವನೋ ಅಥವಾ ಅವನ ತರುವಾಯದವನೋ ಎಂಬುದನ್ನು ತಿಳಿಯಲು ವಿಶ್ವಾಸಾರ್ಹವಾದ ಸಂಗತಿಗಳು ಅವನ ಚರಿತ್ರೆಯಲ್ಲಿ ದೊರಕುವದಿಲ್ಲ. ಅವನ ಚರಿತ್ರೆಯಲ್ಲಿ ಬಸವನ ಉಲ್ಲೇಖವೇನೂ ಇರುವದಿಲ್ಲ. ಆದ್ದರಿಂದ ಅವನು ಅವನಿಗೆ ಸಮಕಾಲೀನನೆಂದು ತೋರುವದಿಲ್ಲ. ಅವನು ಚಾಲುಕ್ಯ ವಂಶದವನೆಂದು ಅವನ ಚರಿತ್ರೆಯಲ್ಲಿ ಹೇಳಲ್ಪಟ್ಟಿರುತ್ತದೆ. ಬಿಜ್ಜಳನ ಕಾಲದಲ್ಲಿ ಚಾಲುಕ್ಯರು ರಾಜ್ಯದಿಂದ ತಳ್ಳಲ್ಪಟ್ಟವರಾಗಿದ್ದರೂ ಅವರ ಶಾಖೆಗಳು ಕರ್ನಾಟಕದಲ್ಲಿ ಅಲ್ಲಲ್ಲಿ ನೆಲಸಿದ್ದವು. ಇಂಥ ಒಂದು ವಂಶಕ್ಕೆ ಕೋಹೂರು ಬೊಮ್ಮಯ್ಯನು ಹೊಂದಿದವನಾಗಿರಬೇಕು. ಅವನು ಬಹುಶಃ ಬಸವೇಶ್ವರನಕಿಂತಲೂ ಈಚಿನವನಾಗಿರಬೇಕು. ಬಸವೇಶ್ವರ ಮತ್ತು ಚನ್ನಬಸವೇಶ್ವರ ಇವರ ತರುವಾಯ ದೇಶದಲ್ಲೆಲ್ಲ ವೀರಶೈವ ಮತವು ಕ್ರಮೇಣ ಅನೇಕ ವರ್ಷಗಳವರೆಗೆ ವಿಸ್ತಾರಹೊಂದುತ್ತ ಬಂದಿತೆಂದು ತಿಳಿಯುತ್ತಿದೆ. ಇಂಥ ಪ್ರಸಾರ ಕಾಲದಲ್ಲಿಯೇ ಕೋಹೂರು ಬ್ರಹ್ಮಯ್ಯನು ಪ್ರಸಿದ್ಧಿಗೆ ಬಂದಿರಬೇಕು.

ಕೋಹೂರು ಬ್ರಹ್ಮಯ್ಯನು ಜೈನರನ್ನು ವಿರೋಧಿಸುವಾಗ ಅವನು ಅದರಲ್ಲಿ ಯಶಸ್ಸನ್ನು ಹೊಂದಿದನೆಂಬ ಭಾವವು ಅವನ ಚರಿತ್ರೆಯಲ್ಲಿ ವ್ಯಕ್ತವಾಗುತ್ತದೆ. ಆದರೆ ಅವನ ಚರಿತ್ರೆಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಲ್ಲಿ ನಿಜಸ್ಥಿತಿಯು ಹೀಗಿರದೆ ಜೈನರೇ ವೀರಶೈವರನ್ನು ಕಡೆಯವರೆಗೂ ಹಿಂಸಿಸುತ್ತ ಬಂದರೆಂದು ಅನುಮಾನಿಸಬೇಕಾಗುತ್ತದೆ.

# ಮಾರುಡಿಗೆಯ ನಾಚಯ್ಯ.

ವಿಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾದ ಸಿಂದಿಗಿ ಗ್ರಾಮದಿಂದ ಪೂರ್ವಕ್ಕೆ ೨೪ ಮೈಲುಗಳ ಮೇಲೆ ಕಲಬುರ್ಗಿ ಜಿಲ್ಲೆಯಲ್ಲಿ ಶಿವಪುರವೆಂಬ ಒಂದು ಗ್ರಾಮವಿರುತ್ತದೆ. ಅಲ್ಲಿ 'ನಾಚಯ್ಯ' ಅಥವಾ 'ನಾಚಿದೇವ' ಎಂಬ ಹೆಸರಿನ ಶಿವಭಕ್ತನು ತಿಲಕಾಯಕ ಎಂದರೆ ಗಾಣಿಗರ ಉದ್ಯೋಗವನ್ನು ಮಾಡುತ್ತ ಉಪಜೀವಿಸುತ್ತಿದ್ದನು. ಅವನು ಅದರಿಂದ ಉಪಜೀವಿಸುತ್ತ ಉಳಿದದ್ದನ್ನು ದಾಸೋಹಕಾರ್ಯಗಳಿಗೆ ಉಪಯೋಗಿಸುವನು. ಅವನು ಮಲ್ಲಿಕಾರ್ಜುನನ ಕೇವಲ ಭಕ್ತನು ಮತ್ತು ಲಿಂಗಧಾರಿಯು. ಅವನು ಶಿವಾನುಭವಿಯಾಗಿ ವೀರಭಕ್ತಿಯಿಂದ ಆಚರಿಸುವವನಾಗಿದ್ದನು. ಅವನು ಲಿಂಗದಲ್ಲಿ ಏಕನಿಷ್ಠೆಯುಳ್ಳವನು, ನಿಶ್ಶಂಕ ವೃತ್ತಿಯುಳ್ಳವನು, ಮತ್ತು ಭಕ್ತನಿಂದೆಯನ್ನು ಎಂದಿಗೂ ಸೈರಿಸನು. ಈ ರೀತಿಯಾಗಿ ಅವನು ತನ್ನ ಗ್ರಾಮದಲ್ಲಿ ಗಣಾಚಾರದಿಂದ ನಡೆಯುತ್ತ ಸುತ್ತಲೂ ಹೆಸರುವಾಸಿಯಾಗಿದ್ದನು.

ಶಿವಪುರದಿಂದ ಪೂರ್ವಕ್ಕೆ ೨೦ ಮೈಲುಗಳ ಮೇಲೆ ಮಾರುಡಿಗೆ ಎಂಬ ಗ್ರಾಮವಿದೆ. ಇದು ಈಗ ಕಲಬುರ್ಗಿ ಜಿಲ್ಲೆಯಲ್ಲಿದೆ. ಆ ಗ್ರಾಮದಲ್ಲಿ ಆಗ ಇರುವವರೆಲ್ಲರೂ ಜೈನರು. ಅಲ್ಲಿ ಎಲ್ಲಕಡೆಗೂ ಅವರ ಬಸದಿಗಳು. ಆದರೆ ಗ್ರಾಮದಲ್ಲಿ ಬ್ರಹ್ಮೇಶ್ವರನ ದೇವಾಲಯವೆಂದು ಒಂದೇ ಒಂದು ಲಿಂಗದ ಗುಡಿಯು ಇದ್ದಿತು. ಆದರೆ ಅದನ್ನು ಸಹ ಆ ಜೈನರು ಕೆಡವಿಹಾಕಿ ಅದರ ತಮ್ಮಡಿ (ದೇವಾಲಯದ ಸೇವಕ ಅಥವಾ ಪೂಜಾರಿ) ಯನ್ನು ಹೊಡೆದುಬಡಿದು ಅವನನ್ನು ಗ್ರಾಮದ ಹೊರಗೆ ಹಾಕಿಬಿಟ್ಟರು. ಆದ್ದರಿಂದ ಅವನು ಮಾರುಡಿಗೆಯನ್ನು ಬಿಟ್ಟು ನಾಚಿದೇವನಿದ್ದ ಶಿವಪುರದಲ್ಲಿ ಬಂದು ವಾಸಿಸಹತ್ತಿದನು.

ಹೀಗಿರುವಲ್ಲಿ ಒಂದುದಿನ ನಾಚಿದೇವನ ಕನಸಿನಲ್ಲಿ ಪರಮಾತ್ಮನು ಬಂದು, ಅವನಿಗೆ–– ನೀನು ಭಕ್ತರ ನೋವನ್ನು ಗಣಿಸುವದಿಲ್ಲ. ಹೀಗೆ ಮಾಡಬೇಡ. ಇಗೋ ನೋಡು, ನನ್ನ ಮೈಯ್ಯಮೇಲೆ ಬಾಸುಳಗಳಿದ್ದಿವೆ. ಒಬ್ಬ ಭಕ್ತನು ಮಾರುಡಿಗೆಗೆ ಬಂದಿರಲು ಜೈನರು ಅವನನ್ನು ಒಳಿತಾಗಿ ಹೊಡೆದುಬಡಿದು ಗ್ರಾಮದ ಹೊರಗಟ್ಟಿದರು. ಅವನು

ನಿಮ್ಮೂರ ಕೆರೆಯ ದಂಡೆಯ ಮೇಲೆಯೇ ಈಗ ಬಂದಿದ್ದಾನೆ. ಅವನನ್ನು ನೀನು ಕಾಣು. ಭಕ್ತರ ನೋವೇ ನನ್ನ ನೋವು. ಆ ಭಕ್ತನ ಮೈಮೇಲಿನ ಬಸುಳುಗಳೇ ನನ್ನ ಮೈಮೇಲೆ ಎದ್ದಿವೆ ಎಂದು ಹೇಳಿ ಅಂತರ್ಧಾನನಾದನು. ಆಗ ನಾಚಿದೇವನಿಗೆ ಎಚ್ಚರಾಯಿತು. ಅವನು ಮರುದಿನ ಮುಂಜಾವಿನಲ್ಲಿದ್ದು ಗ್ರಾಮದಲ್ಲಿಯ ಭಕ್ತರಿಗೆ ತನಗೆ ಬಿದ್ದ ಕನಸನ್ನು ಹೇಳಿ, ಅವರನ್ನು ಕರೆದುಕೊಂಡು ಕೆರೆಯ ಏರಿಗೆ ಬಂದನು. ಅಲ್ಲಿ ಒಬ್ಬ ಭಕ್ತನು--- ಅಯ್ಯೋ, ಮಹಾದೇವನೇ, ಎಂದು ಒರಲುತ್ತ ಬಿದ್ದಿದ್ದನ್ನು ಕಂಡನು. ನಾಚಿದೇವನು ಅವನನ್ನು ಸಂತೈಸಿ ಅವನನ್ನು ಎತ್ತಿಕೊಂಡು ತನ್ನ ಮನೆಗೆ ಬಂದು ಉಪಚರಿಸಿದನು. ಆಮೇಲೆ ಅವನಿಗೆ--- ನಿನಗೇನಾಯಿತೆಂದು ಕೇಳಲು ಅವನು ಹೇಳಿದುದು ಏನೆಂದರೆ---

ಜೈನರು ನನಗೆ ಹಿಂಸೆ ಮಾಡಿದ್ದನ್ನು ನಿಮಗೆ ಎಷ್ಟೆಂತು ಹೇಳಲಿ! ನಾನು ಬಣಜಿಗ ಕಾಯಕದವನು. ನಾನು ಸರಕುಗಳನ್ನು ಹೇರಿಕೊಂಡು ಗ್ರಾಮಗಳಿಗೆ ಹೋಗಿ ಅಲ್ಲಿ ವ್ಯಾಪಾರ ಮಾಡಿಕೊಂಡು ಮಾರುಡಿಗೆ ಎಂಬ ಗ್ರಾಮಕ್ಕೆ ಬಂದೆನು. ಅಲ್ಲಿ ಎಲ್ಲಿ ನೋಡಿದರೂ ಜೈನ ಬಸದಿಗಳೇ. ಕಡೆಗೆ ನಾನು ಒಬ್ಬ ಜೈನನ ಮನೆಯ ಮುಂದಣ ಅಂಗಣದಲ್ಲಿ ವಾಸ್ತವ್ಯ ಮಾಡಿ ಲಿಂಗಾರ್ಚನೆಯನ್ನು ಮಾಡಿಕೊಳ್ಳುವಷ್ಟರಲ್ಲಿ ಜೈನರ ಒಂದು ತಂಡವು ಬಂದು ನನ್ನ ಮೇಲೆ ನುಗ್ಗಿ, ನನ್ನನ್ನು ನೆಲಕ್ಕೆ ಕೆಡಹಿ, ನಾನು ಪೂಜೆಗೋಸ್ಕರ ಇಟ್ಟಿದ್ದ ಅಗ್ಘವಣಿಯನ್ನು ನೆಲಕ್ಕೆ ಚೆಲ್ಲಿ, ಪುಷ್ಪಗಳನ್ನು ಅತ್ತಿತ್ತ ಹರಿವಿ, ಹಚ್ಚಿದ ದೀಪವನ್ನು ನಂದಿಸಿ, ನನ್ನನ್ನು ಬೆತ್ತದಿಂದ ಹೊಡೆದು ಬಡಿದು ಗಾಸಿ ಮಾಡಹತ್ತಿದರು. ನಾನು ಹೇಗೋ ಅವರ ಕೈಯಿಂದ ಪಾರಾಗಿ ಓಡಿ ಹೋದೆನು. ಆದರೆ ಅವರು ನನ್ನನ್ನು ಬಿಡದೆ ಬೆನ್ನಟ್ಟಿ ಒಳಿತಾಗಿ ಹೊಡೆದರು. ಆಗ ನಾನು ಮೂರ್ಛೆ ಹೋದೆನು. ನನಗೆ ಎಚ್ಚರಾದ ಬಳಿಕ ಮೈತುಂಬ ಗಾಯಗಳಾಗಿ ನೆತ್ತರ ಸೋರುತ್ತಿದ್ದಿತು. ಆದರಲ್ಲೂ ನಾನು ಕಲ್ಲುಮುಳ್ಳುಗಳನ್ನು ತುಳಿಯುತ್ತ, ಎಡಹುತ್ತ, ಬತ್ತಲೆಯಾಗಿ ನಡೆದುಕೊಂಡು ಈ ಗ್ರಾಮಕ್ಕೆ ಬಂದೆನು. ಅಷ್ಟರಲ್ಲಿ ನನಗೆ ಮೂರ್ಛೆಯು ಬಂದಿತು. ಆಗ ನನ್ನ ಕನಸಿನಲ್ಲಿ ಪರಮಾತ್ಮನು ಬಂದು— ನೀನು ಅಂಜಬೇಡ. ಇಲ್ಲಿ ನಾಚಿತಂದೆಯೆಂಬ ಗಣಾಧೀಶ್ವರನಿದ್ದಾನೆ, ಅವನಿಗೆ ನೀನು ಮೊರೆ

ಹೋಗು, ಅವನು ನಿನ್ನನ್ನು ರಕ್ಷಿಸುತ್ತಾನೆ, ಎಂದು ಹೇಳಿದನು. ಇದೇ ನಿರ್ಭಾಗ್ಯನಾದ ನನ್ನ ವೃತ್ತಾಂತವು. ನನ್ನ ಶಿವಾಚಾರದ ಹಾನಿಯು ಎಂದು ಗಟ್ಟಿಯಾಗಿ ರೋದಿಸುತ್ತಿದನು

ಅವನ ವೃತ್ತಾಂತವನ್ನು ಗ್ರಾಮದಲ್ಲಿದ್ದ ಭಕ್ತರು ಕೇಳಿ ಬಹಳ ಮರುಗಿದರು. ಅವರು ಮಾರಡಿಗೆಯಲ್ಲಿದ್ದ ಶಿವಾಲಯವನ್ನು ಈ ಮೊದಲಿಗೆ ಜೈನರು ನಾಶಮಾಡಿದರು. ಈಗ ಒಬ್ಬ ಶಿವಭಕ್ತನನ್ನು ಗಾಸಿಮಾಡಿದರು. ಇದಕ್ಕೆ ಪ್ರತೀಕಾರ ಮಾಡಬೇಕೆಂದು ಅವರು ನಿಶ್ಚಯಿಸಿದರು. ಗಣಾಚಾರ ನಿರತನಾದ ಮಾಚಿದೇವನು ಅತ್ಯಂತ ಕೆರಳಿದನು. ಅವರೆಲ್ಲರೂ ಮಾರುಡಿಗೆಯನ್ನು ಪ್ರವೇಶಿಸಿ ಅಲ್ಲಿಯ ಮುಖ್ಯ ಜಿನಾಲಯದಲ್ಲಿ ಮಲ್ಲಿನಾಥನನ್ನು ಪ್ರತಿಷ್ಠಿಸಬೇಕೆಂದು ನಿರ್ಧರಿಸಿದರು. ಆದರೆ ಅಲ್ಲಿಯ ಜೈನರು ಶಿವಭಕ್ತರನ್ನು ತಮ್ಮ ಗ್ರಾಮದೊಳಗೆ ಬರಗೊಡರು. ಆದ್ದರಿಂದ ಒಂದು ಉಪಾಯವನ್ನು ಯೋಚಿಸಿ ಮದುವೆಯ ಸಂಭ್ರಮದ ನೆವವನ್ನು ಮುಂದೆ ಮಾಡಿಕೊಂಡು ಗ್ರಾಮವನ್ನು ಪ್ರವೇಶಿಸಬೇಕೆಂದು ಗೊತ್ತುಪಡಿಸಿಕೊಂಡರು. ಆಗ ಮಾಚಿದೇವನು ಒಂದು ಬಂಡಿಯ ಮೇಲೆ ಒಂದು ದೊಡ್ಡದಾದ ಶಿವಲಿಂಗವನ್ನು ಬಿಜಯಮಾಡಿಸಿ, ಅದು ಮದುಮಗನ ಬಂಡಿ ಎಂದು ಹೇಳಿ, ಅದನ್ನು ತಳಿರುಗಳಿಂದ ಶೃಂಗರಿಸಿ ಅದಕ್ಕೆ ಕಾಪಿನ ಆಳುಗಳನ್ನು ನಿಯಮಿಸಿ ತಾನು ಮತ್ತು ತನ್ನೊಡನೆ ಹದಿಮೂರು ಜನ ಭಕ್ತರು ಆ ತಳಿರು ಬಂಡಿಯನ್ನೇರಿ ಮಾರುಡಿಗೆಗೆ ಹೊರಟರು. ಅವರು ಎಲ್ಲರೂ ಸಾಯಂಕಾಲದಲ್ಲಿ ಆ ಗ್ರಾಮದ ಹೊರಗೆ ಬಂದಿಳಿದರು

ಆಗ ಗ್ರಾಮದ ಜೈನರು ಅವರಿಗೆ— ನೀವೆಲ್ಲಿಗೆ ಹೋಗುತ್ತೀರೆಂದು ಕೇಳಲು ಅವರು ನಾವು ಮದುವೆಗೆ ಹೋಗುತ್ತೇವೆಂದು ಹೇಳಲು ಅವರು— ನೀವು ರಾತ್ರಿ ಇಲ್ಲಿ ಹೊರಗೆ ಇರಬೇಡಿರಿ. ತುಡುಗರ ಹಾವಳಿ ಬಹಳ ಇದೆ ಎಂದು ಅವರನ್ನು ಕರೆದುಕೊಂಡು ತಮ್ಮ ಹಿರಿಯ ಜಿನಾಲಯದ ಮುಂದೆ ಇಳಿಸಿದರು. ಅಲ್ಲಿ ಆ ಭಕ್ತರು ತಳುವಿದ ಬಳಿಕ ಅವರು ಮಧ್ಯರಾತ್ರಿಯಲ್ಲಿ ಜಿನಾಲಯವನ್ನು ಪ್ರವೇಶಿಸಿ ಒಳಗಿದ್ದ ಜಿನಪ್ರತಿಮೆಯನ್ನು ಕೆಡಿವಿ ಅಲ್ಲಿದ್ದ ಬತ್ತಲೆ ಬೊಂಬೆಗಳನ್ನು ಒಡೆದು ಹಾಕಿ ಅಲ್ಲಿ ಮಲ್ಲಿಕಾರ್ಜುನ ಲಿಂಗವನ್ನು ಪ್ರತಿಷ್ಠಿಸಿದರು.

ಮರುದಿನ ಬೆಳಿಗ್ಗೆ ಜೈನ ಪಂಡಿತನೊಬ್ಬನು ಪೂಜೆಗೋಸ್ಕರ ಜಿನ ಮಂದಿರವನ್ನು ಪ್ರವೇಶಿಸುತ್ತಿರಲು ಅಲ್ಲಿದ್ದ ನಾಚಿದೇವ ಮೊದಲಾದ ಶಿವ ಭಕ್ತರು ಅವನನ್ನು ಒಳಗೆ ಬಿಡಗೊಡದೆ ಹೊರಗಟ್ಟಿದರು. ಆದರೆ ಒಳಗೆ ಜಿನಪ್ರತಿಮೆಗಳು ಒಡೆದು ಹೋದದ್ದನ್ನು ಅವನು ಕಂಡು ಗ್ರಾಮದಲ್ಲಿದ್ದ ಜೈನರಿಗೆ ಇದನ್ನು ಹೇಳಲಾಗಿ ಅವರು ಮೋಸವಾಯಿತೆಂದು ತಿಳಿದು ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ಮಂದಿರಕ್ಕೆ ಮುತ್ತಿಗೆಯನ್ನು ಹಾಕಿದರು. ಆದರೆ ನಾಚಿದೇವನೂ ಅವನೊಡನೆ ಬಂದಿದ್ದ ಜನರೂ ಅಂಜದೆ ಅವರೊಡನೆ ದೇವಾಲಯದ ಮುಂದೆ ಕಾದಿ ಅವರನ್ನು ಹಿಂದಕ್ಕಟ್ಟಿದರು. ಆದರೆ ಅಷ್ಟರಲ್ಲಿ ನಾಚಿದೇವನ ಸಂಗಡವಿದ್ದ ಹದಿಮೂರು ಜನ ಗಣಾಧೀಶ್ವರರು ಆ ಸಮಯದಲ್ಲಿ ಬಂದ ವಿಮಾನಗಳಿಂದ ಕೈಲಾಸಕ್ಕೆ ಹೊರಟು ಹೋದರು. ನಾಚಿದೇವನೊಬ್ಬನೇ ಉಳಿದನು. ಆದರೆ ಅವನು ಹಿಂಜರಿಯಲಿಲ್ಲ. ದೇವಾಲಯದ ಬಾಗಿಲಲ್ಲಿ ಜೈನರ ಕೂಡ ಹೋರಾಡುತ್ತ ಅವರನ್ನು ತರುಬಿಕೊಂಡು ನಿಂತನು.

ಅಷ್ಟರಲ್ಲಿ ಮಾರುಡಿಗೆಯಲ್ಲಿ ನಡೆದ ಕದನದ ವೃತ್ತಾಂತವನ್ನು ಶಿವಪುರದಲ್ಲಿದ್ದ ಗಣಕುಲವು ಕೇಳಿ ಅವರೆಲ್ಲರೂ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ವೃಷಭಧ್ವಜವನ್ನು ಹಾರಿಸುತ್ತ, ಒಂದು ಬಂಡಿ ತುಂಬ ಲಿಂಗಗಳನ್ನು ಅಣಿಮಾಡಿಕೊಂಡು ಮಾರುಡಿಗೆಯ ಗ್ರಾಮವನ್ನು ಪ್ರವೇಶಿಸಿದರು. ಆಗ ರಣಸಂಕುಳವು ಹೆಚ್ಚಾಯಿತು. ಆದರಲ್ಲಿ ಜೈನರು ಚದರಿಹೋದರು. ಆಮೇಲೆ ಭಕ್ತರು ಗ್ರಾಮದಲ್ಲಿದ್ದ ಬಸದಿಗಳಲ್ಲಿಯ ಜಿನಪ್ರತಿಮೆಗಳೆಲ್ಲವನ್ನು ಒಡೆದುಹಾಕಿದರು ಮತ್ತು ಅವುಗಳ ಸ್ಥಳದಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿದರು. ಹೀಗೆ ಜಿನಪುರವೆಂದು ಪ್ರಸಿದ್ಧಿಯನ್ನು ಹೊಂದಿದ್ದ ಆ ಮಾರುಡಿಗೆ ಗ್ರಾಮವು ಶಿವಪುರವಾಯಿತು.

ಹೀಗೆ ನಾಚಿದೇವನೂ ಅವನೊಡನೆ ಇದ್ದ ಭಕ್ತರೂ ಮಾರುಡಿಗೆಯಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿದ ಬಳಿಕ ಅವರು ಆ ಗ್ರಾಮದ ಸುತ್ತಲೂ ಇದ್ದ ಗ್ರಾಮಗಳಲ್ಲಿಯ ಬಸದಿಗಳಲ್ಲಿ ಸಹ ಲಿಂಗಗಳನ್ನು ಪ್ರತಿಷ್ಠಾಪಿಸತೊಡಗಿದರು. ಹೀಗೆ ಈ ಭಾಗದಲ್ಲಿದ್ದ ಅನೇಕ ಬಸದಿಗಳು ಶಿವಾಲಯಗಳಾದವು.

ಹೀಗೆ ಮಾರುಡಿಗೆಯು ಶಿವಪುರವಾದ ಬಳಿಕ ನಾಚಿದೇವನು ಅಲ್ಲಿಯೇ ವಾಸಮಾಡಹತ್ತಿದನು. ಅಂದಿನಿಂದ ಅವನು 'ಮಾರುಡಿಗೆಯ ನಾಚಯ್ಯ'ನೆಂದು ಶಿವಶರಣರಲ್ಲಿ ಬಹು ಪ್ರಸಿದ್ಧನಾದನು. ಅವನು ಕಡೆಗೆ ಈ ಗ್ರಾಮದಲ್ಲಿಯೇ ಲಿಂಗೈಕ್ಯನಾದನು.

ಮಾರುಡಿಗೆಯ ನಾಚಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಆದ್ದರಿಂದ ಅವನು ಹಿಂದಿನಕಾಲದವನು. ಆದರೆ ಅವನು ಕೋಹೂರು ಬ್ರಹ್ಮಯ್ಯನಂತೆ ಬಸವೇಶ್ವರನ ತರುವಾಯ ಪ್ರಸಿದ್ಧಿಗೆ ಬಂದಂತೆ ತೋರುತ್ತದೆ.

ಮಾರುಡಿಗೆಯ ನಾಚಯ್ಯನು ವಚನಕಾರನಿದ್ದಾನೆ.[೧] 'ನಾಚಯ್ಯಪ್ರಿಯ ಮಲ್ಲಿನಾಥಾ' ಎಂಬುದೇ ಅವನ ಮುದ್ರಿಕೆಯು. ನಾಚಯ್ಯನು ಶೂರಪುರುಷನು. ಬಸವೇಶ್ವರನ ಕಾಲದಲ್ಲಿ ಅವನಂತೆ ಅನೇಕ ಶೂರ ಪುರುಷರು ಉದಯವಾಗಿ ಅವರು ತಮ್ಮ ನಿತ್ಯದ ಕಾಯಕಗಳನ್ನು ಮಾಡಿಕೊಂಡು ಹೇಗೆ ಅಧ್ಯಾತ್ಮಿಕ ವೃತ್ತಿಯಲ್ಲಿ ತೊಡಗಿರುತ್ತಿದ್ದರೆಂಬುದು ಲಕ್ಷಿಸತಕ್ಕ ವಿಷಯವಾಗಿದೆ. ಇದು ಆಗಿನ ಕಾಲದ ವಿಚಾರ ಕ್ರಾಂತಿಯನ್ನು ತೋರಿಸುತ್ತದೆ. ನಾಚಿದೇವನ ನಾಲ್ಕು ವಚನಗಳು ಮಾತ್ರ ನಮಗೆ ಉಪಲಬ್ಧವಿದ್ದು ಅವುಗಳನ್ನೆಲ್ಲ ನಾವು ಇಲ್ಲಿ ಕೊಟ್ಟಿದ್ದೇವೆ.

## ವಚನಗಳು.

(೧) ಹೆಂಡಿರೆನ್ನದೆ, ಮಕ್ಕಳೆನ್ನದೆ, ತೊತ್ತಿರೆನ್ನದೆ, ಬಂಟರೆನ್ನದೆ, ಹಗೆಗಳೆನ್ನದೆ, ತಪ್ಪೆನ್ನದಯ್ಯಾ. ಜಾಗ್ರತ್ ಸ್ವಪ್ನ ಸುಷುಪ್ತಿ

---

೧ ೧೯೨೩ ರಲ್ಲಿ ಪ್ರಸಿದ್ಧವಾದ ವಚನಶಾಸ್ತ್ರಸಾರ ಭಾಗ-೧ ಇದರಲ್ಲಿಯ ಮುದ್ರಿಕೆಗಳ ಕೈಬರಹದ ನಮ್ಮ ಮೂಲ ಟಿಪ್ಪಣಿಗಳಲ್ಲಿ ಈ ಮುದ್ರಿಕೆ ಇದ್ದ ವಚನಕಾರನು 'ದಶಗುಣಸಿಂಗಿದೇವ' ಅಥವಾ 'ನಾಚಯ್ಯ' ಎಂದಿದೆ. 'ನಾಚಯ್ಯ' ಈ ಹೆಸರಿನ ಮುಂದೆ ಸಂಶಯಯುಕ್ತ ಚಿನ್ಹವಿದೆ. ಆದ್ದರಿಂದ ನಾವು 'ದಶಗುಣಸಿಂಗಿದೇವ' ಈತನು ವಚನಕಾರನೆಂದು ಆ ಗ್ರಂಥದಲ್ಲಿ ಕಾಣಿಸಿದ್ದೇವೆ. ಆದರೆ ಈ ಮುದ್ರಿಕೆಯುಳ್ಳ ವಚನಕಾರನು ನಾಚಯ್ಯನೆಂದು ಈ ಚರಿತ್ರೆಯಲ್ಲಿ ಉಲ್ಲೇಖವಾದ ಅವನ ಇಷ್ಟದೇವತೆಯ ಹೆಸರಿನಿಂದ ತಿಳಿದುಬರುತ್ತದೆ.

ಯಲ್ಲಿ ತಪ್ಪೆನ್ನದಯ್ಯ. ನಾಚಯ್ಯ ಪ್ರಿಯ ಮಲ್ಲಿನಾಥಯ್ಯ ನೀನಿದ್ದವರ ನೀನೆನ್ನದ ತಪ್ಪೆನ್ನನಯ್ಯ.

(೨) ಸತಿ-ಸುತ ಮಾತಾಪಿತರಿಗೆಂದು ಹಡೆದಡೆ ನಿಮ್ಮಾಣೆ ಕಂಡಯ್ಯ. ಮಾನವ ಸೇವೆಯ ಮಾಡಿದಡೆ ನಿಮ್ಮಾಣೆ ಕಂಡಯ್ಯ. ನೀವಲ್ಲದನ್ಯಕ್ಕೆರಗಿದಡೆ ನಿಮ್ಮ ಆಣೆ ಕಂಡಯ್ಯ. ಎನ್ನ ಸತಿಯಲ್ಲದನ್ಯ ಸತಿಗಳುಪಿದಡೆ ನಿಮ್ಮಾಣೆ ಕಂಡಯ್ಯ. ತನುಮನ ವಂಚನೆಯಾದಡೆ ನಾಚಯ್ಯಪ್ರಿಯ ಮಲ್ಲಿನಾಥಯ್ಯ ನಿಮ್ಮಾಣೆ ಕಂಡಯ್ಯ.

(೩) ಪೂರ್ವಕರ್ಮವ ಕೆಡಿಸಿದನೆನ್ನ ಗುರು. ಉಭಯ ಕರ್ಮವ ಬಿಡಿಸಿ ತೋರಿದ. ಶರಣರವರಿಂದ ಬದುಕಿದೆನು. ತೋರಿದನು ಸದ್ಭಕ್ತರವರಿಂದ. ಬದುಕಿದೆನು, ನಾಚಯ್ಯಪ್ರಿಯ ಮಲ್ಲಿನಾಥಯ್ಯ ಗುರುವಿಂದ ಬದುಕಿದೆನು. ನಿಮ್ಮ ಹಂಗೇನು?

(೪) ಮುಂಚಿದೆವಯ್ಯ ಪರಬ್ರಹ್ಮವ. ಮುಂಚಿದೆವಯ್ಯ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಪದವಿಯ. ಮುಂಚಿದೆವಯ್ಯ ನಾಚಯ್ಯಪ್ರಿಯ ಮಲ್ಲಿನಾಥಾ ನಿಮ್ಮಿಂದ.

---

## ಅಜಗಣ್ಣ

ಅಜಗಣ್ಣನು ಗದಿಗಿನಿಂದ ಆಗ್ನೇಯ ದಿಕ್ಕಿನಲ್ಲಿ ೮ ಮೈಲುಗಳ ಮೇಲೆ ಇರುವ ಲಕ್ಕುಂಡಿ ಎಂಬ ಗ್ರಾಮದವನು. ಈ ಗ್ರಾಮವು ಪುರಾತನ ಕಾಲದಲ್ಲಿ ಬಹು ಪ್ರಸಿದ್ಧವಾದದ್ದು. ಅಜಗಣ್ಣನಿಗೆ ಮುಕ್ತಾಯಕ್ಕ ಎಂಬ ತಂಗಿಯು ಇದ್ದು ಅವಳ ಗಂಡನ ಊರು 'ಮಸಳಿಕಲ್ಲು' ಎಂಬುದಾಗಿತ್ತು. ಆದ್ದರಿಂದ ಅವಳು ಈ ಗ್ರಾಮದಲ್ಲಿಯೇ ವಾಸಿಸುತ್ತಿದ್ದಳು. ಅಜಗಣ್ಣನ ಗ್ರಾಮವು ಲಕ್ಕುಂಡಿಯಾಗಿದ್ದರೂ ಅವನು ಆವುದೋ ಒಂದು ಕಾರಣದಿಂದ ಅಲ್ಲಿರದೆ ತನ್ನ ತಂಗಿಯೊಡನೆ ಮಸಳಿಕಲ್ಲು ಗ್ರಾಮದಲ್ಲಿರುತ್ತಿದ್ದನು.

ಅಜಗಣ್ಣನು ಈ ಮಸಳಿಕಲ್ಲು ಗ್ರಾಮದಲ್ಲಿ 'ಹಲಾಯುಧ ಕಾಯಕ' ಎಂಬ ಒಕ್ಕಲುತನವನ್ನು ಮಾಡುತ್ತ ದಾಸೋಹಿಯಾಗಿ

ದ್ದನು. ಅವನು ಒಬ್ಬ ಶ್ರೇಷ್ಠ ಶಿವಜ್ಞಾನಿಯು. ಲಿಂಗಾರ್ಚನೆಯಲ್ಲಿ ಮಗ್ನನಾಗಿ ಯಾವಾಗಲೂ ಶಿವಯೋಗಾಚರಣೆಯಲ್ಲಿರುತ್ತಿದ್ದನು. ಅವನು ತನ್ನ ಅರ್ಚನೆಯ ಕಾಲದಲ್ಲಿ ಪಂಚಾಕ್ಷರೀ ಜಪಗಳನ್ನು ಉಚ್ಚ ಸ್ವರದಿಂದ ಎಲ್ಲರೂ ಕೇಳುವಂತೆ ಅನ್ನುತ್ತ ತನ್ನ ಪೂಜಾದಿ ಕಾರ್ಯಗಳನ್ನು ನೆರವೇರಿಸ ವನು. ಹೀಗೆ ಪೂಜೆ ಮಾಡುವದೇ ಅವನಿಗೆ ವಾಡಿಕೆಯಾಗಿತ್ತು.

ಅಜಗಣ್ಣನು ತಾನು ಮಾಡಿಕೊಂಡಿದ್ದ ಹೊಲದಲ್ಲಿ ಕಡಲೆಯನ್ನು ಬಿತ್ತಿದ್ದನು. ಅವನು ಅದನ್ನು ಕಾಯಲಿಕ್ಕೆ ರಾತ್ರಿಯಲ್ಲಿ ಹೋದಾಗ್ಗ ಅವನಿಗೆ ಒಂದು ದೃಶ್ಯವು ಕಣ್ಣಿಗೆ ಬಿದ್ದಿತು. ಅವನಿಂದ ಸ್ವಲ್ಪ ದೂರದಲ್ಲಿ ಮೂರು ಮಾರು ಉದ್ದ ಮತ್ತು ಮೂರು ಮಾರು ಅಗಲ ಹೀಗೆ ಜಗ್ಗನೆ ನೆಲದ ಮೇಲೆ ಒಂದು ಪ್ರಕಾಶವು ಬಿದ್ದಿತು. ಅಜಗಣ್ಣನು ಅದನ್ನು ನೋಡಿ ಚಕಿತನಾಗಿ ದಿಟ್ಟಿಸಿ ನೋಡುವಷ್ಟರಲ್ಲಿ ಅಲ್ಲಿ ಒಂದು ಮಹಾ ಘಟಸರ್ಪವು ತನ್ನಲ್ಲಿ ಹುದುಗಿದ್ದ ಜೀವ ರತ್ನವನ್ನು ಹೊರಗೆ ಉಗುಳಿ, ಅದರ ಪ್ರಕಾಶದಲ್ಲಿ ತನ್ನ ಆಹಾರವನ್ನು ಹುಡುಕುತ್ತ ಅಲ್ಲಲ್ಲಿ ಸುತ್ತುತ್ತಿತ್ತು. ಅಜಗಣ್ಣನು ಅದನ್ನು ನೋಡುತ್ತ ಕೆಲಹೊತ್ತು ನಿಲ್ಲಲು, ಅಷ್ಟರಲ್ಲಿ ಆ ಸರ್ಪನ ಸಮೀಪದಲ್ಲಿ ಏನೋ ಒಂದು ಸದ್ದಾಗಲು, ಅದಕ್ಕೆ ಸಂಶಯ ಬಂದು, ಕೂಡಲೆ ಆ ರತ್ನವನ್ನು ನುಂಗಿಕೊಂಡು ತನ್ನ ಹುತ್ತನ್ನು ಹೊಕ್ಕುಬಿಟ್ಟಿತು.

ಇದನ್ನು ಅಜಗಣ್ಣನು ನೋಡಿ ಅವನ ಮನಸ್ಸಿನಲ್ಲಿ ಒಂದು ಪ್ರಕಾಶವು ಹೊಳೆಯಿತು. ಆಗ ಅವನು ವಿಚಾರಮಾಡಿದ್ದೇನಂದರೆ— ಶಿವ ಶಿವಾ, ಈಂಥ ಪ್ರಾಣಿಯು ತನ್ನ ಜೀವರತ್ನವನ್ನು ಎಷ್ಟು ಗೋಪ್ಯವಾಗಿ ಇಟ್ಟುಕೊಳ್ಳುತ್ತಿದೆಯಲ್ಲಾ! ಹಾಗೆಯೇ ನಾನು ಪರಮಪವಿತ್ರವಾದ ಮತ್ತು ಪ್ರಾಣದಂತಿರುವ ಇಷ್ಟಲಿಂಗವನ್ನು ಗೋಪ್ಯದಲ್ಲಿ ಪೂಜಿಸತಕ್ಕದ್ದಲ್ಲವೇ? ಆ ಸರ್ಪನು ಸ್ವಲ್ಪ ಸದ್ದಾಗಲು ಭೋರೆನ್ನದೆ ಸುಮ್ಮನೆ ಹೋಗಿಬಿಟ್ಟಿತು. ಹಾಗೆಯೇ ನಾನು ಪಂಚಾಕ್ಷರೀ ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸದೆ ಅದನ್ನು ನಾನು ಗೌಪ್ಯವಾಗಿ ಇಟ್ಟುಕೊಳ್ಳತಕ್ಕದ್ದಲ್ಲವೇ? ಅಜಗಣ್ಣನು ಶಿವಾನುಭವ ಶಾಸ್ತ್ರಗಳನ್ನು ಚನ್ನಾಗಿ ಓದಿದವನು. ಅವನು ಹೀಗೆ ವಿಚಾರಮಾಡುತ್ತಿರಲು ಅವನಿಗೆ ಲಿಂಗದ ಸ್ವರೂಪದ ವಿಷಯ

ವಾಗಿ ಮಾತಲಾಗದುದಲ್ಲಿಯು ಒಂದು ಉಕ್ತಿಯು ನೆನಪಿಗೆ ಬಂದು ಅದನ್ನು ಅಂದದ್ದು:— "ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್ । ಯದಾದಿಮಿಾಶ ತೇಜಂ ತಲ್ಲಿಂಗ ಪಂಚ ಸಂಜ್ಞಕಂ ॥ ಪರಮಾತ್ಮನು ಪರವಸ್ತುವು, ಗೂಢನು, ಅಂಗದಲ್ಲಿಯೇ ಇರುವವನು, ಲಿಂಗರೂಪಾಗಿರುವಂಥವನು, ಅನಾದಿಯು ಹೀಗೆ ಇದ್ದಾನೆ. ಇದರಲ್ಲಿ ಪರಮಾತ್ಮನು ಲಿಂಗರೂಪಾಗಿದ್ದಾನೆ ಮತ್ತು ಅವನು ವಸ್ತುಗಳಲ್ಲಿ ಗೂಢವಾಗಿ ವಾಸಮಾಡುತ್ತಾನೆಂದಿದೆ. ಅಲ್ಲದೆ ಲಿಂಗವನ್ನು ಪೂಜಿಸುವಲ್ಲಿ ಆ ಪೂಜೆಯನ್ನು 'ಪಾಪಿ, ಕೋಪಿ, ವ್ರತಭ್ರಷ್ಟ, ಜಾರ, ಚೋರ, ಹುಸಿಕ, ಶಿವನಿಂದಕರು" ಎಂದೂ ನೋಡಲಾಗದು ಎಂದು ಶಿವಶರಣರ ನುಡಿಯು ಇದೆ. ಆದ್ದರಿಂದ ಗುರೂಪದೇಶದ ಮಂತ್ರದ ಉಚ್ಚಾರಣೆಯನ್ನು ದುಷ್ಟರು ಕೇಳಬಾರದು. ಆದರೆ ನಾನು ಪ್ರಕಟತವಾಗಿ ಇಂಥ ಮಂತ್ರವನ್ನು ಉಚ್ಚಾರ ಮಾಡುತ್ತೇನೆ. ಇದು ನನ್ನ ತಪ್ಪು. ಇನ್ನು ಮೇಲೆ ನಾನು ಗುಪ್ತವಾಗಿ ಲಿಂಗಪೂಜೆಯನ್ನು ಮಾಡುವೆನು. ಮಂತ್ರವನ್ನು ಮನದಲ್ಲಿಯೇ ಸ್ಮರಿಸುವೆನು ಎಂದು ನಿಶ್ಚಯ ಮಾಡಿಕೊಂಡು ರಾತ್ರಿಯಲ್ಲಿ ಹೊಲದಲ್ಲಿಯೇ ಮಲಗಿ ಅಜಗಣ್ಣನು ಮರುದಿನ ಬೆಳಗ್ಗೆ ಮನೆಗೆ ಹೊರಟು ಬಂದನು.

ಅವನು ಮನೆಗೆ ಬಂದಬಳಿಕ ಗುಪ್ತದಲ್ಲಿ ಲಿಂಗಪೂಜೆಯನ್ನು ಮಾಡುತ್ತ ಮನದಲ್ಲಿಯೇ ಪಂಚಾಕ್ಷರಿಯನ್ನು ನೆನೆಯುತ್ತ ಲಿಂಗಧ್ಯಾನ ಮಾಡಹತ್ತಿದನು. ಇದರಿಂದ ಅವನ ಲಿಂಗವು ಅವನ ಅಮಳೋಕ್ಯದಲ್ಲಿ ಅಡಗಿತು. ಅದು ಅವನಿಗೆ ಪ್ರಾಣಸ್ವರೂಪವಾಯಿತು. ಅವನು ಅದಕ್ಕೆ ಅಂತರಂಗದಲ್ಲಿ ನಿರ್ಗುಣ ಅಷ್ಟವಿಧಾರ್ಚನೆಯನ್ನು ಮಾಡಹತ್ತಿದನು. ಆಗ ಅವನ ಆನಂದಜಲವೇ ಅದಕ್ಕೆ ಮಜ್ಜನೋದಕವಾಯಿತು. ಅವನ ಸುಬುದ್ಧಿಯೇ ಗಂಧವಾಯಿತು. ನಿತ್ಯತ್ವವೇ ಅಕ್ಷತೆಯಾಯಿತು. ಅವನ ಹೃದಯಕಮಲವೇ ಅದಕ್ಕೆ ಪುಷ್ಪವಾಯಿತು. ಅವನ ಸ್ವಾನುಭಾವವೇ ಅದಕ್ಕೆ ಧೂಪವಾಯಿತು. ಸಮ್ಯಜ್ಞಾನವೇ ಆರತಿಯಾಯಿತು. ಅವನ ಆತ್ಮನೇ ಅದಕ್ಕೆ ನೈವೇದ್ಯವಾಯಿತು. ಅವನ ನಿಜಭಕ್ತಿರಾಗರಸವೇ ತಾಂಬೂಲವಾಯಿತು. ಹೀಗೆ ಅವನ ಇಷ್ಟಲಿಂಗವು ಅವನಿಗೆ ಪ್ರಾಣಲಿಂಗವಾಗಲು ಅದನ್ನು ಅಂತರಂಗದಲ್ಲಿ ಅರ್ಚಿಸುತ್ತ, ಮನದಲ್ಲಿ ಮಂತ್ರವನ್ನು ನೆನೆಯುತ್ತ, ಅಂತರಂಗಪೂಜೆ

ಯಲ್ಲಿ ಮಗ್ನನಾದನು. ಅಜಗಣ್ಣನ ಈ ಹೊಸರೀತಿಯನ್ನು ಜನರು ನೋಡಿ ಅವನಿಗೆ— ನಿನ್ನ ಅಂಗದಲ್ಲಿ ಲಿಂಗಪೂಜೆ, ಮಂತ್ರೋಚ್ಚಾರ ಇವೆಲ್ಲಿವೆ? ಅವು ಕಾಣುವದಿಲ್ಲವಲ್ಲಾ! ಎಂದು ಕೇಳಲು ಅವನು ಅವರಿಗೆ ಏನೂ ಉತ್ತರವನ್ನು ಕೊಡದೆ ಸುಮ್ಮನಾಗುವನು. ಅಜಗಣ್ಣನು ಲಿಂಗೈಕ್ಯನಾಗಿ ವ್ಯವಹರಿಸುತ್ತಿದ್ದ ಈ ರೀತಿಯನ್ನು ಜನರು ಅರಿಯದೆ ಅವನು ಹುಚ್ಚನಾದನೆಂದು ಭಾವಿಸಹತ್ತಿದರು. ಆದರೆ ಲಿಂಗದಲ್ಲಿರುವ ಇಂಥ ಭಕ್ತನಿಗೆ ಷಡೂರ್ಮಿಗಳು ಅಂದರೆ ಹಸಿವೆ, ನೀರಡಿಕೆ, ಶೋಕ, ಮೋಹ, ಜನನ, ಮರಣ ಇವುಗಳು ಹತ್ತುವದಿಲ್ಲ. ಅದರಂತೆಯೇ ಅರಿಷಡ್ವರ್ಗಗಳು ಅಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಉಂಟಾಗಲಾರವು. ಇಂಥವರು ಹುಚ್ಚರ ಹಾಗೆ ತೋರುತ್ತಾರೆ. ಆದರೆ ಅಗ್ನಿಯಲ್ಲಿ ಹೇಗೆ ಕರ್ಪೂರವು ಉರಿಯುತ್ತದೆಯೋ ಹಾಗೆಯೇ ಅವರು ಲಿಂಗದಲ್ಲಿ ಬೆಳಗುತ್ತಿರುತ್ತಾರೆ. ಸ್ವಲ್ಪ ದಿವಸಗಳಲ್ಲಿ ಅಜಗಣ್ಣನ ಅವಸ್ಥೆಯು ಹೀಗಾಯಿತು.

ಈ ಪ್ರಕಾರ ಅಜಗಣ್ಣನು ಲಿಂಗದಲ್ಲಿ ಆಚರಿಸುತ್ತಿರುವಾಗ ಪರಮಾತ್ಮನು ಅವನ ಶಿವಯೋಗಸಾಧನೆಯನ್ನು ನೋಡಿ ಪ್ರೀತನಾಗಿ ಅವನನ್ನು ತನ್ನಲ್ಲಿ ಇಂಬಿಟ್ಟುಕೊಳ್ಳಬೇಕೆಂದು ಬಯಸಿ, ಒಂದು ದಿನ ಅಜಗಣ್ಣನು ಮನೆಯಿಂದ ಹೊರಬೀಳುವಾಗ ಪರಮಾತ್ಮನು ಅವನಿಗೆ ಪ್ರತ್ಯಕ್ಷನಾಗಿ ನನ್ನಲ್ಲಿ ನೀನು ಬರಬೇಕೆಂದು ಹೇಳಿದನು. ಅದಕ್ಕೆ ಅಜಗಣ್ಣನು — ನಾನು ನಿನ್ನಲ್ಲಿ ಬರಲಾರೆನು. ನಾನು ನನ್ನ ಗುಪ್ತಾಚಾರದಲ್ಲಿದ್ದುಕೊಂಡು ನನ್ನ ಸಮಾಧಿಯಲ್ಲಿಯೇ ನಾನು ಮುಕ್ತನಾಗುವೆನು. ಇದರಲ್ಲಿಯೇ ನನಗೆ ಸಂತೋಷವು, ಎಂದು ಹೇಳಲು ಪರಮಾತ್ಮನು ಹಾಗೆಯೇ ಹೊರಟು ಹೋದನು.

ಹೀಗೆ ಅಜಗಣ್ಣನು ತನ್ನ ತಂಗಿಯೊಡನೆ ಕೆಲವು ಕಾಲ ಕಳೆಯುತ್ತಿರಲು ಒಂದು ದಿನ ಅವನು ತನ್ನ ಹೊಲವನ್ನು ನೋಡಿ ಮನೆಗೆ ತಿರುಗಿ ಬರುವಾಗ ಮನೆಯ ತಲೆಬಾಗಿಲು ಅವನ ತಲೆಗೆ ಒಳಿತಾಗಿ ತಾಕಿತು. ಅದರಿಂದ ಅವನಿಗೆ ಬಹಳ ನೋವಾಯಿತು. ಆಗ ಅಕಸ್ಮಾತ್ತಾಗಿ ಅವನ ಬಾಯಿಂದ— 'ನಮಃ ಶಿವಾಯ' ಎಂಬ ಅಕ್ಷರಗಳು ಹೊರಟವು. ಹೀಗೆ ಅವನ ಗುಪ್ತವಾಗಿದ್ದ ಮಂತ್ರವು ಬಹಿ

ರಂಗದಲ್ಲಿ ಹೊರಪಟ್ಟ ಕೂಡಲೆ ಅವನ ಅಮುಳೋಕ್ಯದಲ್ಲಿ ಹುದುಗಿದ್ದ ಲಿಂಗವು ಅವನ ಕರಸ್ಥಲದಲ್ಲಿ ಹೊರಗೆ ಬಂದಿತು ಮತ್ತು ಅವನು ಉಚ್ಚರಿಸಿದ ಆ ಮಂತ್ರವು ಬಯಲೊಳಗೆ ಬೆರೆದು ಅದರ ಕೂಡ ಅವನ ಪ್ರಾಣವೂ ಹೋಗಿ ಬಿಟ್ಟಿತು.!' ಆಗ ಅವನ ಮೃತದೇಹವು ಕಳಚಿಬಿದ್ದಿತು.

ಅಲ್ಲಿದ್ದ ಭಕ್ತರು ಇದನ್ನು ನೋಡಿ ಚಕಿತರಾದರು. ಅಜಗಣ್ಣನ ಶಿವಾನುಭವವು ಎಷ್ಟು ಅಗಾಧವಾದುದು ಎಂದು ಅವನನ್ನು ಹೊಗಳ ಹತ್ತಿದರು. ಅವರು ಅವನ ಅಮುಳೋಕ್ಯದಲ್ಲಿ ಹುದುಗಿದ್ದ ಲಿಂಗವು ಬಹಿರಂಗದಲ್ಲಿ ಅವನ ಕರಸ್ಥಲಕ್ಕೆ ಬರಲು ಮಂತ್ರವು ಪ್ರಕಟವಾಗಿ ಅದು ಇಷ್ಟಲಿಂಗವಾಗಿ ಹೊರಗೆ ಕಾಣಬಂದಿದ್ದರಿಂದ ಮಂತ್ರವೂ ಲಿಂಗವೂ ಒಂದೇ ಎಂದು ಅವರಿಗೆ ಪ್ರತ್ಯಕ್ಷ ತೋರಿಬಂದಿತು. ಮತ್ತು ಮಂತ್ರದೊಡನೆ ಅವನ ಪ್ರಾಣವು ಹೋದದ್ದರಿಂದ ಅವನು ಮಂತ್ರ ಶರೀರಿಯಾಗಿದ್ದನೆಂಬುದೂ ಅವರಿಗೆ ತಿಳಿದುಬಂದಿತು. ಆಮೇಲೆ ಅವರೆಲ್ಲರೂ ಅಜಗಣ್ಣನ ಪ್ರಾಣವಿಲ್ಲದ ಶರೀರದ ಸುತ್ತಲೂ ನೆರೆದು ಅವನನ್ನು ಅಲಂಕರಿಸಿ ಅವನು ಬಯಸಿದಂತೆ ಅವನ ಆಚರಣೆಗೆ ಯುಕ್ತವಾದ ನಿರ್ವಾಣ ಸಮಾಧಿಯಲ್ಲಿರಿಸಿದರು.

ಅಜಗಣ್ಣನು ವಚನಕಾರನಿದ್ದಾನೆಂದು ಚನ್ನಬಸವೇಶ್ವರನ ಒಂದು ವಚನದಿಂದ ತಿಳಿದುಬರುತ್ತದೆ. ಅದರಲ್ಲಿ ಅವನು ಹೇಳುವದೇನೆಂದರೆ--"ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ. ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ. ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ" ಎಂದು ಹೇಳಿದ್ದಾನೆ. ಇದರಿಂದ ಅಜಗಣ್ಣನು ಉಚ್ಚತರದ ಶಿವಜ್ಞಾನಿಯಾಗಿದ್ದನೆಂದು ತಿಳಿಯುತ್ತದೆ. ಆದರೆ ನಮಗೆ ಅವನ ಯಾವ ವಚನವು ದೊರೆತಿಲ್ಲ. ಮತ್ತು ಅವನ ಮುದ್ರಿಕೆಯೂ ಕೂಡ ತಿಳಿದಿಲ್ಲ. ಆದರೆ ಶಿವಶರಣರಲ್ಲಿ ಅವನ ಸ್ಥಾನವು ಬಹಳ ಉಚ್ಚತರದ್ದಿರುತ್ತದೆಂಬುದು ಅನೇಕ ವೀರಶೈವ ಗ್ರಂಥಗಳಿಂದ ತಿಳಿದುಬರುತ್ತದೆ.

---

# ಮುಕ್ತಾಯಕ್ಕ.

ಮುಕ್ತಾಯಕ್ಕನು ಅಜಗಣ್ಣನ ತಂಗಿಯು. ಇಬ್ಬರೂ ಹುಟ್ಟಿದ ಊರು ಗದಗಿನಿಂದ ೮ ಮೈಲುಗಳ ಮೇಲಿರುವ ಲಕ್ಕುಂಡಿಯು. ಆದರೆ ಮುಕ್ತಾಯಕ್ಕನ ಗಂಡನ ಗ್ರಾಮವು 'ಮಸಳಿಕಲ್ಲು' ಎಂಬುದಾಗಿತ್ತು. ಅಜಗಣ್ಣನು ಯಾವುದೋ ಒಂದು ಕಾರಣದಿಂದ ಲಕ್ಕುಂಡಿಯನ್ನು ಬಿಟ್ಟು ತನ್ನ ತಂಗಿಯ ಕೂಡ ಮಸಳಿಕಲ್ಲು ಗ್ರಾಮದಲ್ಲಿ ಬಂದು ಇರಹತ್ತಿದನು. ಅವನು ಅಲ್ಲಿಯೇ ಒಕ್ಕಲುತನದ ಕಾಯಕವನ್ನು ಮಾಡುತ್ತ ವಾಸಿಸುತ್ತಿದ್ದನು.

ಅಜಗಣ್ಣನು ಶ್ರೇಷ್ಠತರದ ಶಿವಾನುಭವಿಯು. ಲಿಂಗಪೂಜೆಯಲ್ಲಿ ಮಗ್ನನಾಗಿ ಲಿಂಗವೇ ತಾನಾಗಿ ಆಚರಿಸುವವನಾಗಿದ್ದನು. ಮುಕ್ತಾಯಕ್ಕನು ಅವನಲ್ಲಿ ಅತ್ಯಂತ ಭಕ್ತಿಭಾವವುಳ್ಳವಳಾಗಿ ಅವನು ತನ್ನ ಗುರುವೆಂದು ಭಾವಿಸಿ ವರ್ತಿಸುತ್ತಿದ್ದಳು ಅವಳು ವಚನಕಾರಳಿದ್ದಾಳೆ. ಅವಳು ತನ್ನ ಒಂದು ವಚನದಲ್ಲಿ ಹೇಳಿರುವದೇನೆಂದರೆ –

(೧) ಗುರುವಾಕ್ಯದಿಂದಲ್ಲದೆ ಗುರುವನರಿಯಬಾರದು. ಗುರುವಾಕ್ಯದಿಂದಲ್ಲದೆ ಲಿಂಗವನರಿಯಬಾರದು. ಗುರುವಾಕ್ಯದಿಂದಲ್ಲದೆ ಜಂಗಮವನರಿಯಬಾರದು. ಗುರುವಾಕ್ಯದಿಂದಲ್ಲದೆ ಪ್ರಸಾದವನರಿಯಬಾರದು. ಗುರುವಾಕ್ಯದಿಂದಲ್ಲದೆ ತನ್ನನರಿಯಬಾರದು. ಹಿಂದಣ ಜನ್ಮದಲ್ಲಿ ಗುರುವಾಕ್ಯವಿಡಿದು ಗುರುವ ಪೂಜಿಸಿ ಇಂದು ಜ್ಞಾನೋದಯವಾದರೆ ಜ್ಞಾನವಾಯಿತ್ತೆಂದು ಗುರುವಾಕ್ಯವ ಮೀರಿ ಆಯಿತ್ತೆನಬಹುದೇ? ತನ್ನಲ್ಲಿ ತಾನು ಸನ್ನಿಹಿತನಾದೆನೆಂದಡೆ ಗುರುವಿಲ್ಲದೆ ಆಗದು ಕೇಳಾ. ಎನ್ನ ಅಜಗಣ್ಣನೆಂಬ ಗುರುವಿಂದಲ್ಲದೆ ಆರೂಢದ ಕೂಟವು ಸ್ವಯವಾಗದು ಕೇಳಾ.

ಇದರಲ್ಲಿ ಅವಳು ಅಜಗಣ್ಣನು ತನ್ನ ಗುರುವೆಂದು ಹೇಳಿಕೊಂಡಿದ್ದಾಳೆ. ಅವನಿಂದಲೇ ಅವಳು ಲಿಂಗಧಾರಣವನ್ನು ಹೊಂದಿರಬಹುದು.

ಹೀಗೆ ಉಭಯತರು ಇರುವಲ್ಲಿ ಹಿಂದೆ ಅಜಗಣ್ಣನ ಕಥೆಯಲ್ಲಿ ಹೇಳಿದಂತೆ ಅಜಗಣ್ಣನು ಮರಣಹೊಂದಿದನು. ಆಗ ಅವಳು ಅವನಿಗೋಸ್ಕರ ಅತ್ಯಂತ ದುಃಖವನ್ನು ತಾಳಿ ಶೋಕಪಡಹತ್ತಿದಳು. ಆ ಸಮ

ಯದಲ್ಲಿ ಅಲ್ಲಮಪ್ರಭುವು ಬನವಾಸಿನಾಡಿನಿಂದ ಸಂಚರಿಸುತ್ತ ಮಸಳಿ ಕಲ್ಲು ಗ್ರಾಮಕ್ಕೆ ಬಂದಿರಲು ಆತನು ಅವಳನ್ನು ಕಂಡು ಅವಳಿಗೆ— ನೀನು ಲೌಕಿಕರಂತೆ ಶೋಕಿಸಬೇಡ. ಅಜಗಣ್ಣನು ಇಹದಲ್ಲಿ ಶರೀರ ಸಂಬಂಧಿಯಾಗಿ ಆಚರಿಸಲಿಲ್ಲ. ಇಂಥವನ ಸಲುವಾಗಿ ಭಕ್ತರು ದುಃಖಪಡಬಾರದು ಎಂದು ಸಂತೈಸಿದನು. ಆಗ ಮುಕ್ತಾಯಕ್ಕನು ತನ್ನ ದುಃಖವನ್ನು ಮರೆದು ಅಜಗಣ್ಣನೆಂಬ ತನ್ನ ಪ್ರಾಣಲಿಂಗದಲ್ಲಿ ಐಕ್ಯವನ್ನು ಹೊಂದಿ ಲಿಂಗಾಂಗಸಾಮರಸ್ಯವನ್ನು ಹೊಂದಿದಳು.

'ಶೂನ್ಯಸಂಪಾದನೆ' ಗ್ರಂಥದಲ್ಲಿ ಮುಕ್ತಾಯಕ್ಕಗಳ ಸಂಪಾದನೆ ಎಂಬ ಅಧ್ಯಾಯವಿದ್ದು ಅದರಲ್ಲಿ ಅಲ್ಲಮಪ್ರಭು ಮತ್ತು ಮುಕ್ತಾಯಕ್ಕ ಇವರ ತಾತ್ವಿಕ ಸಂಭಾಷಣೆಯು ಇದೆ. ಅದರಲ್ಲಿ ಮುಕ್ತಾಯಕ್ಕನ ಹೆಸರಿನಿಂದ ಉಲ್ಲೇಖವಾದ ಅನೇಕ ವಚನಗಳಿರುತ್ತವೆ. ಆದರೆ ಶೂನ್ಯಸಂಪಾದನೆಯ ಗ್ರಂಥಕಾರನು ಕಥಾಸಂದರ್ಭಕ್ಕೆ ಅನುಸರಿಸಿ ವಚನಗಳನ್ನು ಹೊಸದಾಗಿ ರಚಿಸಿ ಅಲ್ಲಲ್ಲಿ ಸೇರಿಸುವದು ಕಂಡುಬರುತ್ತದೆ. ಆದ್ದರಿಂದ ಈ ಗ್ರಂಥದಲ್ಲಿಯ ವಚನಗಳನ್ನು ಬಿಟ್ಟು ಬೇರೆ ಸ್ವತಂತ್ರ ಗ್ರಂಥಗಳಲ್ಲಿ ನಾಲ್ಕು ವಚನಗಳು ಮಾತ್ರ ನಮಗೆ ದೊರೆತಿವೆ. ಅವುಗಳಲ್ಲೊಂದನ್ನು ನಾವು ಮೇಲೆ ಉದಹರಿಸಿದ್ದೇವೆ. ಉಳಿದ ಮೂರು ವಚನಗಳನ್ನು ನಾವು ಕೆಳಗೆ ಕೊಡುತ್ತೇವೆ.

(೨) ಆರು ಇಲ್ಲದವಳೆಂದು ಅಳಿಗೊಳಲುಬೇಡ. ಅಳಿಗೊಂಡಡೆ ಆನು ಅಂಜುವಳಲ್ಲ. ಒಲವಿನ ಒತ್ತ ಕಲ್ಲನು ಬೆವರಿಸಬಲ್ಲೆ ಕಾಣಿರೋ. ಆಪ್ಪಿದವರನಪ್ಪಿದರ ತರಗೆಲೆಯಂತೆ ರಸವನರಸಿದವರುಂಟೇ ಅಜಗಣ್ಣ ತಂದೆ?

(೩) ಅಳಿಯೊಳಗಡಗಿದ ಪರಿಮಳದಂತೆ, ಪತಂಗದೊಳಗಡಗಿದ ಅನಲದಂತೆ, ಶಶಿಯೊಳಡಗಿದ ಷೋಡಶಕಳೆಯಂತೆ, ಉಲುಹಡಗಿದ ವಾಯುವಿನ ಪರಿಯಂತೆ, ಸಿಡಿಲೊಳಗಡಗಿದ ಗಾತ್ರದ ತೇಜದಂತೆ ಇರಬೇಕಯ್ಯ ಯೋಗ ಎನ್ನ ಅಜಗಣ್ಣ ತಂದೆಯಂತೆ.

ಇದರಲ್ಲಿ ಮುಕ್ತಾಯಕ್ಕನು ತನ್ನ ಅಣ್ಣನ ಯೋಗದ ರೀತಿಯನ್ನು ವರ್ಣಿಸಿದ್ದಾಳೆ.

(೪) ಉಟ್ಟುದು ತೊರೆದಂಗೆ ಊರೇನು, ಕಾಡೇನು? ನಷ್ಟ ಸಂತಾನಕ್ಕೆ ಕುಲವೇನು, ಫಲವೇನು? ಹುಟ್ಟುಗೆಟ್ಟಾದಂಗೆ ಪುಣ್ಯವೇನು, ಪಾಪವೇನು? ಅದು ಕೆಟ್ಟುದು, ಕೆಟ್ಟುದು. ತನ್ನತಾನರಿಯದೆ, ಬಟ್ಟಬಯಲಲ್ಲಿ ಬಿದ್ದೆ ಅಜಗಣ್ಣತಂದೆ.

ಇದರಲ್ಲಿ ಮುಕ್ತಾಯಿಯು ಅಜಗಣ್ಣನ ಲಿಂಗಾಂಗ ಸಾಮರಸ್ಯವನ್ನು ವರ್ಣಿಸಿದ್ದಾಳೆ.

ಈ ಪ್ರಕಾರ ಮುಕ್ತಾಯಕ್ಕನು ಶ್ರೇಷ್ಠ ಶಿವಾನುಭವಿ ಎಂದು ಶಿವಶರಣರಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾಳೆ.

ಅಜಗಣ್ಣ ಮತ್ತು ಮುಕ್ತಾಯಕ್ಕ ಇವರು ಮುಸಳೀಕಲ್ಲು ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದರು. ಆದರೆ ಈ ಹೆಸರಿನ ಗ್ರಾಮವು ಲಕ್ಕುಂಡಿಯ ಸಮೀಪದಲ್ಲಿ ಎಲ್ಲಿಯೂ ಇರುವದಿಲ್ಲ. ಆದರೆ 'ಮುಸಳಿ' ಎಂಬ ಹೆಸರಿನ ಗ್ರಾಮವು ವಿಜಾಪುರದಿಂದ ಈಶಾನ್ಯಕ್ಕೆ ೪೦ ಮೈಲುಗಳ ಮೇಲೆ ಇಂಡಿ ತಾಲೂಕಿನಲ್ಲಿದೆ. ಅಲ್ಲಿ ಅನೇಕ ಪುರಾತನ ಅವಶೇಷಗಳು ಈಗಲೂ ಇವೆ. ಹಿರೇಮುಸಳಿ ಮತ್ತು ಚಿಕ್ಕಮುಸಳಿ ಎಂಬ ಎರಡು ಗ್ರಾಮಗಳು ಒಂದು ದೊಡ್ಡ ಹಳ್ಳದ ಇಬ್ಬದಿಗೆ ಇವೆ. ಮೊದಲು ಇವೆರಡೂ ಗ್ರಾಮಗಳು ಒಂದೇಯಾಗಿರಬಹುದು. ಮೊದಲಿನ ಕಾಲದಲ್ಲಿ ಈ ಪ್ರದೇಶದಲ್ಲಿಯ ಅನೇಕ ಗ್ರಾಮಗಳಲ್ಲಿ ಶಿವಶರಣರು ಉದ್ಭವಿಸಿದ್ದು ಕಂಡುಬರುತ್ತದೆ. ವಿಜಾಪುರ ಮತ್ತು ಅದರ ನೆರೆಪ್ರದೇಶದಲ್ಲಿ ಜನರು ತಮ್ಮ ಮಕ್ಕಳಿಗೆ ಈಗಲೂ ಅಜಗಣ್ಣಪ್ಪ, ಅಜಗಣೆವ್ವ, ಮುತ್ತಪ್ಪ, ಮುತ್ತವ್ವ ಎಂದು ಹೆಸರಿಡುವ ಪದ್ಧತಿಯು ಬಹಳವಿದೆ. ಇವು ಅಜಗಣ್ಣ ಮುಕ್ತಾಯಕ್ಕಗಳ ಹೆಸರುಗಳಿವೆ. ಆದ್ದರಿಂದ ಈ ಮುಸಳಿಯೇ ಅಜಗಣ್ಣ, ಮುಕ್ತಾಯಕ್ಕಗಳ ಗ್ರಾಮವಾಗಿರಬಹುದೆಂದು ತೋರುತ್ತದೆ.

ಗದಗಿಗೆ ಸಮೀಪವಿರುವ ಲಕ್ಕುಂಡಿಯು ಮುಸಳಿಯಿಂದ ಬಹು ದೂರವಿದೆ. ಅದು ಸುಮಾರು ೧೫೦ ಮೈಲುಗಳಾಗಬಹುದು. ಹಿಂದಿನ ಕಾಲದಲ್ಲಿ ಇಷ್ಟು ದೂರ ಶರೀರಸಂಬಂಧವಿರುವದು ಸಂಭವನೀಯವೆಂದು ತೋರುವದಿಲ್ಲ. ಆದರೆ ತಾಳೀಕೋಟೆಯ ಸಮೀಪಕ್ಕೆ ಬೇರೊಂದು ಲಕ್ಕುಂಡಿಯು ಇದ್ದು ಅದು ಮುಸಳಿಯಿಂದ ೪೫ ಮೈಲು ಮಾತ್ರ ದೂರವಿದೆ. ಈ ಗ್ರಾಮವು ಅಜಗಣ್ಣನ ಮೂಲಗ್ರಾಮವಾಗಿರಬಹುದೋ

ಹೇಗೆಂಬುದು ವಿಚಾರಮಾಡತಕ್ಕ ವಿಷಯವಾಗಿದೆ. ಈ ಭಾಗದಲ್ಲಿ ಅನೇಕ ಶಿವಶರಣರು ಆಗಿ ಹೋಗಿದ್ದಾರೆ.

ಅಲ್ಲಮಪ್ರಭುವು ಬನವಾಸಿ ನಾಡಿನಿಂದ ಹೊರಟು ಕಪ್ಪಡಿಸಂಗಮಕ್ಕೆ ಬಂದನೆಂಬ ಉಲ್ಲೇಖಗಳಿವೆ. ಅಲ್ಲಿಂದ ಅವನು ಸೊಲ್ಲಾಪುರಕ್ಕೆ ಹೋಗುವಾಗ್ಗೆ ಕಪ್ಪಡಿಸಂಗಮದಿಂದ ಉತ್ತರಕ್ಕೆ ೪೦ ಮೈಲುಗಳ ಮೇಲಿರುವ ಹಿಪ್ಪರಿಗೆ (ಇದು ಮಡಿವಾಳ ಮಾಚಿದೇವನ ಸ್ಥಾನವು) ಇಲ್ಲಿಗೆ ಬಂದು ಅಲ್ಲಿಂದ ಉತ್ತರಕ್ಕೆ ೩೫ ಮೈಲುಗಳ ಮೇಲಿರುವ ಮಸಳಿ ಗ್ರಾಮಕ್ಕೆ ಬಂದು ಅಲ್ಲಿಂದ ಮುಂದೆ ಮಂಗಳವಾಡಕ್ಕೆ ಸಮೀಪವಿರುವ ಬಾಲಗಾವಿ ಗ್ರಾಮ (ಇಲ್ಲಿ ಅಲ್ಲಮಮಹಾಪ್ರಭುವಿನ ದೇವಸ್ಥಾನವಿದೆ.) ಅಲ್ಲಿಂದ ಸೊಲ್ಲಾಪುರಕ್ಕೆ ಹೋದಂತೆ ತೋರುತ್ತದೆ. ಈ ಗ್ರಾಮಗಳೆಲ್ಲವೂ ಹೆಚ್ಚುಕಡಿಮೆ ಒಂದೇ ರೇಷೆಯಲ್ಲಿರುತ್ತವೆ. ಅಲ್ಲಮಪ್ರಭುವು ಈ ಪ್ರಕಾರ ಸೊಲ್ಲಾಪುರಕ್ಕೆ ಹೋಗಿ ಅಲ್ಲಿಂದ ಅವನು ಪೂರ್ವದಿಕ್ಕಿಗೆ ಸರಳರೇಷೆಯಲ್ಲಿರುವ ಕಲ್ಯಾಣಕ್ಕೆ ಹೋಗಿರಬಹುದು.

ಈ ಮಸಳೀ ಗ್ರಾಮದಲ್ಲಿ 'ರೆಬ್ಬವ್ವೆ'ಯ ಪುರಾತನ ದೇವಾಲಯವಿರುತ್ತದೆ. ರೆಬ್ಬವ್ವೆ ಅಥವಾ ರೆಮ್ಮವ್ವೆಯ ಚರಿತ್ರೆಯನ್ನು ನಾವು ಶಿವಶರಣರ ಚರಿತ್ರೆಗಳು ಭಾಗ ೧ ಪುಟ ೧೧೦ ಇದರಲ್ಲಿ ಕೊಟ್ಟಿದ್ದೇವೆ. ಇವಳು ಕಲ್ಯಾಣದಲ್ಲಿ ರಾಟಿಯಿಂದ ನೂಲುವ ಕಾಯಕವನ್ನು ಮಾಡಿಕೊಂಡಿದ್ದಳು. ಆದರೆ ಇವಳು ಮೊದಲು ಮಸಳೀ ಗ್ರಾಮದವಳಿದ್ದದರಿಂದ ಅವಳ ಗುಡಿಯು ಇಲ್ಲಿರುತ್ತದೆಂದು ತೋರುತ್ತದೆ. ಇಲ್ಲಿಂದ ಮುಂದೆ ಅವಳು ಕಲ್ಯಾಣಕ್ಕೆ ಹೋಗಿರಬಹುದು. ಇವಳು ವಚನಕಾರಳಿದ್ದು ಅವಳ ಮುದ್ರಿಕೆಯು ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ ಎಂದಿದೆ. ಈ ರೆಮ್ಮವ್ವೆಯಲ್ಲದೆ 'ಏಲೇಶ್ವರ' ಎಂಬ ಮುದ್ರಿಕೆಯನ್ನಿಟ್ಟುಕೊಂಡು ವಚನಗಳನ್ನು ರಚಿಸಿದ ರೆಮ್ಮವ್ವೆ ಎಂಬ ಬೇರೊಬ್ಬ ವಚನಕಾರಳು ಆಗಿ ಹೋಗಿದ್ದಾಳೆ. ಅವಳು ಏಲೇಶಕೇತಯ್ಯನ ಗ್ರಾಮವಾದ ಏಲೇರಿ ಇಲ್ಲಿಯವಳು. ಈ ಎರಡನೇ ರೆಮ್ಮವ್ವೆಯ ಚರಿತ್ರೆಯನ್ನು ನಾವು ಶಿವಶರಣರ ಚರಿತ್ರೆಗಳು ಭಾಗ ೧ ಪುಟ ೫೩ ಇದರಲ್ಲಿ ಕೊಟ್ಟಿದ್ದೇವೆ.

ಮುಕ್ತಾಯಿಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಇವಳು ಹಿಂದಿನವಳು. ಇವಳ ವಿಷಯವಾಗಿ ದೇವಿಯರ ತ್ರಿವಿಧಿಯಲ್ಲಿ ವರ್ಣನೆ ಇರುವದು ಹೇಗೆಂದರೆ—

ಭಕ್ತಿಸಾಗರ ಮೇಣ್ಪೆ। ರಕ್ತಿಯಾ ನೆಲೆವನೆಯು
ಮುಕ್ತಿಯಾ ಕೋಶ ಇವನಂಗದೊಳು ತಾಳ್ದ
ಮುಕ್ತಾಯುಕ್ತನೆ ಶರಣಾಗು.

---

## ತಾಳೀಕೋಟೆಯ ಶಿವದೇವ.

ತಾಳೀಕೊಟ್ಟೆ ಎಂಬ ಗ್ರಾಮದಲ್ಲಿ ಶಿವದೇವನೆಂಬ ಶಿವಶರಣನು ಎಾಸಮಾಡುತ್ತಿದ್ದನು. ತಾಳೀಕೊಟ್ಟೆ ಅಥವಾ ಕೊಟ್ಟೆ ಎಂಟ ಗ್ರಾಮವು ವಿಜಾಪುರ ಜಿಲ್ಲೆಯಲ್ಲಿ ವಿಜಾಪುರದಿಂದ ಆಗ್ನೇಯದಿಕ್ಕಿಗೆ ೪೫ ಮೈಲು ಗಳ ಮೇಲೆ ಇರುತ್ತಿದೆ. ಈಗ ಅದಕ್ಕೆ ತಾಳೀಕೋಟೆ ಎಂಬ ಹೆಸ ರಿದೆ. ಶಿವದೇವನು ಶ್ರೇಷ್ಠತರಗತಿಯ ಶಿವಾನುಭವಿಯು. ಅವನು ಮೊದಲು ಧನಿಕನು. ಆದರೆ ಅವನು ಭಕ್ತಮಾಹೇಶ್ವರರಿಗೆ ತಾನು ಗಳಿಸಿದ್ದನ್ನೆಲ್ಲ ದಾನಧರ್ಮ ಮಾಡುತ್ತ ಬಂದದ್ದರಿಂದ ಅವನು ಸ್ವಲ್ಪ ಕಾಲದಲ್ಲಿ ನಿರ್ಧನಿಕನಾದನು. ಆದರೆ ಅವನು ಅದಕ್ಕೋಸ್ಕರ ಎಷ್ಟು ಮಾತ್ರವೂ ಖೇದಪಡದೆ ತನ್ನ ಶಿವಾನುಭವದ ಆಚರಣೆಯನ್ನು ಬಿಡದೆ ಸ್ವಯಜಂಗಮಸ್ಥಲದಲ್ಲಿ ಆಚರಿಸುತ್ತ ಬಂದನು.

ಜಂಗಮಲಿಂಗದಲ್ಲಿ ಸ್ವಯ, ಚರ, ಪರವೆಂದು ಮೂರು ವಿಧ ಗಳಿವೆ. ಸ್ವಯ ಜಂಗಮನಾಗಿರುವವನು ಸ್ವಸ್ಥಾನದಲ್ಲಿದ್ದುಕೊಂಡು ಶಿವಧ್ಯಾನಪರಾಯಣನಾಗಿರುತ್ತಾನೆ. ಚರಜಂಗಮನು ಶಿವಾನುಭವಿ ಯಾಗಿ ಧರ್ಮೋದ್ಧಾರ ಕಾರ್ಯಗಳನ್ನು ಮಾಡುತ್ತ ಸಂಚರಿಸುತ್ತಾನೆ. ಮತ್ತು ಪರಜಂಗಮನು ತಾನು ಮತ್ತು ಜಗತ್ತು ಇವುಗಳಿಗೆ ಮೀರಿ ದವನಾಗಿ ಚಿದಾತ್ಮನಲ್ಲಿ ಯಾವಾಗಲೂ ಬೆರೆತುಕೊಂಡಿರುತ್ತಾನೆ. ಆದರೆ ಶಿವದೇವನು ಸ್ವಯ ಜಂಗಮಸ್ಥಲದಲ್ಲಿದ್ದುಕೊಂಡು ಲಿಂಗಮುಖನಾಗಿ ತನ್ನ ಆಚರಣೆಗಳನ್ನು ಆಚರಿಸುತ್ತ ತನ್ನ ಲಿಂಗಚೈತನ್ಯದಲ್ಲಿ ವ್ಯವಹ ರಿಸುವವನಾಗಿದ್ದನು.

ಹೀಗೆ ಶಿವದೇವನು ಸ್ವಯಜಂಗಮನಾಗಿ ಆಚರಿಸುವಲ್ಲಿ ತನ್ನ ಆಚರಣೆಗೆ ಅನುಕೂಲವಾಗಬೇಕೆಂದು ತನ್ನ ಗ್ರಾಮವನ್ನು ಬಿಟ್ಟು, ಪಾವನದೇವನೆಂಬ ಶಿಷ್ಯನನ್ನು ಕರೆದುಕೊಂಡು 'ಮಾಲ್ಯ' ಎಂಬ ಹೆಸ

ರಿನ ಒಂದು ಕಾಡಿನಲ್ಲಿ ಹೋಗಿ ಅಲ್ಲಿಯ ಒಂದು ಮರದ ಹೊದರನ್ನು ಆಶ್ರಯಿಸಿ ಅದರೊಳಗೆ ವಾಸಮಾಡಹತ್ತಿದನು. ಅಲ್ಲಿಯೇ ಅವನು ಇದ್ದುಕೊಂಡು ತನ್ನ ಶಿವಲಿಂಗವನ್ನು ಅರ್ಚಿಸುತ್ತ ಶಿವಧ್ಯಾನದಲ್ಲಿರುವನು. ಪಾವನದೇವನು ಅವನ ಸೇವೆಯನ್ನು ಮಾಡುತ್ತ ಅವನ ಹತ್ತಿರವೇ ಯಾವಾಗಲೂ ಇರುವನು. ಅವನು ಸುತ್ತಲಿನ ಗ್ರಾಮಗಳಲ್ಲಿ ಹೋಗಿ ಭಿಕ್ಷೆಯನ್ನು ಬೇಡಿ ಅದನ್ನು ತನ್ನ ಗುರುವಿಗೆ ಕೊಡಲು ಶಿವದೇವನು ಅದನ್ನು ಲಿಂಗಾರ್ಪಿತ ಮಾಡಿ ಭುಂಜಿಸುವನು. ಹೀಗೆ ಕೆಲವು ವರ್ಷಗಳ ವರೆಗೆ ಉಭಯತರು ಏಕಾಂತವಾಸಿಗಳಾಗಿ ಆ ಕಾಡಿನಲ್ಲಿದ್ದರು.

ಹೀಗಿರುವಲ್ಲಿ ಈ ಪ್ರಾಂತದಲ್ಲಿ ಒಂದು ವರುಷ ಮಳೆತಡೆದು ಬರಗಾಲವು ಉಂಟಾಯಿತು. ಕಾಳುಕಡಿಗಳು ಎಲ್ಲಿಯೂ ದೊರಕದೆ ಹೋದವು. ಜನರು ಹೊಟ್ಟೆಗಿಲ್ಲದೆ ಸಾಯಹತ್ತಿದರು. ಇಂಥ ದುರ್ಭಿಕ್ಷ ಕಾಲದಲ್ಲಿ ಪಾವನದೇವನು ಸುತ್ತಿಲಿನ ಏಳೂರು ತಿರುಗಿ ಬಂದರೂ ಒಬ್ಬನ ಅಶನಕ್ಕೆ ಸಾಲುವಷ್ಟು ಸಹ ಅವನಿಗೆ ಆಹಾರ ದೊರಕುತ್ತಿದ್ದಿಲ್ಲ. ಆದ್ದರಿಂದ ಅವನು ತನಗೆ ದೊರಕಿದ್ದನ್ನೆಲ್ಲ ತನ್ನ ಗುರುವಿಗೆ ತಾನು ಕೊಟ್ಟು ಭಿಕ್ಷವನ್ನು ತಂದ ಪಾತ್ರೆಯನ್ನೂ ಜೋಳಿಗೆಯನ್ನೂ ತೊಳೆದು ಅದರ ನೀರನ್ನು ಕುಡಿದು ಅಂಥ ನೀರಿನ ಮೇಲೆ ಇರಹತ್ತಿದನು.

ಪಾವನದೇವನು ಇಂಥ ನೀರನ್ನು ಕುಡಿದು ಎಷ್ಟು ದಿವಸ ಬದುಕಬಹುದು? ಅವನು ಹೊಟ್ಟೆಗಿಲ್ಲದೆ ಬರಬರುತ್ತ ಕೃಶನಾಗಹತ್ತಿದನು. ಶಿವದೇವನು ಅದನ್ನು ಕಂಡು— ನೀನು ಹೀಗೇಕೆ ಬಡವಾಗುತ್ತ ಬಂದೆ ಎಂದು ಕೇಳಲು ಅವನು— ದೇಶದಲ್ಲೆಲ್ಲ ದುರ್ಭಿಕ್ಷವಾಗಿದೆ, ನನಗೆ ಸಿಕ್ಕಷ್ಟು ಭಿಕ್ಷೆಯನ್ನು ನಿಮಗೆ ಕೊಟ್ಟು ಪಾತ್ರೆಯನ್ನು ತೊಳೆದು ಅದರ ನೀರನ್ನು ನಾನು ಸಲಿಸುತ್ತ ಬಂದಿದ್ದೇನೆ ಎಂದು ಎನ್ನಲು, ಶಿವದೇವನು— ಹರಹರಾ! ಇದು ಎಂಥ ಗುರುಭಕ್ತಿಯು! ಇಂಥ ಗುರುಭಕ್ತಿ ಇದ್ದ ಈ ನಾಡಿನಲ್ಲಿ ಶಿವನು ಮಳೆಯನ್ನು ಕರುಣಿಸಬೇಡವೇ? ಶಿವನು ಹೀಗೆ ನಿರ್ದಯನಾದರೆ, ಪ್ರಮಥರಿರಾ, ನೀವಾದರೂ ಕರುಣಿಸಬೇಡವೇ? ಎಂದು ಗಣಂಗಳಲ್ಲಿಯೂ ಶಿವನಲ್ಲಿಯೂ ಮುನಿಸು ತಾಳಿ ಇನ್ನುಮೇಲೆ ನಾನೂ ಕೂಡ ಪ್ರಸಾದವನ್ನು ಸ್ವೀಕರಿಸುವದಿಲ್ಲ ಎಂದು ನಿರ್ಧರಿಸಿ ಅರ್ಚನ ಅರ್ಪಣಾದಿ ಕ್ರಿಯೆಗಳನ್ನು ಬಿಟ್ಟುಕೊಟ್ಟು ತಾನೂ ಉಪವಾಸ ಮಾಡುತ್ತ ಕೇವಲ ಶಿವಧ್ಯಾನದಲ್ಲಿರಹತ್ತಿದನು.

ಹೀಗೆ ಕೆಲವು ದಿವಸಗಳು ಸಂದಿಹೋಗುವಷ್ಟರಲ್ಲಿ ಗುರುಶಿಷ್ಯರುಭಯತರು ಮರಣೋನ್ಮುಖರಾದರು. ಆಗ ಶಿವನು ಅವರ ನಿಷ್ಠೆಗೆ ಮೆಚ್ಚಿ ಪ್ರಸನ್ನನಾಗಿ— ನಿಮಗೇನುಬೇಕು ಬೇಡು ಎಂದೆನಲು ಶಿವದೇವನು ಜಗಹಿತಾರ್ಥವಾಗಿ ದೇಶದಲ್ಲಿ ನೀನು ಮಳೆಯನ್ನು ಕರೆಯಬೇಕು. ಅಸಂಖ್ಯ ಜನರು ಮರಣಹೊಂದಹತ್ತಿದ್ದಾರೆ. ಪಾವನದೇವನಂಥವರು ಇದ್ದ ಈ ನಾಡಿನಲ್ಲಿ ಹೀಗಾಗಬಾರದು. ಜನರು ಬೆಳೆಗಳನ್ನು ಬೆಳೆದು ಅವರುಂಬುವನ್ನು ಕಳುಹು. ಇದನ್ನಷ್ಟೇ ನಾನು ಬೇಡಿಕೊಳ್ಳುತ್ತೇನೆ ಎಂದೆನ್ನಲು, ಶಿವನು ಹಾಗೆಯೇ ಆಗಲೆಂದು ನುಡಿದನು. ಇಷ್ಟಾದ ಬಳಿಕ ನಾಡಿನಲ್ಲಿ ಮಳೆಗರೆಯಿತು. ಹದಿನೆಂಟು ತೆರದ ಧಾನ್ಯಗಳು ಬೆಳೆದವು. ದೇಶದಲ್ಲಿ ಸುಭಿಕ್ಷವಾಯಿತು. ಇದು ಶಿವದೇವನ ಮತ್ತು ಪಾವನದೇವನ ಮಹಿಮೆ ಎಂದು ಜನರು ಅವರನ್ನು ಕೊಂಡಾಡಹತ್ತಿದರು. ಉಭಯತರು ಶ್ರೇಷ್ಠ ಶಿವಶರಣರೆಂದು ಅವರನ್ನು ಅತ್ಯಂತವಾಗಿ ಮನ್ನಿಸಹತ್ತಿದರು.

ಮುಂದೆ ಪಾವನದೇವನು ಎಂದಿನಂತೆ ಗ್ರಾಮಗಳಲ್ಲಿ ಭಿಕ್ಷವನ್ನು ಎತ್ತಿ ಗುರುವಿಗೆ ತಂದುಕೊಡಹತ್ತಿದನು. ಹೀಗೆ ಉಭಯತರು ಶಿವಾನುಭವಿಗಳಾಗಿ ಸ್ವಯಲಿಂಗದಲ್ಲಿ ಅಡಗಿದರು. ಉಭಯತರು ತಮ್ಮ ಉಚ್ಚ ಆಚರಣೆಯಿಂದ ಮಾದರೀ ಗುರುಶಿಷ್ಯರೆಂದು ಲೋಕದಲ್ಲಿ ಪ್ರಸಿದ್ಧರಾದರು.

ತಾಳೀಕೋಟೆ ಗ್ರಾಮಕ್ಕೆ ಸಮೀಪವಾಗಿ ಸೋಗಲಿ ಎಂಬ ನದಿಯು ಮತ್ತು ಡೋಣಿ ಎಂಬ ನದಿಗಳು ಇರುತ್ತವೆ. ಶಿವದೇವನು ವಾಸಮಾಡಿದ ಸ್ಥಳವು ಸೋಗಲಿ ನದಿಯ ಬದಿಯಲ್ಲಾಗಲಿ ಇಲ್ಲವೆ ಅವೆರಡೂ ನದಿಗಳು ಕೂಡಿದ ಸ್ಥಳದಿಂದ ಮುಂದೆ ೮-೧೦ ಮೈಲುಗಳ ಮೇಲಿರುವ ಗುಡ್ಡಗಾಡು ಪ್ರದೇಶದಲ್ಲಾಗಲಿ ಇರಬಹುದೆಂದು ತೋರುತ್ತದೆ.

ಶಿವದೇವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಅಮರ ಗಣಂಗಳಲ್ಲಿ ಒಬ್ಬನಾಗಿದ್ದಾನೆ. 'ಕೊಟ್ಟಿಯ ಶಿವದೇವಯ್ಯ' ಅಥವಾ 'ತಾಳೀಕೋಟೆಯ ಶಿವದೇವಯ್ಯ' ಎಂದು ಅವನ ಉಲ್ಲೇಖಗಳು ಅನೇಕ ಗ್ರಂಥಗಳಲ್ಲಿ ಬಂದಿರುತ್ತವೆ.

---

# ಕಂಕರೀ ಕಕ್ಕಯ್ಯ.

ಕಲ್ಯಾಣ ಪಟ್ಟಣದಲ್ಲಿ ಕಂಕರೀ ಕಕ್ಕಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನು ದಿನಾಲು ಭಕ್ತರ ಮನೆಗಳಿಗೆ ಹೋಗಿ ಕಂಕರಿಯನ್ನು ನುಡಿಸುತ್ತ ದೇವರ ಭಜನೆ ಮಾಡುತ್ತ ಭಕ್ತರು ಕೊಟ್ಟಿದನ್ನು ತೆಗೆದುಕೊಂಡು ತನ್ನ ಉಪಜೀವನವನ್ನು ಸಾಗಿಸುತ್ತಿದ್ದನು. ಆದರಲ್ಲಿ ತನಗೆ ಉಳಿದುದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವನು. ಹೀಗೆ ಕಂಕರಿಯನ್ನು ನುಡಿಸುತ್ತ ಜೀವಿಸಿರುವದೇ ಅವನಿಗೆ ಶಿವನ ಸೇವೆಯಾಗಿತ್ತು. ಹೀಗೆ ಅವನು ಕಲ್ಯಾಣ ಪಟ್ಟಣದಲ್ಲಿ ತನ್ನ ಕಾಯಕವನ್ನು ಮಾಡುತ್ತ ಅನೇಕ ವರ್ಷಗಳ ವರೆಗೆ ಇದ್ದನು.

ಆದರೆ ಜನರು ಅವನೊಬ್ಬ ಶ್ರೇಷ್ಠ ಶಿವಶರಣನೆಂಬುದನ್ನು ತಿಳಿಯದೆ ಅವನಿಗೋಸ್ಕರ ಉಪೇಕ್ಷಾಭಾವವನ್ನು ತಾಳಿದವರಾಗಿದ್ದರು. ಆದರೆ ಕಕ್ಕಯ್ಯನು ಅದನ್ನು ಲಕ್ಷಿಸದೆ ತನ್ನ ಕಾಯಕದಲ್ಲಿ ನಿರತನಾಗಿದ್ದನು. ಅವನ ಈ ಭಕ್ತಿಭಾವವು ಕಡೆಗೆ ಶಿವನ ಮನಸ್ಸಿಗೆ ತಾಕಿತು. ಆಗ ಶಿವನು ಅವನ ಪರಿಚಯವೂ ಅವನ ಮಹತ್ವವೂ ಪಟ್ಟಣದಲ್ಲಿ ಎಲ್ಲರಿಗೂ ತಿಳಿಯಬೇಕೆಂಬ ಕಾಂಕ್ಷೆಯನ್ನು ತಾಳಿ ಒಬ್ಬ ಜಂಗಮನ ವೇಷವನ್ನು ಧಾರಣ ಮಾಡಿ ಕಕ್ಕಯ್ಯನು ಯಾವಲ್ಲಿ ತನ್ನ ಕಂಕರಿಯನ್ನು ನುಡಿಸುತ್ತ ಇದ್ದನೋ ಅಲ್ಲಿಗೆ ಬಂದು ಅವನನ್ನು ಕಾಣುವವನಾದನು

ಕಕ್ಕಯ್ಯನು ತನ್ನನ್ನು ಹೀಗೆ ಕಂಡವನು ಪರಮಾತ್ಮನೆಂಬುದನ್ನು ಏನೂ ತಿಳಿದಿರಲಿಲ್ಲ. ಅದ್ದರಿಂದ ಅವನನ್ನು ಕಂಡರೂ ಕೂಡ ಅವನು ತನ್ನ ಕಂಕರಿಯನ್ನು ನುಡಿಸುತ್ತ ಅದರಲ್ಲಿಯೇ ಮಗ್ನನಾಗಿದ್ದನು. ಅವನು ನುಡಿಸಿದಂತೆ ಪರಮಾತ್ಮನೂ ಸಹ ಅದರ ಜೊತೆಯಲ್ಲಿ ಕುಣಿಯಲಿಕ್ಕೆ ಪ್ರಾರಂಭಮಾಡಿದನು. ಪರಮಾತ್ಮನು ಗಾಯನ ಮತ್ತು ನೃತ್ಯ ಪ್ರಿಯನೆಂಬುದು ಪ್ರಸಿದ್ಧವು. ಗಾಯನದ ಮೂಲಕ ಮಾಡಿದ ಅವನ ಭಜನೆಯು ಅವನಿಗೆ ತೀವ್ರ ಗೋಚರವಾಗುತ್ತದೆ. ಅದ್ದರಿಂದ ಅಸಂಖ್ಯ ಶಿವಶರಣರು ಗಾಯನ ಮತ್ತು ನೃತ್ಯಗಳ ಮೂಲಕ ಪರಮಾತ್ಮನನ್ನು ಒಲಿಸಿಕೊಂಡಿರುತ್ತಾರೆ.

ಕಂಕರೀ ಕಕ್ಕಯ್ಯನು ತನ್ನ ಕಂಕರಿಯನ್ನು ಹೀಗೆ ನುಡಿಸುತ್ತಿರುವಾಗ್ಗೆ ಅದರ ಜೊತೆಯಲ್ಲಿ ಬೇರೊಬ್ಬನು ಕುಣಿಯುತ್ತಿರುವದನ್ನು ನೋಡಿ ಅವನಲ್ಲಿ ಭಕ್ತಿಯು ಭರವು ಮತ್ತಿಷ್ಟು ಹೆಚ್ಚಿತು, ಮತ್ತು ಅದು ಹೆಚ್ಚಿದ ಹಾಗೆ ಅವನು ನಾನಾವಿಧವಾಗಿ ಕಂಕರಿಯನ್ನು ನುಡಿಸಹತ್ತಿದನು. ಅದರಲ್ಲಿಯೇ ಅವನು ಮಗ್ನನಾಗಿ ಹೋದನು. ಹೊರಗಿನ ಅರಿವು ಅವನಿಗೆ ಏನೂ ಉಳಿಯಲಿಲ್ಲ. ಅವನಿಗೆ ಬಾರಿಸುವ ಶ್ರಮವೂ ಸಹ ಅನಿಸುತ್ತಿರಲಿಲ್ಲ. ಇದೇ ಸ್ಥಿತಿಯು ಪರಮಾತ್ಮನಿಗೂ ಕೂಡ ಉಂಟಾಯಿತು. ಅವನೂ ಕೂಡ ಕಂಕರಿಯ ದನಿಗೆ ಅನುಗುಣವಾಗಿ ಕುಣಿಯುತ್ತಿದನು. ಹೀಗೆ ಇಡೀ ದಿವಸ ಅವರ ಬಾರಿಸುವಿಕೆಯೂ ಕುಣಿತವೂ ನಡೆದವು. ಪಟ್ಟಣದಲ್ಲಿಯ ಜನರು ಕುತೂಹಲವುಳ್ಳವರಾಗಿ ಬಹು ಸಂಖ್ಯೆಯಿಂದ ನೆರೆದು ಅವರನ್ನು ನೋಡುತ್ತ ನಿಂತರು. ಆದರೆ ಉಭಯತರಲ್ಲಿ ಯಾರು ಮೊದಲು ದಣಿಯುವರೋ ಎಂಬುದರ ಮೌಜನ್ನು ನೋಡುವದೇ ಅವರ ಉದ್ದೇಶವಾಗಿತ್ತು. ಆದರೆ ಬಹಿರಂಗದ ಅರಿವು ಇವರಿಬ್ಬರಿಗೂ ಇರಲಿಲ್ಲ. ಅಂದ ಬಳಿಕ ಅವರಿಗೆ ದಣಿವು ಆಗುವದು ಹೇಗೆ? ಜನರೇ ಬೇಸತ್ತು ಹೊರಟು ಹೋಗುತ್ತಿದ್ದರು.

ಕಂಕರಿಯ ರವವೂ ನೃತ್ಯವೂ ಆ ದಿನ ಹಗಲು ಮಾತ್ರವಲ್ಲ, ಇಡೀ ರಾತ್ರಿ ಸಹ ನಡೆಯಿತು. ಅದನ್ನು ಜನರು ನೋಡಿ ಆಶ್ಚರ್ಯಪಟ್ಟರು. ಉಭಯತರೂ ಹೆಚ್ಚಿನ ತರಗತಿಯ ಶಿವಭಕ್ತರೆಂದು ಅವರನ್ನು ಹೊಗಳಹತ್ತಿದರು. ಹೀಗೆ ಉಭಯತರು ಮೂರು ದಿನಗಳ ವರೆಗೆ ತಮ್ಮ ಬಾರಿಸುವಿಕೆಯನ್ನೂ ಕುಣಿತವನ್ನೂ ನಡಿಸಿದರು! ಕಂಕರೀ ಕಕ್ಕಯ್ಯನ ಈ ಅಗಾಧವಾದ ಭಕ್ತಿಯನ್ನು ಪರಮಾತ್ಮನು ಕಂಡು ಅವನು ಸಹ ಬೆರಗಾದನು. ಆಗ ಅವನು ವಿಚಾರಮಾಡಿದ್ದು—ಕಕ್ಕಯ್ಯನ ಮಹಿಮೆಯನ್ನು ಜನರ ಲಕ್ಷಕ್ಕೆ ತಂದಂತಾಯಿತು. ಇನ್ನು ಮೇಲೆ ಅವನ ಬಾರಿಸುವಿಕೆಯನ್ನು ಸಾಕು ಮಾಡಬೇಕು ಎಂಬ ಅಪೇಕ್ಷೆಯನ್ನು ತಾಳಿ ತಾನು ಸೋತವನಂತೆ ಧರಿಗೊರಗಿದನು. ಕಕ್ಕಯ್ಯನು ಇದನ್ನು ನೋಡಿದರೂ ಕೂಡ ಅವನನ್ನು ಬಿಡದೆ ಅವನ ಸೆರಗು ಹಿಡಿದು ಎಳೆಯಲು ಶಿವನು ಅವನಿಗೆ ಪ್ರತ್ಯಕ್ಷನಾದನು ಮತ್ತು ನಿನಗೆ ಏನು ಬೇಕು ಬೇಡೆಂದು ಅವನಿಗೆ ಕೇಳಿದನು. ಅದಕ್ಕೆ ಕಕ್ಕಯ್ಯನು — ನಿನ್ನ ಮೆಚ್ಚು ನಿನ್ನಲ್ಲಿರಲಿ. ಅದು ನನಗೆ ಬೇಡ. ಆದರೆ ಈ ಮೂರ

ದಿನ ನಾನು ಎಡೆಬಿಡದೆ ಕಂಕರೀ ಸುಡಿಸಿದ್ದರ ಕಾಯಕವನ್ನು ನೀನು ನನಗೆ ಕೊಡತಕ್ಕದ್ದು. ನಿನಗೆ ಬೇಡುವದು ಇದೇ ಎಂದು ಹೇಳಿದನು.

ಅದಕ್ಕೆ ಶಿವನು ಅವನಿಗೆ— ನಿನ್ನೊಡನೆ ನಾನು ಕುಣಿದಿದ್ದೇನೆ. ಅದು ವ್ಯರ್ಥವೇ ಹೇಗೆ? ನಾನು ನಿನ್ನ ಕೂಡ ಕುಣಿದದ್ದರ ಕಾಯಕವನ್ನು ನೀನು ನನಗೆ ಕೊಡಬೇಕಲ್ಲವೇ ಎಂದು ಕೇಳಿದನು.

ಅದಕ್ಕೆ ಕಂಕರೀ ಕಕ್ಕಯ್ಯನು—ನಿನಗೆ ನಾನು ಕಾಯಕವನು ಕೊಡುವದು ಸಲ್ಲದು. ನೀನು ಊರೊಳಗೊಂದು ಮನೆಯನ್ನು ಕಟ್ಟು. ಆಗ ನಾನು ನಿನ್ನ ಮನೆಗೆ ಕಾಯಕಕ್ಕೆ ಬರುತ್ತೇನೆ. ಆಗ ನೀನು ನನ್ನೊಡನೆ ಕುಣಿದೆಯಾದರೆ, ನಿನಗೆ ಕಾಯಕ ಕೊಡುತ್ತೇನೆ. ಹೀಗೆ ಹೇಳಲು ಕಕ್ಕಯ್ಯನು ನುಡಿದದ್ದು ಯಥಾರ್ಥವೆಂದು ಶಿವನು ಒಪ್ಪಿಕೊಂಡು ಅವನಿಗೆ ತಾನು ಕೊಡತಕ್ಕ ಕಾಯಕವನ್ನು ಕೊಟ್ಟನು.

ಆಮೇಲೆ ಶಿವನು ಕಕ್ಕಯ್ಯನಿಗೆ— ನೀನು ಇನ್ನುಮೇಲೆ ಈ ಲೋಕದಲ್ಲಿರಬೇಡ. ನನ್ನಕೂಡ ಕೈಲಾಸಕ್ಕೆ ಬರಬೇಕು ಎಂದು ಕರೆಯಲು, ಕಕ್ಕಯ್ಯನು ಈ ಮರ್ತ್ಯಲೋಕವೇ ನನಗೆ ಘನತರವಾದದ್ದು. ನಿನ್ನ ಗಣಪದವಿಯೂ ನನಗೆ ಬೇಡ. ನಿನಗೆ ಬೇಕಾದರೆ, ನೀನೇ ನಿನ್ನ ಒಕ್ಕಲು ಸಹವಾಗಿ ಭಕ್ತರಿದ್ದಂಥ ಈ ಮರ್ತ್ಯಲೋಕಕ್ಕೆ ಬಾ. ಇಲ್ಲಿ ಮಹಿಮರಿದ್ದಾರೆ. ಅವರನ್ನು ನೀನು ಇಲ್ಲಿ ಕಾಣುವಿ. ನನಗೆ ಕೈಲಾಸವು ಬೇಡ ಎಂದೆನ್ನಲು ಶಿವನು ಮೆಚ್ಚಿ ಅವನಿಗೆ— ಭಕ್ತಿ ಎಂಬ ಐಶ್ವರ್ಯವನ್ನು ಉಪಭೋಗಿಸಲು ಭಕ್ತರೇ ಸಮರ್ಥರು, ಅವರೇ ಶ್ರೇಷ್ಠರು, ಎಂದು ನುಡಿಯುತ್ತ ಕೈಲಾಸಕ್ಕೆ ಹೊರಟು ಹೋದನು.

ಇತ್ತ ಕಕ್ಕಯ್ಯನು ಬಸವಾದಿ ಪ್ರಮಥರೊಡಗೂಡಿ ಕಲ್ಯಾಣ ಪಟ್ಟಣದಲ್ಲಿ ತನ್ನ ಕಂಕರೀ ಕಾಯಕವನ್ನು ಮಾಡುತ್ತ ತನ್ನ ಇಷ್ಟಲಿಂಗದಲ್ಲಿ ನಿರ್ವಯಲಾದನು.

ಕಾಯಕವು ಕೇವಲ ಜೀವನೋಪಾಯವಲ್ಲ. ಇದರಲ್ಲಿ ಕೆಲವು ತಾತ್ವಿಕಾರ್ಥಗಳಿವೆ. ಯಾರು ಶ್ರಮಜೀವಿಗಳೋ ಅವರಿಗಾಗಿ ಮಾತ್ರ ಕಾಯಕ ಮಾಡತಕ್ಕದ್ದೆಂಬ ಭಾವವು ಈ ಚಿಕ್ಕ ಕಥೆಯಲ್ಲಿದೆ. ಯಾರು

ದುಡಿಯುವದಿಲ್ಲವೋ ಅವರಿಗಾಗಿ ಯಾರೂ ಕಾಯಕ ಮಾಡತಕ್ಕದ್ದಲ್ಲ, ಮತ್ತು ಅವರ ಸೇವೆಯನ್ನು ಮಾಡಕೂಡದು. ಪರಮಾತ್ಮನು ಶ್ರಮ ಜೀವಿಯಲ್ಲವೆಂದು ತಿಳಿದು ಕಕ್ಕಯ್ಯನು ಕಾಯಕವನ್ನು ಅವನಿಗೆ ಕೊಡು ವದನ್ನು ನಿರಾಕರಿಸಿದನು. ಶಿವಾನುಭವಿಯು ಇಂಥ ಸೋಮಾರಿಗಳು ಕೊಟ್ಟಿದ್ದನ್ನು ಸಹ ತೆಗೆದುಕೊಳ್ಳಬಾರದು. "ಪಾಪಿಯ ಧನ ಪ್ರಾಯ ಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ" ಎಂದು ಶಿವಶರಣರು ನುಡಿದಿದ್ದಾರೆ. ಈ ಶ್ರೇಷ್ಠ ತತ್ವವು ಈ ಕಥೆಯಲ್ಲಿದೆ. ಅದ್ದರಿಂದ ಸೋಮಾರಿಗಳೂ ದುಷ್ಟನಡತೆಯುವರೂ ಆದ ಸಿರಿವಂತರು ಹಣ ಕೊಡಲಿಕ್ಕೆ ಬಂದರೂ ಅದನ್ನು ಸತ್ಕಾರ್ಯಕ್ಕೆ ತೆಗೆದುಕೊಳ್ಳಬಾರದು ಮತ್ತು ಅವರ ಸೇವೆ ಯನ್ನು ಸಹ ಕೈಕೊಳ್ಳಬಾರದು ಎಂಬ ಸಾಮಾಜಿಕ ಉಚ್ಚ ತತ್ವ ಗಳು ಕಂಕರೀ ಕಕ್ಕಯ್ಯನ ಆಚರಣೆಯಲ್ಲಿರುವದು ಕಂಡುಬರುತ್ತದೆ.

---

## ಇಳಿಹಾಳಿ ಬೊಮ್ಮಯ್ಯ.

ವಿಜಾಪುರ ಜಿಲ್ಲೆ ಬಾಗಲಕೋಟೆ ಗ್ರಾಮದಿಂದ ಉತ್ತರಕ್ಕೆ ೧೦ ಮೈಲುಗಳ ಮೇಲೆ ಇಳಿಹಾಳಿ ಎಂಬ ಗ್ರಾಮವಿರುತ್ತದೆ. ಅದರ ಈಗಿನ ಹೆಸರು ಇಲ್ಹಾಳವೆಂದಿದೆ. ಇಲ್ಲಿ ಬೊಮ್ಮಯ್ಯನೆಂಬ ಒಕ್ಕಲಿ ಗನು ವಾಸಮಾಡುತ್ತಿದ್ದನು. ಅವನ ಕಾಲದಲ್ಲಿ ಪೇರ್ಮಾಡಿರಾಯನು ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಬೊಮ್ಮಯ್ಯನು ಅರಸನ ಕಡೆಯಿಂದ ೩೨೩ ಹೊಲಗಳನ್ನು ಲಾವಣಿಗೆ ತೆಗೆದುಕೊಂಡು ಘನತರ ವಾದ ರೀತಿಯಿಂದ ಬೇಸಾಯವನ್ನು ನಡಿಸುತ್ತ ಬಂದನು. ಅವನು ತಾನು ಹಿಡಿದ ಹೊಲಗಳನ್ನು ಮಾಡುವಲ್ಲಿ ಗ್ರಾಮದ ಗೌಡರನ್ನೂ ಸಹ ಹುದುವಿ ನಿಂದ ಕೂಡಿಸಿಕೊಂಡು ತನ್ನ ಒಕ್ಕಲುತನವನ್ನು ಸಾಗಿಸುವನು. ಅವನು ಇದ್ದ ಇಳಿಹಾಳಿ ಗ್ರಾಮವು ಘಟಪ್ರಭಾ ನದಿಯ ದಂಡೆಯ ಮೇಲಿದೆ. ಅಲ್ಲಿಯ ಹೊಲಗಳು ಅತ್ಯಂತ ಫಲದ್ರುಪವಾದವುಗಳು. ಬ್ರಹ್ಮಯ್ಯನು ತಾನು ಬೆಳೆದದ್ದರಲ್ಲಿ ಅರಸನಿಗೆ ಕೊಡತಕ್ಕ ಕಂದಾಯವನ್ನು ಕೊಟ್ಟು ತನ್ನೊಡನೆ ಪಾಲು ಕೂಡಿದ್ದ ಗೌಡರುಗಳಿಗೆ ಅವರ ಕೋರನ್ನು ಕೊಟ್ಟು ಉಳಿದದ್ದನ್ನು ತಾನು ತೆಗೆದುಕೊಂಡು ಅದನ್ನು ದಾನಧರ್ಮ ಮಾಡಿ

ಬಿಡುವನು. ಅವನು ಅತ್ಯಂತ ಉದಾರಿಯು. ಈ ಪ್ರಕಾರ ಅವನು ವರ್ತಿಸುತ್ತ ಬಂದದ್ದರಿಂದ ಜನರಲ್ಲಿ ಅವನು ಬಹಳ ಪ್ರಿಯನಾಗಿದ್ದನು.

ಬೊಮ್ಮಯ್ಯನು ಹೇಗೆ ಉದಾರಿಯೋ ಹಾಗೆಯೇ ಶಿವಾನುಭವಿಯೂ ಆಗಿದ್ದನು. ಅವನು ಭಕ್ತ ಜಂಗಮರಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ತಾಳಿದವನಾಗಿದ್ದನು. ಅವರಿಗೆ ದಾಸೋಹಭಾವದಿಂದ ತಾನು ಗಳಿಸಿದ್ದನ್ನು ಅರ್ಪಿಸಿ ಉಪಭೋಗಿಸುವವನಾಗಿದ್ದನು. ಈ ಪ್ರಕಾರ ಷಟ್‌ಸ್ಥಲದಲ್ಲಿ ಅವನು ಪ್ರಸಾದಿಸ್ಥಲದವನಾಗಿ ಬಹು ಪ್ರಸಿದ್ಧನಾಗಿದ್ದನು.

ಹೀಗಿರಲು ಕೆಲವೊಂದು ವರುಷ ಈ ಸೀಮೆಯಲ್ಲಿ ಬರಗಾಲವು ಬಿದ್ದು ಬಿತ್ತಲಿಕ್ಕೆ ಬೀಜಗಳು ದೊರೆಯದಂತಾದವು. ಆಗ ಬ್ರಹ್ಮಯ್ಯನು ಅಲ್ಲಲ್ಲಿ ಬೀಜಗಳನ್ನು ಹುಡುಕುತ್ತ ಹೋಗಿ ಐಗಳದಷ್ಟು ಕಡಲೆಯನ್ನು ತಂದು ಅವುಗಳನ್ನು ಬಿತ್ತಬೇಕೆಂಬುವಷ್ಟರಲ್ಲಿ ಬಿತ್ತುವ ಹದವು ಹೋಗಿಬಿಟ್ಟಿತ್ತು. ಆದ್ದರಿಂದ ಅವನು ತಾನು ತಂದ ಕಡಲೆಯನ್ನು ರಾತ್ರಿಯಲ್ಲಿ ನೆನೆಹಾಕಿ ಬೆಳಗಾದ ಬಳಿಕ ಅವುಗಳನ್ನು ಹೆಡಿಗೆಯಲಿ ತುಂಬಿಕೊಂಡು ಹೊಲದಲ್ಲಿ ಬಿತ್ತಬೇಕೆಂದು ಹೊರಟನು.

ಅವನು ಹೊಲಕ್ಕೆ ಹೋಗುವ ಕಾಲದಲ್ಲಿ ಶ್ರೀಶೈಲಕ್ಕೆ ಹೋಗುವ ಒಂದು ಪರಿಸೆಯು ಅವನ ಸಮೀಪದಲ್ಲಿಯೇ ಹಾಯ್ದು ಹೋಗುತ್ತಿತ್ತು. ಅದರಲ್ಲಿ ಅನೇಕ ಭಕ್ತರೂ ಜಂಗಮರೂ ಇದ್ದರು. ಅವರು ಆ ಕಷ್ಟಮಯ ಕಾಲದಲ್ಲಿ ಬಹಳ ನೀರಡಿಸಿ ಹಸಿದವರಾಗಿದ್ದರು. ಅವರು ಬೊಮ್ಮಯ್ಯನ ಹತ್ತಿರ ಇದ್ದ ಹೆಡಿಗೆಯನ್ನು ನೋಡಿ, ಅದು ಬುತ್ತಿ ಎಂದು ತಿಳಿದು, ಅವರು ಅವನ ಸಮೀಪಕ್ಕೆ ಬಂದರು. ಅವರನ್ನು ಬೊಮ್ಮಯ್ಯನು ಕಂಡು ಸ್ವಾಮಿ ಏಕೆ ಇಲ್ಲಿಗೆ ಬಂದಿರೆಂದು ಕೇಳಲು ಅವರು— ನಾವು ಹಸಿದಿದ್ದೇವೆ. ಉಣ್ಣಲಿಕ್ಕೆ ನಮಗೆ ಏನೂ ದೊರೆತಿಲ್ಲ. ನಿಮ್ಮಲ್ಲಿ ಏನಾದರೂ ದೊರೆಯಬಹುದೋ ಎಂದು ಕೇಳಲು ಬೊಮ್ಮಯ್ಯನ ಮನಸ್ಸು ಕರಗಿತು. ಅವನು ಬಿತ್ತಲಿಕ್ಕೆ ಧಾನ್ಯವು ಕಡಿಮೆಯಾಗಬಹುದೆಂಬುದನ್ನು ಏನೂ ಎಣಿಸದೆ ತನ್ನ ಹೆಡಿಗೆಯಲ್ಲಿದ್ದ ಕಡಲೆಗಳನ್ನು ಒಂದೊಂದು ಬೊಗಸೆ ಪರಿಸೆಯಲ್ಲಿದ್ದವರಿಗೆಲ್ಲ ಕೊಟ್ಟುಬಿಟ್ಟನು. ಅವರು ಅದನ್ನು ತಿಂದು ಅವನನ್ನು ಹರಸಿ ಮುಂದೆ ಹೊರಟುಹೋದರು.

ಬೊಮ್ಮಯ್ಯನು ಹಿಂದಿನಿಂದ ತನ್ನ ಹೆಡಿಗೆಯಲ್ಲಿ ನೋಡುವಷ್ಟರಲ್ಲಿ ಒಳಗೆ ಬಿತ್ತುವ ಬೀಜಗಳು ಬಹಳ ಸ್ವಲ್ಪ ಉಳಿದಿದ್ದವು. ಅವುಗಳನ್ನಷ್ಟೆ. ಅವನು ತೆಗೆದುಕೊಂಡು, ಅಲ್ಲಲ್ಲಿ ಬಿತ್ತಿ ಮನೆಗೆ ಹೊರಟುಬಂದನು

ಅವನು ಮನೆಗೆ ಬಂದ ಬಳಿಕ ತನ್ನೊಡನೆ ಪಾಲು ಕೂಡಿದ ಗೌಡರುಗಳು ನಡೆದ ಸಂಗತಿಗಳನ್ನು ತಿಳಿದು ಅವನಿಗೆ— ನೀನು ಹದ ತಪ್ಪಿ ಬೀಜ ಬಿತ್ತಿದೆ. ಇದ್ದ ಕಾಳುಗಳನ್ನೆಲ್ಲ ನೀನು ಯಾರಿಗೋ ಕೊಟ್ಟುಬಿಟ್ಟೆ. ನಾವು ಬರಗಾಲ ಗಿರಗಾಲ ಕೇಳುವವರಲ್ಲ. ನೀನು ನಮಗೆ ಹಾನಿ ಮಾಡಿದೆ. ಈ ಹಾನಿಯನ್ನು ನಾವು ಸಹಿಸುವವರಲ್ಲ. ನಮಗೆ ಬರತಕ್ಕ ಧಾನ್ಯವನ್ನು ನಿನ್ನ ಪಾಲಿನಲ್ಲಿ ಹಿಡಿದುಕೊಂಡೇ ಬಿಡುವೆವು ಎಂದು ಅವನಿಗೆ ಘಟ್ಟಿಸಿ ನುಡಿದರು. ಆದರೆ ಬೊಮ್ಮಯ್ಯನು— ಈ ಕಠಿಣಕಾಲದಲ್ಲಿ ನಾವು ದಾನಧರ್ಮಮಾಡಬೇಕು. ನಮ್ಮದೆಲ್ಲ ಶಿವನ ಸೊಮ್ಮು. ಅವನದನ್ನು ಅವನಿಗೆ ಒಪ್ಪಿಸಬೇಕು ಎಂದು ಅವನು ಎಷ್ಟು ಹೇಳಿದರೂ ಅವರು ಕೇಳದೆಹೋಗಲು ಶಿವನೇ ನನ್ನನ್ನು ಕಾಯಲಿ ಎಂದು ಅಂದುಕೊಂಡು ಆ ಗೌಡರುಗಳಿಗೆ ಏನೂ ಅನ್ನದೆ ಸಮಾಧಾನ ಚಿತ್ತದಿಂದ ಇದ್ದನು.

ಆಮೇಲೆ ಬೊಮ್ಮಯ್ಯನು ಎಲ್ಲರಂತೆ ಎಲ್ಲ ಹೊಲಗಳಲ್ಲಿ ಕೃಷಿಯ ಕಾರ್ಯಗಳನ್ನು ಮಾಡುತ್ತ ಬಂದನು. ಕಡೆಗೆ ಆಶ್ಚರ್ಯವಾದದ್ದೇನೆಂದರೆ, ಅವನು ಬಿತ್ತಿದ ಹೊಲಗಳಲ್ಲಿ ಎಷ್ಟು ಮಾತ್ರವೂ ಬರಿದು ಸ್ಥಳವಿಲ್ಲದೆ ಎಲ್ಲ ಕಡೆಗೂ ಸಸಿಗಳಿದ್ದಿದ್ದವು. ಅವು ಮುಂದೆ ಚನ್ನಾಗಿ ಬೆಳೆದು ಒಂದಕ್ಕೆ ಇಮ್ಮಡಿ ಮುಮ್ಮಡಿಯಾಗಿ, ಆ ವರ್ಷ ಹಿಂದಿನ ಎಲ್ಲ ವರ್ಷಗಳಿಗಿಂತಲೂ ಹೆಚ್ಚಿಗೆ ಕಾಳು ಬಂದವು. ಬ್ರಹ್ಮಯ್ಯನು ಬೆಳೆದ ದವಸದಲ್ಲಿ ರಾಜನಿಗೆ ಕೊಡತಕ್ಕದ್ದನ್ನು ಅವನಿಗೆ ಕೊಟ್ಟು ಉಳಿದುದನ್ನು ಹುಮುಗಾರರಿಗೆ ಪೂರ್ಣವಾಗಿ ಕೊಟ್ಟು ತನಗುಳಿದ ಧಾನ್ಯದಲ್ಲಿ ಆ ವರುಷ ಅವನು ಅನಂತ ದಾಸೋಹ ಕಾರ್ಯಗಳನ್ನು ನಡಿಸಿದನು. ಜನರೆಲ್ಲರು ದಾನಮಾಡಿದ್ದುದು ತಪ್ಪಲಾರದೆಂದು ಬೊಮ್ಮಯ್ಯನನ್ನು ಬಹಳ ಸ್ತುತಿಸುವವರಾದರು.

ಈ ಪ್ರಕಾರ ಬೊಮ್ಮಯ್ಯನು ತನ್ನ ಗ್ರಾಮದಲ್ಲಿ ಒಕ್ಕಲುತನದ ಕಾಯಕವನ್ನು ಮಾಡುತ್ತ ತನ್ನ ಕಾಯಕದಿಂದ ಬಂದುದನ್ನು ದಾನ

ಧರ್ಮವಮಾಡುತ್ತ ತನ್ನ ಲಿಂಗದಲ್ಲಿ ಬಯಲಾದನು. ಜನರು ಅವನಿಗೆ 'ಶಿವಶರಣ ಸೇವಾಚಾರ್ಯ' ಎಂಬ ಹೆಸರನ್ನಿಟ್ಟು ಕರೆಯಹತ್ತಿದರು. ಈ ಪ್ರಕಾರ ಇಳಿಹಾಳಿ ಬೊಮ್ಮಯ್ಯನು ಶಿವಶರಣರಲ್ಲಿ ಬಹಳ ಪ್ರಸಿದ್ಧನಾಗಿದ್ದಾನೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿದೆ.

ಬ್ರಹ್ಮಯ್ಯನ ದೇವಾಲಯವು ಈಗಲೂ ಇಲ್ಲಾಳ ಗ್ರಾಮದಲ್ಲಿರುತ್ತದೆ. ಅಲ್ಲಿಯ ಜನರು ಅದಕ್ಕೋಸ್ಕರ ಬಹಳ ಭಕ್ತಿಭಾವವನ್ನು ತಾಳಿ ನಡೆದುಕೊಳ್ಳುತ್ತಾರೆ.

ಇಳಿಹಾಳಿ ಬ್ರಹ್ಮಯ್ಯ, ಕೊಂಡುಗುಳಿಯ ಕೇಶಿರಾಜ[೧], ಬಾಹೂರು ಬ್ರಹ್ಮಯ್ಯ[೨], ತೆಲುಗು ಜೊಮ್ಮಯ್ಯ, ಇವರೆಲ್ಲರೂ ಪೆರ್ಮಾಡಿ ರಾಜನ ಕಾಲದಲ್ಲಿದ್ದವರು. ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ವಿಕ್ರಮಾದಿತ್ಯ ರಾಜನು ೧೦೭೬ ರಿಂದ ೧೧೨೬ ರ ವರೆಗೆ ಆಳಿದನು. ಈ ರಾಜನಿಗೆ 'ಪೆರ್ಮಾಡಿ' ಎಂಬ ಹೆಸರಿದ್ದಿತು. ಆದ್ದರಿಂದ ಇಳಿಹಾಳಿ ಬ್ರಹ್ಮಯ್ಯನು ಬಸವೇಶ್ವರನಕಿಂತಲೂ ಸ್ವಲ್ಪಕಾಲ ಹಿಂದಿನವನಾಗುತ್ತಾನೆ.

ಈ ಕಥೆಯಲ್ಲಿ ವೀರಶೈವನು ಚನ್ನಾಗಿ ದುಡಿಯಬೇಕು, ಅವನು ದಾಸೋಹಭಾವದಿಂದ ಇರಬೇಕು, ತನಗೆ ಬಂದುದನ್ನು ದಾನ ಧರ್ಮ ಮಾಡಬೇಕು, ಹೀಗೆ ಆಚರಿಸಿದಲ್ಲಿ ಅವನು ಪ್ರಸಾದಿ ಸ್ಥಲದವನು, ಶಿವಾನುಭವಿಯು ಈ ರೀತಿ ಆಚರಿಸಬೇಕು ಎಂಬ ವಿಷಯಗಳು ಬಂದಿವೆ.

---

(೧) ಶಿವಶರಣರ ಚರಿತ್ರೆಗಳು ಭಾಗ ೨, ಪುಟ ೯೯. (೨) ಶಿವಶರಣರ ಚರಿತ್ರೆಗಳು ಭಾಗ ೧, ಪುಟ ೧೧.

# ವೀರಸಂಗಯ್ಯ.

ಬಿದಿರುಕೊಟ್ಟೆ ಎಂಬ ಗ್ರಾಮವು ಈಗ ನಿಜಾಮನ ರಾಜ್ಯದಲ್ಲಿದೆ. ಅದಕ್ಕೆ ಬೀದರ ಅಥವಾ ಬೇದರ ಎಂತಲೂ ಸಾಮಾನ್ಯ ಜನರು ಅದಕ್ಕೆ ಬಿದರುಕೋಟೆ, ಬಿದಿರಿ ಎಂತಲೂ ಕರೆಯುತ್ತಾರೆ. ಅದು ಈಗ ಜಿಲ್ಹೆಯ ಸ್ಥಳವಾಗಿದ್ದು ಕಲ್ಯಾಣ ಪಟ್ಟಣದ ಪೂರ್ವಕ್ಕೆ ೪೦—೪೫ ಮೈಲುಗಳ ಮೇಲೆ ಇರುತ್ತದೆ. ಇದು ಪೂರ್ವಕಾಲದಲ್ಲಿ ಶಿವಭಕ್ತರ ಸ್ಥಾನವಾಗಿತ್ತು. ಇಲ್ಲಿ ಕಾಮಣ್ಣನೆಂಬ ಭಕ್ತನು ಸೋಮಲದೇವಿ ಎಂಬ ತನ್ನ ಹೆಂಡತಿಯೊಡನೆ ಶಿವಾಚಾರ ನಿರತನಾಗಿ ವಾಸಮಾಡುತ್ತಿದ್ದನು. ಅವನಿಗೆ 'ವೀರಸಂಗಯ್ಯ'ನೆಂಬ ಪುತ್ರನು ಜನಿಸಿದನು. ಅವರೆಲ್ಲರೂ ಲಿಂಗಧಾರಿಗಳು, ಗುರುಲಿಂಗ ಜಂಗಮ ನಿಷ್ಠರು. ಇವರಲ್ಲಿ ವೀರಸಂಗಯ್ಯನು ಉಜ್ವಲಭಕ್ತನು, ಶೂರನು, ಭಕ್ತ ನಿಂದೆಯನ್ನು ಎಂದಿಗೂ ತರಹರಿಸನು, ಗಣಾಚಾರಿಯು. ಇದರಿಂದ ಇವನು ಪಟ್ಟಣದಲ್ಲಿ ಪ್ರಸಿದ್ಧಿಯನ್ನು ಹೊಂದಿ ಭಕ್ತಾಗ್ರಗಣ್ಯನೆಂದು ಹೆಸರುವಾಸಿಯಾದನು.

ಹೀಗಿರುವಲ್ಲಿ ಕೋವೂರೆಂಬ ಪಟ್ಟಣವಿದ್ದು ಅಲ್ಲಿ ಭೀಮಯ್ಯನೆಂಬ ಭಕ್ತನು ತನ್ನ ಹೆಂಡತಿ ಕಾಮಲದೇವಿಯೊಡನೆ ಶಿವಭಕ್ತಿಯುಳ್ಳವನಾಗಿ ವಾಸಮಾಡಿಕೊಂಡಿದ್ದನು. ಅವನಿಗೆ ಚಂದ್ರಾಣಿದೇವಿ ಎಂಬ ಮಗಳು ಇದ್ದಳು. ಅವಳು ಕೇವಲ ಶಿವಭಕ್ತೆಯು. ರೂಪು ಲಾವಣ್ಯದಲ್ಲಿ ಮಿಗಿಲಾದವಳು, ಅತ್ಯಂತ ಸೌಂದರ್ಯವತಿಯು. ಹೀಗಿರುವಲ್ಲಿ ಭೀಮಯ್ಯನು ಅವಳನ್ನು ನಾಡಿನಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದ ವೀರಸಂಗಯ್ಯನಿಗೆ ಕೊಟ್ಟು ಲಗ್ನ ಮಾಡಬೇಕೆಂದು ಬಯಸಿದನು. ಮತ್ತು ಆ ಪ್ರಕಾರ ಉಭಯತರಲ್ಲಿ ಮಾತುಕಥೆಗಳೂ ನಡೆದವು.

ಈ ಕೋವೂರು ಪಟ್ಟಣದಲ್ಲಿ ಮಾಧವನೆಂಬ ವಿಷ್ಣು ಭಕ್ತನು ಈ ಕಾಲದಲ್ಲಿ ರಾಜ್ಯವಾಳುತ್ತಿದ್ದನು. ಅವನಿಗೆ ಭಾಸ್ಕರನೆಂಬ ಮಗನಿದ್ದನು. ಇವನು ತನ್ನ ಗ್ರಾಮದಲ್ಲಿದ್ದ ಭೀಮಯ್ಯನು ಚಂದ್ರಾಣಿಯನ್ನು ವೀರಸಂಗಯ್ಯನಿಗೆ ಕೊಟ್ಟು ಲಗ್ನ ಮಾಡುವವನಿದ್ದಾನೆಂಬ ವಾರ್ತೆಯನ್ನು ಕೇಳಿ, ಅವನು ತನ್ನ ಒಬ್ಬ ದಾದಿಯನ್ನು ಭೀಮಯ್ಯನ

ಕಡೆಗೆ ಕಳುಹಿಸಿ ಅವನಿಗೆ-- ನಿನ್ನ ಮಗಳನ್ನು ನನಗೆ ಕೊಟ್ಟು ಲಗ್ನ ಮಾಡಬೇಕೆಂದು ತಿಳಿಸಿದನು. ಇದಕ್ಕೆ ಭೀಮಯ್ಯನು ಒಪ್ಪಿಕೊಳ್ಳಲಿಲ್ಲ. ಅವನು ತಾನು ಶಿವಭಕ್ತನಾಗಿದ್ದು ತನ್ನ ಮಗಳನ್ನು ಭಕ್ತ ಶಿರೋಮಣಿಯಾದ ವೀರ ಸಂಗಯ್ಯನಿಗೆ ಕೊಡಬೇಕೆಂದು ನಿಶ್ಚಯ ಮಾಡಿದ್ದೇನೆ, ನನ್ನ ಮಗಳನ್ನು ನಿನಗೆ ಕೊಡುವದಿಲ್ಲೆಂದು ಹೇಳಿಕಳುಹಿಸಿದನು. ಅದನ್ನು ಭಾಸ್ಕರನು ಕೇಳಿ ಖತಿಗೊಂಡು ಲಗ್ನವನ್ನು ಹೇಗಾದರೂ ಮಾಡಿ ತಡೆಯಬೇಕೆಂದು ನಿಶ್ಚಯಿಸಿದನು.

ಲಗ್ನದ ದಿವಸವನ್ನು ಗೊತ್ತುಮಾಡಿದ ಬಳಿಕ ವೀರಸಂಗಯ್ಯನು ತನ್ನ ಭಕ್ತ ಸಮೂಹದೊಡನೆ ಲಗ್ನಕ್ಕಾಗಿ ಕೋವೂರು ಪಟ್ಟಣಕ್ಕೆ ಬಂದನು. ಅಲ್ಲಿ ಲಗ್ನಸಮಾರಂಭವೂ ಜರಗಿತು. ಅರಸನ ಕುಮಾರನು ಲಗ್ನವಾಗಬಾರದೆಂದು ಎಷ್ಟು ಪ್ರಯತ್ನಿಸಿದರೂ ಅದು ಸಫಲವಾಗಲಿಲ್ಲ. ಇದರಿಂದ ಭಾಸ್ಕರನು ಮತ್ತಿಷ್ಟು ಕೆರಳಿದವನಾಗಿ ವೀರಸಂಗಯ್ಯನು ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗುವ ಕಾಲದಲ್ಲಿ ಮಾರ್ಗದಲ್ಲಿ ಅವನ ಮೇಲೆ ಬಿದ್ದು ಬಲಾತ್ಕಾರದಿಂದ ಅವಳನ್ನು ಅಪಹರಿಸಿಕೊಂಡು ಹೋಗಬೇಕೆಂದು ನಿಶ್ಚಯಿಸಿದನು. ಬಿದಿರಿಕೊಟ್ಟೆಯ ಶಿವಭಕ್ತರು ಲಗ್ನ ತೀರಿಸಿಕೊಂಡು ತಮ್ಮ ಗ್ರಾಮಕ್ಕೆ ತಿರುಗಿ ಹೋಗುತ್ತಿರುವಾಗ ಭಾಸ್ಕರನು ತನ್ನ ಸೈನ್ಯದೊಂದಿಗೆ ಬಂದು ಅವರ ಮೇಲೆ ಮಾರ್ಗದಲ್ಲಿ ಬಂದೆರಗಿದನು. ಆಗ ಉಭಯ ತಂಡಗಳಲ್ಲಿ ತುಮುಲ ಯುದ್ಧವೆಸಗಿತು. ವೀರಸಂಗಯ್ಯನೂ ವೀರ ಶಿವಭಕ್ತರೂ ಅತ್ಯಂತ ಶೂರತನದಿಂದ ಕಾದಾಡಿ ಭಾಸ್ಕರನ ಸೈನ್ಯವನ್ನು ಸೋಲಿಸಿ ಹಿಂದಕ್ಕಟ್ಟಿದರು. ಭಾಸ್ಕರನು ರಣಭೂಮಿಯಿಂದ ಓಡಿ ಹೋದನು. ಶಿವಭಕ್ತರು ಅವನನ್ನು ಬೆನ್ನಟ್ಟಿ ಬರಲು ಅವನು ಅಲ್ಲಿಯೇ ಅರಣ್ಯದಲ್ಲಿ ಒಂದು ಕಡೆಗೆ ಅಡಗಿಕೊಂಡು ನಿಂತನು.

ವೀರಸಂಗಯ್ಯನು ಈ ಪ್ರಕಾರ ಕೋವೂರು ದಂಡಾಳುಗಳನ್ನು ಚದುರಿಸಿದ ಬಳಿಕ ಅವನು ರಣಭೂಮಿಯನ್ನು ನೋಡಬೇಕೆಂದು ಹೊರಟನು. ಅಲ್ಲಿ ಭಕ್ತರ ಹೊಡೆತದಿಂದ ಸತ್ತು ಹೋಗಿದ್ದ ಹೆಣದ ರಾಶಿಗಳು ಬಿದ್ದಿದ್ದವು. ಅವುಗಳನ್ನು ಅವನು ನೋಡುತ್ತ ಹೋಗುವಷ್ಟರಲ್ಲಿ ಅಲ್ಲಿ ಒಂದು ಮೃತದೇಹವು ಅವನ ದೃಷ್ಟಿಗೆ ಬಿದ್ದಿತು. ಅದರ ಹಣೆಯ

ಮೇಲೆ ಭಸಿತ, ಅಂಗದಲ್ಲಿ ಲಿಂಗವಿದ್ದದ್ದನ್ನು ಕಂಡನು. ಹೀಗೆ ಯುದ್ಧ ಕಾಲದಲ್ಲಿ ತನ್ನ ಮೂಲಕ ಒಬ್ಬ ಶಿವಭಕ್ತನು ಮಡಿದು ಹೋದನೆಂಬುದನ್ನು ನೋಡಿ ಅವನಿಗೆ ಬಹಳ ಪಶ್ಚಾತ್ತಾಪವಾಯಿತು. ಈ ಶಿವಭಕ್ತನ ಪ್ರಾಣವನ್ನು ಮರಳಿ ಪಡೆಯಬೇಕೆಂಬ ಇಚ್ಛೆಯು ಅವನಲ್ಲಿ ಉತ್ಪನ್ನವಾಯಿತು. ಆಗ ಅವನು ಪರಮಾತ್ಮನನ್ನು ಸ್ಮರಿಸುತ್ತ, ಆ ಭಕ್ತನಿಗೆ ಪ್ರಾಣದಾನ ಮಾಡಬೇಕೆಂದು ಬೇಡಿಕೊಳ್ಳಲು ಆ ಮೃತದೇಹದಲ್ಲಿ ಪ್ರಾಣವು ಬಂದಿತು. ಮತ್ತು ಸತ್ತು ಹೋಗಿದ್ದ ಆ ಭಕ್ತನು ಎದ್ದು ಕುಳಿತನು. ಆಗ ವೀರಸಂಗಯ್ಯನು ಅವನನ್ನು ನಮಸ್ಕರಿಸಿ ಸನ್ಮಾನಿಸಿದನು.

ಈ ಎಲ್ಲ ಸಂಗತಿಗಳನ್ನು ಭಾಸ್ಕರನು ಸಮೀಪದಲ್ಲಿಯೇ ಮರೆಯಲ್ಲಿ ನಿಂತುಕೊಂಡು ನೋಡುತ್ತಾ ಇದ್ದನು. ಅವನು ಅದನ್ನುನೋಡಿ, ಒಂದು ಕಪಟೋಪಾಯವನ್ನು ನೆನೆದು ಒಬ್ಬ ಜಂಗಮನ ವೇಷವನ್ನು ಧಾರಣಮಾಡಿಕೊಂಡು, ವೀರಸಂಗಯ್ಯನ ಇದಿರಿಗೆ ಬರಲಾಗಿ ಅವನಾರೆಂಬುದನ್ನು ತಿಳಿಯದೆ ವೀರಸಂಗಯ್ಯನು ಅವನನ್ನು ನಮಸ್ಕರಿಸಿದನು. ಆಗ ಭಾಸ್ಕರನು ತನ್ನ ಕೈಯಲ್ಲಿದ್ದ ಕಠಾರಿಯಿಂದ ವೀರಸಂಗಯ್ಯನನ್ನು ಬೆನ್ನಮೇಲೆ ತಿವಿದು ಗಾಯಗೊಳಿಸಿದನು. ಆದರೆ ವೀರಸಂಗಯ್ಯನು ಇದಕ್ಕೋಸ್ಕರ ಎಷ್ಟುಮಾತ್ರವೂ ಅವನಮೇಲೆ ಕೋಪಗೊಳ್ಳಲಿಲ್ಲ. ಇಷ್ಟೇಅಲ್ಲ, ಅವನ ಜಂಗಮ ರೂಪನ್ನು ನೋಡಿ ತನ್ನ ಕೈಯ್ಯಲ್ಲಿದ್ದ ಶಸ್ತ್ರವನ್ನು ಚೆಲ್ಲಿಕೊಟ್ಟು ಅವನಿಗೆ—ನೀನು ನನ್ನ ಭವರೋಗ ವೈದ್ಯನು, ನನ್ನನ್ನು ರಕ್ಷಿಸು ಎಂದು ಅವನ ಪಾದಕ್ಕೆರಗಿದನು. ವೀರಸಂಗಯ್ಯನ ಈ ಅತುಲವಾದ ಭಕ್ತಿಯನ್ನು ನೋಡಿ ಶಿವನು ಮೆಚ್ಚಿ ಅವನಿಗೆ ಜಂಗಮ ರೂಪಿನಿಂದ ಪ್ರತ್ಯಕ್ಷನಾಗಿ ಅವನಿಗೆ— ನೀನು ನಿನ್ನ ವೀರಭಕ್ತಿಯನ್ನು ಜಗತ್ತಿನಲ್ಲಿ ಚನ್ನಾಗಿ ಮೆರೆಯಿಸಿದೆ. ನಿನಗೇನು ಬೇಕು ಬೇಡು ಎನಲು, ಅವನು—ಈ ಭಾಸ್ಕರನ ತಪ್ಪನ್ನು ಮೊದಲು ಕ್ಷಮಿಸಬೇಕು ಎಂದು ಬೇಡಿಕೊಂಡನು. ಭಾಸ್ಕರನು ಈ ವರೆಗೆ ತನ್ನ ಸಮ್ಮುಖದಲ್ಲಿ ನಡೆದ ಸಂಗತಿಗಳನ್ನು ನೋಡಿ ಪಶ್ಚಾತ್ತಾಪವನ್ನು ಹೊಂದಿ ತನ್ನ ತಪ್ಪನ್ನು ಕ್ಷಮಿಸಬೇಕೆಂದು ಆ ಜಂಗಮನಿಗೆ ಬೇಡಿಕೊಂಡನು. ಆಗ ಆ ಜಂಗಮನು ಅವನಿಗೂ ಅವನ ಪುತ್ರ ಕಳತ್ರ, ಸೇವಕರೆಲ್ಲರಿಗೂ ಶಿವದೀಕ್ಷೆಯನ್ನು ಕೊಟ್ಟು ಅಂತರ್ಧಾನನಾದನು. ಆ ಮೇಲೆ ವೀರಸಂಗಯ್ಯನು ತನ್ನ ಹೆಂಡತಿಯಾದ ಚಂದ್ರಾಣಿದೇವಿಯನ್ನು ಕರೆದುಕೊಂಡು ತನ್ನ ಬಿದಿರುಕೋಟೆ ಪಟ್ಟಣಕ್ಕೆ ಹೋಗಿ

ಶಿವಾನುಭವದಲ್ಲಿ ಸುಖವಾಗಿದ್ದನು. ಇತ್ತ ಕೋವೂರಲ್ಲಿ ಭಾಸ್ಕರನೂ ಅವನ ಮಿತ್ರರೂ, ಬಂಧುಬಳಗದವರೂ ಶಿವದೀಕ್ಷಾ ಸಂಪನ್ನರಾಗಿ ಶಿವನಲ್ಲಿ ಭಕ್ತಿಭಾವವುಳ್ಳವರಾಗಿ ವಾಸಿಸುವವರಾದರು. ಈ ಪ್ರಕಾರ ವೀರಸಂಗಯ್ಯನು ತನ್ನ ವೀರಭಕ್ತಿಯಿಂದ ಶಿವಶರಣರಲ್ಲಿ ಪ್ರಖ್ಯಾತನಾಗಿದ್ದಾನೆ.

ನಾವು ಹಿಂದೆ ಕೋವೂರು ಬ್ರಹ್ಮಯ್ಯನ ಚರಿತ್ರೆಯಲ್ಲಿ ಉಲ್ಲೇಖಿಸಿದ ಕೋವೂರೇ ಮಾಧವ ಭಾಸ್ಕರರ ಗ್ರಾಮವಾಗಿರಬಹುದೆಂದು ತೋರುತ್ತದೆ. ಇದು ಚಾಲುಕ್ಯರ ವಂಶವು. ಈ ಕಥೆಯಲ್ಲಿ ಹೇಳಿದಂತೆ ಅವರು ವಿಷ್ಣುಭಕ್ತರಾಗಿರಬಹುದು. ಚಾಲುಕ್ಯರು ಕೆಲವು ಕಾಲ ವಿಷ್ಣುಭಕ್ತರು, ಕೆಲವು ಕಾಲ ಜೈನರು, ಇದ್ದ ಹಾಗೆ ಇತಿಹಾಸದಿಂದ ತಿಳಿದು ಬರುತ್ತದೆ. ಆದರೆ ಮಾಧವ ಭಾಸ್ಕರ ಈ ಶಬ್ದಗಳ ಮೇಲಿಂದ ಈ ಕಾಲದಲ್ಲಿ ಅವರು ವಿಷ್ಣು ಭಕ್ತರಿರಬಹುದು. ಅವರು ಹೇಗೆ ವೀರಸಂಗಯ್ಯನು ಶಿವಭಕ್ತರಾದರೆಂಬುದು ಈಗಿನ ಕಥೆಯಲ್ಲಿ ಹೇಳಲ್ಪಟ್ಟಿದೆ. ಈ ಮೇರೆಗೆ ವೀರಶೈವರಾಗುವಾಗ್ಗೆ ಅವನ ಆಪ್ತರಿಷ್ಟರಲ್ಲಿ ಬಂಧುಬಳಗದವರಲ್ಲಿ ಹಿಂದೆ ಕೋವೂರು ಬ್ರಹ್ಮಯ್ಯನ ಕಥೆಯಲ್ಲಿ ಹೇಳಿದಂತೆ ಸುಮಾರು ೩೦೦ ಮನೆತನಗಳ ಜನರು ಅವರೊಡನೆ ವೀರಶೈವ ದೀಕ್ಷೆಯನ್ನು ಹೊಂದಿರಬಹುದು. ಇವರ ವಂಶದಲ್ಲಿ ಮುಂದೆ ಬ್ರಹ್ಮಯ್ಯನು ಉತ್ಪನ್ನನಾಗಿ ವೀರಶೈವ ಧರ್ಮದಂತೆ ನಡೆಯುತ್ತಿರಲು ಅವನು ಕೋವೂರಲ್ಲಿಯ ಜೈನರಿಂದ ಹೇಗೆ ಹಿಂಸಿಸಲ್ಪಟ್ಟನೆಂಬುದು ಅವನ ಚರಿತ್ರೆಯಲ್ಲಿ ಹೇಳಲ್ಪಟ್ಟಿದೆ.

ಕೋವೂರು ಈ ಹೆಸರಿನ ಗ್ರಾಮವು ಬೀದರದ ಸಮೀಪದಲ್ಲಿ ಇದ್ದದ್ದು ನಮಗೆ ಈವರೆಗೂ ಕಂಡುಬಂದಿಲ್ಲ. ಆದ್ದರಿಂದ ಮಂಗಳವಾಡ ಅಥವಾ ತದ್ದೇವಾಡಿ ನಾಡಿನಲ್ಲಿದ್ದ ಈಗಿನ ಕೋಹಳ್ಳಿಯೇ ಈ ಕೋವೂರಾಗಿರಬೇಕು. ಮಂಗಳವಾಡ ನಾಡೂ ಕಲ್ಯಾಣದ ಸೀಮೆಯೂ ಸಮಿ ಸಮೀಪವಾಗಿರುತ್ತವೆ. ಆದ್ದರಿಂದ ಈ ಚರಿತ್ರೆಯಲ್ಲಿ ಹೇಳಿದಂತೆ ಕೋವೂರು ಮತ್ತು ಬೀದರ ಇಲ್ಲಿಯ ಮುಖ್ಯ ಮನೆತನಗಳಲ್ಲಿ ಶರೀರ ಸಂಬಂಧಗಳು ಹಿಂದಿನ ಕಾಲದಲ್ಲಿ ಆಗುತ್ತಿರಬಹುದು.

ವೀರಶೈವರು ಈಗ್ಗೆಯೂ ತಮ್ಮ ಮಕ್ಕಳಿಗೆ ವೀರಸಂಗಯ್ಯನೆಂದು ಹೆಸರಿಡುವದು ಬಹಳ ಪ್ರಚಾರದಲ್ಲಿದೆ. ಇದರಿಂದ ವೀರಸಂಗಯ್ಯನು

ಬಹು ಪ್ರಸಿದ್ಧ ಶಿವಶರಣನಿದ್ದ ಹಾಗೆ ತೋರುತ್ತದೆ. ಆದರೆ ಆತನ ಚರಿತ್ರೆಯು ಈಗ ಬಹುತರ ಯಾರಿಗೂ ಗೊತ್ತಿರುವದಿಲ್ಲ. ಮಾಧವ ಭಾಸ್ಕರರು ಚಾಲುಕ್ಯರ ಒಂದು ಮನೆತನದವರಿದ್ದು ಇಂಥವರನ್ನು ವೀರಸಂಗಯ್ಯನು ವೀರಶೈವ ಮತಾವಲಂಬಿಗಳನ್ನಾಗಿ ಮಾಡಿದ್ದರಿಂದ ಅವನು ಇಷ್ಟು ಖ್ಯಾತಿಯನ್ನು ಪಡೆದಿರಬಹುದು. ಅವನು ಭಾಸ್ಕರನನ್ನು ಕಾಳಗದಲ್ಲಿ ಸೋಲಿಸಿ ಅವನನ್ನು ವೀರಶೈವನನ್ನು ಮಾಡಿದ್ದು ಆಗಿನ ಜನರಿಗೆ ಬಹಳ ಮಹತ್ವದ್ದೆಂದು ತೋರಿರಬಹುದು.

ವೀರಸಂಗಯ್ಯನ ಚರಿತ್ರೆಯನ್ನು ವಿವರಿಸುವ ಚೌಪದಗಳೂ ಸಾಂಗತ್ಯಗಳೂ ವೀರಶೈವ ವಾಙ್ಮಯದಲ್ಲಿ ಅನೇಕ ಇರುತ್ತವೆ. ಬೀದರ, ಬೀದರ, ಬಿದರೂರು, ಬಿದಿರಿ, ಬಿದುರುಕೋಟೆ, ಬಿದುರ-ಕೊಟ್ಟೆ ಇವೆಲ್ಲವೂ ಪರ್ಯಾಯ ಶಬ್ದಗಳಿರುತ್ತವೆ.

ವೀರಸಂಗಯ್ಯನು ಕೋವೂರು ಬ್ರಹ್ಮಯ್ಯನಕಿಂತಲು ಸ್ವಲ್ಪಕಾಲ ಮೊದಲಿನವನಾಗಿರಬೇಕು. ಆದರೆ ಬಸವೇಶ್ವರನಕಿಂತಲೂ ಈಚಿನವನೆಂದು ಅವನ ಚರಿತ್ರೆಯಿಂದ ತೋರುತ್ತದೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿದೆ.

---

## ಮುಸುಡಿಯ ಚೌಡಯ್ಯ.

ಉತ್ತರ ಕರ್ನಾಟಕದಲ್ಲಿ 'ಮುಸುಡಿ' ಎಂಬ ಗ್ರಾಮವಿರುತ್ತದೆ. ಅಲ್ಲಿ ಚೌಡಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನು ಸ್ಥಿರ ಬುದ್ಧಿಯುಳ್ಳವನು, ಗ್ರಾಮದ ಅಧಿಪತಿಯು, ಗಣಾಚಾರವುಳ್ಳವನು. ಅವನು ಶಿವಾನುಭವದ ನಿತ್ಯನೇಮಗಳನ್ನು ತಪ್ಪದೆ ಪಾಲಿಸುವನು. ಅವುಗಳಲ್ಲಿ ಅವನು 'ಶಿವಶರಣು' 'ಶರಣುಶರಣಾರ್ಥಿ' ಎಂಬ ನುಡಿಗಳನ್ನು ನುಡಿಯುತ್ತ ಜನರನ್ನು ವಂದಿಸುವದನ್ನೇ ತನ್ನ ಮುಖ್ಯ ನೇಮವನ್ನಾಗಿಟ್ಟುಕೊಂಡಿದ್ದನು. ಇದೇ ಅವನ ಶಿವಾನುಭವದ ನಡೆಯಾಗಿತ್ತು.

ಮಹಾಕವಿಯಾದ ಹರಿಹರದೇವನು ಅವನ ಈ ಆಚರಣೆಯನ್ನು ವರ್ಣಿಸಿರುವದು ಹೇಗೆಂದರೆ:— ಚೌಡಯ್ಯನು ಕನಸಿನಲ್ಲಿ ಮನಸಿನಲ್ಲಿ

ಯಾವಾಗಲೂ ಶರಣಾರ್ಥಿ ಎಂದೆನ್ನುವನು. ನೆನಹಿನಲ್ಲಿ ನಿಷ್ಠೆಯಲ್ಲಿ ಶರಣಾರ್ಥಿ, ನಡೆಯಲ್ಲಿ ನುಡಿವಲ್ಲಿ ಶರಣಾರ್ಥಿ, ಕೊಡುವಲ್ಲಿ ಕೊಂಬಲ್ಲಿ ಶರಣಾರ್ಥಿ, ಕಂಡರೆ ಶರಣು, ಕಾಣದಿದ್ದರೆ ಶರಣು, ಸುಖವೆನಿಸಿದರೆ ಶರಣು, ದುಃಖವೆನಿಸಿದರೆ ಶರಣು, ಹೀಗೆ ಶರಣು ಶರಣಾರ್ಥಿ ಎಂದೆನ್ನುವನು. ಹೀಗೆ ಅವನು ಜನರಿಗೋಸ್ಕರ ಪ್ರೇಮ-ಭಾವ, ಕೃತಜ್ಞತಾಭಾವವನ್ನು ವಹಿಸಿ ಎಲ್ಲರೊಡನೆ ಕಿಂಕರತ್ವದಿಂದ ನಡೆಯುವನು.

ಹೀಗೆ ಶರಣುಭಾವದಿಂದ ಎಲ್ಲರೊಡನೆ ವರ್ತಿಸುವದು ಹಗುರಾದುದಲ್ಲ- ಅದು ಶಿವಶರಣರ ಉಚ್ಚನಡೆಯಾಗಿರುತ್ತದೆ. ಇದು ಶ್ರೇಷ್ಠ ಶಿವಾನುಭವಿಗೆ ಸಾಧ್ಯವು. ಯಾವನು ಪೂರ್ಣವಾಗಿ ಅಹಂಕಾರವನ್ನು ಅಳಿದಿರುವನೋ ಅವನು ಮಾತ್ರ ಶರಣುಭಾವದಿಂದ ಶರಣೆಂದೆನ್ನುವನು. ಅವನು ಎಲ್ಲರನ್ನು ತನ್ನಂತೆ ಭಾವಿಸುತ್ತಾನೆ. ದಯಾಧರ್ಮವುಳ್ಳವನಾಗಿರುತ್ತಾನೆ. ಪ್ರಾಣಿಗಳೆಲ್ಲವನ್ನು ತನ್ನಂತೆ ನೋಡುತ್ತಾನೆ. ಶುದ್ಧ ಮನಸ್ಸುಳ್ಳವನು ಅವನು ಯಾರನ್ನೂ ದ್ವೇಷಿಸನು. ಎಲ್ಲರ ಕೂಡ ಕಿಂಕರತ್ವದಿಂದ ನಡೆದು, ಯಾವಾಗಲೂ 'ಶರಣು' 'ಶರಣು' ಎಂದು ನಮಸ್ಕರಿಸುತ್ತಾನೆ. ಈ ಬಗೆಯ ಗುಣವುಳ್ಳವನೇ ನಿಜವಾದ ಶರಣನು. ಇವನಲ್ಲಿ ಅಲೌಕಿಕ ಶಕ್ತಿಯು ತಲೆದೋರುತ್ತದೆ. ಇಂಥ ಶಕ್ತಿಯು ಚೌಡಯ್ಯನಲ್ಲಿ ಉತ್ಪನ್ನವಾಗಿತ್ತು.

ಮುಸುಡಿಯ ಚೌಡಯ್ಯನು ನಡೆದ ಈ ಆಚರಣೆಯು ಬಸವೇಶ್ವರನದಾಗಿದೆ. ಬಸವನು ಅಹಂಕಾರವನ್ನು ನೀಗಿದವನು. ಎಲ್ಲರೊಡನೆ ಸೇವಕನಾಗಿ ಆಚರಿಸುವವನು. ಆದ್ದರಿಂದ ಪಂಚಪರುಷಗಳು ಅವನಿಗೆ ದೊರೆಕೊಂಡಿದ್ದವು. ಹಾಗೆಯೇ ಚೌಡಯ್ಯನಿಗೂ ಅವು ದೊರೆಕೊಂಡಿದ್ದವು.

ಹೀಗೆ ಆಚರಿಸುವವನು ಉಚ್ಚರಿಸುವ ಪಂಚಾಕ್ಷರೀ ಮಂತ್ರದಲ್ಲಿ ಒಂದು ಅದ್ಭುತಶಕ್ತಿಯು ನೆಲೆಗೊಂಡಿರುತ್ತದೆ. ಈ ಶಕ್ತಿಯು ಅವನ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳಲ್ಲಿಯೂ ಮನೋವಾಕ್ಕಾಯ ಕರ್ಮಗಳಲ್ಲಿಯೂ ತುಂಬಿಕೊಂಡಿರುತ್ತದೆ. ಆದ್ದರಿಂದ ಅವನು ಮಂತ್ರಶರೀರಿಯಾಗಿರುತ್ತಾನೆ. ಆದರೆ ನಡೆ ಇಲ್ಲದೆ ಉಚ್ಚರಿಸಿದ ಮಂತ್ರದಲ್ಲಿ ಯಾವ ಶಕ್ತಿಯೂ ಇರಲಾರದು. ಅದು ಕೇವಲ ಶಬ್ದ ಮಾತ್ರ. ಅದು 'ಅರಳೆಯ ಮರದ ಉಲುಹು' ಎಂದು ಶಿವಶರಣರು ನುಡಿದಿದ್ದಾರೆ.

ಅನೇಕರು ಯೋಗಾಭ್ಯಾಸದಿಂದ ಪ್ರಬಲಸಾಮರ್ಥ್ಯವು ದೊರೆ ಕೊಳ್ಳುವದೆಂದು ಭಾವಿಸುತ್ತಾರೆ. ಇದು ನಿಜವಿರಬಹುದು. ಆದರೆ ಶಿವಾನುಭವದ ಪ್ರಕಾರ ಇಂಥ ಸಾಮರ್ಥ್ಯವನ್ನು ಷಟ್‌ಸ್ಥಲಾಚರಣೆ ಮತ್ತು ಅಷ್ಟಾವರಣಗಳ ಮೂಲಕ ಭಕ್ತನು ತನ್ನಲ್ಲಿ ಉಂಟುಮಾಡಿ ಕೊಳ್ಳಬಹುದು.

ಹೀಗೆ ಚೌಡಯ್ಯನು ತನ್ನ ಗ್ರಾಮದಲ್ಲಿರುವಾಗ ಕಲ್ಯಾಣಪಟ್ಟಣ ದಲ್ಲಿ ಬಸವೇಶ್ವರ ಮೊದಲಾದ ಪ್ರಮಥರು ಬಂದಿದ್ದಾರೆಂಬುವನ್ನು ಕೇಳಿ ಅವರನ್ನು ಕಾಣಬೇಕೆಂದು ಕೆಲವು ಜತೆಗಾರರನ್ನು ಕೂಡಿ ಕೊಂಡು ಅಲ್ಲಿಗೆ ಹೊರಟನು. ಅವರು ಮಾರ್ಗಕ್ರಮಣ ಮಾಡುತ್ತಿರು ವಲ್ಲಿ, ಅವರಲ್ಲೊಬ್ಬನು ದಾರಿಯಲ್ಲಿ ಒಂದು ಇಟ್ಟಿಯ ಗಿಡದಲ್ಲಿ ಸುಂದರವಾದ ಹಣ್ಣುಗಳಿರುವದನ್ನು ಕಂಡು ಅವುಗಳನ್ನು ತಿನ್ನಬೇ ಕೆಂದು ಬಯಸಿದನು. ಆ ಹಣ್ಣುಗಳು ಅತ್ಯಂತ ಕಹಿಯಾದವುಗಳು. ವಿಷವಾಗಿಯೂ ಅವು ಪರಿಣಮಿಸುತ್ತವೆ. ಆದರೆ ಜನರನ್ನು ಸಂತೋ ಷಪಡಿಸುವದೇ ಬ್ರಹ್ಮಯ್ಯನ ನಡೆಯಾಗಿತ್ತು. ಆದ್ದರಿಂದ ಅವನು ಶಿವ ಭಾವದಿಂದ ಆ ಹಣ್ಣುಗಳನ್ನು ನೋಡಲು, ಅವು ಮಧುರ ಫಲಗಳಾ ದವು. ಅವುಗಳನ್ನು ಎಲ್ಲರೂ ತಿಂದು ರುಚಿಸಿ ಆನಂದಪಟ್ಟು ಮುಂದೆ ತೆರಳಿದರು.

ಅವರು ಕಲ್ಯಾಣಕ್ಕೆ ಹೋದ ಬಳಿಕ ಚೌಡಯ್ಯನು ಬಸವೇಶ್ವರ ನನ್ನು ಕಾಣುವವನಾದನು. ಬಸವೇಶ್ವರನು ಈ ಮೊದಲೆ ಆತನ ಕೀರ್ತಿ ವಾರ್ತೆಯನ್ನು ಕೇಳಿದವನಾಗಿದ್ದನು. ಆದ್ದರಿಂದ ಅವನು ಅವನನ್ನು ಬಹಳ ಆದರಿಸುವವನಾದನು.

ಮುಸುಡಿಯ ಚೌಡಯ್ಯನು ಕಲ್ಯಾಣ ಪಟ್ಟಣದಲ್ಲಿರುವಾಗ ದಿನಾಲು ಸರೋವರಕ್ಕೆ ಹೋಗಿ ಅಲ್ಲಿ ತನ್ನ ಇಷ್ಟಲಿಂಗದ ಪೂಜಾದಿಕಾರ್ಯಗ ಳನ್ನು ನೆರವೇರಿಸಿ ತನ್ನ ಮನೆಗೆ ಬಂದು ಎಲ್ಲರಲ್ಲಿ ಶಿವಭಾವವನ್ನು ತಳೆ ದವನಾಗಿ ಎಲ್ಲರಿಗೂ 'ಶರಣು' 'ಶರಣು' ಎಂದೆನ್ನುತ್ತ ಶರಣರ ಸೇವೆಯೇ ತನ್ನ ಕಾಯಕವನ್ನಾಗಿಟ್ಟುಕೊಂಡು ಕಾಲಕಳೆಯಹತ್ತಿದನು.

ಹೀಗಿರುವಲ್ಲಿ ಒಂದು ದಿವಸ ಚೌಡಯ್ಯನು ಸರೋವರದಲ್ಲಿ ಸ್ನಾನವನ್ನು ಮಾಡಿ ಅಗ್ಗವಣಿಯನ್ನೂ ಹೂವಿನ ಕರಂಡಿಗೆಯನ್ನೂ

ಕೈಯಲ್ಲಿ ತೆಗೆದುಕೊಂಡು ಪಟ್ಟಣದ ಬೀದಿಯಿಂದ ಬರುತ್ತ ಇರುವಲ್ಲಿ ತನ್ನ ಇದಿರಿಗೆ ಭಕ್ತರು ಒಂದು ಮೃತದೇಹವನ್ನು ವಿಮಾನದಲ್ಲಿರಿಸಿ ಕೊಂಡು ರ ದ್ರಭೂಮಿಗೆ ಹೊರಟಿರುವದನ್ನು ಕಂಡನು. ಆ ಮೃತದೇಹದ ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿ, ಲಿಂಗದ ಕರಡಿಗೆ ಇರುವದನ್ನು ಕಂಡು, ಇವನೊಬ್ಬ ಶ್ರೇಷ್ಠಭಕ್ತನು, ಈವನನ್ನು ಭಕ್ತ ಜನರು ಅಟ್ಟಹಾಸದಿಂದ ಎಲ್ಲಿಯೋ ಕರೆದುಕೊಂಡು ಹೋಗುತ್ತಿದ್ದಾರೆ, ಎಂದು ಮುಗ್ಧಭಾವದಿಂದ ತಿಳಿದುಕೊಂಡು ಆ ದೇಹಕ್ಕೋಸ್ಕರ ಭಕ್ತಿಭಾವವುಳ್ಳವನಾಗಿ ಅದಕ್ಕೆ ಕೈಮುಗಿದು— ಶರಣಾರ್ಥಿ ಶರಣಾರ್ಥಿ, ದೇವ ಶರಣು ಶರಣು, ಗಿರಿಜಾವರನೇ ಶರಣು ಶರಣು, ನನಗೆ ಕರುಣಿಸು, ಎಂದು ಅತಿ ವಿನಮ್ರಭಾವದಿಂದ ಹೇಳಿಕೊಳ್ಳಹತ್ತಿದನು. ನೆರೆದ ಭಕ್ತರು ಅವನಿಗೆ—ನೀನು ಇಲ್ಲಿರಬೇಡ, ನಿನ್ನ ಪೂಜಾಕಾರ್ಯಕ್ಕೆ ಹೋಗಿಬಿಡು, ಎಂದು ಎಷ್ಟು ಹೇಳಿದರೂ ಅವನು ಕೇಳದೆ—ಈ ಶಿವಭಕ್ತನು ವಿಮಾನದಿಂದ ಕೆಳಗಿಳಿಯಲಿ, ಅವನಿಗೆ ನನ್ನ ನಮಸ್ಕಾರವನ್ನು ಮಾಡುತ್ತೇನೆ, ಅವನಿಗೆ ನಮಸ್ಕರಿಸದ ಹೊರ್ತು ನಾನು ಇಲ್ಲಿಂದ ಅಲುಗಾಡುವದಿಲ್ಲ, ಎಂದು ನುಡಿದು ವಿಮಾನದ ಇದಿರಿಗೆ ನಿಂತುಬಿಟ್ಟನು. ಅದನ್ನು ಅಲ್ಲಿ ನೆರೆದ ಭಕ್ತರು ನೋಡಿ ಬೆರಗಾದರು. ಭಕ್ತರಿಗೋಸ್ಕರ ಅವನಲ್ಲಿ ನೆಲೆಗೊಂಡಿದ್ದ ಇಂಥ ಭಕ್ತಿಯನ್ನು ನೋಡಿ ವಿಸ್ಮಿತರಾದರು. ಆಗ ಅವನ ದೃಢಭಾವವನ್ನು ಪರಮಾತ್ಮನು ತಿಳಿದವನಾದ್ದರಿಂದ ಅವನ ಇಚ್ಛೆಯನ್ನು ನಾನು ಪೂರೈಸಬೇಕು, ಇಲ್ಲದಿದ್ದರೆ ಅನಾಹುತವಾಗಬಹುದು, ಎಂದು ತಿಳಿದು ಆ ಮೃತದೇಹದಲ್ಲಿ ಜೀವಕಳೆಯನ್ನು ಅವನು ತುಂಬಿದನು. ಆಗ ಆ ದೇಹದಲ್ಲಿ ಪ್ರಾಣವು ಬಂದು ಆ ದೇಹವು ಕೆಳಗಿಳಿಯಲು ಚೌಡಯ್ಯನು ಅದರ ಪಾದಕ್ಕೆರಗಿದನು. ಆಗ ಜನರು ಚೌಡಯ್ಯನ ನೇಮವೇ ಜಗತ್ತಿನಲ್ಲಿ ನಿಜವಾದುದು, ಅದು ಶ್ರೇಷ್ಠವಾದುದು ಎಂದು ಅವನನ್ನು ಹೊಗಳಹತ್ತಿದರು. ಆ ಮೇಲೆ ಚೌಡಯ್ಯನು ಮುಂದೆ ಹೊರಟುಹೋಗಲು ಆ ಮೃತದೇಹವು ಮೊದಲಿನಂತಾಗಲು ಭಕ್ತಜನರು ಮೆರವಣಿಗೆಯೊಂದಿಗೆ ಮುಂದಕ್ಕೆ ಹೋಗುವವರಾದರು.

ಮತ್ತೊಂದು ದಿನ ಚೌಡಯ್ಯನು ಅಗ್ಗವಣಿಯನ್ನು ಮತ್ತು ಹೂಗಳನ್ನು ತೆಗೆದುಕೊಂಡು ಮಾರ್ಗದಲ್ಲಿ ಬರುತ್ತಿರಲು ಇದಿರಿಗೆ ಒಂದು ವೃಷಭವು ಸತ್ತು ಬಿದ್ದಿದ್ದನ್ನು ಕಂಡನು. ಆಗ ಇದು ಬಸವನೆಂಬ

ಭಾವನೆಯು ಅವನಲ್ಲಿ ಉಂಟಾಗಿ ಅತ್ಯಂತ ಭಕ್ತಿಯಿಂದ ಅದಕ್ಕೆ–ಬಸವನ ಶರೀರಕ್ಕೆ ಎಂದಾದರೂ ನೋವುಂಟೇ, ಏಳೇಳೆಂದು ನುಡಿಯಲು ಆ ವೃಷಭವು ಎದ್ದು ನಿಂತಿತು. ಶರಣುಭಾವವುಳ್ಳವನು ದಯಾರ್ದ್ರ ಹೃದಯನು. ಇಂಥವನಲ್ಲಿ ಒಂದು ಅಲೌಕಿಕ ಶಕ್ತಿಯು ತಾನಾಗಿಯೇ ಉಂಟಾಗುತ್ತ ಜನರು ಅವನನ್ನು ಹೊಗಳಹತ್ತಿದರು.

ಹೀಗೆ ಚೌಡಯ್ಯನು ಕೆಲವು ದಿನ ಕಲ್ಯಾಣದಲ್ಲಿರುತ್ತಿರಲು, ಅವನ ಆರಾಧ್ಯ ಸಂತತಿಯವರು ಪಾರಗಾವಿ ಎಂಬ ಪುರದಲ್ಲಿದ್ದು, ಅವರು ತಮ್ಮ ಲಗ್ನಕ್ಕೆ ಚೌಡಯ್ಯನನ್ನು ಕರೆಯಲಿಕ್ಕೆ ಕಲ್ಯಾಣಕ್ಕೆ ಬಂದರು. ಆಗ ಚೌಡಯ್ಯನು ಬಸವೇಶ್ವರನ ಅಪ್ಪಣೆಯನ್ನು ಪಡೆದುಕೊಂಡು ಅವರೊಡನೆ ಆ ಊರಿಗೆ ಹೊರಟನು ದಾರಿಯಲ್ಲಿ ಭೀಮರಥಿ (ಭೀಮಾ) ನದಿಯು ಹತ್ತಿತು. ಆಗ ಅದು ಉಕ್ಕಿ ಹರಿಯುತ್ತಿತ್ತು. ಆದರೆ ಅಲ್ಲಿಯೇ ತಡೆದು ನಿಂತರೆ ಲಗ್ನದ ವೇಳೆಯು ತಪ್ಪುವದೆಂದು ಚೌಡಯ್ಯನಿಗೆ ತೋರಿಬರಲು, ಅವನು ಹಿಂದಿನ ಶಿವಶರಣರನ್ನು ನೆನೆಯುತ್ತ ಭೀಮೆಗೆ–ನೀನು ಗಜೇಶ ಮಸಣಯ್ಯ ಮೊದಲಾದವರಿಗೆ ದಾರಿಯನ್ನು ಕೊಟ್ಟೆ. ನನಗೂ ಈಗ ದಾರಿಯನ್ನು ಕೊಡು, ಎಂದು ನುಡಿಯುತ್ತ ನದಿಯನ್ನು ಪ್ರವೇಶಿಸಿದನು. ಆಗ ಅದು ಇಬ್ಭಾಗವಾಗಿ ಅವನಿಗೆ ದಾರಿಯನ್ನು ಕೊಟ್ಟಿತು. ಆ ಮೇಲೆ ಅವನು ಪಾರಗಾವಿಗೆ ಹೋಗಿ ತನ್ನ ಆಪ್ತರಾದ ಆರಾಧ್ಯರಲ್ಲಿ ಮದುವೆಯನ್ನು ತೀರಿಸಿಕೊಂಡು, ಮರಳಿ ಕಲ್ಯಾಣಕ್ಕೆ ಬಂದು ಅಲ್ಲಿಯೇ ಇರಹತ್ತಿದನು.

ಹೀಗಿರಲು ಕೆಲವೊಂದು ದಿನ ಒಬ್ಬ ಶೂದ್ರನ ಮಗಳು ಚೌಡಯ್ಯನ ಕೀರ್ತಿಯನ್ನು ಕೇಳಿ ಅವನನ್ನು ಕಂಡು ಅವನಿಂದ ಹರಿಕೆಯನ್ನು ಇಸಿದುಕೊಂಡು ಮನೆಯಲ್ಲಿರಲು ಮರುದಿನವೇ ಅವಳು ಅವುದೋ ಒಂದು ಕಾರಣದಿಂದ ಮೃತಪಟ್ಟಳು. ಆಗ ಅವಳ ತಾಯಿತಂದೆಗಳು ಅವಳ ಮೃತದೇಹವನ್ನು ಚೌಡಯ್ಯನಲ್ಲಿಗೆ ತಂದು ಅತ್ಯಂತ ದುಃಖದಿಂದ ಅವನಲ್ಲಿ ಮೊರೆಯಿಟ್ಟರು. ಅವರನ್ನು ನೋಡಿ ಅವನಲ್ಲಿ ದಯಾಭಾವವು ಉಂಟಾಗಿ ಅವಳನ್ನು ದಿಟ್ಟಿಸುತ್ತ—ಮಗಳೇ ಏಳೇಳೆಂದು ನುಡಿಯಲು, ಅವಳು ಎದ್ದು ಕುಳಿತಳು. ಆಗ ಅವಳು ತನಗೆ ವೀರಶೈವ ದೀಕ್ಷೆಯನ್ನು ಕೊಡಲು ಅವನಿಗೆ ಕೇಳಿಕೊಳ್ಳಲು, ಚೌಡಯ್ಯನು ಅವಳಿಗೆ ಲಿಂಗಧಾರಣವನ್ನು ಮಾಡಿದನು.

ಚೌಡಯ್ಯನು ತನ್ನಲ್ಲಿ ಉಂಟಾದ ಈ ಶರಣಾಭಾವದ ಆಚರಣೆಯ ಮೂಲಕ ಅವನಿಂದ ಅಗಾಧವಾದ ಮಹತ್ವಗಳು ಆಗಿಂದಾಗ್ಗೆ ಆಗಹತ್ತಿದವು. ಇದರಿಂದ ಕಲ್ಯಾಣ ಪಟ್ಟಣದಲ್ಲಿ ಅವನ ಕೀರ್ತಿಯು ಜನರಲ್ಲೆಲ್ಲ ಬಹಳ ಹಬ್ಬಿತು. ಇದನ್ನು ಪರವಾದಿಗಳು ಕೇಳಿ ಸೈರಿಸಲಾರದಾದರು. ಅವರು ಅವನ ವಿಷಯವಾಗಿ ಮತ್ಸರ ಬುದ್ಧಿಯನ್ನು ತಾಳಿ ಒಂದು ಕುಹಕವನ್ನು ನೆನೆದು ಗೋಣಿಯಲ್ಲಿ ಪುರುಷರೂಪದ ಒಂದು ಕೃತ್ರಿಮ ಪ್ರತಿಮೆಯನ್ನು ಸಿದ್ಧಪಡಿಸಿ, ಮಿನುಗುವ ರುದ್ರಾಕ್ಷಿ ವಿಭೂತಿಗಳನ್ನು ಅದರ ಹಸ್ತಕಂಠ ಮೊದಲಾದ ಸ್ಥಾನಗಳಲ್ಲಿಟ್ಟು, ಅದಕ್ಕೆ ಲಿಂಗವನ್ನೊಂದು ಅಳವಡಿಸಿ ಆ ಗೋಣಿಯನ್ನು ಮನುಷ್ಯನಂತೆ ಹೊಲಿದು ಊರ ಹೊರಗೆ ಇದ್ದ ಒಂದು ಹಾಳು ದೇಗುಲದಲ್ಲಿ ಇಟ್ಟರು. ಆಮೇಲೆ ಅವರು ಚೌಡಯ್ಯನಿದ್ದ ಕೇರಿಯಲ್ಲಿ ಬಂದು— ಅವನೋ ಒಬ್ಬ ಭಕ್ತನು ಊರ ಹೊರಗೆ ಸತ್ತುಬಿದ್ದಿದ್ದಾನೆ. ಅವನ ಹೆಣವು ಕೊಳೆತು ನಾರುತ್ತಿದೆ. ಶರೀರದ ಗುರುತು ಸಹ ಸಿಕ್ಕದಂತಾಗಿದೆ. ಅದನ್ನು ಎತ್ತಿಕೊಂಡು ಸಮಾಧಿಯಲ್ಲಿರಿಸಿರಿ ಎಂದು ಕೂಗುತ್ತ ಬರಲು ಚೌಡಯ್ಯನು ಅದನ್ನು ಕೇಳಿ ದೇವಾಲಯಕ್ಕೆ ಹೋಗಿ ನೋಡಲು ಅಲ್ಲಿ ಒಂದು ವಿದ್ರೂಪವಾದ ಶರೀರವು ಬಿದ್ದುದನ್ನು ಕಂಡನು. ಆಗ ಅದಕ್ಕೀಶ್ವರ ಅವನು ಕನಿಕರಪಟ್ಟು ಶಿವಭಾವದಿಂದ ಶಿವನ ಹೆಸರನ್ನು ತೆಗೆದುಕೊಂಡು ಅದಕ್ಕೆ ಏಳೇಳೆಂದು ಕರೆಯಲು ಒಳಗಿದ್ದ ಪುರುಷಾಕಾರದಲ್ಲಿ ಪ್ರಾಣವು ತುಂಬಿ ಬಂದು ಅದು ಜಂಗಮರೂಪದಿಂದ ಎದ್ದು ನಿಂತಿತು. ಪರವಾದಿಗಳು ಅದನ್ನು ನೋಡಿ ಅಂಜಿ ಓಡಿಹೋಗಹತ್ತಿದರು. ಆದರೆ ಚೌಡಯ್ಯನು ಅವರಿಗೆ ಅಭಯವನ್ನಿತ್ತು ಅವರನ್ನು ಸಮಾಧಾನಪಡಿಸಿದನು.

ಹೀಗೆ ಮುಸುಡಿಯ ಚೌಡಯ್ಯನು ತನ್ನ 'ಶರಣು ಶರಣಾರ್ಥಿ' ಎಂಬ ನಡೆಯಿಂದ ಅದ್ಭುತ ಸಾಮರ್ಥ್ಯವನ್ನು ಹೊಂದಿದವನಾಗಿ ಬಸವಾದಿ ಪ್ರಮಥರ ನೆರೆಯಲ್ಲಿ ಕಲ್ಯಾಣದಲ್ಲಿ ವಾಸಿಸುತ್ತ ಅಲ್ಲಿಯೇ ಸಮಾಧಿಯನ್ನು ಹೊಂದಿದನು.

ಮುಸುಡಿಯ ಚೌಡಯ್ಯನು ಬಸವೇಶ್ವರನ ಸಮಕಾಲೀನನಾಗಿದ್ದಾನೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಆರಾಧ್ಯ

ಕುಲದವನೆಂಬುದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಆದರೆ ಅವನು ಇದ್ದ ಮುಸುಡಿ ಗ್ರಾಮವು ಎಲ್ಲಿದೆ ಎಂಬುದು ನಮಗೆ ಗೊತ್ತಾಗುವದಿಲ್ಲ. ಹರಿಹರ ಕವಿಯು ಅವನು ಉತ್ತರ ದೇಶದವನೆಂದು ಹೇಳಿದ್ದಾನೆ. ಅವನು ಕಲ್ಯಾಣದಲ್ಲಿ ಬಸವೇಶ್ವರನ ಸನ್ನಿಧಿಯಲ್ಲಿದ್ದು ಲಗ್ನಕಾರ್ಯಕ್ಕೋಸ್ಕರ ಭೀಮಾನದಿಯನ್ನು ದಾಟಿ ಹೋದದ್ದರಿಂದ ಅವನೂ ಅವನ ಆಪ್ತರೂ ಭೀಮಾ ಕೃಷ್ಣಾ ನದಿಗಳ ಮಧ್ಯ ಪ್ರದೇಶದಲ್ಲಿಯ ಒಂದು ಗ್ರಾಮದವರಾಗಿರಬಹುದು. ಇದರ ಪಶ್ಚಿಮ ಭಾಗವು ಮಂಗಳವಾಡ ಅಥವಾ ತರ್ದವಾಡಿ ನಾಡು ಮತ್ತು ಪೂರ್ವ ಭಾಗವು ಈಗಿನ ಸುರಪುರವಿದ್ದ ಪ್ರದೇಶವು. ಇಲ್ಲಿ ಪಾರಗಾವಿ ಮತ್ತು ಮುಸುಡಿ ಎಂಬ ಹೆಸರಿನ ಗ್ರಾಮಗಳು ಕಂಡುಬರುವದಿಲ್ಲ. ಆದರೆ ಮಸೂತಿ ಎಂಬ ಹೆಸರಿನ ಗ್ರಾಮವು ಬಾಗೇವಾಡಿಯಿಂದ ಪಶ್ಚಿಮಕ್ಕೆ ೧೬ ಮೈಲುಗಳ ಮೇಲೆ ಮತ್ತು ಇದೇ ಹೆಸರಿನ ಇನ್ನೊಂದು ಗ್ರಾಮವು ಮುದ್ದೇಬಿಹಾಳದಿಂದ ನೈಋತ್ಯಕ್ಕೆ ೧೨ ಮೈಲುಗಳ ಮೇಲೆ ಇವೆ. ಇವುಗಳಲ್ಲಿ ಮುದ್ದೇಬಿಹಾಳ ತಾಲೂಕಿನಲ್ಲಿಯ ಗ್ರಾಮದಲ್ಲಿ ಪುರಾತನ ಅವಶೇಷಗಳಿವೆ. ಆದರೆ ಇವು ಮುಸುಡಿ ಗ್ರಾಮವೋ ಹೇಗೆಂಬುದು ಇನ್ನೂ ಸಂಶೋಧಿಸತಕ್ಕ ವಿಷಯವಾಗಿದೆ.

ಈ ಚರಿತ್ರೆಯಲ್ಲಿ ಚೌಡಯ್ಯನ ಅಗಾಧವಾದ ಮಹಿಮೆಗಳು ವರ್ಣಿಸಲ್ಪಟ್ಟಿದ್ದರೂ ಅದನ್ನು ಉಂಟುಮಾಡಲಿಕ್ಕೆ ಕಾರಣವಾದ ಅವನ ವೃತ್ತಿಯು ನಿಸ್ಸಂಶಯವಾಗಿ ಶ್ರೇಷ್ಠತರದ್ದಾಗಿದೆ. ವೀರಶೈವರು ಪತ್ರಗಳನ್ನು ಬರೆಯುವಲ್ಲಿ ಮತ್ತು ಅವರು ಪರಸ್ಪರ ಭೆಟ್ಟಿಯಾದಲ್ಲಿ 'ಶರಣು ಶರಣಾರ್ಥಿ' ಎಂಬ ಶಬ್ದಗಳನ್ನು ಉಚ್ಚರಿಸುವದುಂಟು. ಇದು ಅವರಲ್ಲಿ ಬಹಳ ವಾಡಿಕೆಯಾದದ್ದು. ಅದರ ಅರ್ಥವಾವುದು ಮತ್ತು ಅದರ ಮಹತ್ವವೆಷ್ಟಿದೆ ಎಂಬುದು ಮುಸುಡಿಯ ಚೌಡಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ. ವೀರಶೈವರು ಪುರಾತನ ಶಿವಶರಣರ ಈ ರೂಢಿಯನ್ನು ತಪ್ಪಿಸದೆ ಅವರು ಅದನ್ನು ಅನುಸರಿಸುವದಲ್ಲದೆ ಚೌಡಯ್ಯನ ಮನೋವೃತ್ತಿಯುಳ್ಳವರಾದಲ್ಲಿ ಅದು ಶಿವಾನುಭವದ ಶ್ರೇಷ್ಠ ನಡೆ ಎಂಬುದರಲ್ಲಿ ಏನೂ ಸಂದೇಹವಿರಲಾರದು.

# ಬಿಬ್ಬಿ ಬಾಚಯ್ಯ.

ವಿಜಾಪುರ ಜಿಲ್ಲೆಯ ಸಿಂದಿಗಿ ತಾಲೂಕಿನ ಮೋರಟಗಿಯಿಂದ ಪೂರ್ವಕ್ಕೆ ೧೮ ಮೈಲುಗಳ ಮೇಲೆ ಗೊಬ್ಬೂರೆಂಬ ಗ್ರಾಮವಿರುತ್ತದೆ. ಅದು ಈಗ ಕಲಬುರ್ಗಿ ಜಿಲ್ಲೆಯಲ್ಲಿರುತ್ತದೆ. ಮೊದಲಿನ ಕಾಲದಲ್ಲಿ ಇದು ಬ್ರಾಹ್ಮಣರ ಒಂದು ಪ್ರಸಿದ್ಧ ಅಗ್ರಹಾರವಾಗಿತ್ತು. ಅಲ್ಲಿ ಅನೇಕ ವೇದಶಾಸ್ತ್ರ ಸಂಪನ್ನರೂ ವಿದ್ವಾಂಸರೂ ಆದ ಬ್ರಾಹ್ಮಣರು ವಾಸಮಾಡುತ್ತಿದ್ದರು. ಅವರಲ್ಲಿ ಆದಿತ್ಯದೇವನೆಂಬ ಭೂಸುರನು ಅಗ್ರಗಣ್ಯನಾಗಿದ್ದನು. ಹಾಗೆಯೇ ಅಲ್ಲಿ ಬಹುಜನ ಶಿವಾನುಭವಿಗಳೂ ವಾಸವಾಗಿದ್ದರು. ಅವರಲ್ಲಿ ಯಾವಾಗಲೂ ಶಿವಾನುಭವ ಗೋಷ್ಠಿಗಳು ನಡೆಯುತ್ತಿದ್ದವು. ಇದರಿಂದ ಪರಸ್ಥಳಗಳಿಂದ ಬರುವ ಜನಸ್ತೋಮವು ಅಲ್ಲಿ ಹೆಚ್ಚಾಗಿರುತ್ತಿತ್ತು.

ಆದಿತ್ಯದೇವನಿಗೆ ಬಿಬ್ಬಿಬಾಚಯ್ಯನೆಂಬ ಮಗನು ಹುಟ್ಟಿದನು. ಅವನು ಹುಟ್ಟಿದ ಬಳಿಕ ಅವನ ತಂದೆಯು ಅವನಿಗೆ ಬ್ರಾಹ್ಮಣ ಧರ್ಮದ ಪ್ರಕಾರ ಜಾತಕರ್ಮಗಳನ್ನು ಮಾಡಿಸಿದನು. ಸಕಾಲದಲ್ಲಿ ಯಜ್ಞೋಪವೀತವನ್ನು ಧಾರಣಮಾಡಿಸಿ ವಿಪ್ರರಿಗೆ ಉಚಿತವಾದ ವೇದ ಶಾಸ್ತ್ರ ಪುರಾಣೋಪನಿಷತ್ತುಗಳ ಜ್ಞಾನವನ್ನು ಅವನಿಗೆ ಮಾಡಿಕೊಟ್ಟನು.

ಬಿಬ್ಬಿಬಾಚಯ್ಯನು ಕುಶಾಗ್ರಬುದ್ಧಿಯುಳ್ಳವನು. ಅವನ ಅಧ್ಯಯನವು ನಡೆದ ಕಾಲದಲ್ಲಿ ಅವನು ಅನೇಕ ಶಿವಾನುಭವ ಶಾಸ್ತ್ರಗಳನ್ನು ಸಹ ಅವಲೋಕಿಸಿದನು. ಶಿವಪುರಾಣ ಶಿವಾಗಮಗಳನ್ನು ಅಭ್ಯಾಸ ಮಾಡಿದನು. ಆಗ ಅವನಿಗೆ ವಿಪ್ರಾಚಾರಕ್ಕಿಂತಲೂ ಶಿವಾಚಾರವೇ ಉತ್ತಮವಾದ ನಡೆ ಎಂದು ತೋರಿಬಂದಿತು. ಆಗ ಅವನು ಶಿವಭಕ್ತಿ ಸಾಧಕರ ಮೊರೆಹೊಕ್ಕು ಒಬ್ಬ ದೇಶಿಕನ ಕಯ್ಯಿಂದ ವೀರಶೈವೋಪದೇಶವನ್ನು ಹೊಂದಿದನು. ಈ ದೇಶಿಕನು ಅವನಿಗೆ ಲಿಂಗಾಂಗೋಪದೇಶವನ್ನೂ ಕರ್ಣಮಂತ್ರವನ್ನೂ ಹೇಳಿ ಅವನಿಗೆ ಇಷ್ಟಲಿಂಗವನ್ನು ಅಳವಡಿಸಿದನು.

ಶಿವಾನುಭವದಲ್ಲಿ ಅನೇಕ ಬಗೆಯ ಆಚಾರಗಳುಂಟು ಮತ್ತು ರೀತಿಗಳುಂಟು. ಸ್ಥಲಗಳು, ಸ್ಥಲಗಳಿಗನುಸರಿಸಿ ನೆಲೆಕಲೆಗಳು, ಕಾರ್ಯಕ್ರಮಗಳು, ದಾಸೋಹಗಳು, ಸಕೀಲಗಳು, ಶಿವಯೋಗ ಸಾಧನೆಗಳು

ಹೀಗೆ ಅದರಲ್ಲಿ ಅನೇಕ ವಿಧವಾಗಿವೆ. ಹಿಂದಿನ ಕಾಲದಲ್ಲಿ ಶಿವಶರಣರು ಇವುಗಳಲ್ಲಿ ಕೆಲವೊಂದನ್ನು ಕೈಕೊಂಡು, ನಿಷ್ಠಾಪೂರ್ಣರಾಗಿ ಅದನ್ನು ನಡಿಸುತ್ತ ಕೃತಾರ್ಥರಾದರು. ಇಷ್ಟೇ ಅಲ್ಲ, ಅವರು ಇತರರಿಗೂ ತಮ್ಮ ನೀತಿಯನ್ನು ಬೋಧಿಸಿ ಅವರನ್ನು ಸಹ ಶಿವಾನುಭವಿಗಳನ್ನಾಗಿ ಮಾಡಿದ್ದಾರೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಎಲ್ಲಕಡೆಗೂ ವೀರಶೈವ ಧರ್ಮವು ಪ್ರಸಾರವಾಯಿತು.

ಶಿವಾನುಭವದ ಈ ಆಚಾರಗಳಲ್ಲಿ ಅರ್ಪಣ ಮತ್ತು ಪ್ರಸಾದ ಇವುಗಳು ಬಿಬ್ಬಿ ಬಾಚಯ್ಯನ ಮನವನ್ನು ಬಹಳ ಆಕರ್ಷಿಸಿದವು. ಅವನು ಬ್ರಾಹ್ಮಣರ ಮಾರ್ಗವನ್ನು ಬಿಡಲಿಕ್ಕೆ ಇವುಗಳೇ ಅವನಿಗೆ ಕಾರಣವಾದವು. ಅವನಿಗೆ ಶಿವಶರಣರ ಪ್ರಸಾದ ಸೇವನೆಯೇ ಮಹತ್ವದ್ದೆಂದು ತೋರಿತು. ಆದ್ದರಿಂದ ಅವನು ಇದರ ಆಚರಣೆಯನ್ನು ತನ್ನ ಕಾಯಕವನ್ನಾಗಿ ಇಟ್ಟುಕೊಂಡನು.

ಈ ಕಾಯಕಕ್ಕೋಸ್ಕರ ಅವನು ಒಂದು ಬಂಡಿಯನ್ನು ಸಿದ್ಧಪಡಿಸಿ ಅದನ್ನು ಚನ್ನಾಗಿ ಶೃಂಗರಿಸಿ ಎರಡು ಬಲವಾದ ಎತ್ತುಗಳನ್ನು ಅಣಿಮಾಡಿ, ಅವುಗಳ ಕೊಂಬಿಗೆ ಚೌರಗಳನ್ನು ಕಟ್ಟಿ, ವೃಷಭಧ್ವಜವನ್ನು ಎತ್ತಿ ಹಿಡಿದು ತನ್ನ ಮತ್ತು ತನ್ನ ಸುತ್ತಲಿನ ಗ್ರಾಮಗಳಲ್ಲಿದ್ದ ಶಿವಶರಣರ ಮನೆಗಳಿಗೆ ಹೋಗಿ, ಅವರು ಕೊಟ್ಟ ಅರ್ಪಿತವನ್ನು ಬಂಡಿಯಲ್ಲಿ ತುಂಬಿಕೊಂಡು ತನ್ನ ಮನೆಗೆ ಬರುವನು. ತಿರುಗಿ ಬಂದ ಬಳಿಕ ಗುರುಸೇವೆ, ಜಂಗಮಾರ್ಚನೆಗಳನ್ನು ಮಾಡುತ್ತ ತಾನು ತಂದಿದ್ದರಲ್ಲಿ ಪ್ರಸಾದದ ರೀತಿಯಿಂದ ಸೇವನೆಮಾಡಿ ಉಳಿದದ್ದನ್ನು ದಾಸೋಹ ಕಾರ್ಯಕ್ಕರ್ಪಿಸುವನು. ಹೀಗೆ ಮಾಡುವದನ್ನೇ ಅವನು ತನ್ನ ಕಾಯಕವನ್ನಾಗಿ ಇಟ್ಟುಕೊಂಡಿದ್ದನು.

ಈಗಿನ ಕಾಲದಲ್ಲಿ ವೀರಶೈವರಲ್ಲಿ ಇಲ್ಲಿ ಹೇಳಿದ ಅರ್ಪಣ, ಪ್ರಸಾದ, ಕಾಯಕ, ದಾಸೋಹ ಇವುಗಳಿಗೆ ವಿಪರೀತಾರ್ಥಗಳುಂಟಾಗಿರುತ್ತವೆ. ಶಿವಶರಣರ ಕಾಲದಲ್ಲಿ ಇವುಗಳಿಗೆ ವಿಶೇಷಾರ್ಥಗಳಿದ್ದವು. ಆದರೆ ಆ ವಿಚಾರಗಳು ಈಗ ತಪ್ಪಿ ಹೋಗಿವೆ.

ಶಿವಾನುಭವದ ಪ್ರಕಾರ ಗುರು ಅಥವಾ ಜಂಗಮನ ಕಾಲ ತೊಳೆದ ನೀರು, ಇಷ್ಟು ಮಾತ್ರಕ್ಕೆ ಪಾದೋದಕವಾಗಲಾರದು. ಅಟ್ಟ ಅಡಿಗೆಯನ್ನು ದೇವರ ಮುಂದಿಟ್ಟು ಅದನ್ನು ದೇವರಿಗೆ ತೋರಿಸಿದ ಮಾತ್ರಕ್ಕೆ ಅದು ಪ್ರಸಾದವಾಗಲಾರದು. ವೀರಶೈವರಲ್ಲಿ ಪಾದೋದಕ ಮತ್ತು ಪ್ರಸಾದ ಇವುಗಳ ವಿಚಾರಗಳು ಬಹಳ ಭಿನ್ನವಾಗಿರುತ್ತವೆ.

ಪ್ರಸಾದವನ್ನು ಹೊಂದುವವನು ಮೊದಲು ತನ್ನ ಇಷ್ಟಲಿಂಗವನ್ನು ಪೂಜಿಸಿ ತನ್ನಲ್ಲಿ ಲಿಂಗಚೈತನ್ಯವನ್ನು ಉಂಟು ಮಾಡಿಕೊಳ್ಳಬೇಕು. ಇಷ್ಟಲಿಂಗ ಪ್ರಾಣಲಿಂಗ ಮತ್ತು ಭಾವಲಿಂಗಗಳೆಂದು ತ್ರಿವಿಧಲಿಂಗಗಳಿದ್ದು ಅವುಗಳನ್ನು ಅನುಕ್ರಮವಾಗಿ ತನ್ನ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಈ ಲಿಂಗಪೂಜೆಯು ದ್ವಾರಾ ಅವನು ಸಂಬಂಧಿಸಿಕೊಳ್ಳಬೇಕು.

ಈ ತ್ರಿಲಿಂಗಗಳು ಅವನಲ್ಲಿ ಸಂಬಂಧಿಸಿದ ಬಳಿಕ ಅವು ಅಲ್ಲಿ ಸ್ಥಿರವಾಗಿ ಉಳಿಯಬೇಕು. ಇದು ಗುರು ಲಿಂಗ ಜಂಗಮಗಳಿಂದ ಸಾಧ್ಯವು. ವೀರಶೈವರು ಜಂಗಮನನ್ನು ಆರಾಧಿಸಿ, ಪಡೆದುಕೊಳ್ಳುವದರ ಉದ್ದೇಶವು ಇದೇ ಇರುತ್ತದೆ. ಹೀಗೆ ಪಡೆದುಕೊಂಡಲ್ಲಿ ಗುರು ಲಿಂಗ ಜಂಗಮಗಳು ಉಂಟಾಗಿ ಅವನಿಗೆ ಸಾಮರಸ್ಯ ಸ್ಥಿತಿಯು ಪ್ರಾಪ್ತವಾಗುತ್ತದೆ.

ಈ ಎಲ್ಲ ಸಂಬಂಧಗಳು ಓಂಕಾರಯುಕ್ತ ಪಂಚಾಕ್ಷರೀ ಮಂತ್ರದ ಧ್ಯಾನದ ಮೂಲಕವೇ ಆಗುತ್ತವೆ.

ಜಂಗಮನನ್ನು ಈ ಪ್ರಕಾರ ಅರ್ಚಿಸಿ ಇಷ್ಟ ಪ್ರಾಣ ಭಾವಲಿಂಗಗಳನ್ನು ಹೀಗೆ ತನ್ನಲ್ಲಿ ಅಳವಡಿಸಿಕೊಂಡು ಲಿಂಗದಲ್ಲಿ ಬೆರೆಯಬೇಕು. ಇದು ಮಂತ್ರಯುಕ್ತ ಪಾದೋದಕದ ಮೂಲಕವೇ ಆಗುತ್ತದೆ.

ಇಂಥ ಪಾದೋದಕದ ಸೇವನೆಯಿಂದ ಶರೀರವು ಮಂತ್ರಮಯವಾಗುತ್ತದೆ.

ಹೀಗೆ ಪಾದೋದಕದಿಂದ ತನ್ನಲ್ಲಿ ತ್ರಿಲಿಂಗಗಳನ್ನು ಒಳಕೊಂಡು ಪ್ರಸಾದ ಗ್ರಹಣಮಾಡಬೇಕು. ಪ್ರಸಾದದ ಉದ್ದೇಶವು ತ್ರಿಲಿಂಗಗಳನ್ನು ತನ್ನಲ್ಲಿ ಮತ್ತಿಷ್ಟು ಬಲಪಡಿಸಿಕೊಳ್ಳುವದು ಇರುತ್ತದೆ.

ಪ್ರಸಾದದಲ್ಲಿ ಮಂತ್ರ ಮೂಲಕ ಆಹಾರ ಪದಾರ್ಥಗಳನ್ನು ತನ್ನಲ್ಲಿರುವ ಲಿಂಗಗಳಿಗೆ ಸಮರ್ಪಿಸಿ ಅವುಗಳನ್ನು ಗ್ರಹಿಸುವದು ಇರುತ್ತದೆ.

ಹೀಗೆ ಸಮರ್ಪಿಸಲ್ಪಟ್ಟ ಆಹಾರ ಪದಾರ್ಥಗಳು ಶರೀರದಲ್ಲಿ ಹೋದ ಬಳಿಕ ಅವನಲ್ಲಿ ಅವು ರಸರೂಪವಾಗಿ ಶರೀರವನ್ನು ವ್ಯಾಪಿಸಲು ಪಾದೋದಕದ ಮೂಲಕ ಆ ಮೊದಲು ಶರೀರದಲ್ಲಿದ್ದ ಮಂತ್ರ ಶಕ್ತಿಯು ಮತ್ತಷ್ಟು ದೃಢಪಡುತ್ತದೆ.

ಆದುದರಿಂದ ಪ್ರಸಾದವು ಪಾದೋದಕವಕಿಂತಲೂ ಸೂಕ್ಷ್ಮವಾದುದು ಮತ್ತು ಪರಿಣಾಮಕಾರಿಯು ಎಂದು ತಿಳಿಯಲ್ಪಟ್ಟಿದೆ.

ಈ ಕಾರಣಗಳಿಂದ ಪ್ರಸಾದದಲ್ಲಿ ಉಚ್ಛಿಷ್ಟ ಅಥವಾ ಎಂಜಲೆಂಬುದು ಇಲ್ಲ. ಅದು ಪವಿತ್ರವಾದುದು, ಶುದ್ಧವಾದುದು, ಅದು ತ್ರಿಲಿಂಗಗಳಿಗೆ ಅರ್ಪಿತವಾದುದು ಮತ್ತು ಮಂತ್ರಮಯವಾದುದು ಎಂಬ ವಿಚಾರಗಳು ಇದರಲ್ಲಿವೆ.

ಇಂಥ ಪ್ರಸಾದವನ್ನು ಸ್ವೀಕರಿಸುವಲ್ಲಿ ಜಾತಿಭೇದವಿರಲಾರದು. ಯಾವ ಜಾತಿಯವನಿದ್ದರೂ ಕೂಡ ಸಮಾನ ಭಾವದಿಂದ ಅವನೊಡನೆ ಇಂಥ ಪ್ರಸಾದವನ್ನು ಎಲ್ಲರೂ ಸ್ವೀಕರಿಸಬೇಕು. ಇಂಥ ಪ್ರಸಾದವನ್ನು ಸ್ವೀಕರಿಸುವಲ್ಲಿ ಉಚ್ಚ ನೀಚವೆಂಬ ಭಾವವಿಲ್ಲ. ಅದನ್ನು ತಳೆದಿದ್ದಾದರೆ ಅದು ಶ್ರೇಷ್ಠ ವಸ್ತುವಾದ ಮಂತ್ರದ ಅವಹೇಲನೆಯು. ಇಂಥ ವರ್ತನೆಯು ಮಂತ್ರ ಶರೀರಿಯಾದ ಲಿಂಗಾಂಗಿಯ ಆಚರಣೆಗೆ ಬಾಧಕವಾದದ್ದು.

ಪ್ರಸಾದದ ಈ ವಿಚಾರಗಳು ಬಿಟ್ಟಿ ಬಾಚಯ್ಯನನ್ನು ಪ್ರಸಾದಿಯ ಆಚರಣೆಗಳನ್ನು ಕೈಕೊಳ್ಳಲು ಪ್ರೇರೇಪಿಸಿದವು. ಅದರಂತೆ ಅವನು ತನ್ನ ಗ್ರಾಮದಲ್ಲಿ ಆಚರಿಸುತ್ತ ಬಂದನು.

ಹೀಗೆ ಕೆಲವು ದಿನಗಳಾದ ಬಳಿಕ ನೆರೆಯೂರಲ್ಲಿದ್ದ ಒಬ್ಬ ಹಿರಿಯ ಕುಲದ ಭಕ್ತನು ( ಎಂದರೆ ಒಬ್ಬ ಹೊಲೆಯನು ) ತನ್ನ ಮನೆಯಲ್ಲಿ ಒಂದು ಮಹತ್ತಾದ ಪರ್ವವನ್ನು ಮಾಡಿಸಿದನು. ಇದನ್ನು ಬಾಚಯ್ಯನು ಕೇಳಿ ಕೆಲವು ಜನ ಭಕ್ತ ಮಾಹೇಶ್ವರರನ್ನು ಕೂಡಿಕೊಂಡು ಆ ಗ್ರಾಮಕ್ಕೆ ಬಹು ಸಂಭ್ರಮದಿಂದ ಹೋದನು. ಅಲ್ಲಿಯ ಆ ಹೊಲೆಯ ಭಕ್ತನು ಅತ್ಯಂತ ಪ್ರಸಿದ್ಧನಾದ ಬಾಚಯ್ಯನು ತನ್ನ ಮನೆಗೆ ಬರುತ್ತಿರುವನೆಂಬುದನ್ನು ಕೇಳಿ ಆನಂದದಿಂದ ಅವನನ್ನು ಇದಿರ್ಗೊಂಡು ವೈಭವದಿಂದ ತನ್ನ ಮನೆಗೆ ಕರೆದುಕೊಂಡು ಬಂದನು. ಅಲ್ಲಿ ಗಣ ಪರ್ವವು ಬಹು ವಿಜೃಂಭಣೆಯಿಂದ ನಡೆದಿತ್ತು. ಅಲ್ಲಿ ಎಲ್ಲರೊಡನೆ

ಪಾದೋದಕ ಪ್ರಸಾದಗಳಾದವು. ನೆರೆದ ಭಕ್ತರೆಲ್ಲರೂ ಆ ಹಿರಿಯ ಭಕ್ತನೊಡನೆ ಪ್ರಸಾದವನ್ನು ಸ್ವೀಕರಿಸಿದರು. ಬಿಬ್ಬಿ ಬಾಚಯ್ಯನು ಈ ಗಣಪರ್ವವನ್ನು ತೀರಿಸಿದ ಬಳಿಕ ಆ ಹಿರಿಯ ಭಕ್ತನು ಕೊಟ್ಟ ಪ್ರಸಾದ ದಡಿಗೆಗಳನ್ನು ಹೆಡಿಗೆಗಳಲ್ಲಿ ತುಂಬಿಕೊಂಡು ತನ್ನ ಬಂಡಿಯ ಮೇಲೆ ಹೇರಿಕೊಂಡು ಅತ್ಯುತ್ಸವದಿಂದ ಅದನ್ನು ಗೊಬ್ಬೂರಕ್ಕೆ ತರುವವನಾದನು.

ಗ್ರಾಮದಲ್ಲಿದ್ದ ವಿಪ್ರರು ಬಾಚಯ್ಯನು ಹೀಗೆ ಒಬ್ಬ ಹೊಲೆಯನ ಮನೆಗೆ ಹೋಗಿ ಅಲ್ಲಿ ತಿಂದು ಅವನು ಮಾಡಿದ ಆಹಾರ ಪದಾರ್ಥಗಳನ್ನು ತರುತ್ತಿರುವನೆಂಬುದನ್ನು ಕೇಳಿ ಅವರೆಲ್ಲರೂ ಅಗುಸೆಯಲ್ಲಿ ಅವನನ್ನು ತರುಬಬೇಕೆಂದು ನೆರೆದರು. ಅಷ್ಟರಲ್ಲಿ ಬಿಬ್ಬಿ ಬಾಚಯ್ಯನು ಬಂಡಿ ಸಹಿತ ಅಲ್ಲಿಗೆಯೇ ಬಂದನು. ಆಗ ಬ್ರಾಹ್ಮಣರು ಅವನಿಗೆ---ನೀನು ಪಾಪಿಷ್ಠನು, ಕುಲಹೀನನು, ಹೊಲೆಯರ ಎಂಜಲವನ್ನು ತಿಂದಿರುವಿ. ನೀನು ನಮ್ಮ ಅಗ್ರಹಾರದಲ್ಲಿರಬೇಡ. ನೀನು ಪುರ ಪ್ರವೇಶ ಮಾಡದೆ ಇಲ್ಲಿಂದಲೇ ಹೊರಟುಹೋಗು ಎಂದು ನುಡಿದರು. ಅದಕ್ಕೆ ಬಾಚಯ್ಯನು---ಪ್ರಸಾದವು ಎಂದಾದರೂ ಎಂಜಲೇ? ಪ್ರಸಾದದ ಮಹಿಮೆ ನಿಮಗೆ ಗೊತ್ತಿಲ್ಲ ಎಂದು ಅನ್ನಲು ಬ್ರಾಹ್ಮಣರು ಕೆರಳಿದವರಾಗಿ---ನಾವು ನಿನ್ನನ್ನು ಊರೊಳಗೆ ಬಿಡುವದಿಲ್ಲ ಎಂದು ಅಂದು ಪ್ರಸಾದವಿದ್ದ ಆ ಬಂಡಿಯನ್ನು ಮುತ್ತಿದರು. ಬಂಡಿಗೆ ಹೂಡಿದ್ದ ಎತ್ತುಗಳನ್ನು ಉಚ್ಚಿದರು. ಮತ್ತು ಅದರಲ್ಲಿದ್ದ ಪಾತ್ರೆಗಳ ಮೇಲಿನ ಮುಚ್ಚಳುಗಳನ್ನೆಲ್ಲ ಬಿಸಾಡಿ ಒಳಗಿದ್ದ ಆಹಾರ ಪದಾರ್ಥಗಳನ್ನೆಲ್ಲ ನೆಲಕ್ಕೆ ಚಲ್ಲಿಬಿಟ್ಟರು.

ಆದರೆ ಅವರು ಚಲ್ಲಿಕೊಟ್ಟ ಈ ಪ್ರಸಾದವು ಮಂತ್ರಪೂರಿತವಾದದ್ದು. ಅದು ಧಗದ್ಧಗನೆ ಉರಿಯಹತ್ತಿತು. ಆ ಉರಿಯು ಬಂಡಿಯನ್ನು ಸುತ್ತುವರಿಯಿತು. ಅದರಿಂದ ಆ ವಿಪ್ರರು ಅಲ್ಲಿಂದ ಕಾಲ್ದೆಗೆದರು. ಇಷ್ಟೇ ಅಲ್ಲ ಅವರ ದೇಹದಲ್ಲೆಲ್ಲ ಉರುಪು ಹುಟ್ಟಿತು. ಆಗ ಅವರು 'ಅಯ್ಯೋ' 'ಅಯ್ಯೋ' ಎಂದು ಒರಲುತ್ತ ತಮ್ಮ ಮನೆಗಳ ಕಡೆಗೆ ಓಡಿ ಹೋದರು. ಆದರೆ ಅಲ್ಲಿ ಹೋಗಿ ನೋಡುತ್ತಾರೆಯೋ, ಆ ಮನೆಗಳೆಲ್ಲವೂ ಜ್ವಾಲೆಯಿಂದ ಉರಿಯಹತ್ತಿದ್ದವು. ಈ ಸ್ಥಿತಿಯಾದುದನ್ನು ನೋಡಿ ಬ್ರಾಹ್ಮಣರೆಲ್ಲರೂ ಅಂಜಿದರು. ಆಗ ಅವರು ತಿರುಗಿ ಬಿಬ್ಬಿ ಬಾಚಯ್ಯನಲ್ಲಿಗೆ ಬಂದು ಅವನಿಗೆ- ನಮ್ಮದು ಬಹಳ ತಪ್ಪಾಯಿತು. ಪ್ರಸಾದವು ಈ ರೀತಿಯದೆಂದು ನಮಗೆ ತಿಳಿಯಲಿಲ್ಲ. ನಮ್ಮನ್ನು ಕಾಯಿ ಕಾಯಿ,

ಎಂದು ಸಾಷ್ಟಾಂಗವೆರಗಿದರು. ಆಗ ಬಾಚಯ್ಯನು ಅವರಿಗೆ ಅಭಯ ವನ್ನಿತ್ತು, ಶಿವಾನುಭವವನ್ನು ಬೋಧಿಸಿ ಪ್ರಸಾದದಲ್ಲಿ ಹೀಗೆ ಮಂತ್ರ ಶಕ್ತಿ ಇರುತ್ತದೆಂಬುದನ್ನು ತಿಳಿಸಿ ಹೇಳಿ ಅವರಿಗೆ ಲಿಂಗದೀಕ್ಷೆಯನ್ನು ಮಾಡಿ ದನು. ಹೀಗಾದ ಬಳಿಕ ಅವರ ದೇಹಕ್ಕೆ ಶಾಂತಿಯುಂಟಾಯಿತು.

ಆಗ ಆ ಬ್ರಾಹ್ಮಣರೂ ಈ ಬಿಬ್ಬಿ ಬಾಚಯ್ಯನನ್ನು ನಾವು ವಿರೋ ಧಿಸಿದ್ದು ಬಹಳ ತಪ್ಪಾಯಿತು. ಪ್ರಸಾದವೇನೆಂಬುದನ್ನು ನಾವು ಈಗ ತಿಳಿದೆವು. ಅದನ್ನು ಹೀಯಾಳಿಸಿ ನುಡಿಯಬಾರದಾಗಿತ್ತು. ಜಾತಿಯಿಂದ ಹೊಲೆಯನಾದರೇನಾಯಿತು ? ಶಿವನನ್ನು ಅರ್ಚಿಸಿದಲ್ಲಿ ಅವನು ಸಹ ಶ್ರೇಷ್ಠ ಕುಲದವನಾಗುವನು. ಚನ್ನಯ್ಯ. ಮಾದಾರ ಧೂಳಯ್ಯ, ಇಂಥ ವರು ಶಿವನನ್ನು ಭಕ್ತಿಯಿಂದ ಪೂಜಿಸಿ ಕುಲಜರಾದರು, ಎಂಬುದನ್ನು ತಿಳಿದು ಅವರನ್ನು ಹೊಗಳುತ್ತ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಅವರು ತಮ್ಮ ಮನೆಗಳಿಗೆ ಹೋಗಿ ನೋಡುತ್ತಾರೆಯೋ, ಅವು ಮೊದಲಿ ನಂತೆಯೇ ಆಗಿದ್ದವು. ಹೀಗಾದುದು ಬಿಬ್ಬಿ ಬಾಚಯ್ಯನ ಮಹಿಮೆ ಎಂದು ಅವನನ್ನು ಹೊಗಳುವವರಾದರು.

ಇತ್ತ ಬಾಚಯ್ಯನು ಗೊಬ್ಬೂರಲ್ಲಿ ಪ್ರಸಾದದ ಮಹಿಮೆಯಲ್ಲಿ ಕಾಲ ಕಳೆಯುತ್ತ ನಿಜಭಕ್ತಿಪೂರಿತ ಪ್ರಸಾದವನ್ನು ಸೇವಿಸುತ್ತ, ಅದರ ಮೂಲಕ ದಾಸೋಹ ಕಾರ್ಯಗಳನ್ನು ನಡಿಸುತ್ತ ತನ್ನ ಲಿಂಗದಲ್ಲಿ ನಿರ್ವ ಯಲಾದನು.

ಶಿವಶರಣರು ತಮ್ಮ ಕಾಯಕದಿಂದ ದೊರಕಿದ್ದನ್ನು ದಾಸೋ ಹಕ್ಕೆ ಉಪಯೋಗಿಸುತ್ತಿದ್ದರೆಂದು ಅವರ ಚರಿತ್ರೆಗಳಲ್ಲಿ ಯಾವಾಗಲೂ ಉಲ್ಲೇಖಗಳು ಬರುತ್ತವೆ. ಸಾಂಪ್ರತ ಕಾಲದಲ್ಲಿ ದಾಸೋಹದ ಮಠ ಗಳೆಂದು ಕರೆಯಲ್ಪಡುವ ಅನೇಕ ಮಠಗಳು ಅಲ್ಲಲ್ಲಿ ಇವೆ. ಅಲ್ಲಿ ಮಠಾಧಿಕಾರಿಗಳು ಭಿಕ್ಷೆಯಿಂದ ಧಾನ್ಯಾದಿಗಳನ್ನು ಎತ್ತಿ ಮಠಕ್ಕೆ ಬಂದ ವರಿಗೆಲ್ಲ ಅನ್ನವನ್ನು ಪುಕ್ಕಟೆಯಾಗಿ ಹಾಕುತ್ತಾರೆ. ಇಂಥ ಮಠಗಳಿಗೆ ಭಕ್ತರು ಭಕ್ತಿಯನ್ನು ವಹಿಸಿ ಯಾವಾಗಲೂ ಧಾನ್ಯವನ್ನಾಗಲಿ ಇಲ್ಲವೆ ಸಿದ್ಧಪಡಿಸಿದ ಆಹಾರದ ಜೀನಸುಗಳನ್ನಾಗಲಿ ಭಕ್ತಿಯಿಂದ ಕಳಿಸುವ ದುಂಟು. ಬಸವೇಶ್ವರನ ಕಾಲದಲ್ಲಿ ಸಹ ಈ ಪದ್ಧತಿಯು ಇದ್ದಿತೆಂದು ತೋರುತ್ತದೆ. ಆದರೆ ಆಗಿನ ಮಠಗಳ ಉದ್ದೇಶವು ಬೇರೆಯಾಗಿದ್ದಿತು.

ಆಗಿನ ಮಠಾಧಿಕಾರಿಗಳೂ ಭಕ್ತಮಾಹೇಶ್ವರರೂ ಬಹು ಭರದಿಂದ ಎಲ್ಲ ಕಡೆಗೂ ಧರ್ಮಪ್ರಸಾರ ಕಾರ್ಯವನ್ನು ಮಾಡುತ್ತಿದ್ದ ಹಾಗೆ ತೋರಿ ಬರುತ್ತದೆ. ಆದ್ದರಿಂದ ಮಠಾಧಿಪತಿಗಳು ತಮ್ಮ ಮಠಗಳಿಗೆ ಬಂದವರಿಗೆ ಶಿವಾನುಭವವನ್ನು ಬೋಧಿಸುವ ಕಾರ್ಯವನ್ನಲ್ಲದೆ ತಮ್ಮ ಶಿಷ್ಯರ ಮೂಲಕವಾಗಲಿ ಇಲ್ಲವೆ ತಾವಾಗಲಿ ಗ್ರಾಮಗಳಲ್ಲಿ ಸಂಚರಿಸಿ ವೀರಶೈವ ಧರ್ಮದ ಉಪದೇಶ ಮಾಡುತ್ತಾ ಇದ್ದರು.

ಇಂಥ ಮಠಾಧಿಕಾರಿಗಳಿಗೆ ಈ ಕಾರ್ಯದಲ್ಲಿ ಬೇಕಾಗುವ ಖರ್ಚು ವೆಚ್ಚಕ್ಕೋಸ್ಕರ ಮತ್ತು ಅವರಲ್ಲಿ ಶಿವಾನುಭವವನ್ನು ತಿಳಿಯಲು ಬಂದಂಥ ಭಕ್ತರ ಮತ್ತು ಶಿಷ್ಯರ ಉಪಜೀವನಕ್ಕೋಸ್ಕರ ಗ್ರಾಮಗಳಲ್ಲಿರುವ ಭಕ್ತಾದಿಗಳು ತಮ್ಮಲ್ಲಿ ಸಿದ್ಧವಾದ ಆಹಾರಪದಾರ್ಥಗಳನ್ನು ಈ ಮಠಾಧಿಕಾರಿಗಳಿಗೆ ದಿನಾಲು ಕಳಿಸಿಕೊಡುವ ರೂಢಿ ಇದ್ದಿತು. ಇಲ್ಲವೇ ಮಠಾಧಿಕಾರಿಗಳು ತಾವೇ ಗ್ರಾಮದಲ್ಲಿ 'ಧರ್ಮ ಕೋರಾನ್ನ'ದ ಭಿಕ್ಷೆ ಮಾಡುವರು. ಅಂದರೆ 'ಧರ್ಮಕಾರ್ಯಕ್ಕಾಗಿ ಕೋರಲ್ಪಟ್ಟ ಅನ್ನ' ಎಂಬ ಭಾವವು ಈ 'ಧರ್ಮ ಕೋರಾನ್ನ' ಎಂಬ ಶಬ್ದದಲ್ಲಿದೆ. ಇದಕ್ಕೆ 'ದಾಸೋಹದ ಅನ್ನ' ಅಥವಾ ಜನರಾಡುವ ಭಾಷೆಯಲ್ಲಿ 'ದಾಸೋಗದ ಅನ್ನ' ಎಂಬ ಹೆಸರು ಇದೆ ಹಿಂದಿನ ಕಾಲದಲ್ಲಿ ಶಿವಶರಣರು ಯಾರಿದ್ದರೂ ಕೂಡ ಅವರು ತಮ್ಮ ತಮ್ಮ ಕಾಯಕಗಳನ್ನು ಮಾಡುತ್ತ ಅದರಲ್ಲಿ ತಮಗೆ ಉಳಿದುದನ್ನು ದಾಸೋಹಕ್ಕೆ ಅರ್ಪಿಸುತ್ತಿದ್ದರೆಂದು ಅವರ ಚರಿತ್ರೆಗಳಲ್ಲಿ ಯಾವಾಗಲೂ ಹೇಳಲ್ಪಡುವದುಂಟು. ಹೀಗೆ ಅವರು ಅರ್ಪಿಸುತ್ತಿದ್ದುದು ಮೇಲೆ ವಿವರಿಸಿದಂತೆ ಧರ್ಮಪ್ರಸಾರ ಕಾರ್ಯಕ್ಕೋಸ್ಕರವೇ ಆಗ ಉಪಯೋಗವಾಗುತ್ತಿದ್ದುದು ಸ್ಪಷ್ಟವಿದೆ.

ಬಿಬ್ಬಿ ಬಾಚಯ್ಯನು ಸುತ್ತಲಿನ ಗ್ರಾಮಗಳಿಗೆ ಹೋಗಿ ಭಕ್ತರು ಕೊಟ್ಟ ಪ್ರಸಾದ ಅಥವಾ ಆಹಾರಪದಾರ್ಥಗಳನ್ನು ಸಂಗ್ರಹಿಸುತ್ತ ದಾಸೋಹ ಕಾರ್ಯಗಳನ್ನು ನಡಿಸುತ್ತಿದ್ದುದು ಅವನ ಚರಿತ್ರೆಯಲ್ಲಿ ಹೇಳಿದೆ. ಅವನ ಹೀಗೆ ಕೂಡಿಸುತ್ತಿದ್ದ ಅನ್ನವು ಕೇವಲ ತನ್ನ ಉಪಜೀವನಕ್ಕೋಸ್ಕರವಾಗಿರದೆ, ಅದು ದಾಸೋಹ ಕಾರ್ಯಕ್ಕೆ ಅಂದರೆ ಧರ್ಮಾಭಿವೃದ್ಧಿಯ ಕಾರ್ಯಕ್ಕೆಂದು ನಾವು ತಿಳಿಯಬೇಕು. ಹೀಗೆ ಅನ್ನವನ್ನು ಕೂಡಿಸುವದನ್ನೇ ತನ್ನ ಕಾಯಕವನ್ನಾಗಿ ಅವನು ಇಟ್ಟುಕೊಂಡನು.

ಸಿದ್ಧವಾದ ಅನ್ನವನ್ನು ಲಿಂಗ ಮತ್ತು ಜಂಗಮರಿಗೆ ಅರ್ಪಿಸಿ ಅದು ಪ್ರಸಾದರೂಪವಾದ ಬಳಿಕ ಅದರಲ್ಲಿ ಒಂದಗಳು ಸಹ ಬಿಡದೆ ಗ್ರಹಿಸಬೇಕೆಂಬ ನಿಯಮವಿದೆ. ಅದನ್ನು ಯಾರೂ ಹೊರಗೆ ಚಲ್ಲಬಾರದು ಅಥವಾ ಭಿಕ್ಷೆಯಾಗಿ ಅದನ್ನು ಯಾರಿಗೂ ಕೊಡಲು ಸಹ ಬರಲಾರದು. ಬಿಬ್ಬಿಬಾಚಯ್ಯನು ಸಂಗ್ರಹಿಸುತ್ತಿದ್ದ ಅನ್ನವು ಪ್ರಸಾದವೆನ್ನಿಸಿಕೊಳ್ಳುವ ಇಂಥ ಆಹಾರ ಪದಾರ್ಥವಿರಲಾರದು. ಆದರೆ ವೀರಶೈವರ ಗೃಹದಲ್ಲಿ ಅನ್ನವು ಸಿದ್ಧವಾದ ಬಳಿಕ ಅನ್ನದ ಪಾತ್ರೆಗೆ 'ವಿಭೂತಿ ಪಟ್ಟ' ವನ್ನು ಬರೆಯುವ ಪದ್ಧತಿ ಇದೆ. ಇಂಥ ಆಹಾರವನ್ನು ಮಾತ್ರ ಬಿಬಿಬಾಚಯ್ಯನು ಕೂಡಿಸುವ ಕಟ್ಟನ್ನು ಮಾಡಿಕೊಂಡಿದ್ದನೆಂದು ತೋರುತ್ತದೆ. ಇಂಥ ಆಹಾರವು ವೀರಶೈವರಿಗೆ ಭಿಕ್ಷೆಗಾಗಿ ಸಲ್ಲುತ್ತಿದೆ. ಆದರೆ ಇದು ವಿಧಿವಿಧಾನಗಳಿಂದ ಪ್ರಸಾದವಾದ ಬಳಿಕ ಅದನ್ನು ಪ್ರಸಾದ ಮಾಡಿಕೊಂಡವನೇ ಭುಂಜಿಸತಕ್ಕದ್ದು. ಅದನ್ನು ಇತರರಿಗೆ ಕೊಡಲಿಕ್ಕೆ ಬರಲಾರದು. ಇಂಥದನ್ನು ಬಾಚಯ್ಯನು ಬಂಡಿಯಲ್ಲಿ ಸಂಗ್ರಹಿಸಿಕೊಂಡು ಬೇರೆ ಕಡೆಗೆ ಒಯ್ಯುವದು ಶಕ್ಯವಲ್ಲ.

ಈ ಕಾಲದಲ್ಲಿ ಗೊಬ್ಬೂರು ಬ್ರಾಹ್ಮಣರಿಗೆ ಹೇಗೆ ಮುಖ್ಯ ಸ್ಥಾನವಾಗಿತ್ತೋ ಹಾಗೆಯೇ ವೀರಶೈವರಿಗೂ ಮುಖ್ಯ ಸ್ಥಾನವಾಗಿತ್ತು. ಅಲ್ಲಿ ಶಿವಾನುಭವ ಗೋಷ್ಠಿಗಳು ವಿಶೇಷವಾಗಿ ಯಾವಾಗಲೂ ನಡಿಯುತ್ತಿದ್ದದರಿಂದ ಅಲ್ಲಿ ನೆರೆಯುತ್ತಿದ್ದ ಭಕ್ತಮಾಹೇಶ್ವರರ ಸಲುವಾಗಿ ಬಿಬ್ಬಿಬಾಚಯ್ಯನು ಆಹಾರ ದ್ರವ್ಯ ಅಥವಾ ರೂಢಿಯ ಶಬ್ದದಲ್ಲಿ ಪ್ರಸಾದವನ್ನು ಸಂಗ್ರಹಿಸುವ ಕಾರ್ಯವನ್ನು ಕೈಕೊಂಡಿರಬೇಕು. ಇದು ಅವನ ಹೆಚ್ಚಿನ ತರದ ಉಪಯುಕ್ತ ಕಾಯಕವೆಂದು ನಾವು ತಿಳಿಯಬೇಕು. ಅವನು ಮುಸುರಿಯನ್ನು ಸಂಗ್ರಹಿಸುತ್ತಿದ್ದನೆಂದು ಅವನನ್ನು ಅವಹೇಲನೆ ಮಾಡುವದು ಸರಿಯಾಗಲಾರದು.

ಕಲ್ಯಾಣ ಪಟ್ಟಣದಲ್ಲಿಯೂ ಯಾವಾಗಲೂ ಶಿವಾನುಭವ ಗೋಷ್ಠಿಗಳು ನಡಿಯುತ್ತಿದ್ದವು. ಆದ್ದರಿಂದ ಅಲ್ಲಿ ಸ್ವಾಭಾವಿಕವಾಗಿ ಬಹುಜನ ಶರಣರು ನೆರೆಯುತ್ತಿದ್ದರು. ಅವರಿಗೋಸ್ಕರ ಅನೇಕ ಶಿವಶರಣರು ಇದೇ ತರದ ಕಾಯಕವನ್ನು ಅಲ್ಲಿ ಕೈಕೊಂಡಿದ್ದು ಕಂಡುಬರುತ್ತಿದೆ.

ಹೀಗೆ ಕೂಡಿಸಲ್ಪಟ್ಟ ಆಹಾರವು ಉಚ್ಛಿಷ್ಟ ಅಥವಾ ಪ್ರಸಾದ ಎಂದು ತಿಳಿಯಲಿಕ್ಕೆ ಬರಲಾರದು. ಈ ಆಹಾರದ ಉಪಯೋಗವು ಧರ್ಮ ಪ್ರಸಾರದ ಶ್ರೇಷ್ಠ ಕಾರ್ಯಕ್ಕೆ ಆಗ ಉಪಯೋಗವಾಗುತ್ತಿತ್ತು.

ಬಿಬ್ಬಿಬಾಚಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಹಿಂದಿನ ಕಾಲದವನು. ಆದರೆ ಬಸವೇಶ್ವರನಕಿಂತಲೂ ಸ್ವಲ್ಪ ಈಚಿನವನಾಗಿರಬೇಕು. ಅವನು ಇದ್ದ ಗೊಬ್ಬೂರಲ್ಲಿ ಈಗಲೂ ಅನೇಕ ಪುರಾತನ ದೇವಾಲಯುಗಳೂ ಶಿಲಾಶಾಸನಗಳೂ ಇರುತ್ತವೆ.

ಬಿಬ್ಬಿಬಾಚಯ್ಯನು ದೊಡ್ಡ ವಿದ್ವಾಂಸನು. ಅವನು ವಚನಕಾರನಿದ್ದಾನೆ. 'ಏಣಾಂಕಧರ ಸೋಮೇಶ್ವರಾ' ಎಂಬುದು ಅವನ ಮುದ್ರಿಕೆಯಾಗಿದೆ. ಅವನ ೪೦ ವಚನಗಳು ಮಾತ್ರ ನಮ್ಮಲ್ಲಿ ಉಪಲಬ್ಧವಿವೆ. ಅವುಗಳಲ್ಲಿ ಬಹು ಆಳವಾದ ವಿಚಾರಗಳಿರುತ್ತವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಮಾದರಿಗಾಗಿ ಇಲ್ಲಿ ಉದಹರಿಸುತ್ತೇವೆ.

## ವಚನಗಳು.

ಕೆಳಗಿನ ವಚನಗಳಲ್ಲಿ ಪ್ರಸಾದದ ಸ್ವರೂಪನ್ನು ಬಿಬ್ಬಿ ಬಾಚಯ್ಯನು ಬಹು ಸರಸಾಗಿ ವಿವರಿಸಿದ್ದಾನೆ. ಅವನು ಹೇಳುವದೇನಂದರೆ––

(೧) ಹೊಲಬು ಹೊಲಬನೇ ಕಂಡು, ಶಿಲೆ ಕುಲವಳಿದು, ಉದಕ ಗುಣ ಮಜ್ಜನದಲ್ಲಿಂಗಿ, ಅನ್ನಗುಣ ಅರ್ಪಿತದಲ್ಲಿ ಹೊಯಿತ್ತಯ್ಯ ನಿತ್ಯ ಪ್ರಸಾದವೆನಗಾಯಿತ್ತು. ಆ ಪ್ರಸಾದದಲ್ಲಿ ಎನಗೆ ಏಕವಾಯಿತ್ತಯ್ಯಾ ಏಣಾಂಕಧರ ಸೋಮೇಶ್ವರಾ.

ಭಾವಃ – ಪರಮಾತ್ಮನಿಗೆ ಆಹಾರವು ಅರ್ಪಿತವಾದ ಕೂಡಲೆ, ಆಹಾರದ ಗುಣವು ಹೋಗಿಬಿಡುತ್ತದೆ. ಅದು ಪವಿತ್ರವಾಗುತ್ತದೆಂಬ ಭಾವವು ಇದರಲ್ಲಿದೆ. ಉದಾಹರಣಾರ್ಥವಾಗಿ ಅದು ಹೊಲೆಯರ ಮನೆಯಲ್ಲಿ ಸಿದ್ಧವಾಗಿದ್ದರೂ ಕೂಡ ಅದು ಅರ್ಪಿತವಾದ ಬಳಿಕ ಅದರ ಹೊಲೆತನವು ಹೋಗಿ ಅದು ಶುದ್ಧವಾಗುತ್ತದೆ. ಆದ್ದರಿಂದ ಅದನ್ನು ಸ್ವೀಕರಿಸಲಿಕ್ಕೆ ಯೋಗ್ಯವಾದುದು. ಇದರ ಬಗ್ಗೆ ಅವನು ಕೆಲವು ಉದಾ

ಹರಣಗಳನ್ನು ಕೊಟ್ಟಿದ್ದಾನೆ. ಶಿಲೆಯ ಗುಣವು ಹೋಗಿ ಅದು ಲಿಂಗವಾಗುತ್ತದೆ. ನೀರಿನ ಗುಣವು ಹೋಗಿ ಅದು ತೀರ್ಥವಾಗುತ್ತದೆ. ಲಿಂಗವೂ ತೀರ್ಥವೂ ಹೇಗೆ ಪವಿತ್ರವಾದವುಗಳೋ ಹಾಗೆಯೇ ಪ್ರಸಾದವೂ ಪವಿತ್ರವಾದುದು. ಅಂಥ ಪ್ರಸಾದವನ್ನು ನಾನು ಸ್ವೀಕರಿಸಿ ನಾನೂ ಪವಿತ್ರನಾಗಿ ಅದರಲ್ಲಿ ನಾನು ಸಾಮರಸ್ಯವನ್ನು ಹೊಂದುತ್ತೇನೆಂದು ಬಹು ಸ್ವಾರಸ್ಯವಾಗಿ ಇಲ್ಲಿ ಹೇಳಿದ್ದಾನೆ.

(೨) ಲಿಂಗವೆಂದು ಹಿಂಗಿ ಭಾವಿಸುವಾಗ ಅರಿವು ಲಿಂಗಕ್ಕೆ ಹೊರಗೇ? ಆ ಲಿಂಗ ಚಿತ್ತದ ಕೈಯ್ಯಲ್ಲಿ ಪ್ರಮಾಣಿಸಿಕೊಂಬಾಗ, ಅಣೋರಣೀಯಾನ್, ಮಹತೋ ಮಹೀಯಾನ್ ಎಂದು ಪ್ರಮಾಣಿಸಿಕೊಂಬುದು ಪುಸಿಯೇ? ತೊರೆಯುದಕ ಮಳಲು ಮರೆಯಲ್ಲಿ ಬಂದು ಸಂದೇಹ ಬಿಡಿಸುವಂತೆ ಎಲ್ಲಿಯೂ ನೀನೇ ಏಣಾಂಕಧರ ಸೋಮೇಶ್ವರ ಲಿಂಗವೇ.

(೩) ಅಗ್ನಿ ಲೋಹದಂತೆ, ಫಲ ರಸದಂತೆ, ಕಾಯ ಜೀವದ ಪರಿಯಂತೆ, ಅಂಗ ನೆಳಲಿನಂತೆ, ಅಂಗಲಿಂಗ ಸಂಬಂಧವಾಗಬೇಕು ಏಣಾಂಕಧರ ಸೋಮೇಶ್ವರ ಲಿಂಗದಲ್ಲಿ.

(೪) ಫಲ ತರುವಿನಂತೆ, ತಿಲ ಸಾರದಂತೆ, ಮಧುರ ದಂಡದಂತೆ ಶರಧಿಯಲ್ಲಿರುವಲಘುವಿನಂತೆ ಭಿನ್ನ ಭಾವವಿಲ್ಲದಿರಬೇಕು. ಅಂಗಲಿಂಗ ಸಂಬಂಧ ಏಣಾಂಕಧರ ಸೋಮೇಶ್ವರ ಲಿಂಗದಲ್ಲಿ.

(೫) ಹುತ್ತದೊಳಗಣ ಹಾವ, ಮಡುವಿನೊಳಗಣ ಮತ್ಸ್ಯವ, ಮಹಾಕಾನನದ ವಾನರವ ಹಿಡಿವ ಪರಿ ಇನ್ನೆಂತೋ? ಹುತ್ತವನಗಿದು, ಮಡುವ ಹೂಳಿ, ಕಾನನವ ತರಿದು ಇಂತಿವ ಹಿಡಿಯಬೇಕು. ಸಕಲೇಂದ್ರಿಯಂಗಳೊಳಗಿರ್ದ ವಸ್ತುವನರಿದೆನೆಂಬ ಮಿಟ್ಟಿಯ ಭಂಡರನೊಪ್ಪ ಏಣಾಂಕಧರ ಸೋಮೇಶ್ವರ ಲಿಂಗವು.

(೬) ವಾಯು ಬಯಲೆಂದಡೆ ತರುಗಿರಿಗಳೊದರುವ ಪರಿ ಇನ್ನೆಂತು? ನಾದ ಬಯಲೆಂದರೆ ಶಬ್ದಂಗಳು ತೋರುವ ಪರಿ ಇನ್ನೆಂತು? ತನ್ಮಯವೆಲ್ಲವು ರೂಪು, ಏಣಾಂಕಧರ ಸೋಮೇಶ್ವರ ಲಿಂಗವು ಸ್ವರೂಪನಾಗಿ ಜಗದಲ್ಲಿಹನ್ನಬರ.

ಮೇಲೆ ೨ನೇ ವಚನದಲ್ಲಿ ಪರಮಾತ್ಮನು ಜಗತ್ತಿನಲ್ಲಿ ಹೇಗೆ ವಾಸಿಸುತ್ತಾನೆಂಬುದನ್ನೂ ೫ನೇ ವಚನದಲ್ಲಿ ಲಿಂಗವನ್ನು ಸಾಧಿಸುವದು ಎಷ್ಟು ಕಷ್ಟವಿರುತ್ತದೆಂಬದನ್ನೂ ೬ನೇ ವಚನದಲ್ಲಿ ಪರಮಾತ್ಮನು ತನ್ನಲ್ಲಿ ಹೇಗೆ ಉದಯಿಸುತ್ತಾನೆ ಎಂಬುದನ್ನೂ ವಿವರಿಸಿದ್ದಾನೆ. ಅವೆಲ್ಲವೂ ಅರ್ಥಪೂರ್ಣವಾಗಿದೆ. ಈತನವು ಅನೇಕ ಒಡಪಿನ ವಚನಗಳಿವೆ. ಅವೆಲ್ಲವೂ ಹೀಗೆಯೇ ಇರುತ್ತವೆ.

---

## ಸಗರದ ಬ್ರಹ್ಮಯ್ಯ.

ವಿಜಾಪುರ ಜಿಲ್ಲಾ ಸಿಂದಿಗಿ ತಾಲೂಕಿನ ಮೇರೆಯಿಂದ ಪೂರ್ವಕ್ಕೆ ೩೦ ಮೈಲುಗಳ ಮೇಲೆ ಸಗರವೆಂಬ ಗ್ರಾಮವಿದೆ. ಇದು ಸುರಪುರದ ಉತ್ತರಕ್ಕೆ ೧೨ ಮೈಲುಗಳ ಮೇಲಿದೆ. ಇದು ಈಗ ಕಲಬುರ್ಗಿ ಜಿಲ್ಲೆಯು. ಈ ಗ್ರಾಮದಲ್ಲಿ ಬ್ರಹ್ಮಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಶಿವದೇವಿಯು. ಉಭಯತರು ಶಿವಾಚಾರದಲ್ಲಿ ನಿರತರು, ಶಿವಾನುಭವಿಗಳು. ಅಷ್ಟಾವರಣ ಪಂಚಾಚಾರಗಳ ರೀತಿಯನ್ನು ಚನ್ನಾಗಿ ತಿಳಿದವರು. ಬ್ರಹ್ಮಯ್ಯನು ಪಂಚಾಕ್ಷರೀ ಮಂತ್ರವನ್ನು ಚನ್ನಾಗಿ ಬಲ್ಲವನಾಗಿ ಪಾದೋದಕ ಪ್ರಸಾದ ಜೀವಿಯಾಗಿರುತ್ತಿದ್ದನು. ಆವನು ತನಗಾಗಿ ಇಟ್ಟುಕೊಂಡ ಆಚಾರಗಳಾವವೆಂದರೆ— ಲೌಕಿಕಾಚಾರದಂತೆ ನಡಿಯುವದಿಲ್ಲ ಮತ್ತು ನುಡಿಯುವದಿಲ್ಲ. ಪಂಚಾಕ್ಷರೀ ಮಂತ್ರವೇ ನನಗೆ ಆಧಾರವು. ಅದರ ಸಾಮರ್ಥ್ಯದಿಂದ ನಾನು ಅಷ್ಟೋತ್ತರ ಶತವ್ಯಾಧಿಗಳನ್ನು ದೂರಮಾಡುತ್ತೇನೆ. ಒಂದು ವೇಳೆ ವ್ಯಾಧಿಗಳು ಬಂದರೆ ನನಗೆ ಪಾದೋದಕ ಪ್ರಸಾದವೇ ವೈದ್ಯ. ನನಗೆ ಶಿವನೊಬ್ಬನೇ ದೈವವು. ಅವನೊಬ್ಬನನ್ನೇ ನಂಬುವೆನು. ಹೀಗೆ ನೇಮಗಳನ್ನು ಇಟ್ಟುಕೊಂಡು ಅವುಗಳಂತೆ ಆಚರಿಸುತ್ತಾ ಇದರ ಗುರುತಿಗಾಗಿ ಒಂದು ಬಿರುದನ್ನು ಕಟ್ಟಿಕೊಂಡಿದ್ದನು.

ಬ್ರಹ್ಮಯ್ಯನಿದ್ದ ಈ ಗ್ರಾಮದಲ್ಲಿ ಅನೇಕ ಜೈನರು ವಾಸಮಾಡಿಕೊಂಡಿದ್ದರು. ಆವರು ಜಿನನೇ ದೈವವೆಂದು ವಾದಿಸುವರು. ಆದಕ್ಕೆ ಬ್ರಹ್ಮಯ್ಯನು ಜಿನನೆಂಬುದು ಸುಳ್ಳು. ಭರ್ಗನೇ ದೈವ. ಏಕೋ ದೇವನು.

ಶಿವನೇ ದೇವನೆಂದು ಪ್ರತಿಷ್ಠಿಸಿ ನುಡಿಯುವನು. ಒಂದು ದಿನ ಇವಕ್ಕೆ ಜೈನರು ಅವನಿಗೆ–ನೀನೆನ್ನುವದಕ್ಕೆ ಒಂದು ದೃಷ್ಟಾಂತವನ್ನು ತೋರಿಸಿ ದಲ್ಲಿ ನಾವು ನೀನನ್ನುವದನ್ನು ಒಪ್ಪಿಕೊಳ್ಳುತ್ತೇವೆ ಎಂದೆನ್ನಲು ಬ್ರಹ್ಮ ಯ್ಯನು ಹಾಗೇ ಆಗಲೆಂದು ಹೇಳಿ ಒಂದು ಉಕ್ಕಿನ ಗಟ್ಟಿಯನ್ನು ಕೆಂಪಗೆ ಕಾಸಿ ಕೊಪ್ಪರಿಗೆಯಲ್ಲಿ ಎಣ್ಣೆ ಕುದಿಯುತ್ತಿರಲು ಅದನ್ನು ಅವ ರಲ್ಲಿ ಎದ್ದಿ ಕರದಿಂದ ಅದನ್ನು ಹಿಡಿದು ಜೈನರ ಮುಂದೆ ತೆಗೆದಿಟ್ಟನು. ಹೀಗೆ ಮಾಡಿದರೂ ಅವನ ಕಯ್ಯಿಗೆ ಏನೂ ಅಪಾಯವಾಗಿರಲಿಲ್ಲ. ಅಗ ಅವನು ಜೈನರಿಗೆ––ಈ ರೀತಿ ನೀವು ಮಾಡಿ ತೋರಿಸಿದರೆ ನಿಮ್ಮ ಜಿನನೇ ನಿಜವು ಎಂದು ಒಪ್ಪುತ್ತೇನೆ, ಎಂದು ಅನ್ನಲು ಅವರು ಬೆದರಿ ಓಡಿಹೋದರು. ಬಳಿಕ ಬ್ರಹ್ಮಯ್ಯನು ಶಿವನಲ್ಲದೆ ಬೇರೆ ದೈವವಿಲ್ಲೆಂದು ಧ್ವಜವನ್ನೆತ್ತಿ ಪಟ್ಟಣದ ಬೀದಿಗಳಲ್ಲಿ ಮೆರಿಸುತ್ತ ಡಂಗುರವ ಸಾರಲ, ಜೈನರು ಅದನ್ನು ತರಹರಿಸಿದೆ ಗುಂಪುಗಟ್ಟಿ ಭಕ್ತರ ಮೇಲೇರಿ ಬಂದರು. ಆಗ ಉಭಯ ಪಕ್ಷಗಳಲ್ಲಿ ಕಾದಾಟಗಳಾದವು. ಅವುಗಳಲ್ಲಿ ಜೈನರು ಸೋತು ಓಡಿಹೋದರು ಮತ್ತು ಅವರಲ್ಲನೇಕರು ಹತರಾದರು.

ಹೀಗಾಗಲು ಮತ್ತೊಂದು ದಿವಸ ಬ್ರಮ್ಮಯ್ಯನಿಗೆ ತಲೆನೋವಾ ಯಿತು. ಅದರಿಂದ ಅವನು ಬಹಳ ಬಳಲಿ ಅದನ್ನು ದೂರಮಾ ಡುವದಕ್ಕೋಸ್ಕರ ಒಂದು ಚಿಮ್ಮಟಿಗೆಯಲ್ಲಿ ಕೆಂಡವನ್ನು ಹಿಡಿದು ಅದ ರಿಂದ ಅವನು ತನ್ನ ಶಿರವನ್ನು ಕಾಯಿಸಿಕೊಳ್ಳುಹತ್ತಿದನು. ಅದನ್ನು ಅವನ ಹೆಂಡತಿಯಾದ ಶಿವದೇವಿಯು ನೋಡಿ ಅವನಿಗೆ––ನಿಮ್ಮ ಬಿರುದು ಈಗ ಎಲ್ಲಿ ಹೋಯಿತು? ಬೇನೆ ಬಂದರೆ ಪ್ರಸಾದವೇ ಮದ್ದೆಂದು ನೀವು ಭಾವಿಸಿದ್ದೇನಾಯಿತು? ನಿಮಗೆ ಈ ಕಿಚ್ಚೇ ವೈದ್ಯನಾಗಲಿಲ್ಲವೇ? ಎಂದು ವಿಡಂಬಿಸಿ ನುಡಿದಳು. ಅದನ್ನು ಬ್ರಹ್ಮಯ್ಯನು ಕೇಳಿ––ಆಹಾ, ನೀನು ಹೇಳಿದ್ದು ಒಳಿತಾಯಿತು. ನಿಜವಾಗಿ ನನ್ನ ಭಾಷೆಗೆ ತಪ್ಪಿದೆನು. ನನ್ನ ಆಚರಣೆ ಈಗ ಹಿಂಗಿತ್ತು ಎಂದು ನುಡಿದು ನನ್ನ ತಲೆ ನೋವಾದುದಕ್ಕೆ ನನ್ನ ಪಂಚಾಕ್ಷರೀ ಮಂತ್ರ ಜಪದಲ್ಲಿ ಏನೋ ಒಂದು ಕುಂದುಂಟಾಗಿ ರಬೇಕು, ನನ್ನ ಅರ್ಪಿತವೂ ಪ್ರಸಾದವೂ ತಪ್ಪಿರಬೇಕು, ಎಂದು ನುಡಿದು ತನ್ನ ಮಂತ್ರ ಜಪವನ್ನು ಸರಿಪಡಿಸಿಕೊಂಡು ತನ್ನ ತಲೆನೋವನ್ನು ಹೋಗಲಾಡಿಸಿಕೊಂಡನು.

ಈ ಪ್ರಕಾರ ಸಗರದ ಬ್ರಹ್ಮಯ್ಯನು ತನ್ನ ಭಕ್ತಿ ಕ್ರಿಯೆಗಳಿಂದ ಆಚರಿಸುತ್ತ ತನ್ನ ಇಷ್ಟಲಿಂಗದಲ್ಲಿ ಬಯಲಾದನು. ಅವನು ಶಿವಶರಣರಲ್ಲಿ ಬಹು ಪ್ರಸಿದ್ಧನಾಗಿದ್ದಾನೆ. ಅವನ ಹೆಸರು ಗಣಸಹಸ್ರದಲ್ಲದೆ.

ಸಗರದ ಬ್ರಹ್ಮಯ್ಯನು ವಚನಕಾರನಿದ್ದಾನೆ. ಅವನ ಮುದ್ರಿಕೆಯು 'ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ' ಎಂದಿದೆ. ಅವನ ೫೨ ವಚನಗಳು ಮಾತ್ರ ನಮಗೆ ಉಪಲಬ್ಧವಿವೆ. ವಚನಕಾರರು ತಮ್ಮ ವಚನಗಳನ್ನು ಬಹುವಿಧವಾಗಿ ರಚಿಸಿದ್ದಾರೆ. ಕೆಲವರ ವಚನಗಳು ಮೃದು, ಕೆಲವರವು ಗೂಢ ವಿಚಾರವುಳ್ಳವು, ಕೆಲವರವು ಕಠೋರವಾದವುಗಳು, ಹೀಗೆ ಅನೇಕ ರೀತಿಯಾಗಿ ವಚನಕಾರರು ಬೋಧಿಸಿದ್ದಾರೆ. ಸಗರದ ಬೊಮ್ಮನ ಭಾಷೆಯು ಬಹು ಲಲಿತವಾದುದು, ಮಧುರವಾದುದು. ಆದರೂ ಅವು ಬಹು ಆಳವಾದ ವಿಚಾರಗಳುಳ್ಳವು. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಮಾದರಿಗಾಗಿ ಇಲ್ಲಿ ಉದಹರಿಸಿದ್ದೇವೆ.

## ವಚನಗಳು.

(೧) ಕಂಗಳ ಸೂತಕ ಹೋಯಿತ್ತು ನಿಮ್ಮ ದರ್ಶನದಿಂದ. ಎನ್ನ ಮನದ ಸೂತಕ ಹೋಯಿತ್ತು ನಿಮ್ಮ ನೆನಹು ವೇಧಿಸಿ. ಸಕಲ ಸೋಂಕಿನ ಭ್ರಾಂತುಸೂತಕವಳಿಯಿತ್ತು ನಿಮ್ಮ ಹಿಂಗದ ಅರಿಕೆಯಲ್ಲಿ. ಇಂತೀ ನಾನಾ ವಿಧದ ಭೇದೋಪಭೇದಂಗಳೆಲ್ಲವು ನಿಮ್ಮ ಕಾರುಣ್ಯ ಪ್ರಸಾದದಿಂದ ಲಯವಾದವಯ್ಯ, ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ.

(೨) ಕಣ್ಣಿನ ಬಾವಿಯಲ್ಲಿ ಕಾಣದ ಕಣ್ಣಿಯ ಬಿಟ್ಟು, ಮಹೀತಳವ ನೆಮ್ಮ ಪಾತಾಳಕ್ಕೆ ಬಿಡಲು ಆಚಾರದುದಕ ಬಂದು ತುಂಬಿತ್ತು. ಸಗರದ ಬೊಮ್ಮನೊಡೆಯ ತನು ಮನ ಸಂಗದಲ್ಲಿ ಎನ್ನ ಪ್ರಾಣಲಿಂಗಕ್ಕೆ ಮಜ್ಜನವಾಯಿತ್ತು.

ಭಾವ:—ಇಲ್ಲಿ ವಚನಕಾರನು ಇಷ್ಟಲಿಂಗದಿಂದ ಪ್ರಾಣಲಿಂಗವನ್ನು ಹೇಗೆ ಕಾಣಬೇಕೆಂಬುದನ್ನು ಸ್ವಾರಸ್ಯ ಪೂರ್ಣವಾಗಿ ವಿವರಿಸಿದ್ದಾನೆ.

(೩) ಕಾಯಗುಣದಲ್ಲಿದ್ದು ಕರಣಂಗಳಂತಾಡದಿರ್ದಡೆ ಕಾಯದ ಸಂಗವೇ ಲೇಸು. ಇಂದ್ರಿಯಂಗಳ ಸಂಸರ್ಗದಲ್ಲಿರ್ದು ಮುಟ್ಟುವ

ಸಂಗವ ಬಲ್ಲಡೆ ಆ ಗುಣದಲ್ಲಿದ್ದು ಅರಿವುದೇ ಲೇಸು. ತನ್ನ ಸಾವಸರಿ ದಡೆ ಸಾವೇ ಲೇಸು. ಸಗರದ ಬೊಮ್ಮನೊಡೆಯ ತನು ಮನ ಸಂಗ ಮೇಶ್ವರ ಲಿಂಗವು ಕೂಡಿ ಕೂಟವಾದ ಮೇಲೆ.

(೪) ತನುವಿನೊಳಗಣ ತನುವಿನಲ್ಲಿ ಕೂಡಿದವನಾರೋ? ಮನ ದೊಳಗಣ ನೆನಹಿನಲ್ಲಿ ನೆನಹಿಸಿಕೊಂಡವನಾರೋ? ಬಾಯೊಳಗಣ ಬಾಯಲ್ಲಿ ಉಂಬುವನಾರೋ? ಕಣ್ಣಿನೊಳಗಣ ಕಣ್ಣಿನಲ್ಲಿ ನೋಡುವ ನಾರೋ? ನಾನೆಂಬುದೇನು ಹೇಳಾ ಸಗರದ ಬೊಮ್ಮನೊಡೆಯ ತನು ಮನ ಸಂಗಮೇಶ್ವರಾ ?

(೫) ಮನೆ ಬೇಕಾದರೆ ಮನೆ ಸುಡು. ಮಣ್ಣು ಬೇಕಾದರೆ ಒಲ್ಲದಿರು. ಹೊನ್ನು ಬೇಕಾದರೆ ಹಿಡಿಯದಿರು. ಹೆಣ್ಣು ಬೇಕಾದರೆ ಕೂಡದಿರು. ಹಸಿವೆ ಇಲ್ಲದಿರೆ ಉಣ್ಣು. ಈ ಹುಸಿಯ ದಿಟ ಮಾಡು ನಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರ ಲಿಂಗವನರಿಯ ಬಲ್ಲಡೆ.

(೬) ಸಕಲಾಗಮಂಗಳ ಕಲಿತು ಸರ್ವರಿಗೆ ಹೇಳಿ ತಾನೇ ಕರು ಣಿಯಾಗಿ ತ್ರಿವಿಧ ಮಲಕ್ಕೆ ಹೊರಗಾಗೆಂದು ತಾನೊಳಗಾಗಿ ಬರಿಮಾತಿನ ಭಟನಂತೆ ಅದೇತರ ಅರಿಕೆ ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರ ?

---

## ವೈದ್ಯ ಸಂಗಣ್ಣ.

ಶಿವಶರಣರಲ್ಲಿ ಅನೇಕ ಉದ್ಯೋಗ ಮಾಡುವವರಿದ್ದಾರೆ. ಬಸ ವೇಶ್ವರನ ಕಾಲದಲ್ಲಿ ನಾಡಿನಲ್ಲಿ ಎಷ್ಟು ಉದ್ಯೋಗಗಳನ್ನು ಮಾಡುವ ವರು ಇದ್ದರೋ ಅವರಲ್ಲೆಲ್ಲ ಶಿವಶರಣರು ಆಗಿ ಹೋಗಿದ್ದು ಕಂಡು ಬರುತ್ತದೆ. ಅವರಲ್ಲಿ ವೈದ್ಯ ಸಂಗಣ್ಣನೆಂಬುವನಿದ್ದು ಅವನು ವೈದ್ಯಕೀ ಉದ್ಯೋಗವನ್ನು ಮಾಡುತ್ತಿದ್ದನು. ಅವನು ವಚನಕಾರನಿದ್ದಾನೆ. ಅವನು ರಚಿಸಿದ ವಚನಗಳಿಂದ ಅವನು ವೈದ್ಯ ಶಾಸ್ತ್ರ, ಶರೀರ ಶಾಸ್ತ್ರ ಇವುಗಳನ್ನು ಚನ್ನಾಗಿ ಬಲ್ಲವನಿದ್ದಂತೆ ತೋರುತ್ತದೆ. ಅವನು ರೋಗ ಚಿಕಿತ್ಸೆಯನ್ನು ಮಾಡಬಲ್ಲನು. ಅವನು ತನ್ನ ವಚನಗಳಲ್ಲಿ ವೈದ್ಯಶಾಸ್ತ್ರವನ್ನು ಹೇಳುವ ದಲ್ಲದೆ ಅದರಮೂಲಕ ಶಿವಯೋಗವನ್ನೂ ಷಟ್‌ಸ್ಥಲದ ಮರ್ಮ ಗಳನ್ನೂ ಹೇಳುತ್ತಾನೆ. ಇದು ಅವನ ವೈಶಿಷ್ಟ್ಯವಾಗಿದೆ.

ಅವನು ಬಾಹ್ಯ ಶರೀರದ ಚಿಕಿತ್ಸೆಯೊಡನೆ ಅಂತಃ ಶರೀರದ ಚಿಕಿತ್ಸೆಯನ್ನೂ ಮಾಡಬೇಕೆಂಬ ಅಭಿಪ್ರಾಯವುಳ್ಳವನಿದ್ದಾನೆಂಬುದು ಅವನ ವಚನಗಳಿಂದ ಕಂಡುಬರುತ್ತದೆ. ರೋಗನಿವಾರಣೆಯ ಅವನ ಈ ತತ್ವವು ಈಗಿನ ನವವೈದ್ಯರಿಂದ ಮತ್ತು ಡಾಕ್ಟರರಿಂದ ಅನು ಕರಣೀಯವಾಗಿದೆ. ಇವರು ಅಂತಃ ಶರೀರ ಮತ್ತು ಬಾಹ್ಯ ಶರೀರ ಇವುಗಳಲ್ಲಿರುವ ನಿಕಟ ಸಂಬಂಧವನ್ನು ಲಕ್ಷಿಸುವದಿಲ್ಲ.

ಆದರೆ ವೈದ್ಯ ಸಂಗಣ್ಣನು ವೈದ್ಯ ಶಾಸ್ತ್ರಕ್ಕೆ ಷಟ್‌ಸ್ಥಲದ ತತ್ವಗ ಳನ್ನು ಸಂಬಂಧಿಸಿ ಅಂತಃಶರೀರ ಮತ್ತು ಬಾಹ್ಯಶರೀರ ಈ ಎರಡೂ ಶರೀರಗಳನ್ನು ಹೇಗೆ ರೋಗರಹಿತ ಮಾಡಬೇಕೆಂಬುದನ್ನು ನಿರೂಪಿಸಿ ದ್ದಾನೆ. ನಾವು ಈ ವಚನಗಳನ್ನು ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ.

ಷಟ್‌ಸ್ಥಲಶಾಸ್ತ್ರವು ಭಕ್ತನು ನಿರೋಗಿಯಾಗಿರಬೇಕು ಮತ್ತು ಇಂದ್ರಿಯಗಳನ್ನು ಕ್ಲೇಶಪಡಿಸಬಾರದೆಂದು ಹೇಳುತ್ತದೆ. ಬಸವೇಶ್ವರನು ತನ್ನ ಒಂದು ವಚನದಲ್ಲಿ — 'ಇಂದ್ರಿಯ ನಿಗ್ರಹ ಮಾಡಿದರೆ ಹೊಂದು ವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿ ಯಂಗಳು' ಎಂದು ಹೇಳುತ್ತಾನೆ. ಸಿದ್ಧರಾಮೇಶ್ವರನು— 'ಚಿರಂಜೀವಿ ಎಂದರೆ ನಿರೋಗಿ, ಚಿರಂಜೀವಿ ಎಂದರೆ ಸಶಕ್ತನು, ಚಿರಂಜೀವಿ ಎಂದರೆ ಪ್ರಳಯವ ಮೀರುವವನಲ್ಲ. ದೇಹ ಚಿರಂಜೀವಿಯಾದಡೆ ಕಪಿಲಸಿದ್ಧ ಮಲ್ಲಿಕಾರ್ಜುನ ಬ್ರಹ್ಮವೆಂಬ ಶಬ್ದ ಬೇರುಂಟೇ?' ಎಂದು ಬಹು ಸ್ಪಷ್ಟಶಬ್ದಗಳಿಂದ ಶರೀರದ ಮಹತ್ವವನ್ನು ವರ್ಣಿಸಿದ್ದಾನೆ. ಮನುಷ್ಯನು ನಿರೋಗಿಯಾಗಿರಬೇಕು ಮತ್ತು ಸಶಕ್ತನಾಗಿರಬೇಕು. ಅಂದರೆ ಅವ ನಿಂದ ಶಿವಾಚಾರಗಳು ಸರಿಯಾಗಿ ಜರಗುತ್ತವೆಂಬ ಭಾವವು ಈ ವಚ ನಗಳಲ್ಲಿ ಇರುತ್ತಿದೆ.

ಬಾಹ್ಯಶರೀರದ ಸುಸ್ಥಿತಿಯು ಅಂತಃ ಶರೀರವನ್ನು ಸರಿಯಾಗಿ ಇಟ್ಟುಕೊಳ್ಳುವದರ ಮೇಲೆ ಬಹಳ ಅವಲಂಬಿಸಿರುತ್ತದೆ. ಯಾಕಂದರೆ ಅಂತಃಶರೀರವು ಮತ್ತು ಬಾಹ್ಯಶರೀರವು ಪರಸ್ಪರಾವಲಂಬಿಗಳಾಗಿವೆ. ಒಂದರ ಮೇಲಿನ ಪರಿಣಾಮಗಳು ಮತ್ತೊಂದರ ಮೇಲೆ ಆಗುತ್ತವೆ.

ಈ ತತ್ವವನ್ನನುಸರಿಸಿ ವೈದ್ಯ ಸಂಗಣ್ಣನು ತನ್ನ ವಚನಗಳಲ್ಲಿ ವೈದ್ಯ ಶಾಸ್ತ್ರದ ಮತ್ತು ಷಟ್‌ಸ್ಥಲಗಳ ನಿರೂಪಣೆ ಮಾಡಿದ್ದಾನೆ. ಇದು ಆತನ ವೈಶಿಷ್ಟ್ಯವಾಗಿದೆ.

ಶಿವಶರಣನಾದ ನಗರದ ಬೊಮ್ಮಯ್ಯನ ಆಚರಣೆಯಲ್ಲಿ ಸಹ ಇದೇ ಸಂಗತಿಯು ಕಂಡುಬರುತ್ತದೆ. (ಹಿಂದೆ ೨೯೭ನೇ ಪುಟ ನೋಡಿರಿ) ಅವನಿಗೆ ತಲೆ ನೋವಾಗಿತ್ತು. ಅವನು ಪಂಚಾಕ್ಷರಿಯ ಜಪದ ಆಚರಣೆಯನ್ನು ಸರಿಯಾಗಿ ಮಾಡದೇ ಇದ್ದದ್ದೇ ಇದಕ್ಕೆ ಕಾರಣವೆಂದು ಅವನಿಗೆ ಕಂಡುಬಂದು ಅವನು ಅದನ್ನು ಆ ರೀತಿ ಸರಿಪಡಿಸಿಕೊಂಡನು.

ಅನೇಕರು ಆಚರಣೆಯ ಕೆಲವು ಕಟ್ಟುಗಳನ್ನು ಮಾಡಿಕೊಂಡು ಅವುಗಳನ್ನು ಪಾಲಿಸುತ್ತಾರೆ. ಉದಾಹರಣಾರ್ಥವಾಗಿ ಸ್ನಾನಮಾಡದೆ ತಾವು ಭೋಜನ ಮಾಡುವದಿಲ್ಲೆಂತಲೂ ನೀರು ಕುಡಿಯುವದಿಲ್ಲೆಂತಲೂ ಅಥವಾ ಲಿಂಗಪೂಜೆಯನ್ನು ಮಾಡದೆ ತಾವು ಊಟ ಮಾಡುವದಿಲ್ಲೆಂತಲೂ ಇತ್ಯಾದಿ ಕಟ್ಟುಗಳನ್ನು ಮಾಡಿಕೊಂಡಿರುತ್ತಾರೆ. ಆದರೆ ಕೆಲವು ತರದ ಬೇನೆಗಳು ಬಂದಾಗ ಹೀಗೆ ಆಚರಿಸಿದಲ್ಲಿ ಅವರ ಪ್ರಾಣಕ್ಕೆ ಭಯವಿರುತ್ತದೆ. ಉದಾ:— ಜ್ವರ ಬಂದಕಾಲದಲ್ಲಿ ಸ್ನಾನ ಮಾಡುವದು ಅಥವಾ ಆಗ ಸ್ನಾನಮಾಡದೆ ಆಹಾರ ತೆಗೆದುಕೊಳ್ಳುವದಿಲ್ಲೆಂದು ಆಹಾರವನ್ನು ಪೂರ್ಣವಾಗಿ ಬಿಟ್ಟುಬಿಡುವದು ಇತ್ಯಾದಿ ಇರುತ್ತವೆ. ಇದರಿಂದ ಪ್ರಾಣಕ್ಕೆ ಅಪಾಯವಾಗಿ ಅನೇಕರು ಮರಣಹೊಂದಿದ್ದುಂಟು. ಹೀಗೆ ಅಪಾಯಮಾಡಿಕೊಳ್ಳುವದು ತಪ್ಪೆಂದು ವೈದ್ಯ ಸಂಗಣ್ಣನ ವಚನಗಳಿಂದ ಕಂಡುಬರುತ್ತದೆ.

ಹಾಗೆಯೇ ಆಧುನಿಕ ವೈದ್ಯಶಾಸ್ತ್ರಜ್ಞರು ಬಾಹ್ಯಶರೀರದ ಚಿಕಿತ್ಸೆಗೆ ಮಾತ್ರ ಮಹತ್ವಕೊಟ್ಟು ಅಂತಃಶರೀರದ ಸುಸ್ಥಿತಿಯನ್ನು ಲಕ್ಷಿಸುವದಿಲ್ಲ. ಇದರಿಂದ ಪೂರ್ಣವಾಗಿ ರೋಗನಿವಾರಣೆಯಾಗಲಾರದು. ಆದರೆ ಷಟ್‌ಸ್ಥಲವು ಉಭಯ ಶರೀರಗಳನ್ನು ಲಕ್ಷಿಸುತ್ತದೆ.

ವೈದ್ಯ ಸಂಗಣ್ಣನ ಮುದ್ರಿಕೆಯು 'ಮರುಳುಶಂಕರಪ್ರಿಯ ಸಿದ್ಧರಾಮೇಶ್ವರ ಲಿಂಗ' ಎಂದಿದೆ. ಅವನ ೨೪ ವಚನಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಮಾದರಿ

ಗಾಗಿ ಕೆಳಗೆ ಕೊಟ್ಟಿದ್ದೇವೆ. ಅವು ಬಹು ಅಶುದ್ಧವಾಗಿವೆ. ಕೆಲವು ಕಡೆ ಅರ್ಥವೇ ಆಗುವದಿಲ್ಲ. ಆದರೂ ವಾಚಕರು ತಮಗೆ ಶಕ್ಯವಿದ್ದಷ್ಟು ಅವುಗಳನ್ನು ತಿದ್ದಿಕೊಂಡು ಅವುಗಳ ಮುಖ್ಯ ಭಾವವನ್ನು ತಿಳಿಯಲು ಪ್ರಯತ್ನಿಸಬೇಕೆಂದು ಅವರಿಗೆ ನಮ್ಮ ಸವಿನಯ ಸೂಚನೆ ಇದೆ.

ವೈದ್ಯ ಸಂಗಣ್ಣನ ಮುದ್ರಿಕೆಯು ಮೇಲಿಂದ ಅವನು ಮರುಳು ಶಂಕರದೇವನ ಕೂಡ ಇದ್ದು ಅವನಿಗೆ ಪ್ರಿಯನಾಗಿದ್ದನೆಂದು ತಿಳಿದು ಬರುತ್ತದೆ. ಆದ್ದರಿಂದ ಅವನು ಬಸವೇಶ್ವರನ ಸಮಕಾಲೀನನಾಗಿದ್ದಾನೆ.

## ವಚನಗಳು.

(೧) ಅಷ್ಟೋತ್ತರ ಶತವ್ಯಾಧಿಗಳ ಧರಿಸಿಕೊಂಡಿಪ್ಪುದು ಆತ್ಮನೋ, ಘಟವೋ? ಆತ್ಮನೆಂದಡೆ ಅದು ಸಾವಿಲ್ಲದ ಚಿತ್ತು. ಘಟನೆಂದಡೆ ಅದು ಆತ್ಮನಿಲ್ಲದೆ ಅರಿಯದು. ಅದು ದೇಹ. ಇಂತೀ ಒಂದು ಕಳೆದು ಒಂದಕ್ಕೆ ಔಷಧಿಯ ಕೊಟ್ಟಹೆನೆಂದಡೆ, ರುಜೆ ಪ್ರಮಾಣು. ಇಂತೀ ಶರೀರ, ಆತ್ಮ ಇವು ಆದಿಯಾಗಿ ಬಂದ ವ್ಯಾಧಿಗೆ ನಾನೊಂದು ಔಷಧಿಯ ಭೇದವ ಹೇಳಿಹೆ. ಆಧಾರದಲ್ಲಿ ಮೂಲಿಕೆಯ ಬೇರನರಿದು, ಐದಿಂದ್ರಿಯವ ಕೂಡಿಕೊಂಡು ಮಲಮೂರು ಮುಟ್ಟದ ತಟ್ಟೆಯಲ್ಲಿ ಅದನು ಕೊಳ್ಳಿ. ಆ ಮದ್ದು ವಾಂತಿಗೆ ಸಲ್ಲ. ವಿರೋಚನವಿಲ್ಲ. ಇದು ಸಿದ್ಧಾಂತ. ಇದನು ಸಾಧಿಸಿಕೊಳ್ಳಿ. ಎಂದೆಂದಿಗೂ ರುಜೆ ಇಲ್ಲ. ಸಂದುಸಂಶಯವಿಲ್ಲ ಮರುಳುಶಂಕರ ಪ್ರಿಯ ಸಿದ್ಧರಾಮೇಶ್ವರ ಲಿಂಗದಲ್ಲಿ.

ಭಾವಃ—ಇದರಲ್ಲಿ ವಚನಕಾರನು ಬೇನೆಗಳು ಉತ್ಪನ್ನವಾಗುವದು ಆತ್ಮನಲ್ಲಿಯೋ ಅಥವಾ ಘಟದಲ್ಲಿಯೋ ಎಂಬ ಪ್ರಶ್ನೆಯನ್ನು ಮುಂದು ಮಾಡುತ್ತ ಆತ್ಮನಿಗೆ ಸಾವಿಲ್ಲ ಮತ್ತು ಘಟವು ಆತ್ಮನನ್ನು ಅವಲಂಬಿಸಿದೆ ಎಂದು ಹೇಳಿ ಒಂದನ್ನು ಬಿಟ್ಟು ಮತ್ತೊಂದಕ್ಕೆ ಔಷಧಿಯನ್ನು ಕೊಟ್ಟರೆ ಬೇನೆಯು ಹೋಗಲಾರದೆಂದು ಹೇಳಿದ್ದಾನೆ. ಇದರಲ್ಲಿ ಮಾಡತಕ್ಕ ಉಪಚಾರವನ್ನು ವಚನಕಾರನು ಇಲ್ಲಿ ಹೇಳಿದ್ದಾನೆ. ಅವನು ಆಧಾರ ಚಕ್ರದಲ್ಲಿ ಔಷಧಿಯ ದ್ರವ್ಯಗಳನ್ನು ಮೊದಲು ಸಂಬಂಧಿಸಬೇಕೆಂದು ಹೇಳುತ್ತಾನೆ. ಆಮೇಲೆ ಐದಿಂದ್ರಿಯಗಳನ್ನು ಅದರಲ್ಲಿ ಸೇರಿಸಿ ಆಚರಿಸಿದಲ್ಲಿ ಆ ಮೂಲಿಕೆಯ ಗುಣಗಳು ಶರೀರವನ್ನು ವ್ಯಾಪಿಸುತ್ತವೆ.

ಆದರೆ ಇಷ್ಟರಿಂದ ವ್ಯಾಧಿಯು ಹೋಗಲಾರದು. ಯಾಕೆಂದರೆ ಮನುಷ್ಯನಿಗೆ ಆಣವಮಲ ಮಾಯಾಮಲ ಕಾರ್ಮಿಕಮಲಗಳೆಂಬುವು ಇದ್ದು, ಅವುಗಳನ್ನು ದೂರಮಾಡಿ ಆಚರಿಸಬೇಕೆಂದು ಅವನು ಹೇಳುತ್ತಾನೆ. ಹೀಗೆ ಶುದ್ಧವಾದ ಶರೀರದಲ್ಲಿ ಔಷಧವನ್ನು ತೆಗೆದುಕೊಂಡರೆ, ಆ ಔಷಧವು ವಾಂತಿಯಿಂದಾಗಲಿ ಇಲ್ಲವೆ ಭೇದಿಯಿಂದಾಗಲಿ ಹೊರಗೆ ಹೋಗುವದಿಲ್ಲ. ಅಂದರೆ ಅದು ಶರೀರದಲ್ಲಿ ಸಮರಸವಾಗುವದು. ಹೀಗೆ ಆದಲ್ಲಿ ನಿವಾರಣೆ ಸಿದ್ಧಾಂತ ಎಂಬ ವಚನಕಾರನು ಹೇಳಿ ಮುಂದೆ ಅವನು ಅನ್ನುವದೇನೆಂದರೆ ಹೀಗೆ ಔಷಧ ಸೇವಿಸಿದರೆ ವ್ಯಾಧಿಯು ಯಾವಾಗಲೂ ಬರುವದಿಲ್ಲ. ಇದು ನಿಃಸಂಶಯವೆಂದು ಹೇಳುತ್ತಾನೆ.

(೨) ತ್ರಿದೋಷದ ಗುಣದಿಂದ ನಾನಾ ಬಹು ತಾಪತ್ರಯದ ವ್ಯಾಧಿಯು ಚಿಕಿತ್ಸೆಯನಾರೂ ಅರಿಯರಲ್ಲಾ! ತನುವಿಂಗೆ ವಾತ, ಪಿತ್ತ, ಶ್ಲೇಷ್ಮ; ಆತ್ಮಂಗೆ ಆಣವ, ಮಾಯೆ, ಕಾರ್ಮಿಕ. ಇಂತೀ ತ್ರಿವಿಧ ಮಲತ್ರಯ ರೋಗರುಜೆಯಡಿಸಿ ಬಂಧನದಲ್ಲಿ ಸಾಯುತ್ತಿದೆ ಅಂಗ. ಈ ರೋಗ ನಿರೋಗವಹುದಕ್ಕೆ ನಾ ಮೂರು ಬೇರ ತಂದೆ. ಒಂದಂಗದಲ್ಲಿ ಮರ್ದಿಸಿ, ಒಂದು ಆತ್ಮನಲ್ಲಿ ಮಥನಿಸಿ, ಒಂದರವಿನಲ್ಲಿ ಪಾಕವ ಮಾಡಿ ಈ ರೋಗ ಹರಿವುದು. ಇದಕ್ಕನುಪಾನ ಇದಿರೆಡೆಯಿಲ್ಲ. ಮರುಳು ಶಂಕರಪ್ರಿಯ ಸಿದ್ಧರಾಮೇಶ್ವರಲಿಂಗಸಂಗಿ.

ಭಾವಃ— ಹಿಂದಿನ ವಚನದ ಭಾವವೇ ಇದರಲ್ಲಿ ಬಂದಿದೆ. ಶರೀರ ಮತ್ತು ಆತ್ಮ ಇವೆರಡರಲ್ಲಿಯ ರೋಗವನ್ನು ಕಳೆಯಬೇಕೆಂದು ವಚನಕಾರನು ಹೇಳುತ್ತಾನೆ. ವಾತ, ಪಿತ್ತ, ಕಫಗಳಿಂದ ಶರೀರದಲ್ಲಿ ರೋಗಗಳು ಹೇಗೆ ಆಗುತ್ತವೆಯೋ ಹಾಗೆ ಆತ್ಮನಲ್ಲಿ ಮೂರು ಮಲಗಳು ಉಂಟಾದಲ್ಲಿ ಅದಕ್ಕೆ ರೋಗವು ಆಗುತ್ತದೆ. ಈ ರೋಗವನ್ನು ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳನ್ನು ತನ್ನಲ್ಲಿ ಅಳವಡಿಸಿಕೊಂಡು ದೂರಮಾಡಬೇಕೆಂಬ ಭಾವವು ಇದರಲ್ಲಿ ಇದೆ.

(೩) ನಾನಾ ರೋಗಂಗಳು ಬಂದು ದೇಹವ ಹಿಡಿದಲ್ಲಿ ಶಿವಾರ್ಚನೆಯ ಬೇರ ಕೊಳ್ಳಿ. ಸಕಲ ಪುಷ್ಪಂಗಳಿಂದ ಪೂಜೆಯ ಮಾಡಿಕೊಳ್ಳಿ. ಪಂಚಾಕ್ಷರಿಯ ಪ್ರಣವವ ತಪ್ಪದೆ ತ್ರಿಸಂಧಿಯಲ್ಲಿ ನೆನಹುಗೊಳ್ಳಿ. ಇದರಿಂದ ರುಜೆ ದರ್ಪಂಗೆಡುಗು, ಮರುಳುಶಂಕರಪ್ರಿಯ ಸಿದ್ಧರಾಮೇಶ್ವರಲಿಂಗ ಸಾಕ್ಷಿಯಾಗಿ.

ಭಾವ:--ಬೇನೆಯು ಬಂದ ಕಾಲದಲ್ಲಿ ನೆರಳುತ್ತಲಿರದೆ ಪರಮಾತ್ಮನಲ್ಲಿ ನಿಮ್ಮ ನೆನಹನ್ನು ಇರಿಸಿ ಅವನನ್ನು ಪೂಜಿಸಿರಿ, ಎಂದು ವಚನಕಾರನು ಈ ವಚನದಲ್ಲಿ ಬಹು ಸರಸಾಗಿ ಹೇಳಿದ್ದಾನೆ. ಇದರಿಂದ ಬೇನೆಯು ತೀವ್ರ ದೂರಾಗುವದೆಂದು ಅವನ ಅಭಿಪ್ರಾಯ.

(೪) ಮಯೂರನಾಡಿ, ಮಂಡುಕನಾಡಿ, ಭಲ್ಲುಕನಾಡಿ. ಅಹಿಗತಿನಾಡಿ, ಮಂಡಲಕನಾಡಿ, ಷುಂಡೆಕ (?) ಪಥನಾಡಿ, ದೀರ್ಘನಾಡಿ, ಅಧಮನಾಡಿ, ಉತ್ತರನಾಡಿ, ಪೂರ್ವನಾಡಿ. ಪಶ್ಚಿಮನಾಡಿ, ಗಜಗಮನನಾಡಿ, ಅಚ್ಯೊಕ್ತನಾಡಿ, ವಿಕ್ರಮನಾಡಿ, ಸೂತ್ರನಾಡಿ, ಸಂಚುನಾಡಿ, ಸಂಚಲನಾಡಿ, ಶೈತ್ಯನಾಡಿ, ಉಷ್ಣನಾಡಿ, ವಿಹಂಗನಾಡಿ, ಕೂರ್ಮನಾಡಿ, ಮರ್ಕಟನಾಡಿ, ಪಿಪೀಲಿಕನಾಡಿ, ದಂಷ್ಟ್ರನಾಡಿ, ಮಕರನಾಡಿ, ಕರ್ಕೋಟಕನಾಡಿ, ಸಮರನಾಡಿ, ಸಂತೋಷನಾಡಿ, ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋರುವ ನಾಡಿ ಜೀರ್ಣ ಪರ್ಣದಂತೆ ರೋಮಛಿದ್ರದಲ್ಲಿ ಸೂಸುವ ವಾಯುವನೊಡಗೂಡಿ ವ್ಯಾಧಿಕ್ರಮವನರಿತಿಹೆನೆಂದೊಡೆ ಆದಾರಿಗೂ ಅಸಾಧ್ಯ. ಅಯ್ಯ ನಾನು ಮೂರು ನಾಡಿಯು ಬಲ್ಲೆ. ಉತ್ಪತ್ತಿ ಒಂದು, ಸ್ಥಿತಿ ಒಂದು, ಲಯ ಒಂದು. ಭಕ್ತಿ ಎಂಬ ಕಯ್ಯ ಹಿಡಿದು ನೋಡಲಾಗಿ ಗುರುನಾಡಿ. ಉಭಯವ ಕೊಂಡು ಆಡೆಯಾಡುತ್ತಿದೆ. ಲಿಂಗನಾಡಿ ಸಂದಿಯೊಳಗೆ ಸೂಸುತಿದೆ. ಜಂಗಮನಾಡಿ ಮೂರರ ಹಂಗಬಿಟ್ಟು ಮಹದಲ್ಲಿ ಸಂದಿರುತ್ತದೆ ಕೋ. ಇದು ಲಿಂಗಾಂಗಿಗಳ ವೈದ್ಯ. ಸಂಗನಬಸವಣ್ಣ ಬಾಹಾಗ ತನ್ನವರಕ್ಕೆ ವೈದ್ಯನೆಂದು ಎನ್ನ ಕೊಂಡು ಬಂದ. ಈ ವೈದ್ಯದ ವಚನದ ಚೀಲವ ಹೊತ್ತು ಗಸಣಿಗೊಳ್ಳುತ್ತಿದೇನೆ. ಈ ಕಾಯಕದ ದೇಸಿಯೊಡಗೂಡಿ ಕರುಣಾಪ್ರಸಾದವ ಕೊಟ್ಟು ಮರುಳು ಶಂಕರ ಪ್ರಿಯ ಸಿದ್ಧರಾಮೇಶ್ವರ ಲಿಂಗಾ ನಿಮ್ಮಡಿಯೊಳಗೆನ್ನನಿಂಬಿಡಯ್ಯ.

ಭಾವ:--ಈ ವಚನದಲ್ಲಿ ವಚನಕಾರನು ತನ್ನ ಆತ್ಮವೃತ್ತವನ್ನು ಹೇಳಿಕೊಳ್ಳುತ್ತಿದ್ದಾನೆ. ಇದರಿಂದ ನಾಡಿಯ ಗತಿಯ ಮೂಲಕ ರೋಗಪರೀಕ್ಷೆ ಮಾಡುವದು ಅವನಿಗೆ ಚನ್ನಾಗಿ ಗೊತ್ತಿದ್ದಂತೆ ಈ ವಚನದ ಆರಂಭದಲ್ಲಿ ಹೇಳಿದ ವಿವರಣೆಗಳಿಂದ ಕಂಡುಬರುತ್ತದೆ. ಆದರೆ ಇಷ್ಟರಿಂದಲೇ ರೋಗ ನಿವಾರಣೆ ಮಾಡುವದು ಅಸಾಧ್ಯವೆಂದು ಹೇಳುತ್ತ ಲಿಂಗಾಂಗಿಗಳು ತ್ರಿಲಿಂಗಗಳ ರೀತಿಯನ್ನು ತಿಳಿದಲ್ಲಿ ಅವರಿಗೆ ಬೇನೆ ಬರ

ಲಾರದೆಂದು ಅವನು ಇಲ್ಲಿ ಹೇಳಿದ್ದಾನೆ. ಅವನು ಬಸವೇಶ್ವರನಲ್ಲಿ ತಾನ್ಯ ಯಾವಾಗಲೂ ಇದ್ದುಕೊಂಡು ಅವನ ಸನ್ನಿಧಿಯಲ್ಲಿ ಕರುಣ ಪ್ರಸಾದ ವನ್ನು ಹೊಂದುವಂತೆ ಕರುಣಿಸಬೇಕೆಂದು ಮರುಳು ಶಂಕರ ಪ್ರಿಯ ಸಿದ್ಧರಾಮೇಶ್ವರ ಲಿಂಗವೆಂಬ ತನ್ನ ಇಷ್ಟಲಿಂಗವನ್ನು ಕುರಿತು ಇದರಲ್ಲಿ ಬೇಡಿಕೊಂಡಿದ್ದಾನೆ.

(೫) ಐದು ತತ್ವಂಗಳಿಂದಾದ ದೇಹಕ್ಕೆ ರೋಗರುಜೆಯುಹುದೇ ಕಾರ್ಯ. ತತ್ವಂಗಳ ಗೊತ್ತಿನಲ್ಲಿ ನಿಂದು ಅವರವರ ಚಿಕಿತ್ಸೆಯುಲ್ಲಿ ಹೊತ್ತು ನಿತ್ತರಿಸುವುದೇ ಕ್ರಮ. ಅದೆಂತೆಂದೊಡೆ, ಭಕ್ತಿನಿಷ್ಠೆ, ವಿಶ್ವಾಸನಿಷ್ಠೆ, ಜ್ಞಾನನಿಷ್ಠೆ ಇಂತೀ ಸದ್ಭಾವ ನೆಲೆಗೊಳ್ಳದ ಕಾರಣ ತನು ವಿಂಗನುಪಾನವ ಮಾಡಬೇಕು. ಇದರ ಮೇಲೆ ಅರಿದಡೆ, ಮನವು ಮಹ ದಲ್ಲಿ ನಿಲಬೇಕು. ಇದು ಮರುಳು ಶಂಕರ ಪ್ರಿಯ ಸಿದ್ಧರಾಮೇಶ್ವರ ಲಿಂಗವನೊಡಗೂಡುವ ಪರಿ.

ಭಾವಃ—ಶರೀರವು ಪೃಥ್ವಿ, ಅಪ್ಪು, ತೇಜ, ವಾಯು ಆಕಾಶ ಈ ತತ್ವಗಳಿಂದ ಆಗಿರುತ್ತದೆ. ಆದ್ದರಿಂದ ಇಂಥ ಶರೀರಕ್ಕೆ ರೋಗ ಭಯವಿ ರುವುದು ಸ್ವಾಭಾವಿಕವು. ಹೀಗೆ ರೋಗವಾದಲ್ಲಿ ಈ ತತ್ವಗಳಿಗನುಸರಿಸಿ ಶರೀರಕ್ಕೆ ಚಿಕಿತ್ಸೆ ಮಾಡುವದು ಯೋಗ್ಯಕ್ರಮವೆಂದು ವಚನಕಾರನು ಹೇಳುತ್ತಾನೆ. ಆದರೆ ಮನುಷ್ಯನಲ್ಲಿ ಭಕ್ತಿ, ವಿಶ್ವಾಸ ಜ್ಞಾನಗಳು ಯಾವ ವರೆಗೆ ಇಲ್ಲವೋ ಆ ವರೆಗೆ ಅವನಿಗೆ ದೇಹಚಿಕಿತ್ಸೆ ಮಾಡ ಬೇಕು. ಆದರೆ ಜ್ಞಾನವು ಅವನಲ್ಲಿ ಉಂಟಾಗಿ ಅವನು ಮಹದಲ್ಲಿ ಇದ್ದರೆ ಅವನಿಗೆ ಯಾವ ರೋಗಗಳು ಬರಲಾರವು. ಅವನು ಪರಮಾ ತ್ಮನಲ್ಲಿ ಲಯವಾಗುತ್ತಾನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

(೬) ಪಿಂಡ, ಪ್ರಾಣ, ಆರೋಗ್ಯಗಳ ಚಿಕಿತ್ಸೆಯನರಿದು ವೈದ್ಯವ ಮಾಡಬಲ್ಲಡೆ ಪಂಡಿತನಪ್ಪ. ಘಟತ್ರಯದ ಭೇದವನರಿದು ಮಾಡುವ ಕ್ರಮವೆಂತುಟೆಂದಡೆ, ಕಟಿ ಮೊದಲಾದ ಕೀಳು ದೆಸೆಯಲ್ಲಿ ಸಂದಿನ ಭೇದ. ಅಂಗುಲಿಸಂದು ಇಪ್ಪತ್ತು. ಮಡಸಂದು ಎರಡು. ಪಚ್ಚಳಸಂದು ಎರಡು. ಇಂತೀ ಅಧಮನಾಳು. ಈ ನಾಡಿಗಳ ಸಾಧಿಸಿಕೊಂಡು ಊರ್ಧ್ವ ದಂಡದಲ್ಲಿ ಉಭಯ ಪಕ್ಷದಲ್ಲಿ ಕೆಲವಂದ ಸಂದು. ಅರಿವ ಸಂದು ಆರು. ಅಂತು ಕೀಳು ಮೊದಲಾದ ಸಂದು ನೂರು ಎಪ್ಪತ್ತು ನಾಲ್ಕು. ಅದರಿಂದ

ಮೊದಲಾದ ಉಭಯ ಕರದ ಸಂದು, ಅಂಗುಲಿಯ ಸಂದು ಇಪ್ಪತ್ತೆಂಟು. ಇಂತೀ ಕರದೊಳಗಾದ ಮೂವತ್ತು ನಾಲ್ಕು ಸಂದಿನ ನವನಾಳ ನಾಡಿಗಳನರಿತು ಅದರಿಂದ ಮೇಲೆ ಸಂಪುಟವೆರಡು. ಜಿಹ್ವೆ ಮೊದಲಾದ ಏಳು ದ್ವಾರಂಗಳ ಶೋಧಿಸಿಕೊಂಡು, ಕಪಾಲದ ತ್ರಿವಿಧದ ಹೊಲಿಗೆಯ ಕಂಡು ಊರ್ಧ್ವ ನಾಳದಲ್ಲಿ ಏರಿಳಿವ ಜೀವನ ತವಕವ ವಿಚಾರಿಸಿ ಕಂಡು, ಅಂಗುಷ್ಠ ತೊಟ್ಟು ನಾಳಾಗ್ರ ಪರಿಯಂತರದಲ್ಲಿ ಸ್ಥಾನವ ಮುಟ್ಟಿ ನೋಡಿ ರವಿ ಶಶಿ ಪವನ ಪಾವಕ ಮುಟ್ಟಿಯಾಡುವ ಲಕ್ಷಣವ ಕಂಡು ಅವಕ್ಕೆ ಚಿಕಿತ್ಸೆಯುಪ್ಪ ಅನ್ನ ಔಷಧಿ ಪಯ ಪಾನ ಉದಕ ಮುಂತಾದ ತೆರನನರಿತಡೆ ಆತ ಇರವನರಿದವ. ಇಂತು ಕಾಯಕದ ವೈದ್ಯವ ಮಾಡಬಲ್ಲವ ಮೇಲನರಿದು ಕೀಳು ಮರೆಯಬಲ್ಲಡೆ ಆತ ವೈದ್ಯ ಪಂಡಿತನೆಂಬೆ, ಮರುಳು ಶಂಕರಪ್ರಿಯ ಸಿದ್ಧರಾಮೇಶ್ವರ ಲಿಂಗವ ಬಲ್ಲಾತ.

ಭಾವಃ—ಇದರಲ್ಲಿ ಶರೀರ ರಚನೆಯ ವಿವರಣೆ ಇದೆ. ಅದಕ್ಕೂ ಅಂತರಂಗ ಶರೀರಕ್ಕೂ ಇರುವ ಸಂಬಂಧವನ್ನು ಹೇಳುತ್ತ ಪಂಡಿತನೆನಿಸಿಕೊಳ್ಳುವ ವೈದ್ಯನ ಲಕ್ಷಣವನ್ನು ವಚನಕಾರನು ಈ ವಚನದಲ್ಲಿ ಹೇಳಿದ್ದಾನೆ.

ಮೇಲೆ ನಾಲ್ಕನೇ ವಚನದ ಮೇಲಿಂದ ಈ ಶಿವಶರಣನು ವೈದ್ಯಶಾಸ್ತ್ರವನ್ನು ಚನ್ನಾಗಿ ಬಲ್ಲವನಾಗಿದ್ದು ಬಸವೇಶ್ವರನಿಗೆ ಪ್ರಿಯನಾಗಿದ್ದನೆಂತಲೂ ಅವನು ಅವನಿಗೆ ಸಮಕಾಲೀನನಾಗಿ ಅವನ ಕೂಡ ಕಲ್ಯಾಣದಲ್ಲಿದ್ದನೆಂತಲೂ ತಿಳಿದುಬರುತ್ತದೆ.

---

## ಅನುಮಿಷ.

ವಿಜಾಪುರ ಜಿಲ್ಲಾ ಬದಾಮಿ ತಾಲೂಕಿನಲ್ಲಿರುವ ಬದಾಮಿ ಗ್ರಾಮದಿಂದ ಐಹೊಳೆ ಗ್ರಾಮದ ವರೆಗೆ ಸುಮಾರು ೧೮ ಮೈಲು ದಕ್ಷಿಣೋತ್ತರ ಒಂದು ಗುಡ್ಡಗಳ ಸಾಲು ಹಬ್ಬಿರುತ್ತದೆ. ಈ ಸಾಲು ಪೂರ್ವ ಪಶ್ಚಿಮವಾಗಿ ಸುಮಾರು ೧೫ ಮೈಲುಗಳ ವರೆಗೆ ಇದೆ. ಪುರಾತನ ಕಾಲದಲ್ಲಿ ಈ ಭೂಭಾಗವು ನಿಬಿಡವಾದ ವೃಕ್ಷಗಳಿಂದ ತುಂಬಿಕೊಂಡು ದುರ್ಗಮ ಪ್ರದೇಶವಾಗಿತ್ತೆಂದು ತೋರುತ್ತದೆ. ಇಲ್ಲಿಯೇ

ಆರಂಭದ ಚಾಲುಕ್ಯರ ರಾಜಧಾನಿಯಾದ ಬದಾಮಿಯೂ ಇರುತ್ತದೆ. ಕಾಡುಗಳಿಂದ ತುಂಬಿದ ಈ ಪ್ರದೇಶ ಮಧ್ಯದೊಳಗಿಂದ ಮಲಾಪ ಹಾರೀ ಅಥವಾ ಮಲಪ್ರಭಾ ನದಿಯು ಹರಿಯುತ್ತಿದೆ. ಸುತ್ತಲಿನ ಗುಡ್ಡಗಳಲ್ಲಿ ಈಗಲೂ ಅಸಂಖ್ಯ ಗುಹೆಗಳಿದ್ದು ಅವುಗಳಲ್ಲಿ ಪೂರ್ವ ಕಾಲದಲ್ಲಿ ಯೋಗಿಗಳು ತಮ್ಮ ಯೋಗಸಾಧನೆಗಳಲ್ಲಿ ತೊಡಗುತ್ತಿರ ಬಹುದೆಂದು ತೋರುತ್ತದೆ. ಅಲ್ಲಲ್ಲಿ ಪುರಾತನ ಕಾಲದ ದೇವಾಲಯ ಗಳೂ ಅವುಗಳ ಅವಶೇಷಗಳೂ ಈ ಪ್ರದೇಶದಲ್ಲಿ ಕಣ್ಣಿಗೆ ಬೀಳುತ್ತವೆ. ಇವುಗಳಲ್ಲೆಲ್ಲ ಮಹಾಕೂಟ ದೇವಾಲಯವು ಅತ್ಯಂತ ಮಹತ್ವದಾ ದದ್ದು. ಹಿಂದಿನ ರಾಜರು ೮ನೇ ೯ನೇ ಶತಮಾನಗಳಲ್ಲಿ ಇದಕ್ಕೆ ದಾನ ಕೊಟ್ಟಿದ್ದರ ಉಲ್ಲೇಖಗಳಿದ್ದ ಶಿಲಾಶಾಸನಗಳು ಅಲ್ಲಿ ಅನೇಕವಿರುತ್ತವೆ. ಈ ಸ್ಥಳದಲ್ಲಿಯೇ ಪೂರ್ವಕಾಲದಲ್ಲಿ ಅಗಸ್ತ್ಯಾಶ್ರಮವಿದ್ದುದು ಪುರಾಣ ಪ್ರಖ್ಯಾತವಾಗಿದೆ.

ಈ ಭೂಭಾಗದ ಮಧ್ಯಪ್ರದೇಶದಲ್ಲಿ ಹರಿಯುವ ಮಲಾಪಹಾರೀ ನದಿಯ ದಂಡೆಯ ಮೇಲೆ ಪಟ್ಟದಕಲ್ಲು ಎಂಬ ಗ್ರಾಮವಿರುತ್ತದೆ. ಈ ಗ್ರಾಮದಲ್ಲಿ ಶಿಲ್ಪಿಗರನ್ನು ಬೆರಗುಗೊಳಿಸುವಂತಹ ಅತ್ಯಂತ ಸುಂದರವಾದ ಪುರಾತನ ದೇವಾಲಯಗಳು ಈಗಲೂ ಉಂಟು. ಕರ್ನಾಟಕದ ಪುರಾ ತನ ಶಿಲ್ಪಕಲೆಯು ಎಷ್ಟು ಮುಂದುವರಿದಿತ್ತೆಂಬದನ್ನು ತಿಳಿಯಲು ಅವು ಮಹತ್ವದ ಸಾಧನಗಳಾಗಿರುತ್ತವೆ. ಈ ಗ್ರಾಮದಲ್ಲಿ ಅನೇಕ ರಾಜವಂ ಶಗಳು ಆಳಿದವು. ಈ ಗ್ರಾಮಕ್ಕೆ ಹಮ್ಮೀರಪುರವೆಂತಲೂ ಬೇರೊಂದು ಹೆಸರಿದೆ.

ಈ ಗ್ರಾಮದಲ್ಲಿ ನಂದರು, ಗುಪ್ತರು, ಮೌರ್ಯರು ರಾಜ್ಯವಾ ಳಿದ ಬಳಿಕ ಚಾಳುಕ್ಯರು ೨೮ ತಲೆಗಳ ವರೆಗೆ ಬಹು ವೈಭವದಿಂದ ರಾಜ್ಯವಾಳಿದರೆಂಬ ಆಖ್ಯಾಯಿಕೆ ಇದೆ. ಈ ಚಾಲುಕ್ಯರಲ್ಲಿ ತ್ರೈಲೋಕ್ಯ ಚೂಡಾಮಣಿ ಎಂಬ ರಾಜನು ಆಗಿಹೋದನು. ಅವನ ಹೆಂಡತಿಯ ಹೆಸರು ಮಹಾಲೋಕಿ. ಉಭಯ ದಂಪತಿಗಳು ಶಿವಜ್ಞಾನಿಗಳು, ಶಿವನಲ್ಲಿ ನಿಷ್ಠೆಯುಳ್ಳವರು. ಅವರಿಗೆ ವಸುಧೀಶನೆಂಬ ಮಗನು ಹುಟ್ಟಿದನು.

ಈ ವಸುಧೀಶನಿಗೆ ರಾಜನು ರಾಜರಿಗೆ ಉಚಿತವಾಗಿರುವ ವಿದ್ಯೆ ಮತ್ತು ರಾಜ್ಯನೀತಿ ಇವುಗಳ ಶಿಕ್ಷಣವನ್ನು ಕೊಟ್ಟು ಅವನಿಗೆ ಶಿವಜ್ಞಾನವನ್ನೂ

ಮೋಕ್ಷವನ್ನು ಕೊಡುವ ಶಿವದೀಕ್ಷಾ ಸಂಸ್ಕಾರಗಳನ್ನು ಮಾಡಿಸಿದನು. ಆಮೇಲೆ ಕೆಲವು ದಿವಸಗಳಾದ ಮೇಲೆ ಅರಸನಾದ ತ್ರೈಲೋಕ್ಯಚೂಡಾಮಣಿಯು ತನ್ನಿಂದ ರಾಜ್ಯಭಾರವನ್ನು ವಹಿಸುವದು ಆಗದೆಂದು ತಿಳಿದು ರಾಜ್ಯಪರಿತ್ಯಾಗ ಮಾಡಿ ತಾನು ಏಕಾಂತವಾಸದಲ್ಲಿರಬೇಕೆಂದು ಬಯಸಿ ತನ್ನ ಮಗನಿಗೆ ಒಂದು ಶುಭ ದಿನದಲ್ಲಿ ಪಟ್ಟವನ್ನು ಕಟ್ಟಿ ಅವನಿಗೆ ರಾಜ್ಯಭಾರವನ್ನೆಲ್ಲ ಒಪ್ಪಿಸಿದನು.

ಆ ವೇಳೆ ವಸುಧೀಶನು ರಾಜ್ಯವನ್ನು ಪರಿಪಾಲನೆ ಮಾಡಹತ್ತಿದನು. ಆದರೆ ಅವನ ಮನಸ್ಸು ಯಾವಾಗಲೂ ಶಿವಧ್ಯಾನದಲ್ಲಿರುವದು. ಅವನು ಇತರ ವಿಷಯಗಳಲ್ಲಿ ಉದಾಸೀನ ಭಾವವನ್ನು ತಾಳಿದವನಾಗಿ ಶಿವನ ಪ್ರಸಾದವಿಲ್ಲದೆ ಭೋಜನ ಮಾಡೆನೆಂಬ ಕಟ್ಟನ್ನು ಇಟ್ಟುಕೊಂಡಿದ್ದನು ಹೀಗೆ ಅವನು ಅತ್ಯಂತ ಧರ್ಮಿಷ್ಠನಾಗಿ ರಾಜ್ಯ ಪರಿಪಾಲನೆಯನ್ನು ಮಾಡಹತ್ತಿದರೂ ಆತನು ಯೋಗಸಾಧನೆಗಳಲ್ಲಿ ಉತ್ಕಟವಾದ ಮನಸ್ಸನ್ನು ಹಾಕಿ ಅವುಗಳಲ್ಲಿ ಯಾವಾಗಲೂ ಕಾಲಕಳೆಯುತ್ತಿದ್ದನು. ಅವುಗಳ ಮೂಲಕ ಅವನು ಸಿದ್ಧಿಗಳನ್ನು ಸಹ ಸಂಪಾದಿಸಿದವನಾದನು.

ಹೀಗಿರುವಲ್ಲಿ ಅವನು ಒಂದು ದಿವಸ ಕ್ರತುಜನ್ನವೆಂಬ ಹೆಸರಿನ ತನ್ನ ಒಂದು ಪ್ರೀತಿಯ ಅಶ್ವವನ್ನು ತೆಗೆದುಕೊಂಡು ಮಿತವಾದ ಪರಿವಾರದೊಂದಿಗೆ ಕಾಡಿನಲ್ಲಿ ಬೇಟೆಯಾಡಲು ಹೊರಟನು. ಹೀಗೆ ಬೇಟೆಯಾಡುತ್ತ ಹೋಗುವಾಗ, ಆ ಅಶ್ವವು ಏನೋ ಒಂದು ಕಾರಣದಿಂದ ಬೆದರಿ ಅರಸನ ಅಂಕಿತದಲ್ಲಿ ಉಳಿಯದೆ ಗಿಡ ಗುಡ್ಡಗಳೆನ್ನದೆ, ಹಳ್ಳಕೊಳ್ಳಗಳೆನ್ನದೆ ಓಡುತ್ತಾ ಓಡುತ್ತಾ ಮೂಕದ್ರೋಣ ಪರ್ವತ ಎಂಬಲ್ಲಿಗೆ ಬಂದಿತು. ಮತ್ತು ಅಲ್ಲಿಯೇ ಅದು ನಿಂತುಕೊಂಡು ಬಿಟ್ಟಿತು.

ಆಗ ಅರಸನು ಹೀಗೆ ಅಶ್ವವು ತಾನಾಗಿಯೇ ನಿಂತದ್ದಕ್ಕೆ ಸಂತೋಷಬಟ್ಟು ಮಾರ್ಗಾಯಾಸದಿಂದ ಬಹಳ ದಣಿದವನಾಗಿ ಅಲ್ಲಿಯೇ ನಿದ್ರೆಹೋದನು. ಅವನು ಎಚ್ಚತ್ತು ನೋಡುತ್ತಾನೆಯೋ, ಅಷ್ಟರಲ್ಲಿ ಅವನ ಆ ಕುದುರೆಯು ಮಾಯವಾಗಿತ್ತು. ಅದನ್ನು ಎಲ್ಲಿ ಹುಡುಕಿದರೂ ಅದು ಅವನಿಗೆ ಸಿಕ್ಕಲಿಲ್ಲ. ಆದ್ದರಿಂದ ಅವನು ಅದರ ಹೆಂಬ

ಲವನ್ನು ಬಿಟ್ಟು ಕೊಟ್ಟು ವಿಧಿಗತಿಯು ವಿಚಿತ್ರವಾದುದು, ಅವುದೋ ಒಂದು ಮಹತ್ವದ ಕಾರಣದ ಮೂಲಕ ಈ ಅಶ್ವವು ನನ್ನನ್ನು ಈ ಘೋರಾರಣ್ಯದಲ್ಲಿ ತಂದು ಬಿಟ್ಟಿರಬೇಕು, ಎಂದು ಯೋಚಿಸುತ್ತಿರಲು ಅವನಿಗೆ ಬಹಳ ಹೊತ್ತಾದ್ದರಿಂದ ಹಸಿವೆಯಿಂದ ಬಹಳ ಕಂಗೆಡಹತ್ತಿದನು. ಆದರೆ ಲಿಂಗದರ್ಶನವಿಲ್ಲದೆ ಉಣ್ಣೆನೆಂಬ ನಿಯಮವನ್ನು ಅವನು ಇಟ್ಟುಕೊಂಡಿದ್ದರಿಂದ ಅವನು ಇಲ್ಲಿ ಎಲ್ಲಾದರೂ ಶಿವಾಲಯ ವಿರುವದೋ ಹೇಗೆಂಬುದನ್ನು ಸುತ್ತಲೂ ಹುಡುಕುತ್ತ ಹೊರಟನು. ಆದರೆ ಅವನಿಗೆ ಎಲ್ಲಿಯೂ ಅಂಥ ದೇವಾಲಯವು ಕಣ್ಣಿಗೆ ಬೀಳಲಿಲ್ಲ. ಹೀಗೆಯೇ ಅವನು ಇಡೀ ದಿವಸ ಆ ಕಾನನದಲ್ಲಿ ಕಾಲಕಳೆದನು. ಮರುದಿನ ಅವನ ಮಂತ್ರಿ ಪ್ರಧಾನರೂ ಪರಿವಾರದವರೂ ಅವನನ್ನು ಹುಡುಕುತ್ತ ಹುಡುಕುತ್ತ ಅವನಿದ್ದಲ್ಲಿಗೆಯೇ ಬಂದರು. ಅವರು ಅರಸನು ಉಪವಾಸವಿದ್ದುದನ್ನು ತಿಳಿದು ಅವರು ಅವನ ಸಲುವಾಗಿ ಶಿವಾಲಯವನ್ನು ಹುಡುಕುತ್ತ ಹೊರಟರು. ಕೆಲವು ವೇಳೆಯಾದ ಬಳಿಕ ಆವರು ಅರಸನಲ್ಲಿಗೆ ತಿರುಗಿ ಬಂದು ಅವನಿಗೆ—ಇಲ್ಲಿಯೇ ಸಮೀಪದಲ್ಲಿ ಲಿಂಗಮುದ್ರೆ ಇದ್ದ ನಂದಿಯು ಇದ್ದಾನೆ. ಈ ನಂದಿ ಎಂದರೆ ಕೇವಲ ಧರ್ಮಪುರುಷನು ಲಿಂಗಮಯನು ಎಂದು ಶಾಸ್ತ್ರವು ಹೇಳುತ್ತಿದೆ. ಆದ್ದರಿಂದ ಅವನಲ್ಲಿಗೆ ಹೋಗುವಾ ಎಂದು ಹೇಳಲು ಅವನು ಅವರೊಡನೆ ನಂದಿಯು ಇದ್ದಲ್ಲಿಗೆ ಬಂದನು.

ಆಗ ಪ್ರಧಾನಿಗಳು ಆ ನಂದಿಯ ಮೇಲಿದ್ದ ಲಿಂಗಮುದ್ರೆಯನ್ನು ತೋರಿಸಿ ಈ ಲಿಂಗವನ್ನು ಪೂಜಿಸು ಎಂದು ಅರಸನಿಗೆ ಹೇಳಲು ಅವನು ಹೀಗೆ ಪೂಜಿಸುವದು ಸಹಜವಲ್ಲೆಂದು ಹೇಳಿ ಆ ದಿವಸವೂ ಮರುದಿವಸವೂ ಉಪವಾಸವಿದ್ದನು. ಆದರೆ ಈ ನಂದಿಯು ನಂದಿಕೇಶ್ವರನೆಂಬ ಗಣಾಧೀಶ್ವರನು. ಇವನು ನಂದಿಯ ರೂಪಿನಿಂದ ಆ ಪುಣ್ಯ ಭೂಮಿಯಲ್ಲಿ ತಪಸ್ಸನ್ನು ಮಾಡುತ್ತಾ ಇದ್ದನು. ಆಗ ಅವನು ಪುರುಷ ರೂಪವನ್ನು ತಾಳಿ ವಸುಧೀಶನಿಗೆ ಕಾಣಿಸಿಕೊಂಡು, ನಿನಗೇನು ಬೇಕೆಂದು ಕೇಳಿದನು. ಆಗ ವಸುಧೀಶನು ಶಿಷ್ಯಭಾವದಿಂದ ಅವನಿಗೆರಗಿ ಹೇಳಿದ್ದು—ಈಗ ನಾನು ಬಹಳ ಹಸಿದಿದ್ದೇನೆ. ಲಿಂಗ ಸಂದರ್ಶನವಿಲ್ಲದೆ ನಾನು ಉಣ್ಣೆನೆಂಬ ಭಾಷೆಯನ್ನು ತೊಟ್ಟಿದ್ದೇನೆ. ನನಗೆ ಲಿಂಗವನ್ನು ತೋರಿಸು ಎಂದು ನುಡಿದು ಸಾಷ್ಟಾಂಗವೆರಗಿದನು. ಆಗ ನಂದೀಶ್ವರನು ಅವನ

ಭಕ್ತಿ ಭಾವಕ್ಕೆ ಮೆಚ್ಚಿ ಅವನಿಗೆ ಗುರುಭಾವವನ್ನು ತಾಳಿ ತನ್ನ ಅಂತರ್ಗತವಾದ ಪ್ರಾಣಲಿಂಗವನ್ನು ಬಹಿಷ್ಕರಿಸಿ ಅದನ್ನು ತೊಳಗಿ ಬೆಳಗುವ ಕ್ರಿಯಾಸ್ವರೂಪವಾದ ಇಷ್ಟಲಿಂಗವನ್ನಾಗಿ ಮಾಡಿ ಅರಸನಿಗೆ— ಈ ಲಿಂಗವನ್ನು ನೀನು ಧಾರಣಮಾಡು. ಇದನ್ನು ಪೂಜಿಸುತ್ತ ಇದರ ಮೂಲಕ ಪ್ರಸಾದಗ್ರಾಹಿಯಾಗಿ ಮೋಕ್ಷವನ್ನು ಹೊಂದು, ಎಂದು ಬೋಧಿಸಿ ಅವನಿಗೆ ತನ್ನ ಆ ಇಷ್ಟಲಿಂಗವನ್ನು ದಯಪಾಲಿಸಿದನು. ಹೀಗೆ ಆ ನಂದಿಕೇಶ್ವರ ಗಣಾಧೀಶ್ವರನೇ ವಸುಧೀಶನಿಗೆ ಗುರುವಾದನು. ಆ ಮೇಲೆ ಅರಸನು ತನ್ನ ಪ್ರಧಾನಿಗಳೊಂದಿಗೆ ತನ್ನ ರಾಜಧಾನಿಗೆ ತಿರುಗಿ ಬಂದನು.

ವಸುಧೀಶನು ತನ್ನ ಯೋಗಾಭ್ಯಾಸದ ಮೂಲಕ ಇಷ್ಟರಲ್ಲಿಯೇ ಅದ್ಭುತವಾದ ಸಾಮರ್ಥ್ಯವನ್ನು ಹೊಂದಿದವನಾಗಿದ್ದನು. ಅವನಿಗೆ ನಂದಿಕೇಶ್ವರನು ಪ್ರಾಣಲಿಂಗಸ್ವರೂಪವಾದ ಇಷ್ಟಲಿಂಗವನ್ನು ದಯಪಾಲಿಸಿದಂದಿನಿಂದ ಅವನು ತನ್ನ ಮೊದಲಿನ ಸಿದ್ಧರ ಮಾರ್ಗವನ್ನು ತ್ಯಜಿಸಿ ತನಗೆ ಕೊಟ್ಟ ಇಷ್ಟಲಿಂಗದಲ್ಲಿಯೇ ತನ್ನ ಮನಸ್ಸನ್ನು ಇಟ್ಟು ಪ್ರಾಣಲಿಂಗ ಧ್ಯಾನಪರಾಯಣನಾದನು. ಅವನು ಅದನ್ನು ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸುವನು, ಆ ಲಿಂಗವನ್ನೇ ಅರ್ಚಿಸುವನು, ಕೀರ್ತಿಸುವನು. ಅದರಲ್ಲಿಯೇ ಅವನು ಯಾವಾಗಲೂ ಮಗ್ನನಾಗಿರುವನು. ಆಗ ಅವನಿಗೆ ಈ ಭವದ ವಿಸ್ಮರಣೆಯಾಯಿತು. ಭ್ರಮರ ಕೀಟದಂತೆ ಲಿಂಗಧ್ಯಾನದಲ್ಲಿಯೇ ಇರಹತ್ತಿದನು. ಆಗ ಜನರಲ್ಲಿ ಅವನಿಗೆ 'ಅನಿಮಿಷ' ಎಂಬ ಹೆಸರು ಪ್ರಾಪ್ತವಾಯಿತು. ಅಂದರೆ ಎವೆಯಿಕ್ಕದೆ ಲಿಂಗವನ್ನು ನಿರೀಕ್ಷಿಸುತ್ತ ಅದರಲ್ಲಿಯೇ ಅಚಲಮನಸ್ಕನಾಗಿರುವವನು ಎಂಬ ಭಾವವು ಈ ಶಬ್ದದಲ್ಲಿದೆ.

ಅನಿಮಿಷನಿಗೆ ಈ ಸ್ಥಿತಿಯು ಉಂಟಾಗಲು ಅವನು ತನ್ನ ದೇಶಕೋಶಗಳನ್ನು ಮರೆದನು ರಾಜ್ಯವನ್ನು ಸಹ ತೊರೆಯಲು ಸನ್ನದ್ಧನಾದನು. ಅವನಿಗೆ ಸ್ಥಾವರ ಲಿಂಗಕ್ಕಿಂತಲೂ ನಂದಿಕೇಶ್ವರನು ಕೊಟ್ಟ ಇಷ್ಟಲಿಂಗವೇ ಪ್ರಿಯವಾಯಿತು. ಅದೇ ಅವನಿಗೆ ಪ್ರಾಣಸ್ವರೂಪವಾಯಿತು. ಅವನಿಗೆ ಯೋಗಾಭ್ಯಾಸಕ್ಕಿಂತಲೂ ಶಿವಾನುಭವವೇ ಹೆಚ್ಚಿನದೆಂದೆನಿಸಿತು.

ಆಗ ಅವನು ಶಿವಾನುಭಾವಿಗಳೆಲ್ಲಿರುವರೋ ಅಲ್ಲಿಗೆ ಹೋಗಲು ಬಯಸಿ ಅತ್ತಕಡೆಗೆ ಹೊರಡಲು ಉದ್ಯುಕ್ತನಾದನು. ಈ ಕಾಲದಲ್ಲಿ ಬಳ್ಳಿ

ಗಾವಿ ಪ್ರಾಂತದಲ್ಲಿ ಅನೇಕ ಶಿವಶರಣರು ಉದ್ಭವಿಸಿದ್ದರಿಂದ ಅವನು ಅಲ್ಲಿಗೆ ಹೋಗಲು ನಿಶ್ಚಯಿಸಿದನು.

ಆಗ ಅವನೊಡನೆ ಅವನ ಪ್ರಧಾನಿಗಳೂ ಸೇವಕರೂ ಹೊರಟು ಬಳ್ಳಿಗಾವಿಯ ಸಮೀಪದಲ್ಲಿ ಶಿವಯೋಗಕ್ಕೆ ಸಾಧನೀಭೂತವಾದ ಒಂದು ಉತ್ತಮ ಸ್ಥಳವನ್ನು ಆಯ್ದರು. ಅನಿಮಿಷನು ಅಲ್ಲಿಗೆ ಬಂದು ಅಲ್ಲಿ ತನ್ನ ಲಿಂಗದಲ್ಲಿ ಮನಸ್ಸನ್ನು ಇಟ್ಟು ಲಿಂಗಧ್ಯಾನ ಪರಾಯಣನಾದನು. ಅವನಿಗೆ ಬಾಹ್ಯ ಸೃಷ್ಟಿಯ ಅರಿವು ಏನೂ ಉಳಿಯಲಿಲ್ಲ. ಈ ಸ್ಥಿತಿಯುಂಟಾಗಲು ಅವನ ಮಂತ್ರಿಪ್ರಧಾನರು ಅನಿಮಿಷಯ್ಯನ ಮೇಲೆ ಒಂದು ಶಿಲಾಗುಡಿಯನ್ನು ಕಟ್ಟಿಸಿ ಅದಕ್ಕೆ ಸುವರ್ಣ ಕಲಶವನ್ನಿಟ್ಟು ಅದನ್ನು ನೆಲಗುಡಿಯನ್ನಾಗಿ ಮಾಡಿ ಸ್ವಗ್ರಾಮಕ್ಕೆ ತೆರಳಿದರು.

ಅನಿಮಿಷಯ್ಯನು ಹೀಗೆ ತನ್ನ ಲಿಂಗದಲ್ಲಿ ಮಗ್ನನಾಗಿ ಆಹಾರ ನಿದ್ರೆಗಳನ್ನು ತೊರೆದು ತನ್ನ ಇಷ್ಟಲಿಂಗಧ್ಯಾನದಲ್ಲಿ ತೊಡಗಲು, ಅವನ ದೇಹದಲ್ಲಿ ಪ್ರಾಣ ಮಾತ್ರ ಉಳಿಯಿತು. ಚರ್ಮ ಮತ್ತು ಅಸ್ಥಿಗಳು ಅವನಲ್ಲಿ ನಿಮಿತ್ತ ಮಾತ್ರಕ್ಕೆ ಉಳಿದವು. ಆಗ ಅನನಿಗೆ ಇಷ್ಟಲಿಂಗದ ನೋಟವೇ ಪ್ರಾಣವಾಯಿತು. ಅವನಿಗೆ ಹೊರಗಿನ ತಿಳಿವಳಿಕೆ ಏನೂ ಉಳಿಯಲಿಲ್ಲ.

ಹೀಗಿರಲು ಅವನು ವಾಸಮಾಡಿದ ದೇವಾಲಯದ ಸುತ್ತಲು ಗೊಗ್ಗಯ್ಯನೆಂಬ ತೋಟಿಗನು ಅದರ ಒಳಗೆ ಯಾರು ಇದ್ದಾರೆ, ಅವರು ಏನು ಮಾಡುತ್ತಾರೆ, ಎಂಬುದನ್ನು ತಿಳಿಯದೆ ಅದರ ಸುತ್ತಲೂ ಗಿಡಗಳನ್ನು ಬೆಳೆಯಿಸಿ ತೋಟವನ್ನು ಮಾಡಹತ್ತಿದನು. ಆದರೆ ಅದರ ಅರಿವು ಒಳಗಿದ್ದ ಅನಿಮಿಷನಿಗೇನೂ ಇರಲಿಲ್ಲ.

ಹೀಗಿರುವಲ್ಲಿ ಒಂದು ದಿನ ಅಲ್ಲಮಪ್ರಭುವು ಬನವಾಸಿಯಲ್ಲಿದ್ದಾಗ ಅವನು ಪ್ರಪಂಚದ ಸಲುವಾಗಿ ಹೇಯಭಾವವನ್ನು ತಾಳಿ ಪಟ್ಟಣವನ್ನು ತೊರೆದು, ಹೊರಹೊರಟು ಬರುತ್ತಿರುವಾಗ ದಾರಿಯಲ್ಲಿ ಗೊಗ್ಗಯ್ಯನು ತೋಟ ಮಾಡುವದನ್ನು ಕಂಡನು. ಅಲ್ಲಮಪ್ರಭುವು ಅವನನ್ನು ಕಂಡು ಹೀಗೆ ಐಹಿಕ ವ್ಯಾಪಾರಗಳಲ್ಲಿ ಮಗ್ನನಾಗಿರದೆ ಫಾರಮಾರ್ಥದಲ್ಲಿ ಇರಬೇಕೆಂದು ಅವನಿಗೆ ಉಪದೇಶಿಸುತ್ತಿರಲು, ಗೊಗ್ಗಯ್ಯನಿಗೆ ಲಿಂಗಮಾರ್ಗದ ಮಹತ್ವವನ್ನು ಪ್ರತ್ಯಕ್ಷ ಅವನ ನಿದರ್ಶನಕ್ಕೆ

ತಂದುಕೊಡುವದು ಅವಶ್ಯವೆಂದು ತೋರಿತು. ಅಷ್ಟರಲ್ಲಿ ಅವನ ಕಣ್ಣಿಗೆ ಆ ತೋಟದಲ್ಲಿ ಹೊರಗೆ ಸಣ್ಣಾಗಿ ಮಿನುಗುತಿರುವ ಒಂದು ಶಿಖರವು ನೆಲದಲ್ಲಿದ್ದುದು ಕಂಡು ಬಂದಿತು. ಆಗ ಅದರ ಸುತ್ತಲೂ ಇದ್ದ ಮಣ್ಣನ್ನು ಪ್ರಭುವು ಕೆದರಲು ಅಲ್ಲಿ ಒಂದು ದೇವಾಲಯು ಇದ್ದುದು ದೃಷ್ಟಿಗೋಚರವಾಯಿತು. ಅದರಲ್ಲಿ ಬಿದ್ದಿದ್ದ ಮಣ್ಣನ್ನೆಲ್ಲ ಸರಿಸಿ ದೇವಾಲಯುದ ಹೆಬ್ಬಾಗಿಲಿನಿಂದ ಗೊಗ್ಗಯ್ಯನೊಡನೆ ಒಳಗೆ ಪ್ರವೇಶಿಸಿ ನೋಡಲು ಅಲ್ಲಿ ಅನುಮಿಷನು ತನ್ನ ಕೈಯ್ಯಲ್ಲಿ ಲಿಂಗವ ನ್ನಿಟ್ಟುಕೊಂಡು ಅದರಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಮಗ್ನನಾಗಿದ್ದದ್ದನ್ನು ಕಂಡನು.

ಆಮೇಲೆ ಅಲ್ಲಮಪ್ರಭುವು ಅನುಮಿಷಯ್ಯನಿಗೆ ಸಾಷ್ಟಾಂಗವೆರಗಿ ಅವನ ಕರದಲ್ಲಿದ್ದ ಲಿಂಗವನ್ನು ತನ್ನ ಕರಸ್ಥಲದ ಲಿಂಗದಲ್ಲಿ ಸ್ವಾಯುತ ಮಾಡಿಕೊಳ್ಳಬೇಕೆಂದು ಮುಂದುವರಿಯುಲು, ಆ ಅನುಮಿಷಯ್ಯನ ಲಿಂಗದ ಕಳೆಗಳು ಅದರಲ್ಲಿ ಬೆರೆದುಹೋದವು. ಹೀಗಾದ ಕೂಡಲೆ ಅನುಮಿಷಯ್ಯನ ಅಸ್ಥಿಗಳು ತಾವಾಗಿಯೇ ನೆಲಕ್ಕೆ ಉದುರಿಬಿದ್ದವು. ಹೀಗೆ ಪ್ರಭುವು ಅನುಮಿಷಯ್ಯನ ಶಿಷ್ಯತ್ವವನ್ನು ಸ್ವೀಕರಿಸಿ ಅವನ ಶಕ್ತಿಯನ್ನು ತನ್ನಲ್ಲಿ ಅಳವಡಿಸಿಕೊಂಡು ಉಭಯುತರು ಏಕಾಕಾರ ವಾದರು. ಹೀಗೆ ಗೊಗ್ಗಯ್ಯನಿಗೆ ಲಿಂಗದ ಮರ್ಮ, ಗುರುಶಿಷ್ಯ ಸಂಬಂಧ, ಇವುಗಳ ರೀತಿಯನ್ನು ತನ್ನ ಆಚರಣೆಯುಲ್ಲಿ ತೋರಿಸಿ ಮುಂದೆ ಅವನು ವೀರಶೈವ ಮಾರ್ಗವನ್ನು ಉಪದೇಶಿಸುತ್ತ ಅನೇಕ ದೇಶಗಳನ್ನು ಸಂಚರಿಸುತ್ತ ಕಲ್ಯಾಣಕ್ಕೆ ಬರುವವನಾದನು.

ಈ ಪ್ರಕಾರ ನಂದಿಕೇಶ್ವರನು ಅನುಮಿಷನಿಗೆ ಗುರುವಾಗಿಯೂ ಅನುಮಿಷಯ್ಯನು ಅಲ್ಲಮ ಪ್ರಭುವಿಗೆ ಗುರುವಾಗಿಯೂ ಅಲ್ಲಮ ಪ್ರಭುವು ಬಸವಾದಿ ಸಕಲ ಪ್ರಮಥರಿಗೆ ಮಹಾಜ್ಞಾನ ಗುರುವಾಗಿಯೂ ಆಚರಿ ಸುತ್ತ ಈ ಯಾವತ್ತರೂ ವೀರಶೈವ ಧರ್ಮವನ್ನು ಉದ್ಧರಿಸಿದ್ದಾರೆ.

ಇವರಲ್ಲಿ ಅನುಮಿಷನು ಪ್ರಾಣಲಿಂಗಿ ಸ್ಥಲದಲ್ಲಿದ್ದು ಶಿವಯೋಗಾ ಚರಣೆಯುಲ್ಲಿ ನಿರತನಾಗಿದ್ದನು. ಆದರೆ ಇವನು ಆರಂಭದಲ್ಲಿ ಸಿದ್ಧರ ಮಾರ್ಗದಲ್ಲಿದ್ದು ಸಿದ್ಧಿಗಳನ್ನು ಮಾಡುವವನಾಗಿದ್ದನು. ಆದರೆ ನಂದಿ ಕೇಶ್ವರನ ಮೂಲಕ ಅವನು ಈ ಮಾರ್ಗವನ್ನು ಬಿಟ್ಟು ವೀರಶೈವಾ

ಚಾರವನ್ನು ಗ್ರಹಿಸಿದನು. ನಂದಿಕೇಶ್ವರನಿದ್ದ ಸ್ಥಳವು ಬದಾಮಿ, ಪಟ್ಟದಕಲ್ಲು, ಐಹೊಳೆ ಪ್ರದೇಶದಲ್ಲಿರಬೇಕೆಂದು ನಾವು ಊಹಿಸುತ್ತೇವೆ. ಈ ಭೂಭಾಗವು ಬಹು ಪವಿತ್ರವಾದುದು. ನಂದಿಕೇಶ್ವರ ಎಂಬ ಹೆಸರಿನ ಗ್ರಾಮವೂ ಅಲ್ಲಿ ಈಗಲೂ ಉಂಟು. ಪಟ್ಟದಕಲ್ಲಿನಿಂದ ಅದು ೫-೬ ಮೈಲುಗಳು ಮತ್ತು ಮಹಾಕೂಟ ಕ್ಷೇತ್ರದಿಂದ ಒಂದೆರಡು ಮೈಲುಗಳ ಮೇಲೆ ಇದೆ. ಇದಕ್ಕೆ ಸಮೀಪವಾಗಿ ಅನೇಕ ಪುರಾತನ ಕಾಲದ ಅವಶೇಷಗಳು ಇವೆ. ಇಲ್ಲಿ ಅಥವಾ ಇದರ ಸಮೀಪದಲ್ಲಿ ನಂದಿಕೇಶ್ವರನು ತಪಸ್ಸು ಮಾಡುತ್ತಿದ್ದು ಅವನಿಂದ ಅನುಮಿಷನು ಅಲ್ಲಿಯೇ ಲಿಂಗಧಾರಣವನ್ನು ಹೊಂದಿರಬಹುದು. ಈತನು ನಂದಿಯೇ ಎಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಆದರೆ ಈ ನಂದೀಕೇಶ್ವರನು ಮತ್ತು ರಾಜನಾದ ಅನುಮಿಷನು ಇವರು ಪುರಾತನಕಾಲದಲ್ಲಿ ಬಹು ಪ್ರಸಿದ್ಧ ಶಿವಶರಣರೆಂಬುದು ಸ್ಪಷ್ಟವಿದೆ. ನಂದಿಕೇಶ್ವರನು ತಪಸ್ಸುಮಾಡುತ್ತಿದ್ದ ವಾಸಸ್ಥಳಕ್ಕೆ ಸಮೀಪವಿದ್ದ ಗ್ರಾಮಕ್ಕೆ ನಂದಿಕೇಶ್ವರ ಎಂಬ ಹೆಸರು ಬಂದಿರಬಹುದು. ಇಲ್ಲಿಯೇ ಅನುಮಿಷ ಅಂದರೆ ವಸುಧೀಶರಾಜನ ಕುದುರೆಯು ಮಾಯವಾಗಿರಬಹುದು. ಅನುಮಿಷನ ರಾಜಧಾನಿಯು ಪಟ್ಟದಕಲ್ಲು. ಅವನು ಅಲ್ಲಿ ಇರಹತ್ತಿದ ಬಳಿಕ ಅವನು ತನ್ನ ಗುರುವಾದ ನಂದಿಕೇಶ್ವರನ ಗುರುತಿಗಾಗಿ ಒಂದು ನಂದಿಯ ವಿಗ್ರಹವನ್ನು ಮಾಡಿಸಿ ಈ ಗ್ರಾಮದಲ್ಲಿ ಸ್ಥಾಪಿಸಿದಂತೆ ತೋರುತ್ತದೆ. ಯಾಕಂದರೆ 'ಪಟ್ಟದಕಲ್ಲಿನ ಬಸವಣ್ಣ'ನ ಮಹತ್ವವು ಈ ಪ್ರದೇಶದಲ್ಲಿ ಈಗಲೂ ಬಹಳ ಇದ್ದು ಅದರ ಹೆಸರಿನಿಂದ ಈ ಗ್ರಾಮದಲ್ಲಿ ಬಹು ದೊಡ್ಡ ಜಾತ್ರೆಯಾಗುತ್ತದೆ. ಇದು ಬಹು ಉನ್ನತವಾದ ಮತ್ತು ಬಹು ಸುಂದರವಾದ ವಿಗ್ರಹವು. ಇದು ಅತ್ಯಂತ ಮಹತ್ವದ ಮತ್ತು ಪ್ರಸಿದ್ಧವಾದ ವಿರೂಪಾಕ್ಷ ದೇವಾಲಯದಲ್ಲಿ ಇದ್ದರೂ ವಿರೂಪಾಕ್ಷಲಿಂಗನ ಜಾತ್ರೆಯಾಗದೆ ಅದರ ಇದಿರಿಗೆ ಇರುವ ಈ ನಂದಿಯ ಜಾತ್ರೆಯಾಗುತ್ತದೆ. ಮುಖ್ಯ ದೇವತೆಯಾದ ಶಿವಲಿಂಗವನ್ನು ಬಿಟ್ಟು ಹೀಗೆ ನಂದಿಯ ಜಾತ್ರೆ ಮಾಡುವ ರೂಢಿಯು ಎಲ್ಲಿಯೂ ಇರುವದಿಲ್ಲ. ಇದರಿಂದ ಈ ನಂದಿಯ ಮಹತ್ವವು ಜನರಲ್ಲಿ ಎಷ್ಟಿರುತ್ತದೆಂಬುದು ಗೊತ್ತಾಗುತ್ತದೆ. ಈ ನಂದಿಯು ಅನುಮಿಷನ ಗುರುವಾದ ನಂದಿಕೇಶ್ವರನ ಸ್ಮರಣಾರ್ಥವಾಗಿ ನಿರ್ಮಿಸಲ್ಪಟ್ಟಿರುವದರಿಂದ ಇದಕ್ಕೆ ಜನರು ಇಷ್ಟು ಮಹತ್ವವನ್ನು ಕೊಟ್ಟಿರಬಹುದು.

ಗೋರಕ್ಷನು ಅನುಮಿಷನಂತೆಯೇ ಸಿದ್ಧಪುರುಷನು. ಅವನ ಗ್ರಾಮವಾದರೂ ಪಟ್ಟದಕಲ್ಲು (ಶಿವಶರಣರ ಚರಿತ್ರೆಗಳು ಭಾಗ ೧ ಪುಟ ೬೮ ನೋಡಿರಿ). ಅವನೂ ಅನುಮಿಷನೂ ಸಮಕಾಲೀನರು ಮತ್ತು ಒಂದೇ ಗ್ರಾಮದವರು. ಆದರೆ ಗೋರಕ್ಷನು ಈ ಕಾಲದಲ್ಲಿ ವೀರಶೈವ ಧರ್ಮವನ್ನು ಸ್ವೀಕರಿಸದೆ, ತನ್ನ ಸಾಮರ್ಥ್ಯವನ್ನು ಹೆಚ್ಚಿಗೆ ಬೆಳಸಿಕೊಳ್ಳಬೇಕೆಂದು ಕೊಲ್ಲಾಪುರಕ್ಕೆ ಬಂದನು. ಅಲ್ಲಿ ರೇವಣಸಿದ್ಧೇಶ್ವರನಿಂದ ಭಂಗಿತನಾಗಿ ಮುಂದೆ ಶ್ರೀಶೈಲಕ್ಕೆ ಹೋಗಿ ತಪಸ್ಸು ಮಾಡು ವವನಾದನು. ಅಲ್ಲಿ ಅವನು ಅಲ್ಲಮಪ್ರಭುವನ್ನು ಕಾಣಲು, ಪ್ರಭುವು ಸಿದ್ಧಿಗಳ ಸಾಧನೆಗಿಂತಲೂ ತ್ರಿಲಿಂಗಗಳ ಸಾಧನೆಯೇ ಹೆಚ್ಚಿನದೆಂದು ಅವನ ನಿದರ್ಶನಕ್ಕೆ ತಂದುಕೊಟ್ಟನು. ಆಗ ಗೋರಕ್ಷನು ಅಲ್ಲಮಪ್ರ ಭುವಿನಿಂದ ಲಿಂಗದೀಕ್ಷೆಯನ್ನು ಹೊಂದಿ ವೀರಶೈವ ಧರ್ಮವನ್ನು ಪಾಲಿ ಸುವವನಾದನು. ಮುಂದೆ ವಚನಕಾರನೂ ಆದನು.

ಆದರೆ ಅನುಮಿಷನು ನಂದಿಕೇಶ್ವರನಿಂದ ಅನುಗ್ರಹಿಸಲ್ಪಟ್ಟ ಬಳಿಕ ಅವನು ಸಿದ್ಧರ ಮಾರ್ಗವನ್ನು ಬಿಟ್ಟು ಕೇವಲ ಶಿವಾನುಭವ ಮಾರ್ಗ ದಲ್ಲಿ ಉಳಿದನು. ಅವನು ತನ್ನ ರಾಜ್ಯವನ್ನು ಬಿಟ್ಟುಕೊಟ್ಟು ಬಳ್ಳಿಗಾ ವಿಗೆ ಬಂದು ತನ್ನ ಲಿಂಗಾನುಸಂಧಾನದಲ್ಲಿ ಇರಹತ್ತಿದನು. ಬಳ್ಳಿಗಾವಿ ಯಿಂದ ಎರಡು ಮೈಲುಗಳ ಮೇಲೆ 'ಅನಿಮಿಷಾರ್ಯ ಕ್ಷೇತ್ರ' ಅಥವಾ 'ಅನಿಮಿಷ ಕೊಪ್ಪಲು' ಎಂದು ಆತನು ಇದ್ದ ಸ್ಥಳವು ಈಗಲೂ ಪ್ರಸಿದ್ಧ ವಾಗಿರುತ್ತದೆ. ಅಲ್ಲಿ ಅವನ ಗುಡಿಯೂ ಇದೆ. ಪ್ರತಿವರ್ಷ ಅಲ್ಲಿ ಜಾತ್ರೆಯೂ ಆಗುತ್ತಿದೆ. ಆದ್ದರಿಂದ ಅನುಮಿಷನು ವೀರಶೈವ ದೀಕ್ಷೆ ಯನ್ನು ಹೊಂದಿದ ಬಳಿಕ ಅವನು ಪಟ್ಟದಕಲ್ಲಿನಿಂದ ಈ ಪುಣ್ಯಸ್ಥಳಕ್ಕೆ ಬಂದಿರಬಹುದೆಂದು ನಾವು ತರ್ಕಿಸುತ್ತೇವೆ.

ಗೋರಕ್ಷನು ನವನಾಥರಲ್ಲಿ ಬಹು ಪ್ರಸಿದ್ಧನಾಗಿದ್ದಾನೆ. ಅವನ ಗುರುವಿನ ಹೆಸರು ಮತ್ಸ್ಯೇಂದ್ರನಾಥನೆಂದು ಸಿದ್ಧರ ಚರಿತ್ರೆಗಳಿಂದ ಗೊತ್ತಾಗುತ್ತದೆ. ಮತ್ಸ್ಯ ಇದಕ್ಕೆ ಅನಿಮಿಷ ಎಂಬ ಹೆಸರಿರುತ್ತದೆ. ಆದ್ದರಿಂದ ಮತ್ಸ್ಯೇಂದ್ರನಾಥನು ಅನಿಮಿಷನಿರಬಹುದೆಂದು ನಾವು ಊಹಿಸಬೇಕಾಗುತ್ತದೆ. ಆದ್ದರಿಂದ ವಸುಧೀಶರಾಜ, ಆತನ ಎರಡನೆಯ ಹೆಸರು ಅನಿಮಿಷ ಮತ್ತು ಗೋರಕ್ಷ ಈ ಉಭಯತರು ಪಟ್ಟದಕಲ್ಲಿನಲ್ಲಿ ಇದ್ದಾಗ್ಗೆ ಗುರುಶಿಷ್ಯರಾಗಿದ್ದರೆಂದು ತೋರುತ್ತದೆ.

ಪಟ್ಟದಕಲ್ಲಿನಿಂದ ಐಹೊಳೆ ಗ್ರಾಮವು ಐದಾರು ಮೈಲುಗಳ ಮೇಲೆ ಇದೆ. ಈ ಐಹೊಳೆ ಗ್ರಾಮದಲ್ಲಿ ಶಿವಯೋಗಿ ಮಲ್ಲರಸನು ಬ್ರಾಹ್ಮಣರಲ್ಲಿ ಉದ್ಭವಿಸಿ ಆ ಪಟ್ಟಣದ ಒಡೆಯನಾಗಿದ್ದನು. ಇವನೂ ಮೊದಲು ಸಿದ್ಧನು. ಆದರೆ ಅವನು ವೀರಶೈವೋಪದೇಶವನ್ನು ಹೊಂದಿದ ಬಳಿಕ ಶ್ರೀಶೈಲಕ್ಕೆ ಹೋಗಿ ಅಲ್ಲಿ ವಾಸಮಾಡುವವನಾದನು (ಶಿವ ಶರಣರ ಚರಿತ್ರೆಗಳು ಭಾಗ ೧ ಪುಟ ೩೫ ನೋಡಿರಿ). ಅಲ್ಲಿ ಅವನು ಸಕಲೇಶ ಮಾದರಸನನ್ನು ಕಂಡು ಅವನಿಗೆ— ನೀನು ಕಠಿಣವಾದ ತಪಸ್ಸನ್ನು ಮಾಡದೆ ಬಸವಾದಿಪ್ರಮಥರಿಂದ ತ್ರಿಲಿಂಗದ ಮಾರ್ಗವನ್ನು ಅನುಸರಿಸು ಎಂದು ಬೋಧಿಸಿ, ಅವನನ್ನು ಕಲ್ಯಾಣಕ್ಕೆ ಕಳಿಸುವವ ನಾದನು. ಹಾಗೆಯೇ ಸಕಲೇಶಮಾದರಸನು ಕಲ್ಯಾಣದಲ್ಲಿ ಬಂದು ನಿಂತುಕೊಂಡು ಅಲ್ಲಿ ಅನೇಕ ವಚನಗಳನ್ನು ರಚಿಸಿದ್ದಾನೆ.

ಈ ಎಲ್ಲ ಸಂಗತಿಗಳ ಮೇಲಿಂದ ನಂದಿಕೇಶ್ವರ, ಅನುಮಿಷ, ಗೋರಕ್ಷ, ಇವರು ಬಸವೇಶ್ವರನಕಿಂತಲೂ ಕೆಲವು ಕಾಲ ಹಿಂದಿನವರಾ ಗುತ್ತಾರೆ. ಅನುಮಿಷ ಮತ್ತು ಗೋರಕ್ಷ ಇವರು ಆರಂಭದಲ್ಲಿ ವೀರಶೈವರಿರದಿದ್ದರೂ ಹಿಂದುಗಡೆ ಲಿಂಗಧಾರಣೆಯನ್ನು ಹೊಂದಿ ವೀರ ಶೈವ ಸಂಸ್ಕೃತಿಯನ್ನು ಮುಂದುವರಿಸಿದ್ದಾರೆ.

ಕೆಲವರು ಅನುಮಿಷನಿಗೆ ಕಲ್ಯಾಣದ ಬಸವೇಶ್ವರನೇ ಲಿಂಗ ಧಾರಣೆ ಮಾಡಿದ್ದಾನೆಂದು ತಿಳಿದಿದ್ದಾರೆ. ಹಾಗೆ ಕೆಲವು ಗ್ರಂಥಗಳಲ್ಲಿ ಉಲ್ಲೇಖಗಳೂ ಇವೆ. ಆದರೆ ಅವನಿಗೆ ಲಿಂಗಧಾರಣೆ ಮಾಡಿದವನು ನಂದಿಕೇಶ್ವರನಿದ್ದಾನೆ. ಈ ನಂದಿಕೇಶ್ವರು ಶಿವನ ಸಮ್ಮುಖದಲ್ಲಿ ಕೈಲಾ ಸದಲ್ಲಿದ್ದಾಗ ಶಿವನು ಪೃಥ್ವಿಯಲ್ಲಿ ಧರ್ಮೋದ್ಧಾರ ಮಾಡಲು ಅವನಿಗೆ ಅಪ್ಪಣೆಯನ್ನಿತ್ತಿದ್ದರಿಂದ ಅವನು ಬಸವನಾಮದಿಂದ ಮುಂದೆ ಮಾದ ಲಾಂಬೆಯ ಗರ್ಭದಲ್ಲಿ ಜನಿಸಿದನೆಂದು ಪುರಾಣೋಕ್ತ ಕಥೆ ಇದೆ. ಆದರೆ ಅನುಮಿಷ, ನಂದಿಕೇಶ್ವರ, ಗೋರಕ್ಷ, ಇವರು ಕಾಲ್ಪನಿಕ ಪುರುಷರಾಗಿರು ವದಿಲ್ಲ. ಅವರು ಬಸವೇಶ್ವರನಕಿಂತಲೂ ಕೆಲವು ಕಾಲ ಮೊದಲು ಜನಿಸಿದವರಾಗಿ ಲಿಂಗಾನುಸಂಧಾನದಲ್ಲಿ ನಿರತರಾಗಿ ಪ್ರಾಣಲಿಂಗಿ ಸ್ಥಳ ದವರಾಗಿರುತ್ತಾರೆ. ಷಟ್‌ಸ್ಥಲದಲ್ಲಿ ಅನೇಕ ಸ್ಥಲಗಳಿರುತ್ತವೆ. ಲಿಂಗಾಂಗಿ ಗಳಾದವರು ಆ ಸ್ಥಲಗಳಲ್ಲಿ ತಮಗೆ ಸಾಧ್ಯವಾದ ಕೆಲವೊಂದು ಸ್ಥಲ

ಬೆಳ್ಳಿದ್ದುಕೊಂಡು ಆ ಸ್ಥಲದ ಆಚರಣೆಗಳನ್ನು ಆಚರಿಸುತ್ತ ತಮ್ಮ ಉನ್ನತಿಯನ್ನು ಮಾಡಿಕೊಳ್ಳಲು ಸ್ವತಂತ್ರರಿದ್ದಾರೆ. ಷಟ್‌ಸ್ಥಲ ಮಾರ್ಗವು ಹೀಗೆ ಆಚರಿಸಲಿಕ್ಕೆ ಎಲ್ಲರಿಗೂ ಅವಕಾಶ ಕೊಟ್ಟಿರುತ್ತದೆ. ಆ ಪ್ರಕಾರ ಅನುಮಿಷನು ಲಿಂಗಧಾರಿಯಾದ ಬಳಿಕ ಕೆಲವು ಕಾಲ ಮಾತ್ರ ಪಟ್ಟದ ಕಲ್ಲಿನಲ್ಲಿ ವಾಸ ಮಾಡಿ ಮುಂದೆ ಅವನು ತನ್ನ ರಾಜ್ಯವನ್ನು ಬಿಟ್ಟು ಕೊಟ್ಟು ಬಳ್ಳಿಗಾವಿಗೆ ಬಂದು ಅಲ್ಲಮ ಪ್ರಭುವಿಗೆ ಅನುಗ್ರಹಿಸಿ ಶಿವ ಶರಣರಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದಾನೆ.

---

## ಶಿವಲೆಂಕ ಮಂಚಣ್ಣ.

ವೀರಶೈವ ಗ್ರಂಥಕಾರರಲ್ಲಿ ಮೂವರು ಜನರು ಬಹು ಪ್ರಸಿದ್ಧ ರಾಗಿದ್ದಾರೆ. ಅವರು ಶಿವಲೆಂಕ ಮಂಚಣ್ಣ, ಶ್ರೀಪತಿ ಪಂಡಿತ, ಮತ್ತು ಮಲ್ಲಿಕಾರ್ಜುನ ಪಂಡಿತ ಇವರಿದ್ದಾರೆ. ಇವರು ಪಂಡಿತತ್ರಯರೆಂದು ಹೆಸರಾಗಿದ್ದಾರೆ. ಇವರಲ್ಲಿ ಶ್ರೀಪತಿ ಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತ ಇವರು ಆಂಧ್ರ ಅಂದರೆ ತೆಲುಗು ದೇಶದವರು. ಶಿವಲೆಂಕ ಮಂಚಣ್ಣನು ಕಾಶೀಕ್ಷೇತ್ರದವನು. ಇವರೆಲ್ಲರೂ ವೀರಶೈವ ಸಿದ್ಧಾಂತವನ್ನು ನೆಲೆಗೊಳಿಸಿದ್ದಾರೆ. ಇವರು ವೀರಶೈವಧರ್ಮತತ್ವಗಳ ಮಹತ್ವವನ್ನು ವೇದಾಗಮೋಪನಿಷತ್ತುಗಳಲ್ಲಿಯ ಆಧಾರಗಳನ್ನು ತೆಗೆದುಕೊಂಡು ಪ್ರತಿಷ್ಠಾಪಿಸಿದ್ದಾರೆ.

ಶಿವಲೆಂಕ ಮಂಚಣ್ಣನು ಬ್ರಾಹ್ಮಣನು. ಅವನ ಅಜ್ಜನ ಹೆಸರು ಸೋಮಶಂಭು ದೇಶಿಕನು. ಇವನು ಬಹು ವಿದ್ವಾಂಸನು. ಅವನ ಮಗನು ಶಂಭುಭಟ್ಟನು. ಇವನು ಕಾಮಿಕಾದಿ ಆಗಮಗಳಿಗೆ ವೃತ್ತಿ ಮತ್ತು ದೀಪಿಕೆಗಳನ್ನು ರಚಿಸಿ ಅವುಗಳ ತತ್ವಗಳನ್ನು ನಿರೂಪಿಸಿದ್ದಾನೆ. ಅವನು ಶಿವ ಸಮಯುವನ್ನು ಕಾಶಿಯಲ್ಲಿ ಸ್ಥಿರಪಡಿಸಿದನು. ಇವನ ಮಗನೇ ಶಿವಲೆಂಕ ಮಂಚಣ್ಣನು.

ಶಿವಲೆಂಕ ಮಂಚಣ್ಣನು ಶಿವಜ್ಞಾನಿಯು ಮತ್ತು ವೀರಶೈವ ಸಿದ್ಧಾಂತವನ್ನು ಚನ್ನಾಗಿ ಬಲ್ಲವನು. ಅವನು 'ಸಕಲಾಗಮಾಚಾರ್ಯ'ನೆಂದು ಪ್ರಸಿದ್ಧನಾಗಿದ್ದಾನೆ. ಕಾಶಿಯಲ್ಲಿ ಯಾವಾಗಲೂ ಅನೇಕ

ವಿಧ ಮತಾನುಯಾಯಿಗಳು ವಾಸಮಾಡುತ್ತಿದ್ದು ಅವರೊಡನೆ ಅವನ ವಾದಗಳು ಆಗಿಂದಾಗ್ಗೆ ಆಗುತ್ತಿದ್ದು ಅವುಗಳಲ್ಲಿ ಅವನು ಇದಿರಾಳಿಗಳನ್ನು ಯಾವಾಗಲೂ ಸೋಲಿಸುವನು. ಶಿವನೇ ಸರ್ವೋತ್ತಮನೆಂದು ಅವರೊಡನೆ ಅವನು ಪ್ರತಿಪಾದಿಸುವನು. ಇದರಲ್ಲಿ ಅವನು ಬಹುಜನ ಪಂಡಿತರನ್ನು ಗೆದ್ದು 'ಶಿವನಧಿಕವಲ್ಲವೆಂದು ನುಡಿಯುವ ಸಮಯವಾದಿಗಳ ಮಾಗನರಿವ ಶಸ್ತ್ರ' ಎಂಬ ಬಿರುದಿನ ಧ್ವಜವನ್ನು ತನ್ನ ಮನೆಯ ಮೇಲೆ ಕಟ್ಟಿಸಿದನು.

ಇದನ್ನು ಪರವಾದಿಗಳು ನೋಡಿ ಅವರೆಲ್ಲರೂ ಕಾಶಿಯಲ್ಲಿ ಒಂದು ವಿಷ್ಣುವಿನ ದೇವಾಲಯದಲ್ಲಿ ನೆರೆದು, ಮಂಚಣ್ಣನು ಕಟ್ಟಿದ ಧ್ವಜದಲ್ಲಿದ್ದ ಬರಹದ ಬಗ್ಗೆ ಮಾತನ್ನೆತ್ತಿ ಅವರು ಮಂಚಣ್ಣನ ಕೂಡ ವಾದಿಸಿ ಅವನನ್ನು ಸೋಲಿಸಬೇಕೆಂದು ನಿರ್ಧರಿಸಿದರು. ಆ ಮೇಲೆ ಅವರು ಮಂಚಣ್ಣನನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಅವನ ಕೂಡ ವಾದವನ್ನು ಪ್ರಾರಂಭಿಸಿದರು. ಅದರಲ್ಲಿ ಮಂಚಣ್ಣನು ಶಿವನೇ ದೈವವೆಂದು ಪುರಾಣ, ಆಗಮ ಮೊದಲಾದ ಗ್ರಂಥಗಳ ಆಧಾರಗಳನ್ನಿಟ್ಟುಕೊಂಡು ವಾದಿಸಿದನು. ಆಗ ವೈಷ್ಣವರು—ನೀನು ಶಿವನೇ ದೈವವೆಂದು ಅನೇಕ ಆಧಾರಗಳನ್ನು ತೋರಿಸಿಕೊಟ್ಟು ನಮ್ಮ ಮತವನ್ನು ನೀನು ಖಂಡಿಸಿದ್ದೇನೋ ನಿಜ. ಆದರೆ ಇದಕ್ಕೆ ನೀನು ಒಂದು ದೃಷ್ಟಾಂತವನ್ನು ತೋರಿಸಿದಲ್ಲಿ ನಾವು ನಿನ್ನ ಸಿದ್ಧಾಂತವನ್ನು ಒಪ್ಪಿಕೊಳ್ಳುತ್ತೇವೆ ಎಂದೆನ್ನಲು, ಮಂಚಣ್ಣನು—ಹಾಗೆಯೇ ಆಗಲಿ. ಇಲ್ಲಿಯೇ ನಿಮ್ಮ ವಿಷ್ಣುವಿನ ಮೂರುತಿ ಇದೆ. ಆ ವಿಷ್ಣುವು ವಿಶ್ವೇಶ್ವರನನ್ನು ನಮಸ್ಕರಿಸುವಂತೆ ಮಾಡುವೆನು ಎಂದು ಹೇಳಿದನು. ಹಾಗೆಯೇ ಆಗಲೆಂದು ವೈಷ್ಣವರು ಆದಕ್ಕೆ ಒಪ್ಪಿಕೊಂಡರು.

ಆ ಮೇಲೆ ಮಂಚಣ್ಣನು ಮಗ್ಗುಲಲ್ಲಿದ್ದ ಬಿಂದುಮಾಧವ ಮೂರ್ತಿಯನ್ನುದ್ದೇಶಿಸಿ, ಗ್ರಂಥಗಳಲ್ಲಿ—'ನನ್ನ ಕರ್ತನು ಮಹೇಶ್ವರನು' ಎಂದು ನಿನ್ನ ನುಡಿಗಳಿವೆ. ಇವು ನಿಜವಿದ್ದ ಪಕ್ಷದಲ್ಲಿ ನೀನು ವಿಶ್ವನಾಥನಿದ್ದಲ್ಲಿಗೆ ಹೋಗಿ ಅವನಿಗೆ ನಮಸ್ಕರಿಸು ಎಂದೆನ್ನಲು, ಆ ಬಿಂದುಮಾಧವ ಮೂರ್ತಿಯು ಥಟ್ಟನೆ ಎದ್ದು ವಿಶ್ವನಾಥ ದೇವಾಲಯಕ್ಕೆ ನಡೆದು ಬಂದು ದೇವರಿಗೆ ಕರವನ್ನು ಮುಗಿದು ಪೊಡಮಟ್ಟಿತು. ಇದನ್ನು ಕಾಶೀ ಪಟ್ಟಣದ ಜನರು ನೋಡಿ ಅತ್ಯಾಶ್ಚರ್ಯಪಟ್ಟರು.

ಆ ನಾರಾಯಣ ವಿಗ್ರಹವು ವಿಶ್ವೇಶ್ವರನ ದೇವಾಲಯದ ಬಾಗಿಲಲ್ಲಿ ಈಗಲೂ ಇದೆ.

ಮಂಚಣ್ಣನು ಹೀಗೆಯೇ ಮುಂದೆ ವಿಶ್ವೇಶ್ವರನ ವಿಷಯವಾಗಿ ಅತ್ಯಂತ ಭಕ್ತಿಯನ್ನು ತಾಳಿ ಅವನನ್ನು ದಿನಾಲು ಪೂಜಿಸದೆ ಇರಲಿಲ್ಲ. ಅವನಲ್ಲಿದ್ದ ಭಕ್ತಿಯ ಮೂಲಕ ಕಾಶೀ ಪಟ್ಟಣದಲ್ಲಿ ಅವನಿಂದ ಅನೇಕ ಪವಾಡಗಳಾಗಹತ್ತಿದವು. ಅವನು ತನ್ನಂಗದ ವಸ್ತುವನ್ನು ಲಿಂಗಕ್ಕರ್ಪಿಸುವೆನೆಂದು ದಿನಾಲು ತನ್ನ ಕುರುಳು ಕೊಯ್ದು ಲಿಂಗಕ್ಕೆ ಚೌರವ ಬೀಸುವನು ಮತ್ತು ತನ್ನ ಹತ್ತು ಬೆರಳುಗಳನ್ನು ಕಡಿದು ಅವುಗಳಿಂದ ಬೆರಲಿನಾರತಿಯನೆತ್ತುವನು. ಹೀಗೆ ಪರಮಾತ್ಮನನ್ನು ಅವನು ಭಜಿಸಿದ ಬಳಿಕ ಅವುಗಳನ್ನೆಲ್ಲ ಅವನಿಂದ ಪುನಃ ಪಡೆದು ತನ್ನ ಗೃಹಕ್ಕೆ ತಿರುಗಿಬರುವನು. ಇದು ಅವನ ನಿತ್ಯದ ಶಿವಪೂಜೆಯಾಗಿತ್ತು. ಇದರಿಂದ ಜನರು ಅವನನ್ನು 'ಶಿವಲೆಂಕ ಮಂಚಣ್ಣ' ಎಂದರೆ 'ಶಿವನ ಸೇವಕ' ಎಂದು ಕರೆಯಹತ್ತಿದರು. ಮುಂದೆ ಇದೇ ಹೆಸರಿನಿಂದ ಅವನು ಪ್ರಸಿದ್ಧನಾದನು.

ಈ ಪ್ರಕಾರ ಮಂಚಣ್ಣನು ಕಾಶೀ ಪಟ್ಟಣದಲ್ಲಿರುವಾಗ ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರ ಮೊದಲಾದ ಪ್ರಮಥರು ಬಂದು ಶಿವಾನುಭವವನ್ನು ವಿಸ್ತರಿಸುತ್ತಿರುವರೆಂಬುದನ್ನು ಕೇಳಿ ಅವರನ್ನು ಸಂದರ್ಶಿಸಬೇಕೆಂದು ಕಾಶೀ ಪಟ್ಟಣದಿಂದ ಹೊರಟು ಅಲ್ಲಿಗೆ ಬಂದನು. ಶಿವಲೆಂಕ ಮಂಚಣ್ಣನು ಕಾಶಿಯಲ್ಲಿ ಒಬ್ಬ ಶ್ರೇಷ್ಠ ಪಂಡಿತನೆಂದು ಇಷ್ಟರಲ್ಲಿಯೇ ದೇಶದಲ್ಲಿ ಪ್ರಸಿದ್ಧನಾಗಿದ್ದರಿಂದ, ಬಸವೇಶ್ವರನು ಅವನನ್ನು ಕಂಡ ಕೂಡಲೆ, ಅವನಿದಿರಿಗೆ ಹೋಗಿ ಅವನಿಗೆ ಸಾಷ್ಟಾಂಗವೆರಗಿ ಅವನನ್ನು ಅತ್ಯಂತ ಸನ್ಮಾನಿಸಿದನು. ಅಂದಿನಿಂದ ಶಿವಲೆಂಕ ಮಂಚಣ್ಣನು ಶಿವಾನುಭವ ಮಂಟಪದಲ್ಲಿದ್ದುಕೊಂಡು ಒಬ್ಬ ಶ್ರೇಷ್ಠ ಶಿವಾನುಭವಿ ಎಂದೆನಿಸಿಕೊಂಡನು. ಅವನು ಕಡೆಯ ವರೆಗೂ ಕಲ್ಯಾಣ ಪಟ್ಟಣದಲ್ಲಿಯೇ ಉಳಿದು ಅಲ್ಲಿಯೇ ಸಮಾಧಿಸ್ಥನಾದನು.

ಶಿವಲೆಂಕಮಂಚಣ್ಣನು ಒಬ್ಬ ಶ್ರೇಷ್ಠತರಗತಿಯ ಪಂಡಿತನು ಮತ್ತು ಜ್ಞಾನಿಯು. ಅವನು ವಚನಕಾರನಿದ್ದಾನೆ. ಅವನ ೫೩ ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ.

'ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ' ಎಂಬುದೇ ಅವನ ಮುದ್ರಿಕೆಯಾಗಿದೆ. ಅವನ ವಚನಗಳು ಅತ್ಯಂತ ಗಂಭೀರವಾದವುಗಳು. ಅವು ಬಹುತರ ಎಲ್ಲ ವಚನ ಸಂಗ್ರಹಗಳಲ್ಲಿ ಉದಹರಿಸಲ್ಪಟ್ಟಿವೆ.

ಅವನು ಬಸವೇಶ್ವರನ ಸಮಕಾಲೀನನು. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಅವನ ಕೆಲವು ವಚನಗಳನ್ನು ಮಾತ್ರ ನಾವು ಮಾದರಿಗಾಗಿ ಇಲ್ಲಿ ಉದಹರಿಸಿದ್ದೇವೆ.

## ವಚನಗಳು.

ನಮಗೆ ದೊರೆತ ಅವನ ವಚನಗಳಲ್ಲಿ ಶಿವ ವಿಷ್ಣು ಇವರ ನಡುವಿನ ಕಲಹಗಳ ಉಲ್ಲೇಖಗಳು ಏನೂ ಇರುವದಿಲ್ಲ. ಆದರೆ ಲಿಂಗದ ಉಚ್ಚ ವಿಚಾರಗಳು ಅವುಗಳಲ್ಲಿ ಇವೆ. ವಾಚಕರು ಕೆಳಗಿನ ವಚನಗಳನ್ನು ನೋಡಬೇಕು.

(೧) ಆದಿಶಕ್ತಿರೂಪಾಗಿ ಅನಾದಿಶಕ್ತಿ ಪ್ರಾಣವಾಗಿ ಚಿದಾತ್ಮನ ಬೆಳಗು ಅರಿವಾಗಿ ಎನ್ನ ಹೃತ್ಕಮಲ ಮಧ್ಯದಲ್ಲಿ ತೊಳಗಿ ಬೆಳಗಿದಿರಯ್ಯ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ.

(೨) ಎನ್ನ ಕಾಯವೇ ದೇಗುಲವಾಗಿ ಕುರುಹಿಟ್ಟು ಕೊಟ್ಟ ಕುರುಹೇ ಪ್ರಾಣಲಿಂಗವಾಗಿ, ನೋಡುವ ಕಣ್ಣೇ ಪೂಜಿಸುವ ಪುಷ್ಪವಾಗಿ, ಆನಂದಾಶ್ರುಗಳೇ ಸಕಲ ಭೋಗವಾಗಿ, ಅಷ್ಟವಿಧಾರ್ಚನೆ ಷೋಡಶೋಪಚಾರವರತುದೇ ಅಡ್ಡವಣಿಗೆ ಪರಿಯಾಣವಾಗಿ, ಪರಿಣಾಮವೇ ನೈವೇದ್ಯವಾಗಿ, ಅಖಂಡ ಭಕ್ತಿರತಿಯೇ ತಾಂಬೂಲವಾಗಿ, ಪೂಜಿಸು ತ್ತಿರ್ದೆನಯ್ಯ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೇ ಎನ್ನ ಪ್ರಾಣಪೂಜೆ ನಿಮಗೆ.

ಅರ್ಪಣ ಮತ್ತು ಪ್ರಸಾದ ಇವುಗಳ ವಿಷಯವಾಗಿಯೂ ಅವನ ವಚನಗಳಿವೆ. ವಚನಕಾರರ ವಚನಗಳಲ್ಲಿ ಕಾಣಬರುವ ಉಚ್ಚ ತತ್ವಗಳೇ ಅವುಗಳಲ್ಲಿ ಇವೆ.

(೩) ರಸವನರಿವುದಕ್ಕೆ ಜಿಹ್ವೆಯಾಗಿ ಬಂದು ಗಂಧವನರಿವುದಕ್ಕೆ ನಾಸಿಕವಾಗಿ ಬಂದು ರೂಪನರಿವುದಕ್ಕೆ ನೇತ್ರವಾಗಿ ಬಂದು ಶಬ್ದವನರಿವುದಕ್ಕೆ ಶ್ರೋತ್ರವಾಗಿ ಬಂದು ಸ್ಪರ್ಶನವನರಿವುದಕ್ಕೆ ತ್ವಕ್ಕಾಗಿ ಬಂದು

ಇಂತೆನ್ನ ಘಟದ ಮಧ್ಯದಲ್ಲಿ ನಿಂದು ಪಂಚವಕ್ತ್ರನಾದೆಯಲ್ಲಾ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೇ.

(೪) ಕಂಗಳ ಮುಂದೆ ಕಂಡುದೆಲ್ಲವೂ ಲಿಂಗಾರ್ಪಿತವೇ? ಫಲಾದಿಗಳಲ್ಲಿ ಪಾಕವಾದ ಕಡ್ಡಿ ತೊಟ್ಟು ಬಿತ್ತು ತುಷೆ ಪಾಷಾಣ ಬೋನದೊಳಗಾದ ಸಮೂಹವೆಲ್ಲವೂ ಲಿಂಗ ನೈವೇದ್ಯ ಸಮರ್ಪಣವೇ? ಸಾರೋಪ ದ್ರವ್ಯಂಗಳಲ್ಲಿ ಅರೋಚಕವ ಕಳೆದು ಮನದಲ್ಲಿ ನೇಮಿಸಿ ಇಟ್ಟ ಲಿಂಗದಿಷ್ಟ ಪದಾರ್ಥವ ಕೊಡುವಲ್ಲಿ ಪ್ರಾಣಲಿಂಗಕ್ಕೆ ನಾನಾ ರಸಂಗಳ ಸಾಗಿಸುವಲ್ಲಿ ಅರ್ಪಿತ ಅನರ್ಪಿತವೆಂಬುಭಯದ ಗೊತ್ತು ಮುಟ್ಟಿ ಅರ್ಪಿಸಬಲ್ಲಡೆ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ಅರ್ಪಿತವಾಯಿತ್ತು.

ಶಿವಲೆಂಕ ಮಂಚಣ್ಣನಿಗೆ ಶಿವಲೆಂಕ ಅಂದರೆ 'ಶಿವನ ಸೇವಕ' ಎಂಬ ಹೆಸರು ನಿಜವಾಗಿ ಇದ್ದದ್ದು ಕೆಳಗಿನ ವಚನದಿಂದ ಕಂಡು ಬರುತ್ತದೆ.

(೫) ಹೀರಕವನೊಪ್ಪಿಸಿದವಂಗೆ ಸುಂಕವ ಬೇಡಲೇತಕ್ಕೆ? ಮೊದಲು ತ್ರಿವಿಧವ ನಿನಗೆಂದು ಕೊಟ್ಟ ಮತ್ತೆ ನೀ ಬೇಡಿದ ಮೇಲೆಡೆ ನೀನೆನಗಿತ್ತ ಮೇಲೆ ಎನ್ನ ನೋಡುವ ಬಿಡು ಮುಡಿಯಾವುದು ನಿನಗೆ? ಶಿವಲೆಂಕ ಹಾಕಿದ ಮುಂಡಿಗೆಯ ನೀವೆತ್ತಲಮ್ಮದೆ ಎನ್ನ ಕಯ್ಯೊಳಗಾದೆಯಲ್ಲ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೇ.

ಕಾಯಕದ ವಿಷಯವಾಗಿ ಅವನು ಹೇಳುವದೇನೆಂದರೆ —

(೬) ಕಾಯಕವೆಂದು ಕಾಯುವ ಬಳಲಿಸದೆ ತನು ಕರಗದೆ ಮನ ನೋಯದೆ ಬೇಡಿ ಕಾಡಿ ಮಾಡುವುದು ದಾಸೋಹವೇ? ಅವ ಕಾಯಕವಾದಡೂ ಪ್ರಾಣವೇ ಕಡೆಯಾಗಿ ದ್ರವ್ಯ ಕಡೆಗಾಗಿ ಚಿತ್ತಶುದ್ಧದಲ್ಲಿ ಬಂದುದಕ್ಕೆ ಸರಿ ಗಂಡು ದೇಹಿಗಳಿಗೆ ಒಂದೇ ಪ್ರಮಾಣದಲ್ಲಿ ಸರಿಗಂಡುದು ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗಕ್ಕೆ ತೃಪ್ತಿ.

ಈತನ ವಚನಗಳಲ್ಲಿ ಶಿವಾನುಭವದ ಅಚ್ಚ ತತ್ವಗಳು ತುಂಬಿಕೊಂಡಿರುತ್ತವೆ. ಈತನು ಉತ್ತರ ಹಿಂದುಸ್ತಾನದ ಒಬ್ಬ ಶ್ರೇಷ್ಠತರ ಗತಿಯ ಪಂಡಿತನೆಂಬುದನ್ನು ನಾವು ಇಲ್ಲಿ ಲಕ್ಷಿಸುವದು ಅವಶ್ಯವಿದೆ.

---

# ಕದಿರಿ ರೆಮ್ಮಯ್ಯ.

ಮದ್ರಾಸ ಇಲಾಖೆಯಲ್ಲಿರುವ ಹಿಂದೂಪುರ ಗ್ರಾಮದಿಂದ ಈಶಾನ್ಯಕ್ಕೆ ಸುಮಾರು ೩೦--೪೦ ಮೈಲುಗಳ ಮೇಲೆ ಕದಿರಿ ಎಂಬ ಗ್ರಾಮವಿದೆ. ಇದು ಈಗ ಕಡಪಾ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾಗಿದೆ. ಇಲ್ಲಿ ರೆಮ್ಮಯ್ಯನೆಂಬ ಶಿವಶರಣನು ಪೂರ್ವ ಕಾಲ ದಲ್ಲಿ ವಾಸಮಾಡುತ್ತಿದ್ದನು. ಅವನು ಜಂಗಮ ಭಕ್ತನು ಮತ್ತು ಕೇವಲ ಲಿಂಗಾನುಭವಿಯು. ಅವನು ಪಾಲ್ಕುರಿಕೆಯಲ್ಲಿ ಪ್ರಸಿದ್ಧನಾಗಿದ್ದ ಸೋಮಯ್ಯನ ಶಿಷ್ಯತ್ವವನ್ನು ವಹಿಸಿ ಉಜ್ವಲವಾದ ವರ್ತನೆಯುಳ್ಳವನಾಗಿ 'ಕದಿರ ರೆಮ್ಮಯ್ಯ'ನೆಂದು ನಾಡಿನಲ್ಲಿ ಪ್ರಸಿದ್ಧನಾಗಿದ್ದನು.

ಹೀಗಿರಲು ರೆಮ್ಮಯ್ಯನು ತನ್ನ ಗುರುವು ತನ್ನ ಗೃಹಕ್ಕೆ ಬಹಳ ದಿವಸಗಳಿಂದಲೂ ಬಾರದೆ ಇರಲು ಅವನನ್ನು ಕಾಣಬೇಕೆಂದು ತಾನೇ ಅವನ ಗ್ರಾಮಕ್ಕೆ ಹೊರಟನು. ದಾರಿಯಿಂದ ಹೋಗುವಾಗ ಶಿವಾರ್ಚನೆಗೆ ವೇಳೆಯಾಗಲು, ತನ್ನ ನಿತ್ಯದ ಕ್ರಿಯೆಗಳು ತಪ್ಪಬಾರದೆಂದು ಸಮೀಪದ ಒಂದು ಗ್ರಾಮಕ್ಕೆ ಬಂದು ಅಲ್ಲಿ ಒಬ್ಬ ಭಕ್ತನ ಮನೆಯಲ್ಲಿ ನಿಂತುಕೊಂಡನು. ಆ ಭಕ್ತನ ಹೆಸರು, ಸೋಮಯ್ಯ ಅಥವಾ ಸೋಮನಾಥನು. ಅವನ ಹೆಂಡತಿಯ ಹೆಸರು ಅಣ್ಣಾಲದೇವಿಯು. ಅವರಿಗೆ ಮಲ್ಲಿನಾಥನೆಂಬ ಮಗನಿದ್ದನು. ಈ ಮೂವರು ಕೇವಲ ಜಂಗಮ ಭಕ್ತರು, ಮತ್ತು ಶಿವಭಕ್ತಿಯುಳ್ಳವರು. ಅವರು ನಾಡಿನಲ್ಲಿ ಅತ್ಯಂತ ಪ್ರಸಿದ್ಧನಾದ ಕದಿರ ರೆಮ್ಮಯ್ಯನು ತಮ್ಮ ಗೃಹಕ್ಕೆ ಬಂದನೆಂದು ಅತ್ಯಂತ ಸಂತೋಷವನ್ನು ತಾಳಿದವರಾಗಿ ಅವರು ಅವನನ್ನು ಬಹಳ ಸತ್ಕರಿಸಿದರು. ರೆಮ್ಮಯ್ಯನು ತನ್ನ ಪೂಜಾವಿಧಿಗಳನ್ನು ಅವರಲ್ಲಿ ತೀರಿಸಿಕೊಂಡು ತನ್ನ ಗುರುವಿನ ಗ್ರಾಮಕ್ಕೆ ಹೊರಟು ಹೋದನು.

ಅವನು ಹೋದ ದಿವಸ ಸೋಮಯ್ಯನ ಹೆಂಡತಿ ಅಣ್ಣಾಲದೇವಿಯು ಮಗನನ್ನು ಕರೆದುಕೊಂಡು ಬೆರಣಿ (ಕೊಳ್ಳು) ಯನ್ನು ಆಯುಬೇಕೆಂದು ಅಡವಿಗೆ ಹೋದಳು. ಅಡವಿಯಲ್ಲಿ ಅವರು ತಿರುಗಾಡುತ್ತಿರುವಾಗ್ಗೆ ಒಂದು ಘಟಸರ್ಪವು ಅಕಸ್ಮಾತ್ತಾಗಿ ಅವಳ ಮಗನನ್ನು ಕಚ್ಚಿತು. ಬಾಲಕನಿಗೆ ವಿಷವೇರಿ ಅವನು ಅಲ್ಲಿಯೇ ಸತ್ತು ಬಿದ್ದನು.

ಆಗ ತಾಯಿಯು ಮಗನಿಗೆ ಶಿವನ ನಿರೋಪವಾಯಿತೆಂದು ಭಾವಿಸಿ ಸಂತೋಷಿಸಿದಳು. ಅವಳು ಎಷ್ಟು ಮಾತ್ರವೂ ದುಃಖಿಸಲಿಲ್ಲ. ಬಾಯಿ ಬಿಡಲಿಲ್ಲ. ಅಳಲಿಲ್ಲ. ಅಕಟಕಟಾ! ಚನ್ನಿಗನು ಮಡಿದನೆಂದು ಗೋಳಿಡಲಿಲ್ಲ. ಅವಳು ತಾನು ಆರಿಸಿಕೊಂಡಿದ್ದ ಬೆರಣಿಯನ್ನು ತಲೆಯ ಮೇಲೆ ಹೊತ್ತುಕೊಂಡು ಸತ್ತ ಮಗನನ್ನು ಎತ್ತಿಕೊಂಡು ಮನೆಗೆ ಬಂದಳು. ಅವಳ ಪತಿಯಾದರೂ ಶಿವಾನುಭವಿಯು. ಅವನಾದರೂ ದುಃಖಿಸಲಿಲ್ಲ. ಆಗ ಉಭಯತರು ಕೆಲಬಲದ ಜನರನ್ನು ಕರೆಯಿಸಲಿಲ್ಲ. ರೋದಿಸಲಿಲ್ಲ. ಎಷ್ಟು ಮಾತ್ರವೂ ಕಳವಳಿಸಿ ಕಂಗೆಡಲಿಲ್ಲ. ಕಂಬನಿಗಳನ್ನು ಸಹ ಇಡಲಿಲ್ಲ. ಅವರು ತಮ್ಮ ಮಗನು ಮಹಾನುಭಾವರಾದ ಪ್ರಮಥರ ಪಾದಕ್ಕೆ ಸಲ್ಲಿದನೆಂದು ಆನಂದಿಸಿದರು. ಆಗ ಅವರು ಮನೆಯಲ್ಲಿದ್ದ ಒಂದು ಉನ್ನತವಾದ ವೇದಿಕೆಯನ್ನು ಅಗಿದು, ಸತ್ತ ಮಗನಿಗೆ ವಿಭೂತಿಯನ್ನು ಹೂಸಿ ಬಿಲ್ವಪತ್ರಿಗಳನ್ನು ಅವನ ದೇಹದ ಮೇಲೆ ಎರಚಿ ಅಲ್ಲಿಯೇ ಹೂಳಿ ಸಮಾಧಿಯನ್ನು ಮಾಡಿ ನಿಶ್ಚಿಂತೆಯಲ್ಲಿದ್ದರು.

ಇತ್ತ ಕದಿರರೆಮ್ಮಯ್ಯನು ತನ್ನ ಗುರುವಿನ ಮನೆಗೆ ಹೋಗಿ ಅವನ ದರ್ಶನಾಶೀರ್ವಾದಗಳನ್ನು ಪಡೆದು ಏಳು ದಿನಗಳ ಮೇಲೆ ತಿರುಗಿ ತನ್ನ ಗ್ರಾಮಕ್ಕೆ ಬರುವಾಗ ಅಣ್ಣಾಲದೇವಿಯ ಗ್ರಾಮಕ್ಕೆಯೇ ಬಂದು ಅವಳ ಮನೆಯಲ್ಲಿ ಉಳಿದನು. ಸತಿಪತಿಗಳೀರ್ವರು ಎಂದಿನಂತೆಯೇ ಅವನನ್ನು ಸತ್ಕರಿಸಿದರು. ಅವನು ಲಿಂಗಪೂಜಾಕಾರ್ಯಗಳನ್ನು ಮುಗಿಸುತ್ತಿರುವಾಗ ರೆಮ್ಮಯ್ಯನು ಮನೆಯಲ್ಲಿ ಬಾಲಕನನ್ನು ಎಲ್ಲಿಯೂ ಕಾಣದೆ ತಾಯಿತಂದೆಗಳಿಗೆ — ನಿಮ್ಮ ಮಗನು ಇಲ್ಲಿ ಕಾಣುವದಿಲ್ಲ. ಅವನೆಲ್ಲಿ? ಅವನನ್ನು ಇಲ್ಲಿಗೇಕೆ ಕರೆಯದೆ ಇದ್ದೀರಿ? ಎಂದು ಕೇಳಿದನು. ಆದರೆ ಅವರು ಸುಮ್ಮನೆ ಇರಲು ರೆಮ್ಮಯ್ಯನಿಗೆ ಸಂಶಯ ಬಂದು ಪುನಃ ಪುನಃ ಅವರನ್ನು ಕೇಳಹತ್ತಿದನು. ಆಗ ಅಣ್ಣಾಲದೇವಿಯು— ತನಯನನ್ನು ಕರೆಯಲಿಕ್ಕೆ ನಾನು ಚಂಗಳೆದೇವಿಯೇ? ತನಯನನ್ನು ಕರೆಯದೆ ಇದ್ದ ಸಜ್ಜನೆಯಾದ ನಿಂಬಿಯಕ್ಕನು ನಾನಾಗಿದ್ದೇನೆ. ನಾನು ಅವನನ್ನು ಕರೆಯುವದಿಲ್ಲ. ಅವನು ನಿಮ್ಮ ಪಾದದ ಸಮೀಪದಲ್ಲಿಯೇ ಇದ್ದಾನೆ, ಎಂದೆನ್ನಲು ಕದಿರ ರೆಮ್ಮಯ್ಯನು ಬಾಲಕನಿಗೆ ಏನೋ ಒಂದು ಉತ್ಪಾತವಾಗಿದೆ, ಅವನು ತೀರಿಕೊಂಡಿದ್ದರಿಂದ

ಅವನನ್ನು ಇಲ್ಲಿಯೇ ಹೂಳಿದ್ದಾರೆ, ಎಂಬ ತಿಳಿವಳಿಕೆಯು ಅವನಿಗಾಯಿತು.

ಆಗ ಅಲ್ಲಿದ್ದ ವೇದಿಕೆಯನ್ನು ಅಗಿಸಲು ಒಳಗೆ ಸಂತನ ದೇಹವಿದ್ದು ಅದರ ಮೇಲೆ ಭಸಿತ ಬಿಲ್ವಪತ್ರೆಗಳು ಹರಿವಿದ್ದವು. ಅವುಗಳನ್ನು ಓರೆ ಮಾಡಿ ನೋಡಲು ಬಾಲಕನ ದೇಹವು ಏಳು ದಿವಸಗಳಾದರೂ ಕೂಡ ಅಚ್ಚಳಿಯದೆ ಹಾಗೆಯೇ ಇತ್ತು. ಇದು ಮಾತಾಪಿತರ ಮತ್ತು ಬಾಲಕನ ಶಿವಾನುಭವದ ಮಹಿಮೆ ಎಂದು ತಿಳಿದು ಶಿವಶರಣನಾದ ರೆಮ್ಮಯ್ಯನು ಬಾಲಕನಿಗೆ— ಏಳೇಳೆಂದು ಕರೆಯಲು ಅವನಿಗೆ ಎಚ್ಚರಾಯಿತು. ಅವನು ಸಮಾಧಿಯ ಹೊರಗೆ ಬಂದನು. ಆಗ ತಾಯಿತಂದೆಗಳೂ ಬಾಲಕನೂ ರೆಮ್ಮಯ್ಯನಿಗೆ ಶರಣಾರ್ಥ ಎಂದು ಸಾಷ್ಟಾಂಗವೆರಗಿದರು.

ಗ್ರಾಮದಲ್ಲಿಯ ಜನರು ಅಲ್ಲಿ ನೆರೆದು ಈ ಘಟನೆಯು ಅಗಾಧವಾದುದೆಂದು ಕದಿರಿಯ ರೆಮ್ಮಯ್ಯನನ್ನೂ ಸೋಮನಾಥ ಅಣ್ಣಾಲದೇವಿಯರನ್ನೂ ಅತ್ಯಂತವಾಗಿ ಸ್ತುತಿಸುವವರಾದರು. ಈ ಮೂವರೂ ಶಿವಶರಣರ ಮಾಲಿಕೆಯಲ್ಲಿ ಗಣಿಸಲ್ಪಟ್ಟಿದ್ದಾರೆ. ಶಿವಾನುಭವಿಗಳು ಮರಣಬಂದಿತೆಂದು ಅದಕ್ಕೆ ಅಂಜಬಾರದು. ಅವರಿಗೆ ಮರಣವೆಂಬುದಿಲ್ಲ. ಅವರು ಇಹಲೋಕದಲ್ಲಿ ಲಿಂಗದ ನಡೆನುಡಿಯಂತೆ ನಡೆಯುವವರು. ಲಿಂಗಾನುಭವಿಗಳಾಗಿ ಲಿಂಗದಲ್ಲಿ ಲಯವಾಗಿ ಹೋಗುತ್ತಾರೆ. ಆದ್ದರಿಂದ ಅವರನ್ನು ಹೂಳಿದ ಸ್ಥಳವು ಪವಿತ್ರವಾದುದು. ಅಂಥವರಿಗೋಸ್ಕರ ಯಾರೂ ದುಃಖಿಸಕೂಡದು. ಹೀಗೆ ಶಿವಾನುಭವದ ನಡೆ ಇದ್ದು ಅದರಂತೆ ಈ ಮೂವರೂ ಶಿವಶರಣರು ನಡೆದು ಪ್ರಸಿದ್ಧಿಯನ್ನು ಹೊಂದಿದ್ದಾರೆ.

ಕದಿರಿ ರೆಮ್ಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಈತನು ಹೇಮಯ್ಯನ ಶಿಷ್ಯನಾದ್ದರಿಂದ ಅವನು ಬಸವನಕಿಂತಲೂ ಸ್ವಲ್ಪ ಕಾಲ ಈಚಿನವನಾಗುತ್ತಾನೆ.

ಇವನು ಇದ್ದ ಕದಿರಿ ಗ್ರಾಮವು ಈಗ ಆಂಧ್ರ ದೇಶದಲ್ಲಿರುವದರಿಂದ ಶಿವಶರಣರ ಪ್ರಭಾವವು ಕರ್ನಾಟಕದಿಂದ ಪ್ರವಹಿಸುತ್ತ ಸುತ್ತಲಿನ ಆಂಧ್ರ ಮತ್ತು ದ್ರಾವಿಡ ದೇಶಗಳಲ್ಲಿ ಹರಡುತ್ತ ಹೋದದ್ದು ತಿಳಿದುಬರುತ್ತದೆ.

---

## ಅಣ್ಣಾಲದೇವಿ

'ಕದಿರ ರೆಮ್ಮಯ್ಯ' ಎಂಬ ಶಿರೋಲೇಖದ ಕೆಳಗೆ ಹಿಂದಿನ ಕಥೆಯನ್ನು ನಾವು ಬರೆದಿದ್ದು ಅದನ್ನು ಅಚ್ಚು ಹಾಕಿದ ಬಳಿಕ 'ದೇವಿಯರ ತ್ರಿವಿಧಿ'ಯಲ್ಲಿ 'ಅಣ್ಣಾಲಾದೇವಿ' ಎಂಬ ಶಿವಶರಣೆಯ ವಿಷಯವಾಗಿ ಉಲ್ಲೇಖವಿದ್ದ ಕೆಳಗಿನ ನುಡಿಯು ನಮ್ಮ ದೃಷ್ಟಿಗೆ ಬಿದ್ದಿತು. ಇದು ಆವುದೆಂದರೆ:—

ಚೆನ್ನಾನುರಾಗನು ಕಡಿಯೆ। ಕಣ್ಣೀರ ತರದೆ ಮು
ಕ್ಕಣ್ಣ ನಿವಿ-ಆತದಿ ಮಣ್ಣಿನೊಳು ಮಡುಗಿದ
ಅಣ್ಣಾಲಾದೇವಿ ಶರಣಾಗು

ಕದಿರ ರೆಮ್ಮಯ್ಯನ ಕಥೆಯಲ್ಲಿ ಬಂದ ಅಣ್ಣಾಲದೇವಿಯೇ ಈಕೆ ಎಂಬುದು ಸ್ಪಷ್ಟವು. ಅದರಲ್ಲಿ ಕದಿರ ರೆಮ್ಮಯ್ಯನಕಿಂತಲೂ ಅಣ್ಣಾಲದೇವಿಯ ನಡೆಯೇ ಮಹತ್ವದ್ದಿರುವದರಿಂದ ಆಕೆಯೇ ಕಥಾನಾಯಕಳೆಂದು ತಿಳಿಯುವದು ಯೋಗ್ಯವು. ಆದ್ದರಿಂದ ಕದಿರ ರೆಮ್ಮಯ್ಯನ ಚರಿತ್ರೆಯು 'ಅಣ್ಣಾಲದೇವಿಯ ಚರಿತ್ರೆ' ಎಂದು ವಾಚಕರು ಭಾವಿಸಬೇಕೆಂದು ನಮ್ಮ ಸೂಚನೆ ಇದೆ. ಭೀಮಕವಿ ಮೊದಲಾದವರು ಬರೆದ ಚರಿತ್ರೆಗಳಲ್ಲಿ ಇದು ಕದಿರ ರೆಮ್ಮಯ್ಯನ ಕಥೆ ಎಂದು ಹೇಳಿರುವದರಿಂದ ಇದೇ ಹೆಸರನ್ನು ನಾವು ಹಿಂದೆ ಉಪಯೋಗಿಸಿದ್ದೇವೆ. ಆದರೆ ಇದು ಅಣ್ಣಾಲದೇವಿಯ ಕಥೆ ಎಂದು ವಾಚಕರು ತಿಳಿಯುವದು ಯುಕ್ತವೆಂದು ನಮಗೆ ತೋರುತ್ತದೆ.

---

## ನಿಜಲಿಂಗ ಚಿಕ್ಕಯ್ಯ.

ಕಾಶ್ಮೀರ ದೇಶದಲ್ಲಿ ಒಂದು ಲಕ್ಷ ಇಪ್ಪತ್ತೈದು ಸಾವಿರದ ಒಂದು ಪ್ರಾಂತವಿದ್ದು, ಅದರ ರಾಜಧಾನಿಯು ಮಾಂಡವ್ಯಪುರವೆಂಬುದಾಗಿತ್ತು. ಅದನ್ನು ಮಹಾದೇವ ರಾಜನೆಂಬ[೧] ಹೆಸರಿನ ರಾಜನು ಆಳುತ್ತಿದ್ದನು.

(೧) ಕೆಲವು ಪ್ರತಿಗಳಲ್ಲಿ ಮಹಾದೇವರಾಣಿ ಎಂದಿದೆ. ಆದರೆ ಇದು ಸ್ತ್ರೀವಾಚಕವಾಗಿ ಅವುಗಳಲ್ಲಿಲ್ಲ. ಮಹಾದೇವ ರಾಜನೇ ಈ ಹೆಸರಿನ ರಾಜನಾಗಿದ್ದಾನೆ.

ಅವನು ಅತ್ಯಂತ ಧರ್ಮಿಷ್ಠನು, ಶಿವಭಕ್ತಿಯುಳ್ಳವನು ಮತ್ತು ಮಾಹೇಶ್ವರರಲ್ಲಿ ವಿಶ್ವಾಸವುಳ್ಳವನು. ಅವನು ಮಾಹೇಶ್ವರರ ಪೂಜೆ ಇಲ್ಲದೆ ಎಂದೂ ಆಹಾರವನ್ನು ಸ್ವೀಕರಿಸುತ್ತಿದ್ದಿಲ್ಲ. ಹೀಗಿರಲು ಅವನು ತನ್ನ ರಾಜ್ಯದಿಂದ ಬಹುಜನ ಮಾಹೇಶ್ವರರು ಕಲ್ಯಾಣ ಪಟ್ಟಣಕ್ಕೆ ಹೋಗುತ್ತಾ ಇರುವರೆಂತಲೂ ಕೆಲವೊಂದು ದಿನ ಬಸವೇಶ್ವರನು ಅವರಲ್ಲಿ ಅರು ಸಾವಿರ ಜನರನ್ನು ಕದ್ದೊಯ್ದನೆಂತಲೂ ಕೇಳಿ, ಹೀಗೆ ಮಾಹೇಶ್ವರರು ತನ್ನ ರಾಜ್ಯವನ್ನು ಬಿಟ್ಟು ಹೋದಲ್ಲಿ ತನ್ನ ಮತ್ತು ಪ್ರಜೆಗಳ ಧರ್ಮಾಚರಣೆಗೆ ಭಂಗ ಬರುವದೆಂದು ಅವನಿಗೆ ತೋರಿ ಇದಕ್ಕೆಲ್ಲ ಕಾರಣನು ಬಸವೇಶ್ವರನೇ ಎಂದು ತಿಳಿದು, ಅವನನ್ನು ಕೊಲ್ಲಿಸಬೇಕೆಂದು ನಿಶ್ಚೈಸಿದನು. ಆ ಮೇಲೆ ಅವನು ತನ್ನ ಪರಿವಾರದಲ್ಲಿದ್ದ ಇಬ್ಬರು ಭಟರನ್ನು ಗೊತ್ತುಪಡಿಸಿ ಬಸವೇಶ್ವರನನ್ನು ನೀವು ಕೊಂದು ಹಾಕಿ ಬರಬೇಕೆಂದು ಹೇಳಿ ಅವರನ್ನು ಕಲ್ಯಾಣಕ್ಕೆ ಕಳಿಸಿದನು!

ಮಹಾದೇವರಾಜನು ಮುಂದೆ ಕೆಲವು ಕಾಲದ ನಂತರ ತನ್ನ ರಾಜ್ಯವನ್ನು ಬಿಟ್ಟು ತಾನೇ ಕಲ್ಯಾಣಕ್ಕೆ ಬಂದು ಅಲ್ಲಿ ಕಟ್ಟಿಗೆ ಹೊರುವ ಕಾಯಕವನ್ನು ಮಾಡುತ್ತ ಶಿವಾನುಭವ ಮಂಟಪದಲ್ಲಿದ್ದುಕೊಂಡು ವಚನಗಳನ್ನು ರಚಿಸುತ್ತ ಮೋಳಿಗೆಯ ಮಾರಯ್ಯನೆಂದು ಪ್ರಸಿದ್ಧನಾದನು. ಆದರೆ ಅದಕ್ಕೂ ಪೂರ್ವದಲ್ಲಿ ಅವನು ರಾಜ್ಯಪದದಲ್ಲಿದ್ದಾಗ್ಗೆ ಶಿವಭಕ್ತನಾಗಿದ್ದರೂ ಶಿವಾನುಭವದ ರೀತಿಯನ್ನು ಅವನು ಅರಿಯದವನಾಗಿದ್ದನು. ಆದರೆ ಮುಂದೆ ಅವನು ಬಸವೇಶ್ವರನ ಸಾಂಪ್ರದಾಯವನ್ನು ಹೊಂದಿ ಅವನ ಬಗ್ಗೆ ಭಕ್ತಿಭಾವವನ್ನು ವಹಿಸಿ ತನ್ನ ಹೆಂಡತಿಯೊಡನೆ ಕಲ್ಯಾಣ ಪಟ್ಟಣಕ್ಕೆ ಬರುವವನಾದನು.[೧] ಇಂಥವನು ಒಂದು ಕಾಲಕ್ಕೆ ಬಸವೇಶ್ವರನ ವಿಷಯವಾಗಿ ವೈರಭಾವವನ್ನು ತಾಳಿ ಅವನನ್ನು ಹೀಗೆ ಕೊಂದು ಹಾಕಲು ಮನಸ್ಸು ಮಾಡಿದ್ದು ವಿಚಿತ್ರವಾಗಿದೆ. ಆದರೆ ದೈವಸಂಕಲ್ಪವು ಬೇರೆಯಾಗಿರುತ್ತದೆ. ಹೀಗೆ ಯಾವನು ಈ ರೀತಿ ನಡೆದನೋ ಅವನೇ ಸ್ವಲ್ಪ ಕಾಲದಲ್ಲಿ ಬಸವೇಶ್ವರನ ಕೇವಲ ಭಕ್ತನಾದನು. ಇಷ್ಟೇ ಅಲ್ಲ, ಶಿವಶರಣರಲ್ಲಿ ಶ್ರೇಷ್ಠನೆಂದೆನಿಸಿಕೊಂಡನು.

---

(೧) **ಮೋಳಿಗೆ ಮಾರಯ್ಯನ ಕಥೆ ಇದೇ ಗ್ರಂಥದ ಪುಟ ೨೨೫ ನೋಡಿರಿ.**

ಮಹಾದೇವರಾಜನು ಹೀಗೆ ಗೊತ್ತುಮಾಡಿಕೊಂಡು ತನ್ನ ನಂಬಿಗೆಯ ಇಬ್ಬರು ರಾಜಭಟರನ್ನು ಕರೆಸಿ ಬಸವೇಶ್ವರನನ್ನು ನೀವು ಕೊಂದುಹಾಕಿರೆಂದು ಅವರಿಗೆ ಹೇಳಿ ಕಳಿಸಿ ಕೊಟ್ಟ ಬಳಿಕ ಅವರು ಕಲ್ಯಾಣಕ್ಕೆ ಬಂದು ಅಲ್ಲಿಯೇ ನಿಂತುಕೊಂಡರು. ಅವರು ಅಲ್ಲಿ ಬಹು ಜನ ಜಂಗಮರು ಬಸವೇಶ್ವರನ ಅರಮನೆಗೆ ದಿನಾಲು ಭೋಜನಕ್ಕೆ ಹೋಗುವದನ್ನು ನೋಡಿ ಅವರೊಡನೆ ತಾವೂ ಬಸವೇಶ್ವರನಲ್ಲಿಗೆ ಹೊಗಬೇಕೆಂದು ಸಂಚು ಮಾಡಿ ತಮ್ಮ ಸರ್ವಾಂಗಕ್ಕೆಲ್ಲ ಭಸ್ಮವನ್ನು ಉದ್ಧೂಳನ ಮಾಡಿಕೊಂಡು ರುದ್ರಾಕ್ಷಿಗಳನ್ನು ಧರಿಸಿ ತಮಗೆ ಲಿಂಗವಿಲ್ಲದಿರಲು ಒಂದೊಂದು ಚಿಕ್ಕ ಬದನೆಯ ಕಾಯನ್ನು ಲಿಂಗದಂತೆ ವಸ್ತ್ರದಲ್ಲಿ ಕಟ್ಟಿ ಕೊರಳಲ್ಲಿ ಧರಿಸಿಕೊಂಡು ಎಲ್ಲರೊಡನೆ ಬಸವೇಶ್ವರನ ಅರಮನೆಯನ್ನು ಪ್ರವೇಶಿಸಿದರು. ಆಗ ಅವರು ಒಂದು ಕಠಾರಿಯನ್ನು ತಮ್ಮ ವಸ್ತ್ರದಲ್ಲಿ ಮುಚ್ಚಿಕೊಂಡು ಅಲ್ಲಿ ಭೋಜನಕ್ಕೆ ಕುಳಿತರು. ಅಲ್ಲಿ ಲಿಂಗ ಪೂಜಾ ಕಾರ್ಯಗಳೂ ಪಾದೋದಕ ಪ್ರಸಾದ ಗ್ರಹಣವೂ ಬಹು ಸಂಭ್ರಮದಿಂದ ನಡೆದಿದ್ದವು. ಮಂದಿರದಲ್ಲಿದ್ದ ಭಕ್ತಿಭಾವಪೂರಿತವಾದ ವಾತಾವರಣವನ್ನು ನೋಡಿ ಅವರ ಮನಸ್ಸು ತಿರುಗಿತು. ಬಸವೇಶ್ವರನನ್ನು ಕೊಂದುಹಾಕಬೇಕೆಂಬ ಅವರ ಮೊದಲಿನ ಇಚ್ಛೆಯು ಸಡಿಲಾಗಹತ್ತಿತು.

ಅಷ್ಟರಲ್ಲಿ ಬಸವೇಶ್ವರನು ಅವರಿದ್ದಲ್ಲಿಗೆ ಬಂದು ತನ್ನ ಅಂತರ್ಜ್ಞಾನದಿಂದ ಅವರ ಮನೋಗತವನ್ನು ಕೂಡಲೆ ತಿಳಿದವನಾಗಿ ಅವರಿಗೆ— ನೀವು ಸಂಗಮೇಶ್ವರನ ಪಾದವನ್ನು ಕಾಣಲು ಬಂದಿರುವಿರಾ? ಲೇಸಾಯಿತು! ನೀವು ನಿಮ್ಮ ಲಿಂಗಪೂಜೆಯನ್ನು ಪ್ರಾರಂಭಿಸಿರಿ, ಎಂದು ನುಡಿಯಲು ಅವರ ಪಾಪದ ಯೋಚನೆಯು ಅಲ್ಲಿಯೇ ಅಡಗಿತು. ಬಸವೇಶ್ವರನು ಪಂಚಪರುಷಗಳನ್ನು ಸಾಧಿಸಿದವನು. ಆದ್ದರಿಂದ ಅವನು ನೋಟಪರುಷವುಳ್ಳವನಾಗಿ ಆ ಕೊಲೆಗಡಕರು ಧರಿಸಿದ್ದ ಬದನೆಯ ಕಾಯಿಗಳನ್ನು ಅಂತರ್ದೃಷ್ಟಿಯಿಂದ ನೋಡಲು ಅವರು ಹಿಂದೆ ಮಾಡಿದ ಪಾಪಗಳೆಲ್ಲವೂ ಹೋಗಿಬಿಟ್ಟಿದ್ದವು. ಮತ್ತು ಆ ಬದನೆಯ ಕಾಯಿಗಳು ಅಲ್ಲಿಯೇ ಇಷ್ಟಲಿಂಗಗಳಾಗಿದ್ದವು. ಅಷ್ಟರಲ್ಲಿಯೇ ಆ ಉಭಯತರಿಗೆ ಬಸವೇಶ್ವರನು ಲಿಂಗಪೂಜೆಯನ್ನು ಮಾಡಿರೆಂದು ಹೇಳಲಾಗಿ ಅವರು ಅವನ ಆಜ್ಞೆಯನ್ನು ಮೀರಲಾರದೆ ತಮ್ಮ ಕೊರಳಲ್ಲಿದ್ದ ವಸ್ತ್ರದ ಗಂಟನ್ನು

ಗಾಬರಿಯಾಗಿ ನಡುಗುತ್ತ ಮೆಲ್ಲನೆ ಬಿಚ್ಚಿನೋಡುವಷ್ಟರಲ್ಲಿ ಅವು ಲಿಂಗಗಳಾಗಿದ್ದನ್ನು ಕಂಡರು. ಆಗ ಅವರು ಪಶ್ಚಾತ್ತಾಪಬಟ್ಟು ತಮ್ಮ ಕಠಾರಿಗಳನ್ನು ಅಲ್ಲಿಯೇ ಚಲ್ಲಿಕೊಟ್ಟು ಬಸವೇಶ್ವರನಿಗೆ ನಮಸ್ಕರಿಸಿ ಅವನ ಕ್ಷಮೆಯನ್ನು ಬೇಡಿಕೊಂಡರು ಮತ್ತು ತಮ್ಮನ್ನು ಲಿಂಗಧಾರಿಗಳನ್ನಾಗಿ ಮಾಡಬೇಕೆಂದು ಕೇಳಿಕೊಂಡರು. ಆಗ ಬಸವೇಶ್ವರನು ಅವರಿಗೆ— ಈಗ ನಿಮ್ಮ ಕೊರಳಲ್ಲಿರುವ ಲಿಂಗಗಳೇ ನಿಮ್ಮ ಇಷ್ಟಲಿಂಗಗಳಾಗಿವೆ, ಇಂದು ನೀವು ನಿಮ್ಮ ಭವಿಜನ್ಮವನ್ನು ಕಳೆದು ಭಕ್ತರಾಗಿದ್ದೀರಿ, ಎಂದು ನುಡಿದು ಅವರಿಗೆ ಚೋರ ಚಿಕ್ಕಯ್ಯ ಮತ್ತು ನಿಜಲಿಂಗಚಿಕ್ಕಯ್ಯ ಎಂಬ ಹೆಸರುಗಳನ್ನಿಟ್ಟನು. ಅಂದಿನಿಂದ ಅವರು ಈ ಹೆಸರುಗಳಿಂದಲೇ ಕಲ್ಯಾಣದಲ್ಲಿ ಪ್ರಸಿದ್ಧರಾದರು.

ಇವರಲ್ಲಿ ನಿಜಲಿಂಗಚಿಕ್ಕಯ್ಯನು ಮುಂದೆ ಶ್ರೇಷ್ಠ ಶಿವಾನುಭವಿಯಾದನು. ಅವನು ಬಸವೇಶ್ವರನ ಅಪ್ಪಣೆಯಂತೆ ಬಿಚ್ಚೋಲೆಯ ಕಾಯಕವನ್ನು ಕೈಕೊಂಡು ಕಲ್ಯಾಣದಲ್ಲಿ ವಾಸಮಾಡಹತ್ತಿದನು. ಅವನು ದಿನಾಲು ತಾಡವೋಲೆಯ ಗಿಡಗಳನ್ನು ಹುಡಿಕಿಕೊಂಡು ಹೋಗಿ ಅವುಗಳ ಎಲೆಗಳನ್ನು ಸಂಗ್ರಹಿಸಿ ಅವುಗಳನ್ನು ಬರಹಗಾರರಿಗೆ ಮಾರುವ ಅಂಗಡಿಯನ್ನಿಟ್ಟನು. ಅವುಗಳನ್ನು ಮಾರಿ ಬಂದುದರ ಮೇಲೆ ತಾನು ಉಪಜೀವಿಸುತ್ತ ಉಳಿದುದನ್ನು ದಾಸೋಹಕಾರ್ಯಗಳಿಗೆ ಸಲ್ಲಿಸುವನು. ಅವನು ತಪ್ಪದೆ ಶಿವಾನುಭವಮಂಟಪಕ್ಕೆ ಹೋಗಿ ಅಲ್ಲಿಯ ಶಿವಾನುಭವ ಗೋಷ್ಠಿಗಳಲ್ಲಿರುವನು. ಅಲ್ಲದೆ ತಾನೂ ತನ್ನ ಅನುಭವಗಳನ್ನು ಕುರಿತು ವಚನಗಳನ್ನು ರಚಿಸುವನು. ಅವನ ಮುದ್ರಿಕೆಯು 'ಉಳಿಯುಮೇಶ್ವರಾ' ಎಂದಿದೆ. ಈ ವಚನಗಳಲ್ಲಿ ಕೆಲವುಗಳನ್ನು ನಾವು ಮಾದರಿಗಾಗಿ ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ. ಈ ಮೇರೆಗೆ ಚಿಕ್ಕಯ್ಯನು ಕಲ್ಯಾಣದಲ್ಲಿ ಒಬ್ಬ ಶ್ರೇಷ್ಠ ಶಿವಾನುಭವಿ ಎಂದು ಹೆಸರಾದನು.

ಪಂಚಾಕ್ಷರೀ ಮಂತ್ರಸ್ಮರಣೆಯೇ ಚಿಕ್ಕಯ್ಯನ ಶಿವಾನುಭವದ ಮುಖ್ಯ ನಡೆಯಾಗಿತ್ತು. ಅವನು ಕಲ್ಯಾಣ ಪಟ್ಟಣದ ಹೊರಗೆ ಯಾವುದಾದರೂ ಒಂದು ಏಕಾಂತಸ್ಥಳವನ್ನು ಆಯ್ದು ಅಲ್ಲಿಗೆ ಹೋಗಿ ಅಲ್ಲಿಯೇ ಅವನು ಮಂತ್ರವನ್ನು ಜಪಿಸುತ್ತ ಲಿಂಗಧ್ಯಾನದಲ್ಲಿ ಪರವಶನಾಗುವನು. ಅವನು

ಜನರ ಸಂದಣಿಯಲ್ಲಿ ತನ್ನ ಪೂಜಾದಿ ಕಾರ್ಯಗಳನ್ನು ನೆರವೇರಿಸನು. ಅವನು ಶಿವಾನುಭವಿಗಳಲ್ಲಿ ಪ್ರಾಣಲಿಂಗಿಸ್ಥಳದವನೆಂದು ಪ್ರಸಿದ್ಧನಾದನು. ಅವನು ಮೊದಲು ಹಿಂಸೆಯನ್ನು ಮಾಡಲು ಬಂದ ಒಬ್ಬ ಕ್ರೂರ ಭಟನು. ಆದರೆ ಮುಂದೆ ಬಸವೇಶ್ವರನ ಸನ್ನಿಧಾನದಿಂದ ಅವನು ತನ್ನ ಮೊದಲಿನ ಉಗ್ರ ಸ್ವಭಾವವನ್ನು ಬಿಟ್ಟು ಶಿವಾನುಭವಮಂಟಪದಲ್ಲಿ ಉಚ್ಚ ಸ್ಥಾನವನ್ನು ಪಡೆದು ಒಬ್ಬ ಶ್ರೇಷ್ಠ ವಚನಕಾರನಾದನು.

ಹೀಗಿರುವಲ್ಲಿ ಒಂದು ದಿವಸ ಅವನು ಪಟ್ಟಣದ ಮಾರ್ಗದಿಂದ ಹೋಗುತ್ತಿರಲು ತಳವಾರರ ತಂಡದ ನಾಯಕನಾದ ಗಂಗಯ್ಯನೆಂಬುವನು ಅವನನ್ನು ಇದಿರಿಗೆ ಕಾಣಲು ಗಂಗಯ್ಯನು ಅವನನ್ನ ಭೋಜನಕ್ಕೆಂದು ತನ್ನ ಮನೆಗೆ ಕರೆದುಕೊಂಡು ಹೋದನು. ಆಗ ಅವನು ಚಿಕ್ಕಯ್ಯನ ಪಾದಾರ್ಚನೆಯನ್ನು ಮಾಡಿ ಅವನಿಗೆ ಶಿವಾರ್ಚನೆಯನ್ನು ಮಾಡಿಸಿ ಅವನ ಪಾದೋದಕ ಪ್ರಸಾದವನ್ನು ಸಲಿಸುತ್ತಿರಲು ಬಿಜ್ಜಳನ ಅರಮನೆಯಲ್ಲಿ ಯಾರೋ ಕನ್ನವನ್ನಿಕ್ಕಿ ಒಳಗಿನ ದ್ರವ್ಯವನ್ನ ಅಪಹರಿಸಿದ್ದಾರೆಂಬ ವಾರ್ತೆಯು ಬಂದಿತು. ಕೂಡಲೆ ಗಂಗಯ್ಯನು ಚಿಕ್ಕಯ್ಯನಿಗೆ— ನೀವು ಈ ದಿನ ಇಲ್ಲಿಯೇ ಪವಡಿಸಿರಿ. ನಾನು ಬಿಜ್ಜಳನಲ್ಲಿಗೆ ಹೋಗುತ್ತೇನೆ ಎಂದು ಹೇಳಿ ಹೊರಟುಹೋದನು. ಆದ್ದರಿಂದ ಚಿಕ್ಕಯ್ಯನು ಆ ರಾತ್ರಿ ಅವನ ಮನೆಯಲ್ಲಿಯೇ ಪವಡಿಸಿದನು.

ಹೀಗಿರುವಲ್ಲಿ ರಾತ್ರಿಯಲ್ಲಿ ಜಾರಿಣಿಯಾದ ಗಂಗಯ್ಯನ ಹೆಂಡತಿ ಚೆನ್ನಾಜಿ ಎಂಬವಳು ಚಿಕ್ಕಯ್ಯನನ್ನು ಜಾರತನಕ್ಕೆ ಕರೆಯಲು ಅವನು— ಎಲೆ ತಾಯೇ ನಾನು ನಿನ್ನ ಮಗನು, ನೀನು ನನ್ನ ತಾಯಿ, ಎಂದೆನ್ನಲು ಅವಳು ಅತ್ಯಂತ ಕೋಪಗೊಂಡಳು. ಅದನ್ನು ನೋಡಿ ಚಿಕ್ಕಯ್ಯನು ಈ ಮನೆಯಲ್ಲಿ ಇರಬಾರದೆಂದು ಅದೇ ಕ್ಷಣ ಮನೆ ಬಿಟ್ಟು ಹೊರಬಿದ್ದನು. ಅವನು ಮನೆ ಬಿಡುವಾಗ್ಗೆ ಚೆನ್ನಾಜಿಯು ತನ್ನ ಲಿಂಗ ಮತ್ತು ತನ್ನ ಕೆಲವು ಆಭರಣಗಳನ್ನು ಅವನ ಹಡಪದೊಳಗೆ ಅವನಿಗೆ ತಿಳಿಯದಂತೆ ಇಟ್ಟಳು. ಚಿಕ್ಕಯ್ಯನು ಅದನ್ನರಿಯದೆ ಆ ಹಡಪವನ್ನು ತೆಗೆದುಕೊಂಡು ಮೊದಲು ಇಲ್ಲಿ ರಾತ್ರಿಯಲ್ಲಿ ಸಮೀಪದಲ್ಲಿರಬಾರದೆಂದು ಐನಾಳಿ ಎಂಬ ನೆರೆ ಗ್ರಾಮಕ್ಕೆ ಹೋದನು. ಅಲ್ಲಿ ಅವನು ಆ ರಾತ್ರಿ ಇದ್ದು ಉದಯದಲ್ಲೆದ್ದು ಕಲ್ಯಾಣದ ಹೊರಗಿದ್ದ ಒಂದು ಪುಷ್ಪದ ತೋಟದಲ್ಲಿ ಬಂದು ಅಲ್ಲಿ ಲಿಂಗಧ್ಯಾನದಲ್ಲಿ ಕುಳಿತನು.

ಹೀಗಾಗಲು ಇತ್ತ ತಳವಾರ ಗಂಗಯ್ಯನು ಬೆಳಗಿನಲ್ಲಿ ಮನೆಗೆ ಬಂಧು ನಿಜಲಿಂಗಚಿಕ್ಕಯ್ಯನೆಲ್ಲಿ ಎಂದು ಹೆಂಡತಿಯನ್ನು ಕೇಳಲಾಗಿ ಅವಳು – ರಾತ್ರಿಯಲ್ಲಿ ನನ್ನ ಕೂಡ ಅವನು ಜಾರಕರ್ಮ ಮಾಡಲು ಬರಲು – ನಾನು ಒಲ್ಲೆನೆನಲು ಅವನು ನನ್ನ ಆಭರಣಗಳು ಮತ್ತು ಲಿಂಗವನ್ನು ಕಸೆದುಕೊಂಡು ರಾತ್ರಿಯಲ್ಲಿಯೇ ಇಲ್ಲಿಂದ ಹೊರಟು ಹೋದನೆನಲು ಗಂಗಯ್ಯನು— ಚಿಕ್ಕಯ್ಯನೆಂಥವನೆಂಬುದನ್ನು ನಾನು ಬಲ್ಲೆನು. ಮೂಡಲಲ್ಲಿ ಉದಯಿಸುವ ಸೂರ್ಯನು ಪಡುವಣ ದಿಕ್ಕಿನಲ್ಲಿ ಉದಯಿಸಿದರೂ ಅವನು ಮೇರೆದಪ್ಪುವವನಲ್ಲ ಎಂದು ನುಡಿದನು. ಅದಕ್ಕೆ ಅವನ ಹೆಂಡತಿಯು – ಈತನು ಚಿಕ್ಕಣ್ಣನ ಪಕ್ಷ ಹಿಡಿದನು ಎಂದು ತಿಳಿದು ಅರಸನಿಗೆ ದೂರು ಹೇಳಬೇಕೆಂದು ತಾನೇ ಬಿಜ್ಜಳ ನಲ್ಲಿಗೆ ಬಂದು ಅವಳು— ಚಿಕ್ಕಣ್ಣನು ನನ್ನಮೇಲೆ ಈ ರಾತ್ರಿ ಬಲಾತ್ಕಾರ ಮಾಡಿ ನನ್ನ ಆಭರಣಗಳನ್ನೂ ಲಿಂಗವನ್ನೂ ಕಸೆದುಕೊಂಡು ಹೋಗಿದ್ದಾನೆಂದು ಹೇಳಿದಳು. ಅದಕ್ಕೆ ಬಿಜ್ಜಳನು ತನ್ನ ಚಾರರಿಗೆ ಚಿಕ್ಕಣ್ಣನನ್ನು ಹುಡುಕಿಕೊಂಡು ಬನ್ನಿರಿ ಎಂದು ಹೇಳಿ ಕಳಿಸಿದನು. ಅವರು ಚಿಕ್ಕಣ್ಣನನ್ನು ಹುಡುಕುತ್ತ ಹುಡುಕುತ್ತ ಅವನು ಲಿಂಗ ಪೂಜೆ ಮಾಡುತ್ತಿದ್ದ ಹೂದೋಟಕ್ಕೆ ಬಂದು ಅವನ ಹಡಪದ ಮೇಲೆ ಮಡಗಿದ ಲಿಂಗ ಮತ್ತು ಆಭರಣಗಳನ್ನು ಕಂಡು ಅವುಗಳನ್ನು ಅವರು ತೆಗೆದುಕೊಂಡು ಬಿಜ್ಜಳನಲ್ಲಿಗೆ ಬಂದು ಅವನಿಗೆ ತೋರಿಸಲು ಅಲ್ಲಿದ್ದ ಚೆನ್ನಾಜಿಯು ಅವುಗಳನ್ನು ನೋಡಿ ಇವು ನನ್ನವೆನಲು ಚಿಕ್ಕಯ್ಯನು ಮಾಡಿದ ಕೃತ್ಯವು ನಿಜವಾದುದು, ಅವನ ತಲೆಯನ್ನು ಹೊಡೆದು ಹಾಕಿರೆಂದು ಬಿಜ್ಜಳನು ಚಾರರಿಗೆ ಆಜ್ಞೆ ಮಾಡಿದನು.

ಅದೇ ವೇಳೆಗೆ ಆ ಚಾರರು ಚಿಕ್ಕಯ್ಯನು ಲಿಂಗಧ್ಯಾನದಲ್ಲಿ ಕುಳಿತಿರುವ ಸಮಯದಲ್ಲಿ ಅವನಲ್ಲಿಗೆ ಬಂದು ಖಡ್ಗದಿಂದ ಅವನ ತಲೆಯನ್ನು ಹಾರಿಸಿದರು. ಆಗ ಒಂದು ಅದ್ಭುತವಾಯಿತು. ಚಿಕ್ಕಯ್ಯನ ಆ ಶಿರಸ್ಸು ಮೇಲಕ್ಕೆ ಹಾರಿ ಹೋದರೂ ಅದು ಪಂಚಾಕ್ಷರೀ ಜಪವನ್ನು ಸ್ಮರಿಸುತ್ತಲೇ ಇದ್ದಿತು ಮತ್ತು ಅವನ ದೇಹವು ಬೆರಳಿನಿಂದ ರುದ್ರಾಕ್ಷ ಮಾಲೆಯನ್ನು ತಿರುಹುತ್ತಲೇ ಇತ್ತು. ಇದನ್ನು ಚಾರರು ಕಂಡು ಆಶ್ಚರ್ಯಬಟ್ಟು ಹೀಗಾದುದನ್ನು ಬಿಜ್ಜಳನಲ್ಲಿಗೆ ಬಂದು ಹೇಳಲು ಅಲ್ಲಿದ್ದ ಬಸವೇಶ್ವರನು ಅದನ್ನು ಕೇಳಿ ಬಿಜ್ಜಳನಿಗೆ— ನಿಜಲಿಂಗ

ಚಿಕ್ಕಯ್ಯನು ಸನ್ಮಾರ್ಗಿಯು, ಅವನು ಒಬ್ಬ ಶ್ರೇಷ್ಠ ಶಿವಶರಣನು, ಅವನು ಮಹಾನುಭಾವನು, ಪಂಚಾಕ್ಷರೀ ರತನು. ಇಂಥವನನ್ನು ಹೀಗೆ ನೀನು ಕೊಲೆಬಡಿಸುವದು ಅತ್ಯಂತ ಪಾಪಕರ್ಮವು ಎಂದು ಕುಪಿತನಾಗಿ ನುಡಿದನು. ಅದಕ್ಕೆ ಬಿಜ್ಜಳನು— ಚಿಕ್ಕಯ್ಯನು ತಪ್ಪಿತನಾಗಿದ್ದಾನೆ. ಅವನಿಗೆ ತಕ್ಕ ಶಿಕ್ಷೆಯನ್ನು ಮಾಡಿದ್ದೇನೆ ಎಂದು ಅನ್ನಲು ಬಸವೇಶ್ವರನು— ಆ ಶರಣನು ಈಗ ಸತ್ತುಬಿದ್ದಿದ್ದರೆ ಅವನ ತಪ್ಪಿತವು ನಿಜವೆನ್ನುತ್ತೇನೆ. ಹೀಗಿರದಿದ್ದರೆ ಅವನು ತಪ್ಪಿತನಲ್ಲ, ಎಂದು ನುಡಿದನು. ಅದಕ್ಕೆ ಬಿಜ್ಜಳನು ಹಾಗಾದರೆ ಅವನನ್ನು ನೋಡುವಾ ನಡೆ ಎಂದೆನ್ನಲು ಉಭಯತರು ತೋಟಕ್ಕೆ ಹೋಗಿ ನೋಡಲು ಅವರು ಚಿಕ್ಕಣ್ಣನ ಶಿರಸ್ಸು ನೆಲದ ಮೇಲೆ ಬಿದ್ದಿದ್ದರೂ ಅದು ಪಂಚಾಕ್ಷರಿಯನ್ನು ಜಪಿಸುತ್ತಿರುವದನ್ನೂ ದೇಹವು ಜಪಮಾಲೆಯನ್ನು ತಿರುಹುತ್ತಿರುವದನ್ನೂ ನೋಡಿದರು. ಆಗ ಬಿಜ್ಜಳನು ಆಶ್ಚರ್ಯಚಕಿತನಾಗಿ—ಮಂತ್ರ ಶರೀರಿಯಾದ ಇವನಿಗೆ ಮರಣವಾಗಿಲ್ಲ, ಚಿಕ್ಕಣ್ಣನು ಶ್ರೇಷ್ಠ ಶಿವಾನುಭವಿಯು, ಅವನು ಅಪರಾಧಿಯಲ್ಲ. ಇದನ್ನು ನಾನು ಮನಗಂಡೆನು. ಇವನ ಪ್ರಾಣವನ್ನು ನೀನು ಪಡೆಯಬೇಕು ಎಂದು ಬಸವೇಶ್ವರನಿಗೆ ಹೇಳಲಾಗಿ, ಬಸವೇಶ್ವರನು ಮನಸ್ಸಿನಲ್ಲಿ ಶಿವಗಣಂಗಳನ್ನು ನೆನೆಯುತ್ತ ಚಿಕ್ಕಯ್ಯನ ಮಸ್ತಕವನ್ನು ಅವನ ಮುಂಡದ ಮೇಲೆ ಇರಿಸಲು, ಚಿಕ್ಕಯ್ಯನು ಮೊದಲಿನಂತೆ ಜೀವದಿಂದ ಮೇಲಕ್ಕೆದ್ದನು.

ಮುಂದೆ ಚಿಕ್ಕಯ್ಯನು ಕಲ್ಯಾಣದಲ್ಲಿಯೇ ಇದ್ದು ಅಲ್ಲಿಯೇ ಅವನು ಸಮಾಧಿಸ್ಥನಾದನು. ಚಿಕ್ಕಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಬಸವೇಶ್ವರನ ಸಮಕಾಲೀನನು. ಇದೇ ಕಾಲಕ್ಕೆ ಘಟ್ಟಿವಾಳಯ್ಯನು (ಇದೇ ಗ್ರಂಥದಲ್ಲಿ ಪುಟ ೧೬೭ ನೋಡಿರಿ.) ಕಲ್ಯಾಣಪಟ್ಟಣದಲ್ಲಿದ್ದು ಅವನ ಮುದ್ರಿಕೆಯು 'ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ, ಇಲ್ಲ' ಎಂದಿದೆ. ಈ ಮುದ್ರಿಕೆಯ ಮೇಲಿಂದ ಈ ಚಿಕ್ಕಯ್ಯನ ಶಿಷ್ಯನು ಸಿದ್ಧಲಿಂಗ ಎಂಬವನಿದ್ದು ಈ ಸಿದ್ಧಲಿಂಗನ ಹೆಸರನ್ನೇ ಘಟ್ಟಿವಾಳಯ್ಯನು ತನ್ನ ವಚನಗಳಿಗೆ ಮುದ್ರಿಕೆಯಾಗಿ ಇಟ್ಟುಕೊಂಡಿದ್ದರಿಂದ ಘಟ್ಟಿವಾಳಯ್ಯನೂ ಸಿದ್ಧಲಿಂಗನಿಗೆ ಶಿಷ್ಯನಾಗಿರಬಹುದೆಂದು ತೋರುತ್ತದೆ. ನಿಜಲಿಂಗ ಚಿಕ್ಕಯ್ಯನ ಮುದ್ರಿಕೆಯು 'ಉಳಿಯುಮೇಶ್ವರಾ' ಎಂದಿದೆ.

ಈ ಶಬ್ದದಲ್ಲಿ ಪರಮಾತ್ಮನು ಒಬ್ಬನೇ ಇದ್ದು ಅವನು ಕಡೆಗೂ ಉಳಿಯುತ್ತಾನೆ, ಅಂದರೆ ಅವನಿಗೆ ನಾಶವಿಲ್ಲ, ಎಂಬ ಭಾವವು ಇದ್ದ ಹಾಗೆ ತೋರುತ್ತದೆ.

ಇತ್ತ ಮಹಾದೇವರಾಜನು ತಾನು ಬಸವೇಶ್ವರನನ್ನು ಕೊಂದು ಹಾಕಲು ಕಳಿಸಿದ್ದರ ಪರಿಣಾಮವೇನಾಯಿತೆಂಬುದನ್ನು ಶೋಧ ಮಾಡುತ್ತಿರುವಲ್ಲಿ ಅವನು ತನ್ನ ಭಟನು ಬಸವೇಶ್ವರನನ್ನು ಕಾಣಲು ಹೋಗಿ ಅಲ್ಲಿ ಬಿಚ್ಚೋಲೆಯ ಕಾಯಕವನ್ನು ಮಾಡುತ್ತ ಒಬ್ಬ ಶ್ರೇಷ್ಠ ಶಿವಾನುಭವಿಯಾದನೆಂಬುದನ್ನು ಕೇಳಿ ಅವನಲ್ಲಿ ವೈರಾಗ್ಯವು ಉಂಟಾಯಿತು. ಆಗ ಅವನು ತನ್ನ ಹೆಂಡತಿಯೊಡನೆ ಕಲ್ಯಾಣಕ್ಕೆ ಬಂದು ಕಟ್ಟಿಗೆಯನ್ನು ಮಾರುವ ಕಾಯಕವನ್ನು ಕೈಕೊಂಡು ಮೋಳಿಗೆಯ ಮಾರಯ್ಯನೆಂಬ ಹೆಸರನ್ನಿಟ್ಟುಕೊಂಡು ಒಬ್ಬ ಶ್ರೇಷ್ಠ ಶಿವಾನುಭವಿಯಾದನು.

ಬಸವೇಶ್ವರನು ಚಿಕ್ಕಯ್ಯನ ವಿಷಯವಾಗಿ ಅತ್ಯಂತ ಪೂಜ್ಯಭಾವವುಳ್ಳವನಾಗಿದ್ದನೆಂದು ತೋರುತ್ತದೆ. ಅವನು ತನ್ನ ಎರಡು ವಚನಗಳಲ್ಲಿ ಅವನನ್ನು ಸ್ಮರಿಸಿದ್ದಾನೆ. ಅವುಗಳಲ್ಲಿ ಅವನು ಚಿಕ್ಕಯ್ಯನು ತನ್ನ ತಂದೆ, ಅವನು ತನ್ನನ್ನು ಪ್ರೀತಿಸುವವನೆಂದು ಹೇಳಿದ್ದಾನೆ. ಇದರಿಂದ ಚಿಕ್ಕಯ್ಯನು ಬಸವೇಶ್ವರನಕಿಂತಲೂ ವಯಸ್ಸಿನಲ್ಲಿ ಹಿರಿಯನಾಗಿದ್ದನೆಂದು ತೋರುತ್ತದೆ. ಆ ವಚನಗಳು ಯಾವವೆಂದರೆ:—

(೧) ಅಪ್ಪನು ನಮ್ಮ ಮಾದಾರ ಚನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯ ನೆಮ್ಮಯ್ಯ ಕಾಣಿರಯ್ಯ. ಅಣ್ಣನು ನಮ್ಮ ಕಿನ್ನರಿಬೊಮ್ಮಯ್ಯ. ಎನ್ನನೇತಕ್ಕರಿಯರಿ ಕೂಡಲ ಸಂಗಮದೇವಾ?

(೨) ಎನಗಾರು ಇಲ್ಲ, ಎನಗಾರು ಇಲ್ಲವೆಂಬರು. ಬಾಣನವ ನಾನು. ಮಯೂರನವ ನಾನು. ಕಾಳಿದಾಸನವ ನಾನು. ಕಕ್ಕಯ್ಯ ಹಿರಿಯಯ್ಯ. ಚಿಕ್ಕಯ್ಯ ಚನ್ನಯ್ಯ ಎತ್ತಿ ಮುದ್ದಾಡಿದರೆನ್ನ ಕೂಡಲ ಸಂಗಯ್ಯ.

ಯಾವನು ಮೊದಲು ತನ್ನನ್ನು ಕೊಲ್ಲಲಿಕ್ಕೆ ಬಂದಿದ್ದನೋ ಅಂಥವನನ್ನು ಬಸವೇಶ್ವರನು ಮುಂದೆ ಎಂಥ ಪೂಜ್ಯಭಾವದಿಂದ ಕಾಣುವವನಾದನೆಂಬುದು ಮೇಲಿನ ವಚನಗಳಿಂದ ತಿಳಿದುಬರುತ್ತದೆ. ಇದು ಬಸವೇಶ್ವರನ ಉದಾರ ಹೃದಯುವನ್ನು ತೋರಿಸುತ್ತದೆ.

ಚಿಕ್ಕಯ್ಯನ ೧೫ ವಚನಗಳು ಮಾತ್ರ ನಮಗೆ ಉಪಲಬ್ಧವಿವೆ. ಅವೆಲ್ಲವೂ ಬಹು ಸುಂದರವಾದ ವಚನಗಳು. ಅವುಗಳಲ್ಲಿ ನಾವು ನಾಲ್ಕು ವಚನಗಳನ್ನು ಮಾತ್ರ ಇಲ್ಲಿ ಉದಹರಿಸಿದ್ದೇವೆ.

## ವಚನಗಳು.

(೧) ಎನ್ನ ಮನವ ಮಂಚವ ಮಾಡಿ ತನುವ ಪಚ್ಚಡಿಸುವೆ ಬಾರಯ್ಯ. ಎನ್ನ ಶಿವಲಿಂಗವೇ ಬಾರಯ್ಯ. ಎನ್ನ ಭಕ್ತಿ ವತ್ಸಲನೇ ಬಾರಯ್ಯ. ಎನ್ನ ಭಕ್ತ ದೇಹಿಕನೇ ಬಾರಯ್ಯ. ಎನ್ನಂತರಂಗದೊಳಗಿರು ಬಾರಯ್ಯ. ಎನ್ನ ಬಹಿರಂಗದೊಳಗಿರು ಬಾರಯ್ಯ. ಓಂನಮಃ ಶಿವಾಯು ಎಂದು ಕರೆವೆನಯ್ಯ ಉಳಿಯುಮೇಶ್ವರ ನೀ ಬಾರಯ್ಯ.

(೨) ಎಲುದೋರ ಸರಸವಾಡುವನ್ನಬರ ಏನು ಭೃಂಗಿಯೇ? ಸೀಳಿ ಹೊದೆಯಲೇನು ಗಜಾಸುರನೇ? ಹೆಣ ಲೀಲೆ ಮಾಡಲೇನು ಅಂಧಕಾಸುರನೇ? ಮನದಲ್ಲಾಡಲೆ,ನು ಸಿರಿಯಾಳನೇ? ನೊಣ ತೃಣ ದೋಷವಾದಿ ನಾನು. ಎನ್ನನಿನಿತು ಬಳಲಿಸುವರೇ? ಕರುಣಿಸು ಕರುಣಾಕರಾ ಉಳಿಯುಮೇಶ್ವರಾ.

(೩) ಎಲು ಒಡೆದು ತನು ಕರಗಿ ಮನವು ಜಜ್ಜರಂಬೋಗಿ ಲಿಂಗದಲ್ಲಿ ನೀರು ನೀರಾಗಿ ಬೆರಿಸಲುಬೇಕು. ಜಂಗಮದಲ್ಲಿ ಅಲಿಕಲ್ಲಾಗಿ ಕರಗಲುಬೇಕು. ಸರ್ವಾಂಗದಲ್ಲಿ ಪುಳಕಂಗಳೊಗೆದು ಕಡಲುಗಳಾಗಿ ನಿರ್ವಾಣ ನಿಜಪದವೆನಗೆಂದಪ್ಪದೋ ಉಳಿಯುಮೇಶ್ವರಾ.

(೪) ಒಂದು ಯೋನಿಯಲ್ಲಿ ಬಂದ ದುಃಖವ ನಾನೆಂದಿಗೂ ಕಳೆಯಲಾರೆನಯ್ಯ. ಎಂಬತ್ತುನಾಲ್ಕು ಲಕ್ಷ ಯೋನಿ ಎಂದಡೆ ಇನ್ನೇವೆನಯ್ಯ? ಮತ್ತೊಂದನರಿಯದ ಶಿಶುವು ನಾನು ಬೆಂದೆನಯ್ಯ. ಶಿವ ಶಿವಾ, ಎನ್ನ ಕಂದ ನೀ ಬಾ ಎಂದು ಕಂಬನಿಯ ತೊಡೆದೆತ್ತಿ ಆನಂದದಿಂದ ಕಣ್ದೆರೆದೆನಯ್ಯ ಉಳಿಯುಮೇಶ್ವರಾ.

# ಶ್ರೀಪತಿ ಪಂಡಿತ.

ವೀರಶೈವ ಪಂಡಿತರಲ್ಲಿ ಶ್ರೀಪತಿ ಪಂಡಿತ, ಮಂಚಣ್ಣ ಪಂಡಿತ, ಮತ್ತು ಮಲ್ಲಿಕಾರ್ಜುನ ಪಂಡಿತ ಈ ಮೂವರು ಅತ್ಯಂತ ಪ್ರಸಿದ್ಧರಾಗಿದ್ದಾರೆ. ಅವರನ್ನು ಒಟ್ಟಾಗಿ ಪಂಡಿತತ್ರಯರೆಂದು ಕರೆಯುವದುಂಟು. ಇವರಲ್ಲಿ ಶ್ರೀಪತಿ ಪಂಡಿತನು ಆಂಧ್ರ ಎಂದರೆ ತೆಲುಗು ದೇಶದವನು. ಇವನಿಗೆ ಶ್ರೀಪತಿ ಪಂಡಿತಾರಾಧ್ಯ, ಪಂಡಿತಾರಾಧ್ಯ, ಶ್ರೀಪತಿ ಎಂಬ ಹೆಸರುಗಳೂ ಉಂಟು.

ಶ್ರೀಪತಿ ಪಂಡಿತನ ವಾಸಸ್ಥಳವು ಈಗ ಕೃಷ್ಣಾ ಜಿಲ್ಲೆಯಲ್ಲಿರುವ ಬೆಜವಾಡವು. ಇದು ಕೃಷ್ಣಾ ನದಿಯ ಎಡಮಗ್ಗಲಿನ ದಂಡೆಯ ಮೇಲೆ ಸಮುದ್ರ ತೀರದಿಂದ ಪಶ್ಚಿಮಕ್ಕೆ ಸುಮಾರು ೪೫ ಮೈಲುಗಳ ಮೇಲೆ ಇದೆ. ಇದಕ್ಕೆ ಪೂರ್ವಕಾಲದಲ್ಲಿ ವಿಜಯವಾಟಿಕಾ ಅಥವಾ ಜಯವಾಟಿಕಾ ಎಂಬ ಹೆಸರುಗಳಿದ್ದದ್ದು ಅಲ್ಲಿಯ ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಕನ್ನಡ ಗ್ರಂಥಗಳಲ್ಲಿ ಶ್ರೀಪತಿಯ ಗ್ರಾಮವು ದಶನಪುರ ಎಂದು ಹೇಳಿದೆ. ಆದರೆ ಈ ಹೆಸರಿನ ಗ್ರಾಮವು ಈ ಭಾಗದಲ್ಲಿ ಈಗ ಉಪಲಬ್ಧವಿರುವದಿಲ್ಲ. ಈ ಸ್ಥಳವು ಬೆಜವಾಡದ ಕೆಲವೊಂದು ಭಾಗವಾಗಿರಬಹುದು.

ಶ್ರೀಪತಿ ಪಂಡಿತನ ಕಾಲದಲ್ಲಿ ಬೆಜವಾಡದಲ್ಲಿ ಅನಂತರಾಜನೆಂಬ ರಾಜನು ಆಳುತ್ತಿದ್ದನು. ಅವನ ಮಂತ್ರಿಯು ವೇಧಕನೆಂಬವನು.[೧] ಶ್ರೀಪತಿ ಪಂಡಿತನು ಜಾತಿಯಿಂದ ಬ್ರಾಹ್ಮಣನು. ಆದರೂ ಅವನು ವೀರಶೈವಾಚಾರಸಂಪನ್ನನು, ವಿದ್ವಾಂಸನು. ಅವನಲ್ಲಿದ್ದ ವಿದ್ವತ್ತಿಗೋಸ್ಕರ ಅವನು ಪಂಡಿತನೆಂತಲೂ ಶಿವಜ್ಞಾನಿ ಎಂತಲೂ ನಾಡಿನಲ್ಲಿ ಬಹಳ ಪ್ರಸಿದ್ಧನಾಗಿದ್ದನು. ಅವನು ಶ್ರೀಶೈಲ ಮಲ್ಲಿಕಾರ್ಜುನನ ಕೇವಲ ಭಕ್ತನಾಗಿ ಅವನು ಆಗಿಂದಾಗ್ಗೆ ಅಲ್ಲಿಗೆ ಹೋಗಿ ದೇವರ ದರ್ಶನವನ್ನು ಹೊಂದುವನು. ಅವನು ಯಾವಾಗಲೂ ಶ್ರೀಶೈಲ ಮಲ್ಲಿಕಾರ್ಜುನನ ಸ್ಮರಣೆಯಲ್ಲಿಯೇ ಇರುವನು.

---

(೧) ಬೇರೆ ಗ್ರಂಥದಲ್ಲಿ ವೇದಾಕ್ಷನೆಂದಿದೆ.

ಈ ಕಾಲದ ಕರ್ನಾಟಕದಲ್ಲಿ ಅನೇಕ ಶಿವಶರಣರು ಉದಯವಾಗಿ ಅವರಲ್ಲಿ ಅತ್ಯಂತ ಪ್ರಸಿದ್ಧಿಹೊಂದಿದ ಸಿದ್ಧರಾಮೇಶ್ವರ, ಅಲ್ಲಮಪ್ರಭು, ಸಕಳೇಶ ಮಾದರಸ, ಗೋರಕ್ಷ, ಮಹಾದೇವಿಯಕ್ಕ, ವೈದ್ಯನರಾಮ ಇವರೇ ಮೊದಲಾದವರು ಶ್ರೀಶೈಲ ಮಲ್ಲಿಕಾರ್ಜುನನ ಕೇವಲ ಭಕ್ತರಾಗಿದ್ದರು. ಅಲ್ಲದೆ ಕರ್ನಾಟಕದಿಂದ ಭಕ್ತ ಜಂಗಮರ ಪರಿಸೆಗಳು ಅಸಂಖ್ಯಾತವಾಗಿ ಶ್ರೀಶೈಲಕ್ಕೆ ಯಾವಾಗಲೂ ಹೋಗುತ್ತಿದ್ದುದು ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಹೀಗೆ ಕ್ಷೇತ್ರಸ್ಥಾನಗಳಿಗೆ ದೂರದೂರದ ದೇಶಗಳಿಂದ ಧಾರ್ಮಿಕ ಪುರುಷರು ಬರುತ್ತಿರುವದರಿಂದ ಅವರಲ್ಲಿ ಪರಸ್ಪರ ವಿಚಾರವಿನಿಮಯಗಳಾಗಲು ಸಂಧಿಯು ದೊರೆಯುತ್ತದೆ. ಆದ್ದರಿಂದ ಇಂಥ ಸ್ಥಾನಗಳು ಧರ್ಮಪ್ರಸಾರ ಕಾರ್ಯಕ್ಕೆ ಬಹಳ ಅನುಕೂಲವಾದವುಗಳು. ಈ ಕಾಲದಲ್ಲಿ ಕರ್ನಾಟಕದಲ್ಲಿ ಶಿವಶರಣರ ಮತತತ್ವಗಳ ಪ್ರಚಾರವು ಬಹು ಬಲವಾಗಿ ನಡೆದಿದ್ದರಿಂದ ನೆರೆ ಪ್ರಾಂತವಾದ ಆಂಧ್ರ ದೇಶದಲ್ಲಿಯೂ ಕೂಡ ಅವು ಪ್ರಸಾರವಾಗುತ್ತಾ ನಡೆದಿದ್ದವು. ಆದ್ದರಿಂದಲೇ ಈ ದೇಶದಲ್ಲಿಯೂ ಅನೇಕ ಆಂಧ್ರ ಶಿವಶರಣರು ಉತ್ಪನ್ನರಾದರು. ಹಾಗೆಯೇ ಶ್ರೀಪತಿ ಪಂಡಿತನು ಶಿವಶರಣರ ಶಿವಾನುಭವದ ಉದಾರ ತತ್ವಗಳನ್ನು ತಿಳಿದುಕೊಂಡವನಾಗಿ ಅವುಗಳಂತೆ ಅವನು ಆಚರಿಸುತ್ತಿದ್ದನೆಂಬದು ಅವನ ಚರಿತ್ರೆಯಿಂದ ಗೊತ್ತಾಗುತ್ತದೆ.

ಶ್ರೀಪತಿಯು ತನ್ನ ಶಿವಾನುಭವದ ಆಚರಣೆಯ ಮೂಲಕ "ಶಿವಾದ್ವಯ ಮಾರ್ಗಸ್ಥಾಪನ ಧುರಂಧರನೆಂ"ದು(೧) ಪ್ರಸಿದ್ಧನಾಗಿದ್ದನು. ಅವನು "ಶಿವಮಂತ್ರವೇ ಮಂತ್ರರಾಜವು, ಶಿವಪ್ರಸಾದವೇ ಭೋಗಶೇಖರವು", ಎಂದು ಶಪಥಪೂರ್ವವಾಗಿ ಜಯವಾಟೀ ಗ್ರಾಮದಲ್ಲಿ ಉದ್ಘೋಷಿಸುತ್ತಾ ಇರುವನು. ಇವನು ತನ್ನ ಈ ರೀತಿಯನ್ನು ಪ್ರದರ್ಶಿಸಲು ಒಂದು ವಿಜಯಧ್ವಜಪನ್ನೆತ್ತಿ ಮೆರಿಸುವನು. ಹೀಗಿರುವಲ್ಲಿ ಒಂದು ದಿವಸ ಅವನು ಕೃಷ್ಣಾ ಸ್ನಾನವನ್ನು ಮಾಡಿಕೊಂಡು ಪಟ್ಟಣದ ಬೀದಿಯಿಂದ ಬರುತ್ತಿರುವಾಗ ಒಂದು ಮದ್ದಾನೆಯು ದಿಕ್ಕುಗೆಟ್ಟು ತನ್ನ ಇದಿರಿಗೆ

---

(೧) ಶೀರಾರಾಧ್ಯನು ವಿರಚಿಸಿದ "ಧರ್ಮಾಗುಪ್ತಾಭ್ಯುದಯ"ವೆಂಬ ತೆಲುಗು ಕಾವ್ಯದಲ್ಲಿಯ ಉಲ್ಲೇಖ.

ಡಿ ಬರುವದನ್ನು ಕಂಡು ಅವನು ಆದರಿಂದ ತಪ್ಪಿಸಿಕೊಳ್ಳಲು
ಊಟಗರ ಮಲ್ಲಯ್ಯನೆಂಬ ಶಿವಭಕ್ತನ ಮನೆಯ ಬಾಗಿಲಲ್ಲಿ ಬಂದು
ಂತನು. ಪ್ರತಿನಿತ್ಯ ಆರು ಜನ ಜಂಗಮರಿಗೆ ಶಿವಾರ್ಚನೆ ಮಾಡು
ವದು ಈ ಮಲ್ಲಯ್ಯನ ಪದ್ಧತಿಯಾಗಿತ್ತು. ಆ ದಿವಸ ಅವನಿಗೆ ಐವರು
ಮಾತ್ರ ಜಂಗಮರು ದೊರಕಿದ್ದರು. ಆಗ ಅಕಸ್ಮಾತ್ತಾಗಿ ಶ್ರೀಪತಿಯು
ತನ್ನ ಬಾಗಿಲಲ್ಲಿ ಬಂದು ನಿಂತಿದ್ದನ್ನು ಕಂಡು ಇವನು ತನಗೆ
ಬೇಕಾದ ಆರನೆಯ ಜಂಗಮನು ದೊರೆದನೆಂದು ಹರುಷಿತನಾಗಿ ಅವ
ನನ್ನು ಒಳಿಯಕ್ಕೆ ಲಿಂಗಪೂಜೆಗೋಸ್ಕರ ಕರೆದುಕೊಂಡು ಹೋದನು.
ಒಳಗೆ ಅನೇಕ ಭಕ್ತಜನರು ಭೋಜನಕ್ಕೆ ಕುಳಿತಿದ್ದರು. ಶ್ರೀಪತಿಯು
ಅವರ ಭಕ್ತಿಗೆ ಮೆಚ್ಚಿ ಅವರೊಡನೆ ಊಟಕ್ಕೆ ಕುಳಿತುಕೊಂಡು
ಭುಂಜಿಸಿ ತನ್ನ ಮನೆಗೆ ತಿರುಗಿ ಬಂದನು.

ಶ್ರೀಪತಿಯು ಜಾತಿಯಿಂದ ಬ್ರಾಹ್ಮಣನು. ಆದರೆ ಅವನು ಭೋಜನ
ಮಾಡಿ ಬಂದ ಮಲ್ಲಯ್ಯನೂ ಅವನೊಡನೆ ಇದ್ದ ಭಕ್ತರೂ ಶೂದ್ರ
ರೆಂದು ಬ್ರಾಹ್ಮಣರಿಂದ ಭಾವಿಸಲ್ಪಟ್ಟವರು. ಇಂಥವರೊಡನೆ ಅವನು
ಭೋಜನ ಮಾಡಿದ್ದನ್ನು ಅವರು ಕೇಳಿ ಅವನಿದ್ದೆಡೆಗೆ ಬಂದು
ಅವನಿಗೆ— ಪಂಡಿತರೇ, ನೀವು ವಿಪ್ರ ಜನ್ಮದಲ್ಲಿ ಹುಟ್ಟಿ ಹೀಗೆ ಕನಿಷ್ಠ
ಜಾತಿಯವರಲ್ಲಿ ಉಣ್ಣಬಹುದೇ? ಎಂದು ಕೇಳಲು ಆ ಮಾತಿಗೆ
ಅವನು— ಎಲೋ ಮರುಳುಗಳಿರಾ, ವೀರಶೈವರಲ್ಲಿ ಕುಲವನೆಣಿಸ
ಬಹುದೇ? ಮಣ್ಣಿನಲ್ಲಿ ಚಿನ್ನ ಹುಟ್ಟಿದರೆ ಅದು ಮಣ್ಣೆನ್ನಬಹುದೇ?
ಮಂತ್ರಪೂರ್ವಕವಾಗಿ ಪ್ರತಿಷ್ಠೆಯಾದ ಬಳಿಕ ಲಿಂಗವು ಶಿಲೆ ಎಂದೆನ್ನ
ಬಹುದೇ? ಹಾಗೆಯೇ ಲಿಂಗಸನ್ನಿಹಿತನಾದ ಬಳಿಕ ಭಕ್ತನಲ್ಲಿ ಕುಲ,
ಗೋತ್ರ, ವರ್ಣ, ಜಾತಿಗಳು ಉಳಿಯಲಾರವು, ಎಂದು ಅನೇಕ ಶಾಸ್ತ್ರ
ಪ್ರಮಾಣಗಳಿಂದ ತನ್ನ ಮತವನ್ನು ಸಮರ್ಥಿಸಿದನು. ಆದರೆ ಬ್ರಾಹ್ಮ
ಣರು ಅದಕ್ಕೆ ಒಪ್ಪದೆ ಅವರು ಶ್ರೀಪತಿ ಪಂಡಿತನಿಗೆ— ನಿನ್ನ ದೈವ
ವಾವುದು ಎಂದು ಕೇಳಲು, ಅವನು— ನನಗೆ ಜಂಗಮವೇ ದೈವ
ವೆಂದೆನ್ನಲು ಅವರು— ಅದು ಹೇಗೆನಲು, ಅದಕ್ಕೆ ಅವನು— ಲಿಂಗ
ಮುಖ ಜಂಗಮವು. ಇದಕ್ಕೆ ಆಧಾರಗಳಿವೆ. ಆದ್ದರಿಂದ ಜಂಗಮಕ್ಕೆ
ನೀಡಿದರೆ ಶಿವನು ತೃಪ್ತನಾಗುತ್ತಾನೆ. ಆದ್ದರಿಂದ ನನಗೆ ಜಂಗಮವೇ
ದೈವವು ಎಂದು ಹೇಳಿದನು. ಅದಕ್ಕೆ ಆ ವಿಪ್ರರು— ಇದು ತಪ್ಪು

ಅಗ್ನಿಯೇ ದೈವವು. ಅಗ್ನಿಗೆ ಹವಿಸ್ಸು ನೀಡುವರೆ ದೇವತೆಗಳು ತೃಪ್ತರಾಗುತ್ತಾರೆ. ಆದ್ದರಿಂದ ಅಗ್ನಿಯೇ ನಿಜವಾದ ದೈವವು ಎಂದೆನ್ನಲು ಅದಕ್ಕೆ ಶ್ರೀಪತಿಯು— ನೀವು ಅಗ್ನಿಯೇ ದೈವವೆನ್ನುತ್ತೀರಿ. ಆದರೆ ನಮ್ಮ ಆರಾಧ್ಯರು ಆ ಅಗ್ನಿಯ ನಾಲಿಗೆಯನ್ನು ಕೊಯ್ದುಬಿಡಲಿಲ್ಲವೇ? ಅಂದ ಬಳಿಕ ಆ ಅಗ್ನಿಯ ದೇವತ್ವವು ಎಲ್ಲಿ ಉಳಿಯಿತು? ಎಂದು ನುಡಿದನು. ಅದಕ್ಕೆ ಬ್ರಾಹ್ಮಣರು ಅವನಿಗೆ— ನೀನು ಅಗ್ನಿಗೆ ಹೀಗೆ ಅಪಹಾಸ್ಯ ಮಾಡಬೇಡ. ಅಗ್ನಿಯನ್ನು ನೀನಷ್ಟು ಮುಟ್ಟಿ ನೋಡು. ಅದು ನಿನ್ನನ್ನು ದಹಿಸಿ ಬಿಡುವದು. ಆದರೆ ಒಂದು ವೇಳೆ ನೀನು ಅದನ್ನು ನಿನ್ನ ಆಜ್ಞೆಯಲ್ಲಿಟ್ಟುಕೊಂಡು ಅದು ದಹಿಸದಂತೆ ಮಾಡಿದರೆ ಮಾತ್ರ ನಿನ್ನ ಮತವು ಸತ್ಯವು ಮತ್ತು ನಿನ್ನದು ಜಯವು ಎಂದು ಹೇಳಲು ಶ್ರೀಪತಿ ಪಂಡಿತನು— ಹಾಗೆಯೇ ಮಾಡುತ್ತೇನೆ, ಅಗ್ನಿಯನ್ನು ನನ್ನ ಅಂಕಿತದಲ್ಲಿಟ್ಟುಕೊಳ್ಳುತ್ತೇನೆ, ಇದನ್ನು ಈಗಲೇ ನಿಮಗೆ ಮಾಡಿತೋರಿಸುತ್ತೇನೆ ಎಂದು ನುಡಿದು ಅರಳಿಯ ಕೊರಡುಗಳನ್ನು ತರಿಸಿ ಅವುಗಳಿಂದ ಕೆಂಡವನ್ನು ಮಾಡಿ, ಒಂದು ಮಹತ್ತಾದ ಜ್ವಾಲೆಯನ್ನು ಹುಟ್ಟಿಸಿ, ನೂತನರ ಮತ್ತು ಪುರಾತನರ ಅಡಿಗಳನ್ನು ನೆನೆದು ಒಂದು ಪಾವುಡವನ್ನು ನೆಲದ ಮೇಲೆ ಹಾಸಿ, ಅದರ ಮೇಲೆ ಉರಿಯುತ್ತಿದ್ದ ಆ ಬೆಂಕಿಯನ್ನು ಒಟ್ಟಿದನು. ಹೀಗೆ ಅವನ್ನು ಒಟ್ಟಿ ಪುರಜನರು ನೋಡುವಂತೆ ಆ ಜ್ವಾಲೆಯನ್ನು ಆ ಪಾವುಡದಲ್ಲಿ ಕಟ್ಟಿ ಒಂದು ಮೊಟ್ಟೆಯನ್ನು ಮಾಡಿ, ಅದನ್ನು ಬನ್ನಿಯ ಮರದ ಕೊಂಬೆಗೆ ತೂಗಹಾಕಿದನು. ಹೀಗೆ ಮಾಡಿದರೂ ಕೂಡ ಕಟ್ಟಿದ್ದ ಆ ಬಟ್ಟೆಗೆ ಎಷ್ಟು ಮಾತ್ರವೂ ಉರಿ ಹತ್ತಲಿಲ್ಲ. ಹೀಗೆ ಮೊಟ್ಟೆಮಾಡಿ ಕಟ್ಟಿದ್ದ ಆ ಬೆಂಕಿಯು ಏಳು ದಿನಗಳ ವರೆಗೂ ಅದರಲ್ಲಿಯೇ ಉರಿಯುತ್ತಿತ್ತು. ಆದರೆ ಅದರಿಂದ ಬಟ್ಟೆಗೂ ಸುತ್ತಲಿನ ಪದಾರ್ಥಗಳಿಗೂ ಎಷ್ಟು ಮಾತ್ರವೂ ಅಪಾಯ ಸಂಭವಿಸಿರಲಿಲ್ಲ.

ಶ್ರೀಪತಿಯು ಆ ಬೆಂಕಿಯ ಮೊಟ್ಟೆಯಲ್ಲಿ ಪಟ್ಟಣದಲ್ಲಿದ್ದ ಬ್ರಾಹ್ಮಣರ ಗೃಹಗಳಲ್ಲಿಯ ಬೆಂಕಿಯ ಅಂಶವೆಲ್ಲವುಗಳೂ ಆಕರ್ಷಿಸಲ್ಪಟ್ಟಿದ್ದವು. ಆದ್ದರಿಂದ ಅವರ ಮನೆಗಳಲ್ಲಿ ಬೆಂಕಿಯೇ ಇಲ್ಲದಾಯಿತು! ಅವರಲ್ಲಿರುವ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರಗ್ನಿಗಳು ನಂದಿಹೋದವು. ಅದರಿಂದ ವಿಪ್ರರು ಅನ್ನವಿಲ್ಲದೆ ಕಷ್ಟಪಡ

ಹತ್ತಿದರು. ಅವರ ಉದರಾಗ್ನಿಯೂ ಸಹ ಶಾಂತವಾಯಿತು. ಅವರಿಗೆ ಹಸಿವೆ ತೃಷೆಗಳಿಲ್ಲದಾದವು. ಆಗ ಅವರು ಅನ್ನವಿಲ್ಲದೆ ಕಷ್ಟಪಟ್ಟು ಕಡೆಗೆ ಆಲೋಚನೆಯನ್ನು ಮಾಡಿ ಶ್ರೀಪತಿ ಪಂಡಿತನ ಕಡೆಗೆ ಹೋಗಿ ಅವನನ್ನು ನಮಸ್ಕರಿಸಿ— ನಿಮ್ಮ ಕೂಡ ನಾವು ವ್ಯರ್ಥವಾಗಿ ವಾದಿಸಿದೆವು. ನಮ್ಮ ಅಪರಾಧವನ್ನು ಕ್ಷಮಿಸು, ಎಂದು ಬೇಡಿಕೊಳ್ಳಲು ಶ್ರೀಪತಿ ಪಂಡಿತನು ಕಟ್ಟಿದ್ದ ಆ ಬೆಂಕಿಯ ಮೊಟ್ಟೆಯನ್ನು ಗಿಡದಿಂದ ಕೆಳಗಿಳಿಸಿ ಅದರೊಳಗಿನ ಬೆಂಕಿಯನ್ನು ಹೊರಗೆ ಸುರುವಿದನು. ಹೀಗೆ ಸುರುವಿದ ಕೂಡಲೆ ವಿಪ್ರರ ಮನೆಯೊಳಗಿನ ಅಗ್ನಿಗಳು ಪುನಃ ಪುಟವಾಗಿ ಉರಿಯಹತ್ತಿದವು.

## ಶಿಲಾಶಾಸನದಲ್ಲಿ ಈ ಪೊವಾಡದ ಉಲ್ಲೇಖ.

ಬೆಜವಾಡದ ಮಲ್ಲೇಶ್ವರ ದೇವಾಲಯದಲ್ಲಿಯ ಶಿಲಾಶಾಸನದಲ್ಲಿ ಈ ಪೊವಾಡದ ಉಲ್ಲೇಖವಿದೆ. ಈ ಕಾಲದಲ್ಲಿ ಅನಂತರಾಜನೆಂಬ ರಾಜನು ಬೆಜವಾಡದಲ್ಲಿ ಆಳುತ್ತಿದ್ದನು. ಅವನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದ ಪಶ್ಚಿಮ ಚಾಳುಕ್ಯ ರಾಜನಾದ ೬ನೇ ವಿಕ್ರಮಾದಿತ್ಯನ ದಂಡನಾಯಕನು. ಅವನು ಈ ಭಾಗದಲ್ಲಿಯ ಅನೇಕ ರಾಜ್ಯಗಳನ್ನು ಗೆದ್ದು ಬೆಜವಾಡವನ್ನು ತನ್ನ ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅವನು ೧೧೦೫ರಿಂದ ೧೧೩೦ರ ವರೆಗೆ ಆಳಿದನೆಂದು ತಿಳಿಯುತ್ತಿದೆ. ಅವನು ಬೆಜವಾಡದ ಸುತ್ತಲಿನ ನಾಡಾದ ಕೊಂಡುಕೊಂಡಪಲ್ಲಿ ಎಂಬುವನ್ನು ಈ ಕಾಲದಲ್ಲಿ ಆಳುತ್ತಿದ್ದನೆಂದು ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಇವನ ಶಾಸನಗಳು ಗುಂಟೂರ ಜಿಲ್ಲೆಯಲ್ಲಿರುವ ಚಿಬ್ರೋಲ ಎಂಬಲ್ಲಿ ಇರುತ್ತವೆ. ಅವನ ಕಾಲದಲ್ಲಿಯೇ ಶ್ರೀಪತಿ ಪಂಡಿತನ ಪೊವಾಡವು ಜರಿಗಿದ್ದು. ಇದರಿಂದ ಶ್ರೀಪತಿಯ ಖ್ಯಾತಿಯು ನಾಡಿನಲ್ಲಿ ಹೆಚ್ಚಾಗಲು, ಅನಂತಭೂಪಾಲ ರಾಜನು ಅವನ ಶಿಷ್ಯತ್ವವನ್ನು ವಹಿಸಿದನೆಂದು ತಿಳಿಯುತ್ತಿದೆ.

ಶ್ರೀಪತಿ ಪಂಡಿತನ ಪೊವಾಡದ ವಿವರವು ಬೆಜವಾಡದಲ್ಲಿಯ ಇದೇ ಶಿಲಾಶಾಸನದಲ್ಲಿ ಬಂದಿದೆ. ಈ ಶಾಸನವನ್ನು ಅಲ್ಲಿಯ ಮಲ್ಲೇಶ್ವರ ದೇವಾಲಯದಲ್ಲಿ ಈಗಲೂ ನೋಡಬಹುದು. ಅದು ಅಚ್ಚಾಗಿದೆ. ಅದರಲ್ಲಿ ಶ್ರೀಪತಿ ಪಂಡಿತಾರಾಧ್ಯನು 'ಭಕ್ತೋತ್ತಮ' ನೆಂತಲೂ ಅವನು

ದೇವಋಷಿಗಳಿಗಿಂತಲೂ ಶಿವಭಕ್ತನೇ ಅಧಿಕನೆಂಬ ಸಿದ್ಧಾಂತವನ್ನು ಪ್ರತಿಜ್ಞಾಪೂರ್ವಕವಾಗಿ ಪ್ರತಿಪಾದಿಸಿದನೆಂತಲೂ ಅಗ್ನಿಯನ್ನು ವಸ್ತ್ರದಲ್ಲಿ ಕಟ್ಟಿ ಬನ್ನೀ ಗಿಡದ ಕೊಂಬೆಗೆ ಕಟ್ಟಿದನೆಂತಲೂ ವರ್ಣನೆ ಇದೆ. ಈ ದೇವಾಲಯಕ್ಕೆ ಪಲ್ಲವ ವಂಶೀಯನಾದ ಮತ್ತು ವೆಂಗಿಚಾಳುಕ್ಯನ ಸಾಮಂತನಾದ ಪಲ್ಲಕೇತು ಭೂಪಾಲನು ದಾನಕೊಟ್ಟಿದ್ದರ ಬಗ್ಗೆ ಇದೇ ಶಾಸನದಲ್ಲಿ ವರ್ಣನೆಯು ಬಂದಿರುತ್ತದೆ.

ಇದರಿಂದ ಶ್ರೀಪತಿ ಪಂಡಿತನು ಈ ಕಾಲದಲ್ಲಿ ಅತ್ಯಂತ ಪ್ರಸಿದ್ಧಿಗೆ ಬಂದಿದ್ದನೆಂತಲೂ ಅವನು ನಿಜವಾಗಿ ಆಗಿಹೋದ ಮಹಾಪುರುಷನೆಂತಲೂ ಗೊತ್ತಾಗುತ್ತದೆ. ಈ ಶಿಲಾಶಾಸನದಲ್ಲಿ ವರುಷವಿದ್ದ ಭಾಗವು ಸವೆದು ಹೋಗಿರುವದರಿಂದ ಇದು ಯಾವ ಕಾಲದ್ದೆಂಬುದು ನಿಶ್ಚಿತವಾಗಿ ಗೊತ್ತಾಗುವದಿಲ್ಲ.

ಈ ಪೊವಾಡವು ಜರಿಗಿದ ಸ್ಥಳವು 'ಬನ್ನೀ ದೊಡ್ಡಿ' ಎಂಬ ಹೆಸರಿನಿಂದ ಬಿಜವಾಡದಲ್ಲಿ ಈಗಲೂ ಪ್ರಸಿದ್ಧವಿದೆ. ಅಲ್ಲದೆ ಈ ಹೆಸರು ಅಲ್ಲಿಯ ಮುನಿಸಿಪಾಲಿಟಿ ಲೆಕ್ಕದಲ್ಲಿಯೂ ಕೂಡ ಇರುತ್ತದೆ.

## ಶಿಲಾಶಾಸನ ಮತ್ತು ಗ್ರಂಥಗಳಲ್ಲಿ ಶ್ರೀಪತಿ ಪಂಡಿತನ ಮತ್ತು ಅವನ ವಂಶಜರ ಉಲ್ಲೇಖಗಳು.

ಇದಲ್ಲದೆ ಶ್ರೀಪತಿ ಪಂಡಿತನು ಕೆಲವು ತೆಲುಗು ಗ್ರಂಥಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿದ್ದಾನೆ. ಅವು ಕೆಳಗೆ ವಿವರಿಸಲ್ಪಟ್ಟಿವೆ.

(೧) ವೆಲ್ಲೋಚಿರಾಜು ವೀರಣಾಮಾತ್ಯನೆಂಬ ಗ್ರಂಥಕಾರನು ಮನುವಂಶ ಪುರಾಣ ಎಂಬ ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಅವನು ಪಂಡಿತಾರಾಧ್ಯದೇಶಿಕನು ಬಿಜವಾಡದ ತೆಲ್ಲಿಗರ ಗುರುವಾಗಿದ್ದನೆಂತಲೂ ಅವರು ಅವನ ಕರುಣೆಗೆ ಪಾತ್ರರಾಗಿದ್ದರೆಂತಲೂ ವರ್ಣಿಸಿದ್ದಾನೆ. ಅಲ್ಲಿಯ ರಾಜನಾದ ಚಾಲುಕ್ಯ ವಂಶದ ಪ್ರತಾಪ ಚೋಳನು ಈ ತೆಲ್ಲಿಗರಿಗೆ ಅಂದರೆ ಗಾಣಿಗರಿಗೆ ವಿಜಯವಾಟಿಕಾ ಮೊದಲಾದ ೧೪ ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟದ್ದೂ ಅವರು ತಮ್ಮ 'ಗುರುವೂ ಮಹೇಶ್ವರ'ನೂ ಆದ ಶ್ರೀಪತಿಯ ಆಶೀರ್ವಾದದಿಂದ ಸುಖವಾಗಿದ್ದದ್ದೂ ಅದರಲ್ಲಿ ಹೇಳಿದೆ. ಮುಂದೆ ಈ ಶಿಲಾಶಾಸನದಲ್ಲಿ ಹೇಳಿರುವದೇ

ಂದರೆ, ಈ ತೆಲ್ಗಿಗರು 'ಚಾಲುಕ್ಯ ವಿಷ್ಣುವರ್ಧನ ಮಹಾರಾಜ ದೇವ ಲಪ್ಲಾಣ ವೀರಪೆರುಮಾಳ್ ಪ್ರತಾಪ ಚೋಳ' ಇವನ ರಾಜ್ಯದಲ್ಲಿರು ರಾಗ್ಗೆ ಶಕೆ ೧೧೦೯ ಅಂದರೆ ಕ್ರಿ. ಶ. ೧೧೮೭ ರಲ್ಲಿ ಕೆಲವೊಂದು ಕಲ ಹದ ಮೂಲಕ ಇವರಲ್ಲಿ ಒಡಕುಗಳಾಗಿ ಒಂದು ಪಂಗಡದವರು ದಕ್ಷಿಣ ದೇಶವಾದ ನೆಲ್ಲೂರಿಗೆ ಬಿಜವಾಡವನ್ನು ಬಿಟ್ಟು ಹೋದರೆಂಬ ವರ್ಣನೆ ಇದೆ. ಈ ಭಲ್ಲನರೇಂದ್ರನ ಬೇರೆ ಎರಡು ಶಾಸನಗಳು ಕೃಷ್ಣಾ ಜಿಲ್ಲೆಯಲ್ಲಿ ಪೆದ್ದಕಲ್ಲೆಪಲ್ಲಿ ಎಂಬ ಗ್ರಾಮದಲ್ಲಿದ್ದು ಅವುಗಳಲ್ಲೊಂದರ ವರುಷ ೧೧೫೪ ಇರುತ್ತದೆ.

(೨) ವೀರಣಾಮಾತ್ಯನು 'ಭಿಲ್ಲಾಳ ಚರಿತ್ರೆ' ಎಂಬ ತೆಲುಗು ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿಯೂ ಅವನು ಶ್ರೀಪತಿಯನ್ನು ಉಲ್ಲೇಖಿಸಿದ್ದಾನೆ. ಈ ಚರಿತ್ರೆಯನ್ನು ಅವನು ದಾಮುಮೊಗ್ಗಣ ಎಂಬ ವನ ಆಶ್ರಯದಲ್ಲಿ ಬರೆದಿದ್ದು ಈ ಮೊಗ್ಗಣನ ಗುರುವು ಶಂಭುಲಿಂಗ ನೆಂಬವನೆಂತಲೂ ಈ ಶಂಭುಲಿಂಗನು ಶ್ರೀಪತಿ ಪಂಡಿತಾರಾಧ್ಯನ ವಂಶ ದವನೆಂತಲೂ ಇದರಲ್ಲಿ ಹೇಳಿದೆ.

(೩) ಈ ಶಂಭುಲಿಂಗನ ಮೊಮ್ಮಗನು ವೀರಣಾರಾಧ್ಯನೆಂಬವನು ಇದ್ದು ಈತನ ಮಗನು ನಾಗಲಿಂಗನೆಂಬುವನು 'ಪಟ್ಟಾಭಿರಾಮ ವಿಲಾಸಮು' ಎಂಬ ಆಂಧ್ರ ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿ ಈತನು ತಾನು 'ಪಂಡಿತಾರಾಧ್ಯವಂಶ ಸಂಭೂತ' ನೆಂದು ಹೇಳಿ ಕೊಂಡಿದ್ದಾನೆ.

(೪) 'ಗುರು ಸ್ತೋತ್ರ' ಎಂಬ ಹೆಸರಿನ ಇನ್ನೊಂದು ಆಂಧ್ರ ಕಾವ್ಯವಿದ್ದು ಇದರಲ್ಲಿ ಪರಮಾರಾಧ್ಯ ಎಂಬವನ ವಿಷಯವಾಗಿ ಸ್ತುತಿ ಪರ ಪದ್ಯಗಳು ಇವೆ. ಈ ಪರಮಾರಾಧ್ಯನು ಮಲ್ಲಿಕೇಶಲಿಂಗನ ಮಗ ನಿದ್ದು ಈ ಮಲ್ಲಿಕೇಶ್ವರನು ಶ್ರೀಪತಿ ಪಂಡಿತನ ವಂಶದವನೆಂದು ಇದರಲ್ಲಿ ಹೇಳಲ್ಪಟ್ಟಿದೆ.

ಈ ಗ್ರಂಥಗಳಲ್ಲಿರುವ ಈ ಎಲ್ಲ ಉಲ್ಲೇಖಗಳ ಮೇಲಿಂದ ಶ್ರೀಪತಿ ಪಂಡಿತನೂ ಅವನ ವಂಶಜರೂ ಆಂಧ್ರ ನಾಡಿನಲ್ಲಿ ಬಹು ಪ್ರಸಿದ್ಧರಾ ದದ್ದು ತಿಳಿದು ಬರುತ್ತದೆ. ಈ ಸಂಗತಿಗಳನ್ನು ಬೇರೆ ಕೆಲವು ಶಿಲಾಶಾಸನ ಗಳೂ ಕೂಡ ಸಮರ್ಥಿಸುತ್ತವೆ. ಅವುಗಳನ್ನು ಕೆಳಗೆ ಉಲ್ಲೇಖಿಸಿದ್ದೇವೆ.

(೫) ಕೊಂಡವೀಡು ಪಟ್ಟಣವು ೧೩೨೮ ರಿಂದ ಮುಂದೆ ಒಬ್ಬ ರಡ್ಡಿ ಅರಸುಮನೆತನದವರ ರಾಜಧಾನಿಯಾಗಿತ್ತು. ಅವರಲ್ಲಿ ದಾಮಂಪಾಟ ಚೆನ್ನಮನೇನಿಂಗಾರು ಎಂಬ ರಾಜನು ಅಲ್ಲಿಯ ವಿಶ್ವೇಶ್ವರ ದೇವಾಲಯದ ಗೋಪುರಕ್ಕಿದ್ದ ಕಲ್ಲಿನ ತೊಲೆಯನ್ನು ತನ್ನ ಗುರುವಾದ ಶ್ರೀಗಿರಿಯಯ್ಯಂಗಾರು ಇವನ ಸ್ಮರಣಾರ್ಥವಾಗಿ ಶಕೆ ೧೩೨೭ ಅಂದರೆ ೧೪೦೫ರಲ್ಲಿ ಕೊಟ್ಟಿದ್ದರ ಬರಹವು ಅದರ ಮೇಲಿದೆ. ಈ ಶ್ರೀಗಿರಿಯಯ್ಯಂಗಾರುವು ಪಂಡಿತಾರಾಧ್ಯನ ವಂಶದವನೆಂದು ಇದರಲ್ಲಿ ಹೇಳಿದೆ. ಇದೇ ದೇವಾಲಯದ ಒಂದು ಕಂಬದ ಮೇಲೆ ಪೆದ್ದಕೊಮಟಿ ವೇಮ ಎಂಬ ಹೆಸರಿನ ರಡ್ಡಿ ಕುಲದ ರಾಜನು ೧೪೦೮ ರಲ್ಲಿ ಅದೇ ಶ್ರೀಗಿರಿಗೆ ದಾನ ಕೊಟ್ಟಿದ್ದರ ಉಲ್ಲೇಖವಿದೆ. ಈ ರಾಜನು ಶೃಂಗಾರದೀಪಿಕಾ ಎಂಬ ತೆಲುಗು ಗ್ರಂಥವನ್ನು ಬರೆದಿದ್ದಾನೆ.

(೬) ಕರ್ನೂಲ ಜಿಲ್ಲೆಯಲ್ಲಿ ಪಾನೆಮ್ ಎಂಬ ಗ್ರಾಮವಿದ್ದು ಅಲ್ಲಿಯ ಪಾಣಿಕೇಶ್ವರ ಸ್ವಾಮಿಯ ದೇವಾಲಯದ ಮುಖಮಂಟಪದ ಕಂಬದ ಮೇಲೆ ಒಂದು ಶಾಸನವಿದೆ. ಅದರಲ್ಲಿ ವಿಭೂತಿ ಗೌರಯ್ಯನೆಂಬುವನು ತಾನು ವರಂಗಲ್ಲದ ಹತ್ತಿರವಿರುವ ಮಾಚಿರಾಜುಪಳ್ಳಿ ಎಂಬಲ್ಲಿಯವನಿದ್ದು ತಾನು ಶ್ರೀಶೈಲದಲ್ಲಿ ವಾಸಮಾಡುತ್ತಿರುವೆನೆಂತಲೂ ತಾನು ಪಂಡಿತಾರಾಧ್ಯನ ಸೇವಕನೆಂತಲೂ ಭಕ್ತಿಪೂರ್ವಕವಾಗಿ ಹೇಳಿಕೊಂಡಿದ್ದಾನೆ.

(೭) ಈ ಆಧಾರಗಳಲ್ಲದೆ ಪ್ರಸಿದ್ಧ ಗ್ರಂಥಕಾರನಾದ ಪಾಲ್ಕುರಿಕೆ ಸೋಮಾರಾಧ್ಯನು ತನ್ನ ಆಂಧ್ರ ಬಸವ ಪುರಾಣದಲ್ಲಿ ಶ್ರೀಪತಿಯನ್ನು ಸ್ಮರಿಸಿರುವದು ಕಂಡುಬರುತ್ತದೆ. ಈ ಕವಿಯು ಅವನನ್ನು ಶಿವಶರಣರ ಪಂಕ್ತಿಯಲ್ಲಿ ಸೇರಿಸಿ, 'ಶ್ರೀಪತಿ ಪಂಡಿತನು ಭಕ್ತಿಗೆ ಕಾರಣಪುರುಷ'ನೆಂತಲೂ 'ಹರಭಕ್ತಿ ಉತ್ಪತ್ತಿಗೆ ಅಧಿಪತಿ' ಎಂತಲೂ ವರ್ಣಿಸಿದ್ದಾನೆ. ಸೋಮಾರಾಧ್ಯನು ೧೨ನೇ ಶತಮಾನದ ಅಂತ್ಯ ಭಾಗದಲ್ಲಿ ಅನೇಕ ಉದ್ಗ್ರಂಥಗಳನ್ನು ಬರೆದು ಬಹು ಪ್ರಸಿದ್ಧನಾಗಿದ್ದಾನೆ.

(೮) ಪಂಡಿತತ್ರಯರಲ್ಲಿ ಅತ್ಯಂತ ಪ್ರಸಿದ್ಧನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನೂ ಕೂಡ ತನ್ನ 'ಶಿವತತ್ವಸಾರ' ಎಂಬ ಗ್ರಂಥದಲ್ಲಿ ಶ್ರೀಪತಿ ಪಂಡಿತನ ಮಹತ್ಕಾರ್ಯಗಳನ್ನು ಸ್ತುತಿಸಿದ್ದಾನೆ. ಶ್ರೀಪತಿಯು

ಶಿವನೊಬ್ಬನೇ ದೈವವೆಂದು ಸಿದ್ಧಾಂತಮಾಡಿದನೆಂತಲೂ ಅವನು ಅಗ್ನಿಯನ್ನು ವಿಜಯವಾಡದಲ್ಲಿ ಒಂದು ಶಮೀ ವೃಕ್ಷಕ್ಕೆ ಬಂಧಿಸಿದನೆಂತಲೂ ಹೇಳಿದ್ದಾನೆ. ಈ ಮಲ್ಲಿಕಾರ್ಜುನ ಪಂಡಿತನು ಬಸವೇಶ್ವರನಿಗೆ ಸಮಕಾಲೀನನಾಗಿದ್ದಾನೆ.

(೯) ಇದಲ್ಲದೆ ಪಾಲ್ಕುರಿಗೆ ಸೋಮಾರಾಧ್ಯನು ಬರೆದ ಗಣಸಹಸ್ರದಲ್ಲಿ ಶ್ರೀಪತಿ ಪಂಡಿತನ ಹೆಸರು ಬಂದಿರುತ್ತದೆ.

(೧೦) ನಾಗಲಿಂಗ ಕವಿಯು 'ಗುಪ್ತಾಭ್ಯುದಯ' ಎಂಬ ತೆಲುಗು ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಅವನು ಶ್ರೀಪತಿಯ ಒಂದು ವಂಶಾವಳಿಯನ್ನು ಕೊಟ್ಟಿದ್ದು ಅದರಲ್ಲಿ ಶ್ರೀಪತಿಯ ಮಗನು ಗೋಕರ್ಣ, ಈತನ ಮಗನು ಮಲ್ಲಿಕಾರ್ಜುನ, ಈತನ ಮಗನು ಚಿಕ್ಕಮಲ್ಲಿಕಾರ್ಜುನ, ಮತ್ತು ಇವನಿಗೆ ಪಂಡಿತ ಎಂಬ ಹೆಸರಿನ ಮಗ ಹೀಗೆ ಅನುಕ್ರಮವಾಗಿ ಇದ್ದರೆಂದು ಹೇಳಿದೆ. ಶ್ರೀಪತಿಯ ಈ ವಂಶಾನುಕ್ರಮಣಿಕೆಯ ವಿಷಯವಾಗಿ ತೆಲುಗು ಗ್ರಂಥಕಾರರಲ್ಲಿ ಮತೈಕ್ಯವಿಲ್ಲೆಂದು ತಿಳಿಯುತ್ತಿದೆ. ಆದರೂ ಇವರಲ್ಲಿ ಶ್ರೀಪತಿಯ ಮಗನಾದ ಗೋಕರ್ಣನು ಒಬ್ಬ ಹೊಲೆಯನನ್ನು ದ್ವಿಜನನ್ನಾಗಿ ಮಾಡಿದನೆಂದು ಹೇಳಿದ್ದು ಲಕ್ಷಿಸತಕ್ಕ ಸಂಗತಿಯಾಗಿದೆ.

## ಶ್ರೀಪತಿ ಪಂಡಿತನ ವರ್ಚಸ್ಸು ಮತ್ತು ಅವನ ಕಾರ್ಯಗಳು.

ಈ ಎಲ್ಲ ಸಂಗತಿಗಳ ಮೇಲಿಂದ ಆಂಧ್ರದೇಶದಲ್ಲಿ ಶ್ರೀಪತಿ ಪಂಡಿತನು ಅತ್ಯಂತ ಪ್ರಸಿದ್ಧನಾಗಿದ್ದದ್ದು ಸ್ಪಷ್ಟವಿರುತ್ತದೆ. ಅವನಿದ್ದ ಬೆಜವಾಡ ಮತ್ತು ಅದರ ನೆರೆ ಪ್ರಾಂತದಲ್ಲಿ ತೆಲ್ಲಿಗರು ಈ ಕಾಲದಲ್ಲಿ ಬಹು ವರ್ಚಸ್ಸುಳ್ಳವರಾಗಿದ್ದು ಅವರು ಅವನಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ತಾಳಿದವರಾಗಿದ್ದರೆಂದು ತಿಳಿಯುತ್ತಿದೆ. ಈ ಭಾಗವನ್ನು ಆಳುತ್ತಿದ್ದ ಮಾಂಡಲಿಕರೂ ಅನೇಕ ರಾಜರೂ, ಶ್ರೀಪತಿ ಪಂಡಿತನನ್ನು ಬಹಳ ಆದರಿಸುವವರಾಗಿದ್ದರು. ಅವನ ಮಹತ್ವವನ್ನು ಕುರಿತು ಮೇಲೆ ಹೇಳಿದ ಪ್ರಕಾರ ತೆಲುಗು ಭಾಷೆಯಲ್ಲಿ ಅನೇಕ ಗ್ರಂಥಗಳಲ್ಲಿ ಉಲ್ಲೇಖಗಳು ಬಂದಿರುತ್ತವೆ. ಅವುಗಳಲ್ಲಿ ಅವನ ಬಗ್ಗೆ ಅತ್ಯಂತ ಭಕ್ತಿಭಾವಪೂರಿತವಾದ ನುಡಿಗಳಿವೆ. ಅವನು ಶ್ರೇಷ್ಠ ಪಂಡಿತನಾದುದರಿಂದಲೇ ವಿದ್ವಾಂಸ

ರಿಂದ ವಿಶೇಷ ಮನ್ನಣೆಯನ್ನು ಹೊಂದಿ 'ಪಂಡಿತ'ನೆಂಬ ಹೆಸರನ್ನು ಪಡೆದು ವಿಖ್ಯಾತನಾಗಿದ್ದಾನೆ. ಅವನಲ್ಲಿ ಶಿವಶರಣರ ಉದಾರ ನಡೆಯು ಪೂರ್ಣವಾಗಿರುವದು ಅವನ ಚರಿತ್ರೆಯಿಂದಲೇ ಕಂಡುಬರುತ್ತದೆ. ಶಿವನೊಬ್ಬನೇ ದೈವವೆಂದು ಅವನು ಪ್ರತಿಪಾದಿಸಿದ್ದಾನೆ. ಅಗ್ನಿಯು ದೇವತೆ ಎಂಬುದನ್ನು ಅವನು ನಿರಾಕರಿಸಿ ಯಜ್ಞಾದಿಕರ್ಮಗಳನ್ನು ಬಸವೇಶ್ವರನಂತೆ ಒಪ್ಪಿರುವದಿಲ್ಲ. ವೀರಶೈವರಲ್ಲಿ ಜಾತಿವರ್ಣಗಳಿರುವದಿಲ್ಲೆಂಬುದನ್ನು ಅವನು ಶಮೀವೃಕ್ಷದ ಪವಾಡವನ್ನು ಮಾಡಿದ್ದಾನೆ. ತೈಲಿಕರಂಥ ಸಮಾಜದವರಿಗೆ ಗುರುವಾಗಿದ್ದಾನೆ. ಅವನ ವಂಶಜರೂ ಕೂಡ ಅವನಂತೆಯೇ ಉದಾರ ವರ್ತನೆಯುಳ್ಳವರಾಗಿದ್ದಾರೆ. ಅವನ ಮಗನು ಅವನಂತೆಯೇ ಒಬ್ಬ ಅಂತ್ಯಜನನ್ನು ಬ್ರಾಹ್ಮಣನನ್ನಾಗಿ ಮಾಡಿದ್ದಾನೆ. ಈ ಉಭಯತರು ಕೇವಲ ನುಡಿಯಲ್ಲಿ ಇದನ್ನು ವ್ಯಕ್ತಮಾಡದೆ ಅಂತ್ಯಜ ಮತ್ತು ಶೂದ್ರರೊಡನೆ ಊಟವನ್ನು ಮಾಡಿ ಕೃತಿಯಲ್ಲಿ ತಂದಿದ್ದಾರೆ. ಇದಕ್ಕೋಸ್ಕರ ಆದ ವಾಗ್ವಾದಗಳಲ್ಲಿ ಲಿಂಗಿಗಳಲ್ಲಿ ಜಾತಿಭೇದವಿಲ್ಲೆಂಬುದನ್ನು ಶ್ರೀಪತಿಯು ಅನೇಕ ಶಾಸ್ತ್ರಾಧಾರಗಳಿಂದ ಸಿದ್ಧಪಡಿಸಿದ್ದಾನೆ. ಹೀಗೆ ಶ್ರೀಪತಿ ಪಂಡಿತನು ಶಿವಶರಣರ ಮತವನ್ನು ಆಂಧ್ರದೇಶದಲ್ಲಿ ಪ್ರಸಾರಪಡಿಸಿರುವದು ಕಂಡುಬರುತ್ತದೆ.

ಆಂಧ್ರದೇಶದಲ್ಲಿ ಕರ್ನಾಟಕಕ್ಕಿಂತಲೂ ಹೆಚ್ಚಾಗಿ ಬ್ರಾಹ್ಮಣ ಅಥವಾ ವೈದಿಕ ಪದ್ಧತಿಗಳನ್ನು ಅನುಸರಿಸುವದರ ಕಡೆಗೆ ಒಲವು ಇರುವದು ಕಂಡುಬರುತ್ತದೆ. ಆದುದರಿಂದ ಅವರಲ್ಲಿ ಬ್ರಾಹ್ಮಣ ಪದ್ಧತಿಗಳು ಹೆಚ್ಚಾಗಿ ಕಂಡುಬರುತ್ತವೆ. ಆದರೆ ಅಲ್ಲಿಯ ವೈದಿಕಾನುಯಾಯಿಗಳು ಮುಂದೆ ಶಿವಶರಣರ ಉದಾರ ತತ್ವಗಳಿಗೆ ಮನಸೋತು ವೀರಶೈವ ದೀಕ್ಷೆಯನ್ನು ಹೊಂದಿ ಅದರ ತತ್ವಗಳನ್ನು ಪ್ರಸಾರ ಮಾಡಿದ್ದು ತಿಳಿದುಬರುತ್ತದೆ. ಹೀಗೆ ಪ್ರಸಾರ ಮಾಡುವಲ್ಲಿ ಅವರು ಶ್ರುತ್ಯಾಗಮ ಪ್ರಮಾಣಗಳನ್ನು ಕಂಡುಹಿಡಿದು ಅವುಗಳ ಮೂಲಕ ವೀರಶೈವವನ್ನು ಅವರು ಪ್ರಸ್ಥಾಪಿಸಿದ್ದಾರೆ. ಇದು ಶ್ಲಾಘನೀಯವಾದ ಪ್ರಯತ್ನವು. ಉದಾಹರಣಾರ್ಥವಾಗಿ ಉರಿಲಿಂಗಪೆದ್ದಿಯು ಮೊದಲು ಆಂಧ್ರದೇಶದವನು. ಅವನು ಮುಂದೆ ವೀರಶೈವ ಧರ್ಮವನ್ನು ಸ್ವೀಕರಿಸಿ ವಚನಕಾರನಾದನು. ಅವನು ತನ್ನ ವಚನಗಳಲ್ಲಿ ಶ್ರುತಿ, ಪುರಾಣ, ವೇದಾಗಮ, ಉಪನಿಷತ್ತು ಇವುಗಳಲ್ಲಿಯ ಅನೇಕ ಆಧಾರಗಳಿಂದ ವೀರಶೈವಸಿದ್ಧಾಂತ

ಪನ್ನು ಸ್ಥಿರಪಡಿಸಿದ್ದಾನೆ. ಹಾಗೆಯೇ ಶ್ರೀಪತಿ ಪಂಡಿತನು ವೀರಶೈವ ರಲ್ಲಿ ಜಾತಿಭೇದವಿಲ್ಲೆಂಬುದನ್ನು ಜಾಬಾಲ, ಶತರುದ್ರೀಯ ಮೊದ ಲಾದ ಪ್ರಮಾಣಗಳಿಂದ ಸಿದ್ಧಾಂತಗೊಳಿಸಿದ್ದಾನೆ. ಹೀಗೆ ಈತನು ತನ್ನ ಪಾಂಡಿತ್ಯದಿಂದ ಶಿವಶರಣರ ಪಂಕ್ತಿಯಲ್ಲಿ ಅತ್ಯುಚ್ಚ ಸ್ಥಾನವನ್ನು ಹೊಂದಿದ್ದಾನೆ. ಬಸವ, ಅಲ್ಲಮಪ್ರಭು, ಚನ್ನಬಸವ ಮೊದಲಾದ ಶಿವಶರಣರು ಯಾವ ಕಾರ್ಯವನ್ನು ಕರ್ನಾಟಕದಲ್ಲಿ ಮುಂದುವರಿಸಿ ದರೋ ಅದೇ ಕಾರ್ಯವನ್ನು ಶ್ರೀಪತಿ ಪಂಡಿತನು ಆಂಧ್ರದೇಶದಲ್ಲಿ ಮುಂದುವರಿಸಿ ಅಲ್ಲಿಯ ವೀರಶೈವರ ಇತಿಹಾಸದಲ್ಲಿ ಅಜರಾಮರ ಕೀರ್ತಿಯನ್ನು ಹೊಂದಿದ್ದಾನೆ. ಅವನು ಆಂಧ್ರದೇಶದಲ್ಲಿರುವ ಆರಾ ಧ್ಯರಲ್ಲಿ ಬಹು ಪ್ರಸಿದ್ಧನಾಗಿ ಅಲ್ಲಿ ದಿಗ್ವಿಜಯ ಮಾಡಿ ಬ್ರಾಹ್ಮಣ ಧರ್ಮೀಯರನ್ನು ವಾದದಲ್ಲಿ ಜಯಿಸಿ ಜಾತಿ, ಕುಲ, ವರ್ಣಭೇದ ಗಳನ್ನು ಖಂಡಿಸಿ ಅನೇಕರನ್ನು ವೀರಶೈವ ಧರ್ಮದಲ್ಲಿ ಸೇರ್ಪಡೆ ಮಾಡಿದ್ದಾನೆ. ಅವನು ಮಾಡಿದ ಮಹತ್ಕಾರ್ಯಕ್ಕೋಸ್ಕರ ಆರಾಧ್ಯ ಬ್ರಾಹ್ಮಣರು ಅವನನ್ನು ತಮ್ಮ ಲಿಂಗಪೂಜಾಕಾಲದಲ್ಲಿ ಪ್ರತ್ಯಕ್ಷ ಶಂಕರ ನಂತೆ ಕಂಡು ಅವನನ್ನು ಭಕ್ತಿಭಾವದಿಂದ ಈಗಲೂ ಭಜಿಸುತ್ತಾರೆ.

## ಶ್ರೀಪತಿ ಪಂಡಿತನ ಕಾಲ.

ಶ್ರೀಪತಿ ಪಂಡಿತನು ಬಸವೇಶ್ವರನಕಿಂತಲೂ ಕೆಲವು ಕಾಲ ಮೊದ ಲಿಗನೆಂದು ತೋರುತ್ತದೆ. ಅನಂತರಾಜ ಮತ್ತು ಭಲ್ಲಾಣ ವೀರ ಪೆರು ಮಾಳ್ ಇವರ ಶಿಲಾಶಾಸನಗಳು ಈ ಸಂಗತಿಯನ್ನು ದೃಢಪಡಿಸು ತ್ತವೆ. ಆದರೂ ಶ್ರೀಪತಿಯು ಬಹುಶಃ ಬಸವೇಶ್ವರನ ಆರಂಭ ಕಾಲ ದಲ್ಲಿಯೂ ಅಸ್ತಿತ್ವದಲ್ಲಿರಬಹುದು. ಬಸವೇಶ್ವರನ ಸಮಕಾಲೀನನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ ಗ್ರಂಥದಲ್ಲಿ ಅವನನ್ನು ಸ್ಮರಿ ಸಿರುವದರಿಂದ ಶ್ರೀಪತಿಯು ಬಸವೇಶ್ವರನಕಿಂತ ಸ್ವಲ್ಪ ಮೊದಲು ಇರಬ ಹುದು. ಆದರೆ ಭಲ್ಲಾಣನ ಶಿಲಾಶಾಸನದಿಂದ ಅವನು ಬಸವೇಶ್ವ ರನ ಕಾಲದಲ್ಲಿಯೂ ಇರಬಹುದೆಂದು ಊಹಿಸಲು ಆಸ್ಪದವಿದೆ.

ಶ್ರೀಪತಿ ಪಂಡಿತ, ಮಲ್ಲಿಕಾರ್ಜುನ ಪಂಡಿತ ಮತ್ತು ಮಂಚಣ್ಣ ಪಂಡಿತ ಈ ಮೂವರಲ್ಲಿ ಶ್ರೀಪತಿ ಪಂಡಿತನು ಎಲ್ಲರಿಗೂ ಮೊದಲಿಗನು,

ಆ ಮೇಲೆ ಮಲ್ಲಿಕಾರ್ಜುನನು ಮತ್ತು ಕಡೆಗೆ ಶಿವಲೆಂಕ ಮಂಚಣ್ಣನು, ಹೀಗೆ ಕ್ರಮವಾಗಿ ಅವರ ಕಾಲವಿರುತ್ತದೆ. ಇವರಲ್ಲಿ ಶಿವಲೆಂಕ ಮಂಚಣ್ಣನು ಬಸವೇಶ್ವರನಿಗೆ ಜೋಡಿಗನಾಗಿ ಕಲ್ಯಾಣದಲ್ಲಿಯೇ ಇದ್ದು ಅಲ್ಲಿ ವಚನಗಳನ್ನು ರಚಿಸಿದ್ದಾನೆ. ಆದ್ದರಿಂದ ಅವನು ಎಲ್ಲರಿಗಿಂತಲೂ ಕಡೆಯವನಾಗುತ್ತಾನೆ. ಆದರೂ ಇವರೆಲ್ಲರನ್ನು ಆಂಧ್ರ ದೇಶದ ವೀರಶೈವರು ಮುಖ್ಯವಾಗಿ ಆರಾಧ್ಯರು ಬಹಳ ಆದರದಿಂದ ಕಾಣುತ್ತ ಬಂದಿದ್ದಾರೆ.

ಈ ಮೂವರಲ್ಲಿ ಮಲ್ಲಿಕಾರ್ಜುನ ಪಂಡಿತನೂ ಮಂಚಣ್ಣನೂ ಗ್ರಂಥಕಾರರಿದ್ದು ಅವರು ಬರೆದ ಗ್ರಂಥಗಳು ಈಗ ಉಪಲಬ್ಧವಿರುತ್ತವೆ. ಇವರಲ್ಲಿ ಶಿವಲೆಂಕ ಮಂಚಣ್ಣನು ವಚನಗಳನ್ನು ಮಾತ್ರವಲ್ಲದೆ ಇತರ ಸಿದ್ಧಾಂತ ಗ್ರಂಥಗಳನ್ನೂ ಬರೆದಿರಬಹುದು. ಆದರೆ ಅವು ನಮಗೆ ದೊರೆತಿಲ್ಲ. ಶ್ರೀಪತಿ ಪಂಡಿತನು ನಿಶ್ಚಯವಾಗಿ ವಿದ್ವಾಂಸನು. ಆದರೆ ಅವನು ಯಾವ ಯಾವ ಗ್ರಂಥಗಳನ್ನು ಬರೆದನೆಂಬುದು ನಮಗೆ ಗೊತ್ತಾಗಿಲ್ಲ.

## ಶ್ರೀಪತಿ ಪಂಡಿತನು ಶ್ರೀಕರಭಾಷ್ಯವನ್ನು ಬರೆದಿರುವನೋ ಹೇಗೆ?

ಶ್ರೀಪತಿಯು ಶ್ರೀಕರ ಭಾಷ್ಯವನ್ನು ಬರೆದಿದ್ದಾನೆಂದು ಹಲವರ ಅಭಿಪ್ರಾಯವಿದೆ. ಈ ಭಾಷ್ಯವು ಪ್ರಸಿದ್ಧವಾಗಿದೆ. ಆದರೆ ಶ್ರೀಪತಿಯು ಹೀಗೆ ಭಾಷ್ಯವನ್ನು ಬರೆದಿದ್ದಾನೆಂದು ಅವನ ಚರಿತ್ರೆಗಳಿದ್ದ ಯಾವ ಗ್ರಂಥದಲ್ಲಿಯೂ ಹೇಳಿರುವದಿಲ್ಲ. ಒಂದು ವೇಳೆ ಅವನು ಇಂಥ ಮಹತ್ವದ ಗ್ರಂಥವನ್ನು ಬರೆದಿದ್ದರೆ ಆ ರೀತಿಯ ಉಲ್ಲೇಖಗಳು ಅವನ ನಿರೂಪಣೆ ಇದ್ದಂಥ ಶಿಲಾಶಾಸನಗಳಲ್ಲಿ ಅಥವಾ ತೆಲುಗು ಮತ್ತು ಸಂಸ್ಕೃತ ಗ್ರಂಥಗಳಲ್ಲಿ ನಿಶ್ಚಯವಾಗಿ ದೊರೆಯುತ್ತಿದ್ದವು. ಆದರೆ ಅವುಗಳಲ್ಲಿ ಅವು ದೊರೆಯುವದಿಲ್ಲವಾದ್ದರಿಂದ ಅವನು ಇಂಥ ಗ್ರಂಥವನ್ನು ಬರೆದ ಹಾಗೆ ತೋರುವದಿಲ್ಲ. ಶ್ರೀಕರಭಾಷ್ಯದೊಳಗೆ ನಿರೂಪಿಸಲ್ಪಟ್ಟ ತತ್ವಗಳಿಗೂ ಶ್ರೀಪತಿಯ ಚರಿತ್ರೆಯೊಳಗೆ ಕಂಡುಬರುವ ಅವನ ನಡೆಗೂ ಬಹಳ ಮಹದಂತರವಿದೆ. ಇಷ್ಟೇ ಅಲ್ಲ, ಅವು ಅವುಗಳಿಗೆ ವಿರೋಧವಾಗಿರುತ್ತವೆ. ಈ ಭಾಷ್ಯದಲ್ಲಿ ಲಿಂಗಧಾರಣೆಯ ಕೂಡ ಯಜ್ಞೋಪವೀತವನ್ನು ಧರಿಸಬೇಕೆಂತಲೂ, ಪಂಚಾಕ್ಷರೀ ಮಂತ್ರದೊಡನೆ ಗಾಯತ್ರೀ

ಮಂತ್ರವನ್ನು ಅನ್ನಬೇಕೆಂತಲೂ, ವರ್ಣಾಶ್ರಮಗಳನ್ನು ಪಾಲಿಸಬೇಕೆಂತಲೂ, ಸ್ತ್ರೀ ಮತ್ತು ಶೂದ್ರ ಇವರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೆಂತಲೂ, ಸೂತಕಗಳನ್ನು ಪಾಲಿಸಬೇಕೆಂತಲೂ, ಪಿಂಡಾದಿಕರ್ಮಗಳನ್ನು ಮಾಡಬೇಕೆಂತಲೂ, ವೀರಶೈವರಲ್ಲಿ ಜಾತಿಭೇದವಿದೆ ಎಂತಲೂ ಈ ತೆರದ ಪ್ರತಿಪಾದನೆಗಳು ಇವೆ. ಆದರೆ ಇವೆಲ್ಲವೂ ವೀರಶೈವ ಧರ್ಮಕ್ಕೆ ಸಮ್ಮತವಾದುವಲ್ಲ. ಶ್ರೀಪತಿಯು ಬ್ರಾಹ್ಮಣ ಧರ್ಮದ ಪ್ರಕಾರ ಒಬ್ಬ ಶೂದ್ರನೆಂದೆನಿಸಿಕೊಳ್ಳುವನಲ್ಲಿ ಭೋಜನ ಮಾಡಿದ್ದಕ್ಕೆ ಬ್ರಾಹ್ಮಣರು ಅವನನ್ನು ವಿರೋಧಿಸಲು ಅವನು ವೀರಶೈವರಲ್ಲಿ ಜಾತಿಭೇದವಿಲ್ಲೆಂಬುದನ್ನು ಪ್ರತಿಪಾದಿಸಿದ್ದಾನೆ ಮತ್ತು ಅದನ್ನು ಸಿದ್ಧಪಡಿಸಲು ಒಂದು ಪೊವಾಡವನ್ನು ಮಾಡಿದ್ದಾನೆ. ಅವನು ತೇಲಿಕರು ಅಂದರೆ ಗಾಣಿಗರು, ಚಿತ್ರಕಾರರು ಇಂಥ ಸಮಾಜದವರಿಗೆ ದೀಕ್ಷೆಯನ್ನು ಕೊಟ್ಟಿದ್ದಾನೆ, ಮತ್ತು ಅವರಿಗೆ ಗುರುವಾಗಿದ್ದಾನೆ. ಹೀಗೆ ಇವನ ಚರಿತ್ರೆಯು ಇದ್ದು ಅದಕ್ಕೆ ವಿರೋಧವಾಗಿರುವ ತತ್ವಗಳನ್ನು ಅವನು ತನ್ನ ಭಾಷ್ಯದಲ್ಲಿ ನಿರೂಪಿಸುವ ಸಂಭವವಿಲ್ಲ. ನಾವು ಶಿವಶರಣರ ಚರಿತ್ರೆಗಳಲ್ಲಿ ವಚನಗಳನ್ನು ಬರೆದಂಥ ಅನೇಕ ವಚನಕಾರರ ಚರಿತ್ರೆಗಳನ್ನು ಕೊಟ್ಟಿದ್ದೇವೆ. ಆ ಚರಿತ್ರೆಗಳಲ್ಲಿ ಕಂಡುಬರುವ ಸಂಗತಿಗಳಿಗೂ ಅವರು ಬರೆದ ವಚನಗಳಿಗೂ ಎಷ್ಟು ಮೇಳವಿರುತ್ತದೆಂಬುದನ್ನು ನಾವು ಅವುಗಳಲ್ಲಿ ಕೊಟ್ಟ ವಚನಗಳಿಂದ ವಾಚಕರಿಗೆ ಕಂಡು ಬರದೆ ಇರಲಾರದು. ಆದರೆ ಶ್ರೀಪತಿಯ ಚರಿತ್ರೆಯಲ್ಲಿ ಕಂಡುಬರುವ ಸಂಗತಿಗಳಿಗೂ ಶ್ರೀಕರ ಭಾಷ್ಯದ ತತ್ವಗಳಿಗೂ ಮೇಳವಿಲ್ಲೆಂಬುದಷ್ಟೇ ಅಲ್ಲ, ಅವು ಪರಸ್ಪರ ವಿರುದ್ಧವಾಗಿರುತ್ತವೆ. ಆದ್ದರಿಂದ ಈ ಭಾಷ್ಯವು ಅವನದೆಂದು ತೋರುವದಿಲ್ಲ. ಅಲ್ಲದೆ ಈ ಭಾಷ್ಯದಲ್ಲಿ ರಾಮಾನುಜ ಮತ್ತು ಮಾಧ್ವಮತಗಳ ಖಂಡನೆಯು ಇದೆ. ಮಧ್ವಾಚಾರ್ಯನ ಉಲ್ಲೇಖವು ಇದರಲ್ಲಿ ಅನೇಕ ಕಡೆಗೆ ಬಂದಿದೆ. ಆದರೆ ಮಧ್ವಾಚಾರ್ಯನು ಬಸವೇಶ್ವರನ ತರುವಾಯ ೧೫೦–೨೦೦ ವರ್ಷಗಳಾದ ಮೇಲೆ ಪ್ರಸಿದ್ಧಿಗೆ ಬಂದಿದ್ದಾನೆ. ಆದರೆ ಶ್ರೀಪತಿಯು ನಾವು ಹಿಂದೆ ವಿವರಿಸಿದಂತೆ ಬಸವೇಶ್ವರನ ಕಾಲದಲ್ಲಿ ಬಹುಶಃ ಅದಕ್ಕೂ ಪೂರ್ವದಲ್ಲಿಯೇ ಪ್ರಸಿದ್ಧಿಗೆ ಬಂದಿದ್ದಾನೆ. ಆದ್ದರಿಂದ ಈ ಭಾಷ್ಯವನ್ನು ಶ್ರೀಪತಿಯು ಬರೆಯದೆ ಅವನ ತರುವಾಯ ಅದು ಬರೆದದ್ದಾಗಿರುತ್ತದೆಂದು ನಮಗೆ ತೋರುತ್ತದೆ.

## ಶ್ರೀಪತಿಯು ಆಂಧ್ರದೇಶದಲ್ಲಿ ವೀರಶೈವ ಕ್ರಾಂತಿಕಾರನು.

ಒಟ್ಟಿಗೆ ಶ್ರೀಪತಿ ಪಂಡಿತನು ಆಂಧ್ರ ದೇಶದಲ್ಲಿ ವೀರಶೈವ ಕ್ರಾಂತಿಯನ್ನು ಮೊದಲು ಮಾಡಿದನೆಂದು ತೋರುತ್ತದೆ. ಅವನ ವರ್ಚಸ್ಸು ಆಗ ಕರ್ನೂಲ, ಗುಂಟೂರ, ನೆಲ್ಲೂರ, ಕೃಷ್ಣಾ ಮತ್ತು ಗೋದಾವರೀ ಜಿಲ್ಲೆಗಳಲ್ಲಿ ಹೆಚ್ಚಾಗಿ ಇದ್ದಿತೆಂದು ಅವನನ್ನು ಉಲ್ಲೇಖಿಸುವ ಶಿಲಾಶಾಸನಗಳಿಂದಲೂ ಗ್ರಂಥಗಳಿಂದಲೂ ತಿಳಿಯುತ್ತದೆ. ಅವನು ತೇಲಿಕರು, ಚಿತ್ರಕಾರರು ಮೊದಲಾದವರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾನೆ. ಅವನು ಸಂಸ್ಕೃತ ಮತ್ತು ತೆಲುಗು ಭಾಷೆಯಲ್ಲಿ ಅತ್ಯಂತ ಪ್ರವೀಣತೆಯನ್ನು ಹೊಂದಿ ಪಂಡಿತನೆಂದು ಪ್ರಸಿದ್ಧಿಯನ್ನು ಹೊಂದಿದ್ದಾನೆ. ಹೀಗೆ ಶ್ರೀಪತಿ ಪಂಡಿತನು ಆಂಧ್ರ ನಾಡಿನಲ್ಲಿ ಒಂದು ಮಹತ್ತರವಾದ ಕ್ರಾಂತಿಯನ್ನು ಮಾಡಿದ್ದಾನೆ. ಅವನಂತೆಯೇ ಅವನ ವಂಶಜರಲ್ಲಿ ಕೆಲವರು ಸಹ ವೀರಶೈವ ಧರ್ಮವನ್ನು ಆಂಧ್ರ ದೇಶದಲ್ಲಿ ಪ್ರಸಾರ ಮಾಡಿದ್ದಾರೆ.

**ಕಥಾಂತರಗಳು:**— ಕೆಲವು ಗ್ರಂಥಗಳಲ್ಲಿ ಶ್ರೀಪತಿ ಪಂಡಿತನ ವಿಷಯವಾಗಿ ಕೆಳಗಿನ ವಿವರಣೆಯು ಇರುವದು ಕಂಡುಬರುತ್ತದೆ. 'ದಸನಪುರ'ದಲ್ಲಿ ಅನಂತರಾಜನು ಆಳುತ್ತಿರುವಾಗ್ಗೆ ವೇದಕನೆಂಬುವನು ಅವನ ಮಂತ್ರಿಯಾಗಿದ್ದನು. ಈ ಮಂತ್ರಿಯು ಭಾರತವನ್ನು ಮೆರಿಸುತ್ತ ಬ್ರಾಹ್ಮಣರೇ ಘನವೆಂದು ಡಂಗುರವನ್ನು ಸಾರಿಸುತ್ತ ಬೀದಿಯಲ್ಲಿ ಸಾಗಿದ್ದನು. ಅದನ್ನು ಶ್ರೀಪತಿ ಪಂಡಿತನು ಕಂಡು ಶಿವಭಕ್ತರಿಗೆ ಕೋಟಿ ವಿಪ್ರರು ಸಮಾನರಲ್ಲ ಎಂದು ನುಡಿಯುತ್ತ ಮುಂದೆ ಬಂದು ಆ ಮೆರವಣಿಗೆಯನ್ನು ತಡೆದನು. ಆಗ ಉಭಯತರಲ್ಲಿ ವಾಗ್ವಾದಗಳು ಜರಗಲು ಅವುಗಳಲ್ಲಿ ಶ್ರೀಪತಿ ಪಂಡಿತನು ವೇದ ಶಾಸ್ತ್ರಾಗಮಗಳ ಆಧಾರದಿಂದ ಬ್ರಾಹ್ಮಣರನ್ನು ಸೋಲಿಸಿದನು. ಅದಕ್ಕೆ ಅವರು ನೀನನ್ನುವದಕ್ಕೆ ಒಂದು ದೃಷ್ಟವನ್ನು ತೋರಿಸೆಂದೆನಲು, ಶ್ರೀಪತಿಯು ಅಗ್ನಿಯನ್ನು ವಸ್ತ್ರದಲ್ಲಿ ಕಟ್ಟಿ ಬನ್ನಿಯ ಮರದ ಕೊಂಬೆಗೆ ತೂಗಹಾಕಿದನು. ಆಗ ಅನಂತರಾಜನೂ ವೇದಕ ಮಂತ್ರಿಯೂ ಶ್ರೀಪತಿ ಪಂಡಿತನನ್ನು ಸನ್ಮಾನ ಮಾಡಿ ಅವನ ಭಕ್ತರಾದರೆಂದು ಹೇಳಿದೆ. ಆದರೆ ಈಗಿನ ಚರಿತ್ರೆಯಲ್ಲಿ ನಾವು ಹೇಳಿದ ಕಥೆಯನ್ನು ಶಿಲಾಶಾಸನವೂ ಆಂಧ್ರಗ್ರಂಥಗಳೂ ಸಮರ್ಥಿಸಿರುವದರಿಂದ ಅದನ್ನು ಸ್ವೀಕರಿಸುವದು ಯುಕ್ತವೆಂದು ತೋರುತ್ತದೆ.

---

# ವೇಮನಾರಾಧ್ಯ.

ನಿಜಾಮು ಇಲಾಖೆಯಲ್ಲಿ ನಲಗೊಂಡ ಜಿಲ್ಲಾ, ಭುವನಗಿರಿ ತಾಲೂಕಿನಲ್ಲಿ ಕೊಲ್ಲಿಪಾಕಿ (ಕೊಲನುಪಾಕಿ) ಎಂಬ ಗ್ರಾಮವು ಇರುತ್ತದೆ. ಇದು ಹೈದರಾಬಾದಿನಿಂದ ಬೆಜವಾಡಕ್ಕೆ ಹೋಗುವ ರೇಲ್ವೆ ಮಾರ್ಗದಲ್ಲಿ ಹೈದರಾಬಾದಿನಿಂದ ಆರು ಸ್ಟೇಶನುಗಳ ಮೇಲೆ ಇರುವ ಆಲೇರು ಸ್ಟೇಶನ್ನಿನಿಂದ ನಾಲ್ಕು ಮೈಲು ದೂರವಿರುತ್ತದೆ. ಅಲ್ಲಿ ಈಗಲೂ ಅನೇಕ ದೇವಾಲಯುಗಳಿದ್ದು ಗ್ರಾಮದಲ್ಲೆಲ್ಲ ಪುರಾತನ ಅವಶೇಷಗಳು ತುಂಬಿ ಹೋಗಿರುತ್ತವೆ. ಆದರೆ ಅದು ಈಗ ಒಂದು ಚಿಕ್ಕ ಗ್ರಾಮವಾಗಿದೆ. ಈ ಗ್ರಾಮವು ಪುರಾತನ ಕಾಲದಲ್ಲಿ ಶೈವ ಚಳವಳಿಯ ಮುಖ್ಯ ಕೇಂದ್ರವಾಗಿತ್ತು. ಇಲ್ಲಿಯೇ ರೇವಣಸಿದ್ಧೇಶ್ವರನು ಉಗಮಿಸಿದನು. ಅವನ ತರುವಾಯ ವೇಮನಾರಾಧ್ಯನೆಂಬ ಶೈವಾಚಾರ್ಯನು ಇಲ್ಲಿಯೇ ಪ್ರಸಿದ್ಧಿಗೆ ಬಂದನು

ಆಂಧ್ರ ದೇಶದಲ್ಲಿ ಹೇಗೆ ಶ್ರೀಪತಿ ಪಂಡಿತ, ಮಲ್ಲಿಕಾರ್ಜುನ ಪಂಡಿತ, ಮಂಚಣ್ಣ ಪಂಡಿತ ಎಂದು ಪಂಡಿತತ್ರಯರು ಪ್ರಸಿದ್ಧರಾಗಿರುವರೋ ಹಾಗೆಯೇ ಆರಾಧ್ಯತ್ರಯರೆಂದು ಮೂವರು ಪ್ರಸಿದ್ಧರಾಗಿದ್ದಾರೆ. ಅವರು ವೇಮನಾರಾಧ್ಯ, ವಿಶ್ವಾರಾಧ್ಯ, ಉದ್ಭಟಾರಾಧ್ಯ ಎಂದಿರುತ್ತಾರೆ. ವಿಶ್ವಾರಾಧ್ಯನ ಬದಲು ಕೋಟಿಪಲ್ಯಾರಾಧ್ಯ ಎಂತಲೂ ಹೇಳುವದುಂಟು.

ವೇಮನಾರಾಧ್ಯನು ವಿದ್ವತ್ತೆ ಮತ್ತು ಪಂಚಾಕ್ಷರೀ ಮಂತ್ರಸಾಮರ್ಥ್ಯ ಇವುಗಳ ಮೂಲಕ ನಾಡಿನಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದವನಾಗಿದ್ದನು.

ಅವನು ಒಂದು ದಿವಸ ಪೋರಾಂಡಲವೆಂಬ ಪಟ್ಟಣಕ್ಕೆ ಹೋಗಿರಲು ಅವನು ತನ್ನ ಶಿವಾರ್ಚನೆಗೋಸ್ಕರ ಸಮೀಪದ ತೋಟದಲ್ಲಿ ಪುಷ್ಪವನ್ನೆತ್ತಲಿಕ್ಕೆ ಹೋಗಿದ್ದನು. ಆ ಸಮಯದಲ್ಲಿ ಆ ಪುರದರಸು ಸಾರಂಗರಾಜನು ಒಬ್ಬ ರಾಜನ ಮಗಳನ್ನು ಮದುವೆಯಾಗಿ ಬಹು ಸಂಭ್ರಮದಿಂದ ರಥವನ್ನೇರಿ ಬರುತ್ತಿದ್ದನು. ಆಗ ಅವನು ದಾರಿಯಲ್ಲಿ ವೇಮನಾರಾಧ್ಯನನ್ನು ಕಂಡು ಅವನಾರೆಂದು ಕೇಳಲು ಸಮೀಪದ ಜನರು ಇವನು ಪುಣ್ಯ ಪುರುಷನು, ನಾಡಿನಲ್ಲಿ ಅತ್ಯಂತ ಪ್ರಸಿ

ದ್ಧನಾಗಿದ್ದಾನೆ, ಎಂದು ಹೇಳಲು ರಾಜನು ಆ ರಥದ ಮೇಲೆಯೇ ಕುಳಿತುಕೊಂಡು 'ಜೋಹರ' ಎಂದು ಅವನಿಗೆ ನಮಸ್ಕರಿಸಿದನು. 'ಆದರೆ ವೇಮನಾರಾಧ್ಯನು ಅರಸನ ನುಡಿಯನ್ನು ಕೇಳಿಯೂ ಕೇಳದಂತೆ ಸುಮ್ಮ ನಿರಲು ಅರಸನು ತಾನು ಹೀಗೆ ರಥದಲ್ಲಿ ಕುಳಿತು ಶರಣೆಂಬುದು ತನ್ನ ಗರ್ವವು ಎಂದು ತಿಳಿದವನಾಗಿ ರಥದಿಂದ ಕೆಳಗಿಳಿದು ಅವ ನಿಗೆ ಶರಣೆಂದನು. ಆಗಲೂ ವೇಮನಾರಾಧ್ಯನು ಸುಮ್ಮನಿರಲು ಮೂರು ಬಾರೆ ಅರಸನು 'ಶರಣು, ಶರಣು' ಎಂದರೂ ಕೂಡ ಸುಮ್ಮನೇ ಇದ್ದನು. ಆಗ ಅರಸನು—ಶರಣೆಂದರೆ ನೀನು ಹರಿಸಲೊಲ್ಲೆ. ಇಂಥ ಗರ್ವವು ನಿನಗೇಕೆ? ನಿನಗೆ ಹಿರಿಯತನದ ಹೆಮ್ಮೆಯೇ? ನೀನು ಹರಿ ಸದಿದ್ದರೆ, ಬಿಟ್ಟುಬಿಡು. ಇದರಿಂದ ನನಗೆ ವ್ಯತ್ಯ ಬರುವದೇ? ಒಂದು ವೇಳೆ ಹರಿಸಿದರೆ, ನನಗೆ ವ್ಯತ್ಯವು ಬರುವದು ತಪ್ಪುವದೇ? ನೀನು ಹರನ ವೇಷವನ್ನು ತೊಟ್ಟುಕೊಂಡು ಸುಳಿಯುವದಕ್ಕೆ ಮಾತ್ರ ಕಾರಣ ನಾದೆಯಲ್ಲದೆ ನಿನಗೆ ನಾನು ಶರಣೆಂದರೆ ನೀನು ಅದನ್ನು ಸ್ವೀಕಾರ ಮಾಡ ದಿರುವದು ಯೋಗ್ಯವೇ? ಎಂದು ಕಟುತರವಾಗಿ ವೇಮನಾರಾಧ್ಯನಿಗೆ ನುಡಿದನು. ಆಗ ವೇಮನಾರಾಧ್ಯನು ಅರಸನ ಮುಖವನ್ನು ನೋಡುತ್ತ— ನಿನ್ನ ಪುಣ್ಯವು ತೀರಿತು. ನಾಳೆ ಮಧ್ಯಾಹ್ನದೊಳಗೆ ಮರಣವಾಗು ವವನಿಗೆ ಹರಿಸುವದೇತಕ್ಕೆ ಎಂದು ಎನಲು ಅರಸನು ಮತ್ತಿಷ್ಟು ಕೆರಳಿ— ನಾಳೆ ನಾನು ಸತ್ತರೆ ನಿನ್ನ ಮಾತು ನಿಜ ಎಂದು ಹಾಸ್ಯಮಾಡುತ್ತ ತನ್ನ ಅರಮನೆಗೆ ಹೊರಟುಹೋದನು. ಇತ್ತ ವೇಮಯ್ಯನು ಆ ತೋಟ ದಲ್ಲಿಯೇ ಶಿವಾರ್ಚನೆಗೆ ನಿಂತುಕೊಂಡನು.

ಇತ್ತ ಸಾರಂಗರಾಜನು ತನ್ನ ಹೆಂಡತಿಯೊಡನೆ ಅರಮನೆಯಲ್ಲಿ ಪವಡಿಸಿರಲು ರಾತ್ರಿಯಲ್ಲಿ ಮಂಚಕ್ಕೆ ಹಚ್ಚಿದ್ದ ಸರಪಳಿಯ ಗುಂಟ ಒಂದು ಮಹಾಫಟ ಸರ್ಪನು ದಳದಳನೆ ಕೆಳಗೆ ಇಳಿದುಬಂದು ಅರ ಸನ ಕಯ್ಯನ್ನು ಕಚ್ಚಿತು. ಕೂಡಲೆ ಅರಸನಿಗೆ ಎಚ್ಚರಿಕೆಯಾಗಿ ವಿಷ ವೇರಿ ನೆರಳುತ್ತಿರಲು ಅವನ ಸತಿಯು ಎದ್ದು ನೋಡುತ್ತಾಳೆಯೇ ಒಂದು ಮಹಾ ಸರ್ಪನು ಅಲ್ಲಿರುವದನ್ನು ಕಂಡು ಸಮೀಪದಲಿದ್ದವ ರನ್ನು ಕರೆಯುವಷ್ಟರಲ್ಲಿಯೇ ಅರಸನು ಹಮ್ಮೈಸಿ ಮರಣಹೊಂದಿದನು.

ರಾಜನು ಮರಣಹೊಂದಿದ್ದನ್ನು ಕೇಳಿ ಜನರು ಅರಮನೆಯಲ್ಲಿ ನೆರೆದು ದುಃಖಿಸುತ್ತಿರಲು ರಾಣಿಯು ಹಿಂದಿನ ದಿನ ದಾರಿಯಲ್ಲಿ ಬರು

ತ್ರಿರ್ಥುವಾಗ ತಾವು ವೇಮನಾರಾಧ್ಯನನ್ನು ಕಂಡಾಗ್ಗೆ ನಡೆದ ಸಂಗತಿಗಳನ್ನು ಅರುಹಿದಳು. ಆಗ ಜನರು ಒಬ್ಬ ಮಹಾನುಭಾವನನ್ನು ತುಚ್ಛ ಮಾಡಿ ನುಡಿದಿದ್ದರ ಫಲವೇನೋ ಇದೆಂದು ಭಾವಿಸಿ, ಈಗ ಆ ಮಹಾನುಭಾವನನ್ನೇ ಮೊರೆಹೊಗಬೇಕೆಂದು ಎಲ್ಲರೂ ಗೊತ್ತುಪಡಿಸಿ ಅರಸನ ಶವವನ್ನು ತೆಗೆದುಕೊಂಡು ವೇಮನಾರಾಧ್ಯನಿದ್ದ ಸ್ಥಳಕ್ಕೆ ಬಂದರು. ಅವರು ಅವನಿಗೆ ವಂದಿಸಿ--ರಾಜನ ಅಪರಾಧವನ್ನು ತಾವು ಕ್ಷಮಿಸಬೇಕು. ನಾವು ನಿಮಗೆ ಶರಣ ಹೋಗುತ್ತೇವೆ. ಹಿಂದೆ ಮುಸುಡಿಯ ಚೌಡಯ್ಯನು ತನಗೆ ವಂದಿಸಿ ಹೋದ ಸತಿಗೆ ಪ್ರಾಣವನ್ನು ಕೊಡಲಿಲ್ಲವೇ? ಹಾಗೆಯೇ ನೀವು ಈತನಿಗೆ ಪ್ರಾಣದಾನ ಮಾಡಬೇಕೆಂದು ಪ್ರಾರ್ಥಿಸಿದರು. ಅದನ್ನು ವೇಮನಾರಾಧ್ಯನು ಲಕ್ಷಿಸಿ, ಅಲ್ಲಿ ಶಿವಗಣ ಸಂದೋಹವು ನೆರೆದಿರಲು ಅವರಿಗೆ ಸಾಷ್ಟಾಂಗವೆರಗಿ, ಅವರ ಪಾದ ಪ್ರಕ್ಷಾಲನವನ್ನು ಮಾಡಿ ಆ ಉದಕವನ್ನು ಒಂದು ಘಟದಲ್ಲಿ ತುಂಬಿ ಅದರ ಪೂಜೆಯನ್ನು ಮಾಡಿ ಶಿವಗಣಗಳ ನಿರೂಪವನ್ನು ತೆಗೆದುಕೊಂಡು ನೃಪನ ಶವವನ್ನು ತನ್ನೆದುರಿಗೆ ತರಲು ಸೂಚಿಸಿದನು.

ಹೀಗೆ ಅವನು ಸೂಚಿಸಲು ಅರಸನ ಶವವನ್ನು ಅಲ್ಲಿ ತಂದಿಳುಹಲು ಅದರ ಬೆರೆತ ಮೋರೆ, ಬಿಗಿದ ಹುಬ್ಬು, ಹಸುರೇರಿದ ನರ, ನೊರೆವಾಯಿ, ಕಣ್ಣು ಬೆಳ್ಳಾಗಿದ್ದದ್ದನ್ನು ಜನರು ನೋಡಿ ಮರುಗುತ್ತಿರಲು ವೇಮನಾರಾಧ್ಯನು ತಾನು ಸಿದ್ಧಪಡಿಸಿದ್ದ ಶಿವಗಣಗಳ ಪಾದೋದಕದಿಂದ ಅರಸನ ಅಂಗವನ್ನು ತೊಳೆದು, ಭಸಿತವನ್ನು ಪಾದೋದಕ ಮಿಶ್ರಿತ ಮಾಡಿ ಅದನ್ನು ಶರೀರಕ್ಕೆ ಪೂಸಿ, ಶಿವಗಣಗಳ ಅಪ್ಪಣೆಯನ್ನು ತೆಗೆದುಕೊಂಡು ಪಂಚಾಕ್ಷರೀ ಮಂತ್ರವನ್ನು ಸ್ಮರಣೆ ಮಾಡುತ್ತ– ಸಾರಂಗ ರಾಜನೇ, ಏಳೇಳೆಂದು ಕರವನ್ನು ಹಿಡಿದು ಕರೆಯಲು ಅವನ ದೇಹದಲ್ಲಿ ಪ್ರಾಣವು ಬಂದು ಅವನು ಎದ್ದು ಕುಳಿತನು. ಆಗ ಅರಸನು ತನ್ನ ಇದಿರಿಗೆ ಇದ್ದ ವೇಮನಾರಾಧ್ಯನನ್ನೂ ಶಿವಗಣಗಳನ್ನೂ ಅಭಿನಂದಿಸಿ ಅವರಿಗೆ ಕರವನ್ನು ಮುಗಿದು ನಿಂತುಕೊಂಡನು. ನೆರೆದ ಜನರು ವೇಮನಾರಾಧ್ಯನ ಮಹತ್ವವನ್ನೂ ಅವನ ಪಂಚಾಕ್ಷರೀ ಮಂತ್ರಸಾಮರ್ಥ್ಯವನ್ನೂ ಹೊಗಳುವವರಾದರು. ಆಮೇಲೆ ವೇಮನಾರಾಧ್ಯನು ತನ್ನ ಪಟ್ಟಣವಾದ ಪಾಲ್ಕುರಿಕೆಗೆ ತಿರುಗಿ ಬಂದನು.

ಈ ಪ್ರಕಾರ ವೇಮನಾರಾಧ್ಯನು ಪಟ್ಟಣದಲ್ಲಿ ತನ್ನ ಶಿವಭಕ್ತಿಯಲ್ಲಿ ಇರುತ್ತಿರಲು ಅವನು ಒಂದು ದಿವಸ ಕಲ್ಯಾಣ ಪಟ್ಟಣವನ್ನು ನೋಡಬೇಕೆಂದು ಅಲ್ಲಿಗೆ ಬಂದನು. ಬಸವೇಶ್ವರನು ಅವನು ಬಂದ ಸುದ್ದಿಯನ್ನು ಕೇಳಿ ಅವನಿಗೆ ತನ್ನ ಮಂದಿರಕ್ಕೆ ಬಂದು ತನ್ನನ್ನು ಪುನೀತನನ್ನಾಗಿ ಮಾಡಬೇಕೆಂದು ಹೇಳಿಕಳುಹಿದನು. ಆದರೆ ವೇಮನಾರಾಧ್ಯನು ಅವನಿಗೆ– ನೀನು ಭಕ್ತಾಗ್ರಣಿ ಎಂಬುದೇನೋ ನಿಜವು. ಆದರೆ ನಿನ್ನ ಆಚಾರ ವ್ಯವಹಾರಗಳು ಅವೈದಿಕವಾಗಿವೆ. ಆದ್ದರಿಂದ ನಾನು ನಿನ್ನ ಮಂದಿರಕ್ಕೆ ಬರಲಾರೆನೆಂದು ಹೇಳಿಕಳುಹಿದನು. ಆಗ ಬಸವೇಶ್ವರನು ಶಿವಶರಣರೊಡಗೂಡಿ ತಾನೇ ವೇಮನಾರಾಧ್ಯನಿದ್ದಲ್ಲಿಗೆ ಬಂದು ಅವನಿಗೆ ಪೊಡವಟ್ಟು ಅವನ ಕೂಡ ಶಿವಾನುಭವ ಗೋಷ್ಠಿಗಳನ್ನು ನಡಿಸಿದನು. ಆಗ ವೇಮನಾರಾಧ್ಯನು ಶಿವಾನುಭವದ ಮಹಿಮೆಯನ್ನು ತಿಳಿದವನಾಗಿ ತ್ರಿಪುರಾಂತಕೇಶ್ವರನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. ಆಮೇಲೆ ಅವನು ಪಾಲ್ಕುರಿಕೆಗೆ ಮರಳಿ ಬಂದನು.

ಅವನು ಅಲ್ಲಿಗೆ ತಿರುಗಿ ಬಂದ ಬಳಿಕ ನಾಡಿನಲ್ಲಿದ್ದ ಅನೇಕ ಜೈನ, ಬೌದ್ಧ, ಚಾರ್ವಾಕರನ್ನು ತನ್ನ ಶಿವಾನುಭವದ ಜ್ಞಾನದಿಂದ ವಾದದಲ್ಲಿ ಜಯಿಸಿ ವೀರಶೈವ ಮತೋದ್ಧಾರ ಕಾರ್ಯಗಳನ್ನು ನಡಿಸಿದನು. ಹೀಗೆ ವೇಮನಾರಾಧ್ಯನು ಆಂಧ್ರ ದೇಶದಲ್ಲಿ ವೀರಶೈವವನ್ನು ಪ್ರಸಾರಮಾಡಿದವನೆಂದು ಆಚಾರ್ಯತ್ರಯರಲ್ಲಿ ಪ್ರಸಿದ್ಧನಾಗಿದ್ದಾನೆ.

ವೇಮನಾರಾಧ್ಯನು ಸರ್ವಜ್ಞ ಕವಿಯಂತೆ ಆಂಧ್ರವಾಙ್ಮಯದಲ್ಲಿ ಹೆಸರಾದ ಗ್ರಂಥಕಾರನು. ಅವನ ಶತಕವು ಪ್ರಸಿದ್ಧವಾಗಿದೆ. ಅದರಂತೆಯೇ ಅವನು ಅನೇಕ ಧಾರ್ಮಿಕ ಗ್ರಂಥಗಳನ್ನು ಬರೆದಿರಬಹುದೆಂದು ನಮಗೆ ತೋರುತ್ತದೆ. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ.

ವೇಮನಾರಾಧ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಇವನು ಬಸವೇಶ್ವರನ ಸಮಕಾಲೀನನು. ಇವನ ಮೊಮ್ಮಗನಾದರೂ ಪ್ರಸಿದ್ಧನಾಗಿದ್ದಾನೆ. ಅವನು ಪಾಲ್ಕುರಿಕೆ ಸೋಮಾರಾಧ್ಯನಿಗೆ ದೀಕ್ಷೆಯನ್ನು ಕೊಟ್ಟಿದ್ದಾನೆ.

ವೇಮನಾರಾಧ್ಯನಿಗೆ, ವೇಮನ, ವೇಮ, ಬೆಲಿದೇವಿಯರ ವೇಮ, ವೇಮಾರಾಧ್ಯ ಎಂಬ ಬೇರೆ ಹೆಸರುಗಳಿರುತ್ತವೆ.

---

# ಚಾರಮರಾಯ.

ಕೇರಳ ದೇಶದಲ್ಲಿ ಅಂದರೆ ಈಗಿನ ಮಲಬಾರ ಪ್ರಾಂತದಲ್ಲಿ ಕೊಡಗಲೂರು ಎಂಬ ಪಟ್ಟಣವಿದ್ದು ಅಲ್ಲಿ ಚಾರಮರಾಯನೆಂಬ ರಾಜನು ರಾಜ್ಯವಾಳುತ್ತಿದ್ದನು. ಆ ಗ್ರಾಮಕ್ಕೆ ಎತ್ತರವಾದ ಮತ್ತು ಭದ್ರವಾದ ಆಳವೇರಿ, ಆಳವಾದ ಆಗಳತ, ಮಾಂಡಲಿಕ ರಾಜರ ಭವ್ಯವಾದ ಭವನಗಳು, ಅನೇಕ ಸುಂದರವಾದ ದೇವಾಲಯುಗಳು, ಇವುಗಳಿಂದ ಸುಶೋಭಿತವಾಗಿತ್ತು. ಈ ದೇವಾಲಯುಗಳಲ್ಲಿ ತಿರುವಂಜಿ ಕಾಳಿನಾಥನ ದೇವಾಲಯುವೇ ಮುಖ್ಯವಾಗಿದ್ದಿತು. ಪಟ್ಟಣದಲ್ಲೆಲ್ಲ ಎಲ್ಲಿ ನೋಡಿ ದರೂ ಶಿವಭಕ್ತರು. ಚಾರಮರಾಯನು ಸದ್ಗುಣಶೀಲನಾಗಿ ಕೇರಳ ದೇಶವನ್ನು ಸದ್ಧರ್ಮದಿಂದ ಪರಿಪಾಲಿಸುತ್ತಿದ್ದನು.

ಚಾರಮರಾಜನ ಹೆಂಡತಿಯಾದರೂ ಶಿವನ ಮೇಲೆ ಅತ್ಯಂತ ಭಕ್ತಿಯುಳ್ಳವಳಾಗಿದ್ದಳು. ಅವಳು ಒಂದು ದಿನ ಏಕಾಂತದಲ್ಲಿ ದ್ದಾಗ ರಾಜನು ಆಕೆಯ ತೋಳಿನ ಒಂದೆಡೆಯಲ್ಲಿ ಗಂಟುಗಟ್ಟಿ ಬಿರಿಸಾಗಿರುವದನ್ನು ಕಂಡು ಇದು ಹೀಗೇಕೆ ಎಂದು ಕೇಳಿದನು. ಅವಳು ಅವನಿಗೆ ಇದರಲ್ಲಿ ರುದ್ರಾಕ್ಷಿ ಇದೆ, ಹೀಗೆಯೇ ಅದು ನನ್ನ ದೇಹದಲ್ಲಿ ಇರುತ್ತದೆ, ಎಂದು ಹೇಳಲು ಇದನ್ನು ಧರಿಸಲು ನಿನಗೆ ಹೇಳಿದವರಾರು ಎಂದು ಕೇಳಿದನು. ಅದಕ್ಕೆ ಅವಳು ಒಬ್ಬ ಪುರಾ ಣಿಕನು ಪುರಾಣ ಹೇಳುವಾಗ, ಗೌಡ ದೇಶದಲ್ಲಿ ಮಾಣಿಕ್ಯಸೆಟ್ಟಿ ಎಂಬ ವರ್ತಕನು ಕತ್ತೆಗಳ ಮೇಲೆ ರುದ್ರಾಕ್ಷಿಗಳನ್ನು ಹೇರಿಸಿಕೊಂಡು ಅವು ಗಳ ವ್ಯಾಪಾರ ಮಾಡುತ್ತಿದ್ದನು. ಅವುಗಳಲ್ಲೊಂದು ಕತ್ತೆಯು ಸಾಯಲು ಅದನ್ನು ಯಮದೂತರು ಹಿಡಿದೊಯ್ಯುವಾಗ ಚಿತ್ರಗುಪ್ತರು ಅದಕ್ಕೆ ರುದ್ರಾಕ್ಷಿಯ ಸಾನ್ನಿಧ್ಯವು ದೊರಕಿರುತ್ತದೆ. ಅದರ ಫಲವು ಅದಕ್ಕೆ ತಪ್ಪದು ಎಂದು ಹೇಳಿ ಅದನ್ನು ಬಿಟ್ಟುಬಿಡಲು ಆಜ್ಞಾಪಿಸಲು ಅದು ಮುಂದಿನ ಜನ್ಮದಲ್ಲಿ ರಾಜಕುಮಾರಿಯಾಗಿ ಹುಟ್ಟಿತು ಎಂದು ಹೇಳಿ ದನು. ಅಂದಿನಿಂದ ನನ್ನಲ್ಲಿ ರುದ್ರಾಕ್ಷಿಯ ವಿಷಯವಾಗಿ ಭಕ್ತಿಯು ಉತ್ಪನ್ನವಾಗಿ ಅದನ್ನು ಧಾರಣ ಮಾಡುತ್ತಾ ಇದ್ದೇನೆ. ಅದನ್ನು ಧಾರಣ ಮಾಡುವಲ್ಲಿ ನಾನು ಪಂಚಾಕ್ಷರೀ ಮಂತ್ರೋಪದೇಶವನ್ನು ಹೊಂದಿ ಲಿಂಗಜಪವನ್ನು ಮಾಡುತ್ತಿರುವದರಿಂದ ಅದು ನನ್ನ ಅಂಗ

ದಲ್ಲಿ ಹೀಗೆ ಸ್ಥಾನವನ್ನು ಹೊಂದಿರುತ್ತದೆ. ಎಂದು ಅರುಹಿದಳು. ಆಗ ಅರಸನು ಅದನ್ನು ನೋಡಬೇಕೆಂದು ಅಪೇಕ್ಷಿಸಿ ಒಂದು ಹದನಾದ ಚೂರಿಯನ್ನು ತೆಗೆದುಕೊಂಡು ಅದರಿಂದ ಅದನ್ನು ಮೀಟಿ ಹೊರಗೆ ತೆಗೆಯಲು ಪ್ರಯತ್ನಿಸಲು ಆ ಚೂರಿಯೇ ಮುರಿದುಹೋಯಿತು. ಆಗ ಅವಳೇ ಅದನ್ನು ಇಚ್ಛಾಮಾತ್ರದಿಂದ ಹೊರಗೆ ತೆಗೆದು ತೋರಿಸಲು ಅದನ್ನು ನೋಡಿ ಅರಸನು ಆಶ್ಚರ್ಯಚಕಿತನಾಗಿ ರುದ್ರಾಕ್ಷಿಯ ಮಹತ್ವವು ಎಷ್ಟಿದೆ ಎಂಬುದನ್ನು ಅರಿತವನಾಗಿ ಅದನ್ನು ಧಾರಣ ಮಾಡಲು ಇಚ್ಛಿಸಿದನು. ಅದಕ್ಕೆ ರಾಣಿಯು ನೀನು ಪಂಚಾಕ್ಷರೀ ಮಂತ್ರೋಪದೇಶವನ್ನು ಹೊಂದದೆ ಇದನ್ನು ಧಾರಣ ಮಾಡಬಾರದೆಂದು ಹೇಳಿದಳು ಆಗ ಆವನು ಅವಳಿಂದಲೇ ಉಪದೇಶವನ್ನು ಹೊಂದಿ ಮಂತ್ರಪೂರ್ವಕವಾಗಿ ವಿಭೂತಿ, ರುದ್ರಾಕ್ಷಗಳನ್ನು ಧಾರಣ ಮಾಡಿಕೊಂಡು ಶಿವಾಚಾರದಲ್ಲಿ ಇರಹತ್ತಿದನು.

ಈ ಸಂಗತಿಯು ಘಟಿಸಿದ ಬಳಿಕ ಅರಸನ ವರ್ತನೆಯೇ ಬೇರೆಯಾಯಿತು. ಅವನು ಪಂಚಾಕ್ಷರೀ ಜಪದ ಮೂಲಕ ಪರಮಾತ್ಮನ ಸೇವೆಯನ್ನು ಮಾಡುವವನಾದನು. ಅವನಿಗೆ ತಿರುವಂಜಿ ಕಾಳಿನಾಥನನ್ನು ದಿನಾಲು ತಪ್ಪದೆ ಭಜಿಸುವನು. ಅವನು ದೇವಾಲಯಕ್ಕೆ ಹೋಗಿ ಬಾಹ್ಯಮಂಟಪದಲ್ಲಿ ಮದ್ದಳೆ, ತಾಳ, ಚಂಗು, ಆವುಜೆ, ಢಕ್ಕೆ, ಪಟಹ, ಭೇರಿ, ನಿಸ್ಸಾಳ, ತುಡುಮು, ರಣಗಹಳೆ, ಹೆಗ್ಗಾಳಿ, ಮೌರಿ, ಶಂಖ, ಚಿನ್ನಗಹಳೆ, ಗಂಟೆ ಮೊದಲಾದ ವಾದ್ಯಗಳು ಘೋರ್ಗರೆಯುತ್ತಿರಲು ದೇವಾಲಯವನ್ನು ಪ್ರವೇಶಿಸಿದ ಬಳಿಕ ಹೊರಗಿನ ವಾದ್ಯಗಳನ್ನು ಸ್ತಬ್ಧಗೊಳಿಸುವನು. ಆಮೇಲೆ ದೇವರ ಮುಂದೆ ನಿಂತು ನಾಗವೇಣಿ, ಕಿನ್ನರವೇಣಿ, ರುದ್ರವೇಣಿ, ತುಂಬುರುವೇಣಿ ಮೊದಲಾದ ೧೮ ತೆರದ ವೇಣಿಗಳನ್ನು ಶ್ರುತಿಗೊಳಿಸಿ ೩೨ ರಾಗಗಳನ್ನು ಸಪ್ತಸ್ವರದಿಂದ ಹಾಡಿಸುವನು. ಆ ಮೇಲೆ ಅಷ್ಟವಿಧಾರ್ಚನೆ, ಷೋಡಶೋಪಚಾರಗಳ ಮೂಲಕ ಲಿಂಗಮೂರ್ತಿಯನ್ನು ಆರಾಧಿಸುತ್ತ ಪೂಜಾಕಾರ್ಯಗಳನ್ನು ತೀರಿಸಿ, ಆಮೇಲೆ ಅವನು ಅರಮನೆಗೆ ತೆರಳುವನು. ರಾಜನು ನೃತ್ಯ, ಗಾಯನ, ವಾದ್ಯದಲ್ಲಿ ಬಹು ಪ್ರವೀಣನು. ಇವುಗಳ ಮೂಲಕವೇ ಅವನು ತನ್ನ ಭಕ್ತಿಯನ್ನು ಪರಮಾತ್ಮನಲ್ಲಿ ಪ್ರದ

ರ್ಶಿಸುವನು. ಇದೇ ಅವನು ಪರಮಾತ್ಮನನ್ನು ಭಜಿಸುವ ಮಾರ್ಗವಾಗಿತ್ತು.

ಅವನ ಈ ವರ್ತನೆಯ ಮೂಲಕ ರಾಜ್ಯದಲ್ಲಿದ್ದ ಪ್ರಜೆಗಳೆಲ್ಲರೂ ಶಿವಭಕ್ತಿಯುಳ್ಳವರಾಗುತ್ತ ನಡೆದರು. ಅವರೆಲ್ಲರು ನಿಶ್ಚಲ ಭಕ್ತರಾದರು. ಆಗ ಅರಸನು ತನ್ನ ರಾಜ್ಯದಲ್ಲೆಲ್ಲ ರಾವುತರೂ ಕಾಲಾಳುಗಳೂ ರುದ್ರಾಕ್ಷಿ ಧಾರಣವನ್ನು ಮಾಡಬೇಕೆಂದು ವಿಧಿಸಿದನು. ಇದರಿಂದ ಅಶ್ವಗಳ ಮೇಲಿದ್ದ ಜೀನುಗಳು, ಹಲ್ಲಣ, ಹಕ್ಕರಿಕೆ, ಮುಕುರ ಮೊದಲಾದವುಗಳೂ ಹಾಗೆಯೇ ರಾವುತರ ಕುಂಡಲ ಕಿರೀಟ ಮೈಜೋಡು ಮೊದಲಾದವುಗಳೂ ರುದ್ರಾಕ್ಷ ಮಾಲೆಗಳಿಂದ ಕಂಗೊಳಿಸಹತ್ತಿದವು. ಹಾಗೆಯೇ ರಾಜ್ಯದಲ್ಲಿದ್ದ ಪ್ರಜೆಗಳೆಲ್ಲರೂ ವಿಭೂತಿ ರುದ್ರಾಕ್ಷ ಧಾರಣ ಮಾಡಿಕೊಂಡು ತೊಳಗಹತ್ತಿದರು ಹೀಗೆ ಎಲ್ಲೆಲ್ಲಿಯೂ ಶಿವಭಕ್ತಿಯು ಪ್ರಸಾರವಾಗಹತ್ತಿತು. ರಾಜನಾದರೂ ಈ ಚಿನ್ಹಗಳನ್ನು ಧಾರಣಮಾಡಿದವರೆಲ್ಲರೂ ಶಿವಾಂಶಿಕರೆಂದು ಭಾವಿಸಿ ಅವರಲ್ಲಿ ಯಾವ ತೆರದ ಭೇದಭಾವವನ್ನು ಎಣಿಸದೆ ಅವರೆಲ್ಲರೂ ತನ್ನ ಬಂಧುಬಳಗವೆಂದು ಭಾವಿಸಿ ವರ್ತಿಸುವವನಾದನು.

ಹೀಗಿರಲು ಒಂದು ದಿನ ಚಾರಮರಾಯನು ಆನೆಯನ್ನೇರಿಕೊಂಡು ಪಟ್ಟಣದೊಳಗಿಂದ ವೈಹಾಳಿ ಹೋಗುತ್ತಿರುವಾಗ್ಗೆ ಅಚ್ಚುಡಿಸುರವೆಂಬಲ್ಲಿದ್ದ ಒಬ್ಬ ಮಡಿವಳನು ಬಟ್ಟೆಗಳನ್ನು ಬೆಳ್ಳಗೆ ಮಾಡುತ್ತಾ ಇದ್ದದ್ದನ್ನು ಕಂಡನು. ಅವನು ಉಪಯೋಗಿಸುತ್ತಿದ್ದ ಸುಣ್ಣವು ಅವನ ಮೈಮೇಲೆ ಬಿದ್ದು ಅದರ ಬಿಳೀ ವರ್ಣದ ಗೆರೆಗಳು ಅವನ ಮೇಲೆ ಮೂಡಿದ್ದವು. ಅರಸನು ಇದನ್ನು ನೋಡಿ ಈತನು ಭಸ್ಮಧಾರಣವನ್ನು ಮಾಡಿಕೊಂಡಿದ್ದಾನೆ, ಅವನೊಬ್ಬ ಭಕ್ತನು ಎಂದು ತಿಳಿದು, ಆನೆಯಿಂದಿಳಿದು ಅವನಿಗೆ ನಮಸ್ಕರಿಸಿದನು. ಇದನ್ನು ಆ ಅಗಸನು ನೋಡಿ ಗಾಬರಿಯಾಗಿ ಅರಸನಿಗೆ–ನಾನೊಬ್ಬ ಅಗಸರವನು ಹೀಗೆ ನಮಸ್ಕರಿಸಲು ನಾನು ಯೋಗ್ಯನಲ್ಲ ಎಂದು ಹೇಳಲು, ಅರಸನು–ಭಕ್ತರು ಅಗಸರಿರಲಿ ಇಲ್ಲವೆ ಬ್ರಾಹ್ಮಣರಿರಲಿ ಯಾರಿದ್ದರೂ ಕೂಡ ಅವರ ಕುಲವನ್ನು ನಾನು ನೋಡೆನು. ಅವರೆಲ್ಲರೂ ನನಗೆ ಪೂಜ್ಯರು, ಅವರು ಶಿವನೆಂದೇ ಕಾಣುತ್ತೇನೆ, ಎಂದು ಉತ್ತರ ಕೊಟ್ಟನು. ಇದನ್ನು ಜನರು ಕೇಳಿ ಅರಸನು ನಿಜವಾದ ಭಕ್ತನು ಶರಣನು, ಇವನಿಗೆ ಯಾರೂ ಸರಿ ಇಲ್ಲವೆಂದು ಭಾವಿಸಿ ಕೊಂಡಾಡುವವರಾದರು.

ಇದರಿಂದ ಚೇರಮರಾಯನ ಖ್ಯಾತಿಯು ಕೇವಲ ಕೇರಳದೇಶದಲ್ಲಿ ಮಾತ್ರವಲ್ಲ ಚೋಳ, ಚೇರ, ಕರ್ನಾಟಕ ಮೊದಲಾದ ದೇಶಗಳಲ್ಲಿಯೂ ಪಸರಿಸಹತ್ತಿತು. ಅವನ ಶಿವಭಕ್ತಿ, ಅವನ ಸದ್ವರ್ತನೆ, ತಿರುವಂಜಿ ಕಾಳಿನಾಥನ ಮೇಲಿದ್ದ ಅವನ ಉತ್ಕಟ ಶ್ರದ್ಧೆ ಇವುಗಳೆಲ್ಲವನ್ನು ಅವರು ಅರಿತು ಅವನ ವಿಷಯವಾಗಿ ಅತುಲವಾದ ಆದರವನ್ನೂ ಪ್ರೀತಿಯನ್ನೂ ವಹಿಸುವವರಾದರು. ಹೀಗೆ ಕೆಲವುಕಾಲ ಗತಿಸಿದಬಳಿಕ ಚಾರಮರಾಯನಲ್ಲಿ ರಾಜ್ಯವ್ಯಾಮೋಹವು ತಪ್ಪಹತ್ತಿತು. ಈ ರಾಜ್ಯವು ನನಗೆ ಬೇಡ, ಪರಮಾತ್ಮನ ಸ್ಮರಣೆಯಲ್ಲಿಯೇ ನಾನು ಕಾಲಕಳೆಯಬೇಕೆಂಬ ಭಾವವು ಅವನಲ್ಲಿ ಬಲಿಯಹತ್ತಿತು. ಕಡೆಗೆ ಅವನು ರಾಜ್ಯವನ್ನು ತೊರೆಯಬೇಕೆಂದು ನಿರ್ಧರಿಸಿ ತನ್ನ ರಾಜಧಾನಿಯನ್ನು ಬಿಟ್ಟುಕೊಟ್ಟು ಹೊರಡಲು ಉದ್ಯುಕ್ತನಾದನು. ಈ ಸಂಗತಿಯು ಅವನ ಸ್ನೇಹಿತನಾದ ಚೋಳರಾಜನಿಗೆ ತಿಳಿಯಲು ಅವನು ಕೂಡಲೆ ಪರವಾರ ಸಹವಾಗಿ ಕುಡಗಲೂರಿಗೆ ಬಂದು ಅಲ್ಲಿದ್ದ ತಿರುವಂಜಿ ಕಾಳಿನಾಥನ ದೇವಾಲಯವನ್ನು ಪ್ರವೇಶಿಸಿ ಶಿವನಿಗೆ ಬಿನ್ನೈಸಿಕೊಂಡಿದ್ದೇನೆಂದರೆ — ಎಲೇ ಲಿಂಗವೇ, ನಿಮ್ಮ ಪಾದದಿಂದ ಈ ಚೇರಮರಾಯನನ್ನು ಏಕೆ ಬಿಡುವಿರಿ ಎಂದೆನ್ನಲು, ಶಿವನು ಚೇರಮನನ್ನು ದೇವಾಲಯಕ್ಕೆ ಬರಮಾಡಿಕೊಂಡು ಅವನಿಗೆ— ಚೇರಮನೇ, ನಿನ್ನನೇನು ನಾವು ಬೇಸರಿಸಿದೆವು? ರಾಜ್ಯವನ್ನು ಹೀಗೆ ಬಿಟ್ಟುಹೋಗುವದೇಕೆ? ಎಂದು ಕೇಳಿದನು. ಅದಕ್ಕೆ ಚೇರಮನು ಶಿವನ ಅಭಿಪ್ರಾಯವನ್ನು ತಿಳಿದವನಾಗಿ— ನಾನು ನಿಮ್ಮ ನಾಂಟ್ಯವನ್ನು ನೋಡಲು ಬಯಸುತ್ತೇನೆ. ಅದನ್ನು ನೀವು ತೋರಿಸಿದರೆ ನಾನು ರಾಜ್ಯವನ್ನು ಬಿಟ್ಟು ಹೋಗುವದಿಲ್ಲ ಎಂದು ನುಡಿದನು. ಶಿವನು ಹಾಗೆಯೇ ಆಗಲೆಂದು ತನ್ನ ವಿಚಿತ್ರತರವಾದ ಮತ್ತು ಹೊಸತೆರನಾದ ನಾಂಟ್ಯವನ್ನಾಡಿ ತೋರಿಸಲು ಚಾರಮನು ಆನಂದಬಟ್ಟು ಶಿವನಿಗೆ— ನೀನು ದಿನಾಲು ಹೀಗೆಯೇ ನಿನ್ನ ನಾಟ್ಯವನ್ನು ನನಗೆ ತೋರಿಸಿದಲ್ಲಿ ನಾನು ಹೋಗುವದಿಲ್ಲ ಎಂದು ಹೇಳಿದನು. ಅದಕ್ಕೆ ಶಿವನು— ಹೀಗೆ ದಿನಾಲು ಈ ತೆರದ ನಾಂಟ್ಯವನಾಡುವುದುಂಟೇ? ಇದು ಆಗದು. ಆದರೆ ನಿನಗೆ ಈ ನಾಟ್ಯದ ಸ್ಮರಣೆಯನ್ನುಂಟು ಮಾಡಲು ನಾವು ದಿನಾಲು ನಮ್ಮ ಪಾದದ ಅಂದುಗೆಯ ಧ್ವನಿಯನ್ನು ತಾಳಬದ್ಧವಾಗಿ ನುಡಿಸುವೆವು. ಅದರಿಂದಲೇ

ನಿನ್ನ ಭಕ್ತಿಯ ಉದ್ರೇಕವನ್ನು ಶಾಂತಿಗೊಳಿಸಬೇಕು ಎಂದು ಸೂಚಿಸಿದನು. ಅದಕ್ಕೆ ಚಾರಮನು ಒಪ್ಪಿಕೊಂಡು ನಾನು ಇನ್ನುಮೇಲೆ ರಾಜ್ಯವನ್ನು ಬಿಟ್ಟು ಹೋಗುವದಿಲ್ಲ ಎಂದು ಹೇಳಿದನು. ಆಮೇಲೆ ಚಾರಮನು ಶಿವಪೂಜೆಯನ್ನು ಮಾಡುವ ಕಾಲದಲ್ಲಿ ಶಿವನ ಅಂದುಗೆಯ ಧ್ವನಿಯು ಅವನಿಗೆ ಆಗುತ್ತಿರಲು ಅದರಲ್ಲಿಯೇ ಅವನು ತನ್ನ ವೀಣೆಯನ್ನು ಬಾರಿಸುತ್ತ ಗಾಯನ ಮಾಡುತ್ತ ಶಿವಾರ್ಚನೆಯ ಕಾರ್ಯಗಳನ್ನು ತೀರಿಸುವವನಾದನು.

ಹೀಗೆ ಚಾರಮರಾಜನು ರಾಜ್ಯಭಾರ ನಡಿಸುತ್ತಿರುವಾಗ ಒಂದಾನೊಂದು ದಿವಸ ಕೆಲವು ಭಕ್ತರು ಅವನ ಒಡ್ಡೋಲಗಕ್ಕೆ ಬಂದು— ತಿರುವಾರೂರಲ್ಲಿ ನಂಬೆಣ್ಣನೆಂಬ ಶ್ರೇಷ್ಠಭಕ್ತನಿದ್ದಾನೆ. ಅವನಿಗೆ ತಿರುವಾರೂರೇಶ್ವರನು ಒಲಿದಿದ್ದಾನೆ. ದಿನಾಲು ಅವನು ಅವನಿಗೆ ಪಡಿಹೊನ್ನು ಕೊಡುತ್ತಾನೆ. ನಾವು ಹಿಂದೆ ಶಿವನು ಕಣ್ಣಪ್ಪನೆಂಬ ಬೇಡನಿಂದ ಒದೆಯಿಸಿಕೊಂಡ, ಮಾದರ ಚನ್ನಯ್ಯನೊಡನೆ ಭೋಜನ ಮಾಡಿದ, ಬಾಣನ ಬಾಗಿಲವನ್ನು ಕಾಯ್ದು, ಕಿನ್ನರಯ್ಯನಿಗೆ ಹಣ ಕೊಟ್ಟ, ಒಬ್ಬ ಮುದಿಕೆಯ ಸಲುವಾಗಿ ಬಿಟ್ಟಿಗೆ ಮಣ್ಣು ಹೊತ್ತ, ಎಂದು ಕಥೆಗಳನ್ನು ಕೇಳುತ್ತಿದ್ದೆವು. ಆದರೆ ಈಗ ತಿರುವಾರೂರಲ್ಲಿ ಪರಮಾತ್ಮನು ನಂಬೆಣ್ಣನಿಗೆ ಕುಂಟಣಿಯಾಗಿ ಅವನಿಂದ ಪೂಜೆಯನ್ನು ಕೈಕೊಳ್ಳುತ್ತಾನೆ. ಅವನ ಸ್ತ್ರೀಯಳಿಗೋಸ್ಕರ ಹೊನ್ನು ಕೊಡುತ್ತಾನೆ. ಅದು ಈಗಲೂ ನಡಿಯುತ್ತಿದೆ ಎಂದು ಅರಸನಿಗೆ ಹೇಳಿದರು. ಅದನ್ನು ಅರಸನು ಕೇಳಿ, ನಂಬೆಣ್ಣನನ್ನು ಪ್ರತ್ಯಕ್ಷ ನೋಡಬೇಕೆಂಬ ಕಾಂಕ್ಷೆಯನ್ನು ತಾಳಿ ಆನೆ, ರಥ, ಕುದುರೆ, ಪದಾತಿಗಳನ್ನು ಕೂಡಿಕೊಂಡು ತಿರುವಾರೂರಿಗೆ ಬಂದು ಸೈನ್ಯವನ್ನು ಪಟ್ಟಣದ ಹೊರಗೆ ಇಳಿಸಿ ಪಟ್ಟಣದಲ್ಲಿ ಬಂದು ನಂಬೆಣ್ಣನನ್ನು ಕಾಣುವವನಾದನು.

ನಂಬೆಣ್ಣನು ಆಗ ತಿರುವಾರೂರೇಶ್ವರ ದೇವಾಲಯದಲ್ಲಿ ಗಜ್ಜುಗದಾಟವನ್ನು ಆಡುವದರಲ್ಲಿ ತೊಡಗಿದ್ದನು. ಅವನು ಆಡುವದು ಜೂಜಾಟವಾಗಿತ್ತು. ಚಾರಮರಾಜನು ಅಲ್ಲಿ ಬಂದು ನಿಂತರೂ ನಂಬೆಣ್ಣನು ಅವನನ್ನು ಲಕ್ಷಿಸಲಿಲ್ಲ. ಇಷ್ಟೇ ಅಲ್ಲ, ಗಜ್ಜುಗದಾಟವನ್ನು ಆಡಲು ಅವನನ್ನು ಕರೆದನು. ರಾಜನು ಅದರ ಆಟವನ್ನಾಡಹತ್ತಲು, ಅವ

ನಿಂದ ಗಜುಗುಗಳನ್ನು ಹೊಡೆಯಲಿಕ್ಕೆ ಆಗದೆ ಹೋಗಿ ಸೋತು ಬಿಟ್ಟನು. ಆಗ ಅರಸನು– ನಮಗೇಕೆ ಗಜ್ಜುಗಗಳು ತಾಗುವದಿಲ್ಲ ಎಂದು ಕೇಳಲು ನಂಬೆಣ್ಣನು ಅವನಿಗೆ— ನಾನು ಕೆಳಗೆ ಹೂಡಿದ ಮೂರು ಗಜುಗಗಳೇ ಲಿಂಗದ ಶಕ್ತಿಪೀಠ, ಮೇಲಣ ಗಜುಗವೇ ಲಿಂಗ, ಇಡುವ ಗಜುಗವೇ ಅವುಗಳನ್ನು ಸಂಬಂಧಿಸುವ ಸಾಧನ ಎಂದು ಭಾವಿಸಿ ಗಜುಗಗಳನ್ನು ಆಡುತ್ತೇನೆ. ಇದರಿಂದ ಅವು ತಾಕುತ್ತವೆ ಎಂದು ಹೇಳಿದನು. ಹೀಗೆ ಹೇಳಿದ ಬಳಿಕ ನಂಬೆಣ್ಣನು ತನ್ನ ಆಟವನ್ನು ಹಾಗೆಯೇ ಸಾಗಿಸಿದನು. ಆಗ ಚೇರಮರಾಂಕನು ಅಲ್ಲಿ ಕೆಲವು ಹೊತ್ತು ನಿಂತು, ನಂಬೆಣ್ಣನು ತನ್ನನ್ನು ಲಕ್ಷಿಸದ್ದರಿಂದ ತಿರುವಾರೂರೇಶ್ವರನಲ್ಲಿಗೆ ಹೋಗಿ– ಎಲೆ ಶಿವನೇ, ಇಂಥ ನಂಬೆಣ್ಣನಿಗೆ ನೀನು ಒಲಿಯುಬಹುದೇ? ಇವನು ಜೂಜಾಡುವದರಲ್ಲಿ ತೊಡಗಿದ್ದಾನೆ. ಅವನಿಗೆ ಪರವೆನಾಚಿ ಎಂಬ ಸ್ತ್ರೀಯಳಿದ್ದು ಅವಳಲ್ಲಿ ಮೋಹಿತನಾಗಿದ್ದಾನೆ. ಇಂಥವನಿಗೆ ನೀನು ಪಡಿ ಹೊನ್ನು ಕೊಡುವದೋ? ಎಲೇ ಶಿವನೇ ಇದು ನಿನ್ನ ತಪ್ಪಲ್ಲವೇ? ನೀನು ಎನ್ನಪ್ಪಣೆ ಇಲ್ಲದೆ ಮುಂದೆ ಇವನಿಗೆ ಹೊನ್ನ ಕೊಟ್ಟರೆ ನಿನ್ನಾಣೆ, ನಿನ್ನ ಭಕ್ತರಾಣೆ ಎಂದು ಹೇಳಿ ನಂಬೆಣ್ಣನ ತಂದೆ ತಾಯಿಗಳಾದ ಜಡೆಯ ನೈನಾರು ಮತ್ತು ಯುಸ್ಯಜ್ಞಾನಿಗಳನ್ನು ಕಾಣಲಿಕ್ಕೆ ಅವರ ಮನೆಗೆ ಹೋದನು. ಈ ಉಭಯ ದಂಪತಿಗಳು ಶಿವಭಕ್ತಿಯುಕ್ತವರೆಂದು ನಾಡಿನಲ್ಲೆಲ್ಲ ಬಹು ಪ್ರಸಿದ್ಧರು. ಆದ್ದರಿಂದ ಚಾರಮರಾಯನು ಅವರನ್ನು ಕಂಡು ಅತ್ಯಂತವಾಗಿ ಸನ್ಮಾನಿಸಿ ಅವರ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಪಟ್ಟಣಕ್ಕೆ ಹೋಗಬೇಕೆಂದು ತನ್ನ ಬಿಡಾರಕ್ಕೆ ಬಂದನು.

ಇತ್ತ ನಂಬೆಣ್ಣನು ಎಂದಿನಂತೆ ತಿರುವಾರೂರೇಶ್ವರನನ್ನು ಕಂಡು ಅವನಿಗೆ ಪಡಿ ಹೊನ್ನ ಕೊಡಲು ಕೇಳಲು ಶಿವನು ಅವನಿಗೆ— ಚಾರಮರಾಯನು ತನ್ನಪ್ಪಣೆಯಿಲ್ಲದೆ ನಿನಗೆ ಹೊನ್ನ ಕೊಡಬೇಡವೆಂದು ಹೇಳಿ ಹೋಗಿದ್ದಾನೆ. ಅವನು ಈಗ ನಿನ್ನ ತಾಯಿತಂದೆಗಳಲ್ಲಿಗೆ ಹೋಗಿದ್ದಾನೆ. ಅವನನ್ನು ಕಾಣು ಎಂದು ಹೇಳಲು, ನಂಬಿಯು ತಾನು ಚಾರಮನನ್ನು ಉಪೇಕ್ಷಿಸಿದ್ದು ಬಹಳ ತಪ್ಪಾಯಿತು ಎಂದು ತಿಳಿದು ಗಾಬರಿಯಾಗಿ ತನ್ನ ಮನೆಗೆ ಬಂದನು. ಅಲ್ಲಿ ಜಡೆಯನೈನಾರು ಯುಸ್ಯಜ್ಞಾನಿಗಳು ಚಾರಮರಾಯನನ್ನು ಆದರಿಸದೆ ಇದ್ದದ್ದಕ್ಕೆ ಸಿಟ್ಟು

ಮಾಡಿ ಅವನು ಇದೇ ಈಗ ತನ್ನ ಬಿಡಾರಕ್ಕೆ ಹೋದನೆಂದು ಹೇಳಿದರು. ಆಗ ನಂಬೆಣ್ಣನು ಚೇರಮರಾಜನಿದ್ದಲ್ಲಿಗೆ ಬಂದು ಅವನನ್ನು ಕಂಡನು. ಆಗ ಅವರು ಒಬ್ಬರಿಗೊಬ್ಬರು ನಮಸ್ಕರಿಸಿಕೊಳ್ಳಲು ನಂಬೆಣ್ಣನು ಅವನಿಗೆ— ಪುರುಷ ಮುಟ್ಟಿದ ಬಳಿಕ ಕಬ್ಬಿಣದ ಗುಣ ಉಂಟೇ? ನಿಮ್ಮ ಕಂಡ ಮೇಲೆ ಎನ್ನಲ್ಲಿ ಅವಗುಣ ಉಂಟೇ? ಎಂದು ಬಿನ್ನವಿಸಲು ಚೇರಮನು ನಂಬಿಯಣ್ಣನು ನುಡಿದ ಈ ಮಾತಿನ ಭಾವವನ್ನು ಅರಿತವನಾಗಿ ಪಡಿಯನ್ನು ನಂಬಿಗೆ ಕೊಡಲು ತಿರುವಾರೂರೇಶ್ವರನಿಗೆ ತಿಳಿಸಿ ತನ್ನ ಪಟ್ಟಣಕ್ಕೆ ತಿರುಗಿ ಬಂದನು.

ಕೆಲವು ದಿವಸಗಳಾದ ಮೇಲೆ ಚಾರರು ಚೇರಮನಲ್ಲಿಗೆ ಬಂದು ನಂಬೆಣ್ಣನು ತಿರುವಾರೂರಲ್ಲಿ ಎಲ್ಲರೂ ನೋಡುತ್ತಿರಲು ಕೈಲಾಸಕ್ಕೆ ಹೋದನೆಂದು ಹೇಳಿದರು. ಇದನ್ನು ಚೇರಮರಾಯನು ಕೇಳಿ ದುಃಖಿತನಾಗಿ ನಂಬೆಣ್ಣನು ತಾನು ಕೈಲಾಸಕ್ಕೆ ಹೋಗುವ ಮುಂದೆ ನನಗೆ ತಿಳಿಸುವೆನೆಂದು ಹೇಳಿದ್ದನು. ಆದರೆ ಅವನು ತಿಳಿಸದೆ ಹೀಗೆ ಹೋದನಲ್ಲಾ ಎಂದು ಅತ್ಯಂತ ವಿಷಾದ ಪಟ್ಟು ಅವನ ಬೆನ್ನು ಹತ್ತಿ ಹೋಗಬೇಕೆಂದು ಬಯಸಿ ತನ್ನ ರಾವುತರ ಪಡೆಯನ್ನು ಸಜ್ಜುಗೊಳಿಸಿ ಕೈಲಾಸ ಪರ್ವತದತ್ತ ನಡೆದನು. ಅವನು ಅನೇಕ ದೇಶಗಳನ್ನು ತಿರುಗಿದನು. ಆದರೆ ಕೈಲಾಸವು ಅವನಿಗೆ ಎಲ್ಲಿಯೂ ಸಿಕ್ಕಲಿಲ್ಲ. ಕಡೆಗೆ ಅವನು ಶ್ರಮಪಟ್ಟು ಬಸವಳಿದು ಕಡೆಗೆ ತನ್ನ ದೇಶಕ್ಕೆಯೇ ಬಂದನು. ಅಲ್ಲಿ ಒಂದೆಡೆಯಲ್ಲಿ ಒಂದು ಸುಂದರವಾದ ತೋಟವಿದ್ದು ಅಲ್ಲಿ ಅನೇಕ ವೃಕ್ಷಗಳೂ ಲತೆಗಳೂ ಹಣ್ಣು ಹಂಪಲಗಳು ಸುರಿದಂಥ ಹಣ್ಣಿನ ಗಿಡಗಳೂ ಕಣ್ಣಿಗೆ ಸೊಂಪಾಗಿ ಕಾಣುತ್ತಿದ್ದವು. ಅಲ್ಲಿ ಅಳಿ, ಗಿಳಿ, ಕೋಕಿಲೆ, ಚಕೋರ, ಪಾರಿವಾಳಗಳು ಶಿವಶಾಸ್ತ್ರವನ್ನು ಓದುತ್ತಿದ್ದವು. ಅವುಗಳ ಮಧ್ಯದಲ್ಲಿ ತಾಪಸಿಯೋರ್ವಳು ಶಿವಯೋಗದಲ್ಲಿ ನಿರತಳಾಗಿದ್ದಳು. ಅವಳು ಶಿವಶರಣಿಯಾದ ಗೊಗ್ಗವ್ವೆಯು. ಅವಳನ್ನು ಚೇರಮರಾಯನು ಕಂಡು ನಮಸ್ಕರಿಸಿ ನಾನು ಕೈಲಾಸವನ್ನು ಹುಡುಕಹತ್ತಿ ಬಹಳ ದಿವಸಗಳಾದವು. ಅಲ್ಲಿಗೆ ಹೋಗುವ ಮಾರ್ಗವು ನನಗೆ ಸಿಕ್ಕಲಿಲ್ಲ. ಆದ್ದರಿಂದ ಆ ಕೈಲಾಸವೆಲ್ಲಿದೆ, ಅದಕ್ಕೆ ಹೋಗುವ ದಾರಿಯು ಅವುದು ಎಂಬುದನ್ನು ಹೇಳುವಿಯಾ ಎಂದು ಕೇಳಿದನು. ಆಗ ಗೊಗ್ಗವ್ವೆಯು ಕೈಲಾಸವು ಇಲ್ಲಿಂದ ದೂರವಿಲ್ಲ. ಇಗೋ ನೋಡು, ಅದಕ್ಕೆ ಹೋಗುವ

ದಾರಿಯನ್ನು ಇಲ್ಲಿಯೇ ತೋರಿಸುತ್ತೇನೆ ಎಂದು ನುಡಿದು ತಾನು ಆಗ ಶಿವನಿಗೆ ಸಮರ್ಪಿಸುತ್ತಿದ್ದ ಧೂಪದ ಹೊಗೆಯನ್ನು ತೋರಿಸಿ ಈ ಹೊಗೆಯು ಹೋಗುತ್ತಿರುವ ದಿಕ್ಕಿನಲ್ಲಿ ನೋಡು, ಅಲ್ಲಿ ಕೈಲಾಸದ ದಾರಿಯು ನಿನಗೆ ಕಾಣುವದು ಎಂದು ಹೇಳಿದಳು. ಹಾಗೆ ಚಾರಮರಾಯನು ನೋಡುವಲ್ಲಿ ಅವನಿಗೆ ಕೈಲಾಸದ ಪ್ರವೇಶ ದ್ವಾರವು ಕಾಣಹತ್ತಿತು! ಆಗ ಗೊಗ್ಗವ್ವೆಯು---ಅದನ್ನು ಹೀಗೆ ಕಂಡಾಕ್ಷಣವೇ ನೀನು ಅಲ್ಲಿಗೆ ಹೋಗಲಾರಿ ಎಂದು ಹೇಳಿ ಅವನಿಗೆ ತ್ರಿಲಿಂಗಗಳ ಉಪದೇಶವನ್ನು ಮಾಡಿದಳು. ಇನ್ನು ಮೇಲೆ ಅಲ್ಲಿಗೆ ಹೋಗಲು ಇವುಗಳೇ ನಿನಗೆ ಆಧಾರ ಎಂದು ಹೇಳಿ ಕೈಲಾಸಕ್ಕೆ ಹೋಗುವ ರೀತಿಯನ್ನು ಹೇಳಿಕೊಟ್ಟಳು.

ಈ ಪ್ರಕಾರ ಚಾರಮರಾಯನು ಗೊಗ್ಗವ್ವೆಯಿಂದ ಕೈಲಾಸಕ್ಕೆ ಹೋಗುವ ಮಾರ್ಗವನ್ನು ತಿಳಿದವನಾಗಿ ಅದರಂತೆ ಅವನು ಹೋಗಲು ಕೈಲಾಸದ ದ್ವಾರಕ್ಕೆ ಬಂದು ಮುಟ್ಟಿದನು. ಅಲ್ಲಿದ್ದ ದ್ವಾರಪಾಲಕರು ಅವನಿಗೆ--- ನೀನೆಲ್ಲಿಗೆ ಹೋಗುತ್ತೀ ಎಂದು ಕೇಳಲು ನಾನು ನಂಬೆಣ್ಣನನ್ನು ಹುಡುಕುತ್ತ ಬಂದಿದ್ದೇನೆ. ಅವನು ಇಲ್ಲಿ ಕೈಲಾಸದಲ್ಲಿದ್ದಾನೆ. ಅವನನ್ನು ಕಾಣಬೇಕು ಎಂದು ಹೇಳಲು ಅವರು ಅವನಿಗೆ ಒಳಗೆ ಹೋಗಲು ಅಪ್ಪಣೆ ಕೊಡಲು ಚಾರಮರಾಯನು ನಂಬೆಣ್ಣನನ್ನು ಕೈಲಾಸದ ಕಡೆಯ ಬಾಗಿಲಲ್ಲಿ ಕಂಡನು. ಆಗ ಅವರು ಒಬ್ಬರಿಗೊಬ್ಬರು ಶರಣು ಮಾಡಿದ ಬಳಿಕ ನಂಬೆಣ್ಣನು ಮುಂದೆ ಹೋಗಿ ಶಿವನನ್ನು ಕಂಡು---ಇಗೋ ಈ ಚಾರಮರಾಯನು ನಿಮಗೆ ಕಾವ್ಯ, ನೃತ್ಯ, ಸಂಗೀತವನ್ನು ಕೇಳಿಸುವದಕ್ಕೆ ಬಂದಿದ್ದಾನೆ. ಅವನನ್ನು ಕರಿಸಿಕೊಳ್ಳಬೇಕು ಎಂದು ಹೇಳಲು ಶಿವನು ಪ್ರೀತನಾಗಿ ನಂದೀಶ್ವರನ ಕಯ್ಯಿಂದ ಅವನನ್ನು ಕರಿಸಿಕೊಂಡು ಅವನಿಗೆ ತನ್ನ ಹೃದಯಾಂತರಾಳದಲ್ಲಿ ಸ್ಥಾನವನ್ನು ಕೊಟ್ಟನು. ಹೀಗೆ ಚಾರಮರಾಯನು ಶಿವಶರಣರಲ್ಲಿ ಪ್ರಸಿದ್ಧನಾಗಿದ್ದಾನೆ.

ಮೇಲಿನ ಚರಿತ್ರೆಯಿಂದ ಚಾರಮರಾಯನು ಮೊದಲು ಶೈವಧರ್ಮವನ್ನು ಪಾಲಿಸುವವನಿದ್ದನೆಂದು ತಿಳಿಯುತ್ತದೆ. ಆದರೆ ಮುಂದೆ ಅವನು ಶಿವಶರಣೆಯಾದ ಗೊಗ್ಗವ್ವೆಯಿಂದ ತ್ರಿಲಿಂಗಗಳ ಉಪದೇಶ

ವನ್ನು ಹೊಂದಿ ಸಾಮರಸ್ಯ ಪದವನ್ನು ತಿಳಿದನು. ಗೊಗ್ಗವ್ವೆಯು ವಚನ ಕಾರಳಿದ್ದು ಅವಳು ವೀರಶೈವಳಿದ್ದಾಳೆ. ೧ ಆದ್ದರಿಂದ ಚಾರಮ ರಾಯನು ಶಿವಶರಣರ ಪರಂಪರೆಗೆ ಸೇರಿದವನಾಗಿದ್ದಾನೆ. ವೀರಶೈವ ಗ್ರಂಥಕಾರರು ಅವನನ್ನು ತಮ್ಮ ಗ್ರಂಥಗಳಲ್ಲಿ ಯಾವಾಗಲೂ ಸ್ಮರಿಸು ವದುಂಟು. ಬಸವೇಶ್ವರನು ತನ್ನ ಒಂದು ವಚನದಲ್ಲಿ ತಾನು 'ಚೆನ್ನ ಚಾರಮನ ಬಂಟ' ಎಂದರೆ ಸೇವಕನೆಂದು ಹೇಳಿಕೊಂಡಿದ್ದಾನೆ. (೩೮೭ನೇ ವಚನ ನೋಡಿರಿ— ಹೊಸ ಪದ್ಧತಿಯ ಬಸವೇಶ್ವರನ ವಚ ನಗಳು.)

ಆದರೆ ಚಾರಮನು ಅಥವಾ ಚೇರಮನು ತಮಿಳು ದೇಶದ ೬೩ ಪುರಾತನರ ಪಂಕ್ತಿಯಲ್ಲಿ ಸೇರಿಸಲ್ಪಟ್ಟಿದ್ದು ತಮಿಳು ಗ್ರಂಥಗಳಿಂದ ತಿಳಿದುಬರುತ್ತದೆ. ಆದರಲ್ಲಿಯ ಕೆಲವು ವಿವರಗಳು ವೀರಶೈವ ಗ್ರಂಥ ಗಳಲ್ಲಿ ಹೇಳಿದವುಗಳಿಂದ ಕೆಲವು ಸಂದರ್ಭಗಳಲ್ಲಿ ಭಿನ್ನವಾಗಿವೆ. ಆದರೆ ನಾವು ವೀರಶೈವ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಈ ಚರಿತ್ರೆಯನ್ನು ಬರೆದಿದ್ದೇವೆ. ಮಹಾ ಕವಿಯಾದ ಹರಿಹರನು ತನ್ನ ೬೩ ಪುರಾತನರ ಚರಿತ್ರೆಗಳಲ್ಲಿ ಚಾರಮರಾಯನನ್ನು ಪುರಾತನರಲ್ಲಿ ಸೇರಿಸಿರುವದಿಲ್ಲೆಂಬದನ್ನು ನಾವು ಇಲ್ಲಿ ಲಕ್ಷಿಸತಕ್ಕದ್ದು. ಶಿವಗಣಂಗ ಳಲ್ಲಿ ಅವನನ್ನು ಅವನು ಎಣಿಸಿದ್ದೇ ಇದಕ್ಕೆ ಕಾರಣವಾಗಿರಬಹುದು.

ಚಾರಮರಾಯನ ಈ ಚರಿತ್ರೆಯಿಂದ ಶೈವ ಮಾರ್ಗಕ್ಕಿಂತಲೂ ವೀರ ಶೈವ ಮಾರ್ಗವೇ ಹೆಚ್ಚಿನದೆಂಬ ಭಾವವು ಹೊರಪಡುತ್ತಿದೆ. ಚಾರಮನು ಶೈವನಿರುವ ವರೆಗೆ ಅವನಿಗೆ ಕೈಲಾಸದ ದಾರಿಯು ಕಾಣಲಿಲ್ಲ. ಆದರೆ ಅವನು ಶಿವಶರಣೆಯಾದ ಗೊಗ್ಗವ್ವೆಯಿಂದ ವೀರಶೈವೋಪದೇಶವನ್ನು ಹೊಂದಿದ ಬಳಿಕ ಅವನಿಗೆ ಕೈಲಾಸದ ದ್ವಾರವು ಕಾಣಹತ್ತಿತು.

ಬಸವೇಶ್ವರನು ತನ್ನ ವಚನಗಳಲ್ಲಿ ಇವನನ್ನು ಹೊಗಳಿರುವದ ರಿಂದಲೂ ೬೩ ಪುರಾತನರ ಚರಿತ್ರೆಗಳನ್ನು ಬರೆದ ಸೌಂದರ ನಂಬಿ ಯಣ್ಣನು ಬಸವೇಶ್ವರನಕಿಂತಲೂ ಹಿಂದಿನವನಿರುವದರಿಂದಲೂ ಚಾರಮ ರಾಯ ಗೊಗ್ಗವ್ವೆಗಳು ಬಸವೇಶ್ವರನಕಿಂತಲೂ ಮೊದಲಿನವರಾಗುತ್ತಾರೆ.

---

(೧) ಶಿವಶರಣರ ಚರಿತ್ರೆಗಳು ಭಾಗ ೨-ಪುಟ ೫ ನೋಡಿರಿ.

# ತಂಗಟೂರು ಮಾರಯ್ಯ.

ಮದ್ರಾಸ ಇಲಾಖೆಯಲ್ಲಿರುವ ನೆಲ್ಲೂರು ಜಿಲ್ಲೆಯಲ್ಲಿ ಒಂಗೋಲ ಎಂಬ ತಾಲೂಕು ಈಗ ಇದೆ. ತಂಗಟೂರು ಎಂಬ ಗ್ರಾಮವು ಈ ಒಂಗೋಲ ಗ್ರಾಮದಿಂದ ದಕ್ಷಿಣಕ್ಕೆ ೧೨ ಮೈಲುಗಳ ಮೇಲೆ ಮತ್ತು ಬೆಜವಾಡದಿಂದ ಅದೇ ದಿಕ್ಕಿಗೆ ಸುಮಾರು ೧೦೦ ಮೈಲುಗಳ ಮೇಲೆ ಇದೆ. ಈ ಭಾಗವು ಬಸವೇಶ್ವರನ ಕಾಲದಲ್ಲಿ ವೀರಶೈವ ಚಳವಳಿಯ ಮಹತ್ವದ ಕೇಂದ್ರವಾಗಿತ್ತು. ಇಲ್ಲಿಯೇ ಶ್ರೀಪತಿಪಂಡಿತ ಮೊದಲಾದವರು ಪ್ರಸಿದ್ಧಿಗೆ ಬಂದರು. ಈ ತಂಗಟೂರು ಗ್ರಾಮದಲ್ಲಿ ಮಾರಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು.

ಅವನು ಕಲ್ಯಾಣಪಟ್ಟಣದಲ್ಲಿ ಬಸವೇಶ್ವರನ ಕೀರ್ತಿಯನ್ನು ಕೇಳಿ ಅವನನ್ನು ಕಾಣಬೇಕೆಂದು ತನ್ನ ಹೆಂಡತಿಯೊಡನೆ ಅಲ್ಲಿಗೆ ಬಂದು ಅಲ್ಲಿಯೇ ವಾಸಮಾಡಹತ್ತಿದನು. ಅವನು ಬಸವೇಶ್ವರನ ಅರಮನೆಯಲ್ಲಿ ಪಡಿಹಾರಿಯ ಕಾಯಕ ಅಂದರೆ ಧಾನ್ಯ ಮೊದಲಾದ ಆಹಾರ ಪದಾರ್ಥಗಳನ್ನು ಅರಮನೆಯಲ್ಲಿರುವವರಿಗೆ ಒದಗಿಸಿಕೊಡುವ ಕೆಲಸವನ್ನು ಮಾಡುತ್ತಾ ಇದ್ದನು.

ಅವನು ಬಸವೇಶ್ವರನ ಸನ್ನಿಧಿಯಲ್ಲಿರುತ್ತ ಶಿವಾನುಭವದ ಜ್ಞಾನವನ್ನು ಹೊಂದಿದವನಾಗಿ ಅದರಲ್ಲಿಯೇ ಅವನು ನಿರತನಾದನು. ಅವನು ಲಿಂಗಜ್ಞಾನವನ್ನು ಪಡೆದು ಲಿಂಗಪೂಜೆಯಲ್ಲಿ ಮಗ್ನನಾಗಿರುವನು. ಅವನ ಲಿಂಗಪೂಜೆಯು ಕೇವಲ ಬಾಹ್ಯಪೂಜೆಯಾಗದೆ, ಅದು ಅಂತರ್ಲಿಂಗ ಪೂಜೆಯಾಗಿ ಪರಿಣಮಿಸಿತ್ತು. ಅವನು ನಿಂತಲ್ಲಿ ನೋಡುವಲ್ಲಿ ತಿಳಿವಲ್ಲಿ ಲಿಂಗಭೋಗೋಪಭೋಗಿರುವನು. ಆದ್ದರಿಂದ ಅವನು ಆಗಿನ ಶಿವಶರಣರಲ್ಲಿ ಪ್ರಾಣಲಿಂಗಿ ಎಂದು ಪ್ರಸಿದ್ಧನಾದನು. ಅವನ ವರ್ತನೆಯನ್ನು ನೋಡಿ ಬಸವೇಶ್ವರನು ಅವನನ್ನು ಅತ್ಯಂತ ಪ್ರೀತಿಸುವವನಾದನು. ಬಸವೇಶ್ವರನು ತನ್ನ ಒಂದು ವಚನದಲ್ಲಿ ಅವನನ್ನು ಬಹಳ ಹೊಗಳಿದ್ದಾನೆ. ಅದು ಹೇಗೆಂದರೆ:—

'ಕಾಯದ ಗಡಣ ಕೆಲಬರಿಗುಂಟು. ಜೀವದ ಗಡಣ ಕೆಲಬರಿಗುಂಟು. ಭಾವದ ಗಡಣ ಕೆಲಬರಿಗುಂಟು. ವಚನದ ಗಡಣ ಕೆಲ

ಬರಿಗುಂಟು. ಪ್ರಾಣಲಿಂಗದ ಗಡಣ ಆರಿಗೂ ಇಲ್ಲ, ಕೂಡಲಸಂಗನ ಶರಣರೊಳಗೆ ತಂಗಟೂರು ಮಾರಯ್ಯಂಗಲ್ಲದೆ' (ಹೊಸ ಪದ್ಧತಿಯ ವಚನಗಳು. ವಚನ ನಂ॥ ೮೦೫ ನೋಡಿರಿ.)

ಮಾರಯ್ಯನು ಬಸವೇಶ್ವರನ ಮೇಲೆ ಅತ್ಯಂತ ಪ್ರೀತಿಯುಳ್ಳವನಾಗಿ ಅವನ ಅರಮನೆಯಲ್ಲಿಯಲ್ಲಿಯೇ ರಾತ್ರಿ ಹಗಲು ತನ್ನ ಕಾರ್ಯ ಮಾಡುತ್ತಿರುವನು. ತನ್ನ ಮನೆಗೆ ಸಹ ಹೋಗುತ್ತಿರಲಿಲ್ಲ. ಅವನು ಅಲ್ಲಿಗೆ ಹೋಗದೆ ಇದ್ದದ್ದು ಬಸವೇಶ್ವರನ ಲಕ್ಷಕ್ಕೆ ಬಂದು ಅವನು ಮಾರಯ್ಯನಿಗೆ-- ನೀನು ಎಷ್ಟು ದಿವಸ ನಿನ್ನ ಮನೆಗೆ ಹೋಗಿಲ್ಲ? ಎಂದು ಕೇಳಿದನು. ಅವನು ಅದಕ್ಕೆ ೧೨ ವರ್ಷಗಳಾದವೆಂದು ಹೇಳಿದನು. ಬಸವೇಶ್ವರನು ಅದನ್ನು ಕೇಳಿ-- ಶಿವ ಶಿವಾ! ಇನ್ನೆಷ್ಟು ನಮ್ಮಲ್ಲಿ ಗುರುಲಿಂಗಜಂಗಮ ಸೇವೆ ಮಾಡುವಿ? ಇನ್ನು ಮೇಲೆ ನಿನ್ನ ಮನೆಗೆ ಹೋಗು. ಅಲ್ಲಿ ಕೆಲಕಾಲವಿದ್ದು ನಮ್ಮ ಓಲಗಕ್ಕೆ ಬಾ ಎಂದು ಹೇಳಿ ಕಳುಹಿಸಿಕೊಟ್ಟನು.

ಮಾರಯ್ಯನು ಮನೆಗೆ ಬಂದು ತನ್ನ ಹೆಂಡತಿಯನ್ನು ಕಂಡನು. ಅವಳಾದರೂ ಅತ್ಯಂತ ಸಾಧ್ವಿಯು, ಮತ್ತು ಲಿಂಗಪೂಜಾರತಳು. ತನ್ನ ಗಂಡನು ಬಸವೇಶ್ವರನ ಓಲಗದಲ್ಲಿ ಶಿವಶರಣರ ಸೇವೆ ಮಾಡುತ್ತಾನೆಂಬುದನ್ನು ತಿಳಿದು ಅವನು ಮನೆಗೆ ಬರಬೇಕೆಂದು ಅವಳು ಎಂದೂ ಇಚ್ಛಿಸಲಿಲ್ಲ. ಅವಳು ತನ್ನ ಲಿಂಗವೇ ಪತಿ ಎಂದು ಭಾವಿಸಿ ತನ್ನ ಲಿಂಗದಲ್ಲಿಯೇ ಮನಸ್ಸಿಟ್ಟು ಕಾಲಕಳೆಯುತ್ತಾ ಇದ್ದಳು. ಮಾರಯ್ಯನು ಹೇಗೆ ಪ್ರಾಣಲಿಂಗಿಯಾಗಿದ್ದನೋ ಹಾಗೆಯೇ ಅವಳೂ ಪ್ರಾಣಲಿಂಗಿಯಾಗಿದ್ದಳು. ಅವಳ ಜೋಡಿಗೆ ಅಕ್ಕಮ್ಮನೆಂಬ ದಾಸಿಯೊಬ್ಬಳಿದ್ದಳು. ಅವಳು ಮಾರಯ್ಯನ ಹೆಂಡತಿಯ ಸೇವೆ ಮಾಡುತ್ತ ಅವಳೂ ಕೂಡ ಅವಳಂತೆಯೇ ಲಿಂಗಜ್ಞಾನಿಯಾಗಿ ಆಚರಿಸುವವಳಾಗಿದ್ದಳು.

ಮಾರಯ್ಯನು ಬಸವೇಶ್ವರನ ಅಪ್ಪಣೆಯನ್ನು ಪಡೆದುಕೊಂಡು ಮನೆಗೆ ಬಂದು ಉಭಯ ದಂಪತಿಗಳು ಶಯ್ಯಾಗೃಹದಲ್ಲಿ ಪವಡಿಸಿದ್ದಾಗ್ಗೆ ಬೆಳಗಾದರೂ ಕೂಡ ಅವರು ಏಳಲಿಲ್ಲ. ದಾಸಿಯು ನೀರು ತರಲಿಕ್ಕೆ ಎಂದಿನಂತೆ ಹೊರಗೆ ಬಾವಿಗೆ ಹೋದಳು. ಮಾರಯ್ಯನೂ ಅವನ ಹೆಂಡತಿಯೂ ಬಹಳ ಹೊತ್ತು ಹೊರಗೆ ಬಾರದ್ದರಿಂದ ನೆರೆ

ಮನೆಯವರಿಗೆ ಸಂಶಯ ಬಂದು ಬಾಗಿಲನ್ನು ತೆರೆದು ನೋಡುತ್ತಾರೆಯೋ ಉಭಯತರ ಪ್ರಾಣಗಳು ಹೋಗಿ ಅವರ ಮೃತ ಶರೀರಗಳು ಹಾಸಿಗೆಯ ಮೇಲೆ ಬಿದ್ದಿದ್ದವು. ಶಿವಾನುಭವ ಮಂಟಪದಲ್ಲಿ ಪ್ರಸಿದ್ಧನಾದ ಸತ್ಯಣ್ಣನೆಂಬ ಶಿವಶರಣನು ಸಮೀಪದ ಮನೆಯಲ್ಲಿದ್ದು ಅವನು ಅಲ್ಲಿಗೆ ಬಂದು ಉಭಯತರ ನಿರ್ಜೀವ ಶರೀರಗಳನ್ನು ನಿರೀಕ್ಷಿಸಿ ಅವನು ಲಿಂಗಪ್ರಾಣಿಯಾಗಿದ್ದರಿಂದ ಅವರು ಮರಣ ಹೊಂದಿಲ್ಲೆಂದು ಅವನಿಗೆ ತೋರಿತು. ಅವನು ಉಭಯತರ ಲಿಂಗಗಳು ಪರವಶತೆಯಿಂದ ಪಲ್ಲಟವಾಗಿ ಒಬ್ಬರಿಗೊಬ್ಬರವಾಗಿದ್ದವು. ಇದರಿಂದ ಅವರವರ ಲಿಂಗಗಳ ಗೂಡ ಅವರ ಪ್ರಾಣಗಳೇ ಹೊರಟು ಹೋಗಿದ್ದವು. ಇದನ್ನು ಅವನು ಲಕ್ಷಿಸಿ ಅವರವರ ಲಿಂಗಗಳನ್ನು ಅವರವರ ದೇಹಗಳಿಗೆ ಸಂಬಂಧಿಸಲು ಕೂಡಲೆ ಅವರ ಶರೀರಗಳಲ್ಲಿ ಜೀವಕಳೆಯು ತುಂಬಿ ಅವರು ಎದ್ದು ಕುಳಿತರು. ನೆರೆದ ಜನರು ಇದನ್ನು ನೋಡಿ ಆಶ್ಚರ್ಯಚಕಿತರಾದರು. ಇವರು ನಿಜವಾದ ಲಿಂಗಪ್ರಾಣಿಗಳೆಂದು ಅವರನ್ನು ಹೊಗಳುವವರಾದರು.

ಹೀಗಾಗಿರಲು ಇತ್ತ ಅವರ ದಾಸಿಯಾದ ಅಕ್ಕಮ್ಮನು ನೀರಿಗೆ ಹೋಗಿರಲು ಅಲ್ಲಿಗೆ ಬಂದ ಹೆಂಗಸರು ಮಾರಯ್ಯನೂ ಅವನ ಹೆಂಡತಿಯೂ ತೀರಿಕೊಂಡಿದ್ದಾರೆಂದು ನುಡಿಯುವುದನ್ನು ಕೇಳಿ ಇನ್ನು ಮೇಲೆ ತಾನು ಇರಬಾರದು ಎಂದು ನಿಶ್ಚಯಿಸಿ, ತಾನು ಲಿಂಗಪ್ರಾಣಿಯಾದುದರಿಂದ ತಾನೂ ತನ್ನ ಲಿಂಗದಲ್ಲಿ ಬಯಲಾಗಬೇಕೆಂಬ ಅಪೇಕ್ಷೆಯನ್ನು ತಾಳಿದಳು. ಕೂಡಲೆ ಅವಳೂ ಸಹ ತನ್ನ ಲಿಂಗದಲ್ಲಿ ಐಕ್ಯಳಾದಳು. ಆದರೆ ಮಾರಯ್ಯನೂ ಅವನ ಹೆಂಡತಿಯೂ ಜೀವವನ್ನು ಹೊಂದಿದ ಬಳಿಕ ಈ ಸಂಗತಿಯನ್ನು ದಾಸಿಯಾದ ಅಕ್ಕಮ್ಮನಿಗೆ ನಿವೇದಿಸಲು ಅವಳೂ ಸಹ ಎಚ್ಚರವನ್ನು ಹೊಂದಿ ಎಂದಿನಂತೆ ಉದಕವನ್ನು ತೆಗೆದುಕೊಂಡು ಮನೆಗೆ ಬಂದಳು.

ಹೀಗೆ ಮಾರಯ್ಯನ ಮನೆಯಲ್ಲಿ ಘಟನೆಗಳಾದದ್ದು ಶಿವಾನುಭವ ಮಂಟಪದಲ್ಲಿದ್ದ ಚನ್ನಬಸವೇಶ್ವರನಿಗೆ ತಿಳಿಯಲು ಅವನು— ತಂಗಟೂರು ಮಾರಯ್ಯನು ನಿಜವಾದ ಲಿಂಗಪ್ರಾಣಿಯು, ಅವನು ಶರಣನು. ಶ್ರುತ, ದೃಷ್ಟಾನುಮಾನದಿಂದ ಇದನ್ನು ಸಿದ್ಧಪಡಿಸಿದನು ಎಂದು ನುಡಿದು

'ಕೂಡಲ ಚನ್ನಸಂಗನ ಶರಣರು ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು' ಎಂಬ ಗೀತವನ್ನು ಹಾಡಿ ಮಾರಯ್ಯನನ್ನೂ ಅವನ ಹೆಂಡತಿಯನ್ನೂ ಸೇವಿಕೆಯನ್ನೂ ಕೊಂಡಾಡಿದನು. ಹಾಗೆಯೇ ಮಡಿವಳ ಮಾಚಿದೇವ ಸೊಡ್ಡಳ ಬಾಚರಸ ಮೊದಲಾದ ಶಿವಶರಣರು ಈ ಮೂವರೂ ಈ ಶಿವಶರಣರ ಮಹತ್ವವು ಬಹು ಹಿರಿದಾದುದು ಎಂದು ಅವರನ್ನು ಕೀರ್ತಿಸಿದರು.

ತ್ರಿಲಿಂಗಾನುಸಂಧಾನಿಗಳ ಪ್ರಾಣವು ಎಲ್ಲ ಅವಸ್ಥೆಗಳಲ್ಲಿಯೂ ಲಿಂಗದಲ್ಲಿ ಬೆರೆತುಹೋಗಿರುತ್ತದೆ ಅವರು ಲಿಂಗವಿರಹಿತರಾಗಿ ಎಂದೂ ಇರಲಾರರು. ಅಲ್ಲದೆ ಅವರ ಪ್ರಾಣವು ಸೃಷ್ಟಿಯಲ್ಲೆಲ್ಲ ಇರುವ ಲಿಂಗದಲ್ಲಿ ಕೂಡಿಕೊಂಡು ಹೋಗಿರುವದರಿಂದ ಅವರೆಲ್ಲರ ಅಂಗಲಿಂಗಗಳು ಒಂದೇ ಯಾಗಿದ್ದು ತಮ್ಮಲ್ಲಷ್ಟೇ ಅಲ್ಲ, ಎಲ್ಲರಲ್ಲಿಯೂ, ಚರಾಚರವಸ್ತುಗಳಲ್ಲಿಯೂ ಸಾಮರಸ್ಯಭಾವದಿಂದ ವರ್ತಿಸುತ್ತಾರೆ. ಇದು ತಂಗಟೂರು ಮಾರಯ್ಯ, ಅವನ ಹೆಂಡತಿ ಮತ್ತು ಅವರ ದಾಸಿ ಇವರ ಚರಿತ್ರೆಗಳಿಂದ ತಿಳಿದುಬರುತ್ತದೆ.

ಅನೇಕರು ಇಷ್ಟಲಿಂಗ ಹೋದ ಕೂಡಲೆ ಅದರೊಡನೆ ಪ್ರಾಣವನ್ನು ತ್ಯಜಿಸಬೇಕೆಂಬ ಅಭಿಪ್ರಾಯವುಳ್ಳವರಿರುತ್ತಾರೆ. ಆದರೆ ಇದು ಶಿವಶರಣರ ಆಚರಣೆಯಾಗದು. ಇದು ಆತ್ಮಹತ್ಯವು.

ಲಿಂಗಾಂಗಿಯು ಯಾವಾಗಲೂ ಪ್ರಾಣಲಿಂಗಿಯಾಗಲು ಯತ್ನಿಸಬೇಕು. ಈ ಸ್ಥಿತಿಯನ್ನು ಹೊಂದಿದ ಕೂಡಲೆ ಅವನ ಪ್ರಾಣವು ಅವನ ಕೈವಶದಲ್ಲಿ ಉಳಿಯುತ್ತದೆ. ಆಗ ಇಷ್ಟಲಿಂಗವು ಹೋಗಲು ಅದರೊಡನೆ ಅವನ ಪ್ರಾಣವು ತಾನಾಗಿಯೇ ಹೊರಟುಹೋಗುವದು.

ಈ ವಿಷಯವಾಗಿ ಹಿಂದೆ ವೈದ್ಯಸಂಗಣ್ಣನ ಚರಿತ್ರೆಯನ್ನೂ ವಾಚಕರು ನೋಡತಕ್ಕದ್ದು. (ಹಿಂದೆ ಪುಟ ೩೦೦ ನೋಡಿರಿ)

# ಭಾನುದೇವಯ್ಯ.

ಬಸವೇಶ್ವರನ ಕಾಲದಲ್ಲಿ ಭಾನುದೇವಯ್ಯನೆಂಬ ಶಿವಶರಣನು ಲಿಂಗಧಾರಿಯಾಗಿ ಶಿವಾನುಭವವುಳ್ಳವನಾಗಿದ್ದನು. ಆದರೆ ಶಿವಾನುಭವದ ಪ್ರಕಾರ ಲಿಂಗದ ನೆಲೆಕಲೆಗಳನ್ನು ಲಿಂಗಧಾರಿಯು ಅರಿತುಕೊಂಡು ವರ್ತಿಸುವದು ಅವಶ್ಯವು. ಅವನು ಬರೀ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಲಿಂಗವನ್ನು ಪೂಜಿಸುವದರಿಂದ ಸಾಮರಸ್ಯ ಸ್ಥಿತಿಯನ್ನು ಹೊಂದಲಾರನು. ಇದನ್ನು ಭಾನುದೇವಯ್ಯನು ತಿಳಿದವನಾಗಿ ಇಂಥ ಲಿಂಗದ ಜ್ಞಾನವು ತನಗೆ ಹೇಗೆ ದೊರಕೀತೆಂಬದರ ಬಗ್ಗೆ ಬಹಳ ಯೋಚಿಸುತ್ತ ಇದ್ದನು. ಇದರ ಚಿಂತೆಯಲ್ಲಿಯೇ ಅವನು ದಿನಾಲು ಕಾಲಕಳೆಯುತ್ತಿದ್ದನು.

ಹೀಗಿರುವಲ್ಲಿ ಅವನು ತನಗೆ ಇಷ್ಟಲಿಂಗವನ್ನು ದಯಪಾಲಿಸಿದ ಗುರುವನ್ನು ಶೋಧಿಸತೊಡಗಿದನು. ಆದರೆ ಅವನು ಬಹು ದೂರದ ಗ್ರಾಮದಲ್ಲಿ ವಾಸಮಾಡುತ್ತಿದ್ದನು. ಮತ್ತು ಆಗ ಅವನು ತನ್ನ ಗ್ರಾಮವನ್ನು ಬಿಟ್ಟು ಎಲ್ಲಿಯೋ ಪ್ರವಾಸಕ್ಕೆ ಹೋಗಿದ್ದಾನೆಂಬುದು ಅವನಿಗೆ ತಿಳಿಯಿತು. ಇದರಿಂದ ಲಿಂಗದ ನಿಲುಕಡೆಯನ್ನು ಅವನಿಂದ ತಿಳಿಯಲು ಅವನಿಗೆ ಸಾಧ್ಯವಾಗದೆ ಹೋಯಿತು. ಅಂದಿನಿಂದ ಅವನು ತನ್ನ ಗುರುವನ್ನು ಎಂದು ಕಾಣುವೆನೋ, ಅವನಿಂದ ಎಂದು ಲಿಂಗದ ನೆಲೆಕಲೆಗಳನ್ನು ತಿಳಿಯುವೆನೋ ಎಂಬದೊಂದೇ ಚಿಂತೆ ಅವನಿಗಾಯಿತು. ಹೀಗೆ ಅವನಿಗೆ ಅನೇಕ ದಿವಸಗಳು ಸಂದಿ ಹೋದವು.

ಹೀಗೆ ಅವನು ಚಿಂತೆ ಮಾಡುತ್ತಾ ಇರುವಲ್ಲಿ ಒಂದು ದಿವಸ ಅವನು ಮನೆಯಲ್ಲಿ ಮಲಗಿರಲು ಶಿವನು ಅವನ ಕನಸಿನಲ್ಲಿ ಅವನ ಗುರುವಿನ ರೂಪನ್ನು ಧಾರಣ ಮಾಡಿ ಅವನಿಗೆ ಕಾಣಿಸಿಕೊಂಡು ಅವನಿಗೆ ಲಿಂಗದ ನೆಲೆಕಲೆಗಳನ್ನು ತಿಳಿಸಹತ್ತಿದನು. ಅವನು ಆಗ ಹೇಳಿದ್ದು- ಎಲೈ ಮಗನೇ, ಇಷ್ಟಲಿಂಗವು ಒಂದಾಗಿರುತ್ತದೆ. ಅದು ಆರಾಗುತ್ತದೆ. ಆದರೆ ಪ್ರಾಣಲಿಂಗವು ೩೬ ಇರುತ್ತದೆ. ಭಾವಲಿಂಗವು ೨೧೬ ಇರುತ್ತದೆ. ಹೀಗೆ ತ್ರಿವಿಧ ಲಿಂಗದ ಸ್ವರೂಪು ಇದೆ. ಅಲ್ಲದೆ ಈ ಲಿಂಗಕ್ಕೆ ಅಂಗ, ಲಿಂಗ, ಶಕ್ತಿ, ಭಕ್ತಿ, ಹಸ್ತ, ಮುಖ, ಪದಾರ್ಥ, ಪ್ರಸಾದ ಎಂಬ ಅಷ್ಟವಿಧ ಸಕೀಲಗಳಿವೆ. ಈ ಸಕೀಲು ಸಂಬಂಧವನ್ನು

ನೀನು ಅರಿತುಕೋ. ಅರಿತುಕೊಂಡು ಹಾಗೆ ಆಚರಿಸು. ಹೀಗೆ ಆಚರಿಸಿದ್ದಾದರೆ ನೀನು ಸರ್ವಾಂಗಲಿಂಗಿಯಾಗುವಿ ಎಂದು ಹೇಳಿ ಅಂತರ್ಧಾನನಾದನು.

ಸ್ವಪ್ನದಲ್ಲಾದ ಈ ಉಪದೇಶವು ಭಾನುದೇವನ ಮನಸ್ಸಿಗೆ ದೃಢವಾಗಿ ನೆಟ್ಟಿತು. ಅಷ್ಟರಲ್ಲಿ ಅವನು ಎಚ್ಚರಾದನು. ಆಗ ತಾನೊಬ್ಬ ಹೊಸ ಮನುಷ್ಯನಾದಂತೆ ಅವನಿಗೆ ಭಾಸವಾಯಿತು. ಅಂದಿನಿಂದ ಅವನು ಅದೇ ರೀತಿಯಾಗಿ ತ್ರಿವಿಧಲಿಂಗವನ್ನೂ ಅಷ್ಟವಿಧ ಸಕೀಲಗಳನ್ನೂ ತಿಳಿದುಕೊಂಡು ಆಚರಿಸುವವನಾದನು. ಹೀಗೆ ಅವನು ಆಚರಿಸಹತ್ತಲು ಲಿಂಗವು ಅವನಲ್ಲಿ ಅಳವಡಹತ್ತಿತು.

ಹೀಗೆ ಅವನು ಸತತ ೧೮ ವರ್ಷಗಳ ವರೆಗೆ ಆಚರಿಸಿದನು. ಆಮೇಲೆ ಅವನ ಗುರುವು ಅವನಿದ್ದಲ್ಲಿಗೆ ಬಂದನು ಮತ್ತು ಭಾನುದೇವನಿಂದ ಈ ಎಲ್ಲವನ್ನೂ ಅರಿತವನಾಗಿ, ಅವನಿಗೆ ಅದೇ ರೀತಿಯಾಗಿಯೇ ಉಪದೇಶಿಸಿ ಹೀಗೆಯೇ ಆಚರಿಸು ಎಂದು ಹೇಳಿದನು. ಅದರಂತೆಯೇ ಭಾನುದೇವನು ಆಚರಿಸುತ್ತ ಹೋಗಲು ಅವನಿಗೆ ಲಿಂಗವು ಸಿದ್ಧಿಸಿತು ಮತ್ತು ಕಡೆಗೆ ಅವನು ಲಿಂಗದೊಳಗಾದನು.

# ಪರಿಶಿಷ್ಟ ೧.

( ಅಕ್ಷರಾನುಕ್ರಮವಾಗಿ ಅನುಕ್ರಮಣಿಕೆ. )

( * ಈ ಚಿನ್ಹವಿದ್ದ ಶಿವಶರಣರು ವಚನಕಾರರೂ ಗ್ರಂಥಕಾರರೂ ಇದ್ದಾರೆ. )

(ಗ್ರಂಥದ-ಒಟ್ಟು ಪುಟ ಸಂಖ್ಯೆ— ೪೫೮.)